# ತೇರದಾಳ ಪರಿಸರದ : ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ

(ಶಿಲಾಯುಗದಿಂದ ಇಂದಿನವರೆಗೆ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ)

ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ನೋಂದಣಿ ಸಂಖ್ಯೆ : ೧೫೧೩೦೭೦೨೦೦೫೦



ಸಂಶೋಧಕರು
**ಕುಂಬಾರ ರಮೇಶ**
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮುಧೋಳ
ಜಿ. ಬಾಗಲಕೋಟೆ

ಮಾರ್ಗದರ್ಶಕರು
**ಡಾ. ವಿಜಯಕುಮಾರ ಎಸ್. ಶೇಕದಾರ**
ಸಹ ಪ್ರಾಧ್ಯಾಪಕರು
ಶ್ರೀ ಶಾಂತವೀರ ಪದವಿ ಕಾಲೇಜು, ಬಬಲೇಶ್ವರ



ಮಾನ್ಯತಾ ಸಂಸ್ಥೆ
ಡಾ. ಬಿ ಆರ್ ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ
ತಾ : ರಾಯಬಾಗ ಜಿ : ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೧೯

# ತೇರದಾಳ ಪರಿಸರದ : ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ

## (ಶಿಲಾಯುಗದಿಂದ – ಇಂದಿನವರೆಗೆ)

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)

ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ನೋಂದಣಿ ಸಂಖ್ಯೆ : ೧೫೧೩೦೭೦೨೦೦೫೦

ಸಂಶೋಧಕರು
**ಕುಂಬಾರ ರಮೇಶ**
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಮುಧೋಳ ಜಿ॥ ಬಾಗಲಕೋಟೆ

ಮಾರ್ಗದರ್ಶಕರು
**ಡಾ. ವಿಜಯಕುಮಾರ ಎಸ್. ಶೇಕದಾರ**
ಸಹ ಪ್ರಾಧ್ಯಾಪಕರು
ಶ್ರೀ ಶಾಂತವೀರ ಪದವಿ ಕಾಲೇಜು, ಬಬಲೇಶ್ವರ



ಮಾನ್ಯತಾ ಸಂಸ್ಥೆ

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ

ತಾ : ರಾಯಬಾಗ ಜಿ : ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೯

# ಪ್ರಮಾಣ ಪತ್ರ

ಕುಂಬಾರ ರಮೇಶ ಆದ ನಾನು ತೇರದಾಳ ಪರಿಸರದ : ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ (ಶಿಲಾಯುಗದಿಂದ–ಇಂದಿನವರೆಗೆ) ಎನ್ನುವ ಪಿಎಚ್.ಡಿ ಮಹಾಪ್ರಬಂಧವನ್ನು ಡಾ. ವಿಜಯಕುಮಾರ ಎಸ್. ಶೇಕದಾರ ಅವರ ಮಾರ್ಗದರ್ಶನದಲ್ಲಿ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿಯ ಮಾನ್ಯತಾ ಸಂಸ್ಥೆಯ ಮೂಲಕ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದೇನೆ. ಇದನ್ನು ಇಲ್ಲಿಯವರೆಗೆ ಯಾವುದೇ ಪದವಿಗೆ ಸಲ್ಲಿಸಿರುವುದಿಲ್ಲವೆಂದು ಮತ್ತು ಇದನ್ನು ಇಡೀಯಾಗಿಯಾಗಲಿ ಬಿಡಿಯಾಗಿಯಾಗಲಿ ಎಲ್ಲಿಯೂ ಈ ಮೊದಲು ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ತೇರದಾಳ

ದಿನಾಂಕ : ೨೫.೦೮.೨೦೧೯

ಕುಂಬಾರ ರಮೇಶ

ಸಂಶೋಧನ ವಿದ್ಯಾರ್ಥಿ

ಶ್ರೀ ಬಿ. ಆರ್. ದರೂರ

ಸಂಶೋಧನ ಕೇಂದ್ರ, ಹಾರೂಗೇರಿ

# ಮಾರ್ಗದರ್ಶಕರ ದೃಢೀಕರಣ ಪ್ರಮಾಣ ಪತ್ರ

**ಕುಂಬಾರ ರಮೇಶ** ಅವರು **"ತೇರದಾಳ ಪರಿಸರದ : ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ" (ಶಿಲಾಯುಗದಿಂದ–ಇಂದಿನವರೆಗೆ)** ಎಂಬ ಶೀರ್ಷಿಕೆಯ ಸಂಶೋಧನ ಮಹಾ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಚರಿತ್ರೆ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ ಹಾರೂಗೇರಿಯ ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರದ ಮುಖಾಂತರ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿರುವುದಿಲ್ಲವೆಂದೂ, ಹಾಗೂ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೨೫-೦೮-೨೦೧೯
ಸ್ಥಳ : ಹಾರೂಗೇರಿ

**ಮಾರ್ಗದರ್ಶಕರು**
ಡಾ. ವಿಜಯಕುಮಾರ ಎಸ್. ಶೇಕದಾರ
ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ
ತಾ : ರಾಯಬಾಗ ಜಿ : ಬೆಳಗಾವಿ

# ಸಂಶೋಧನ ಕೇಂದ್ರದ ನಿರ್ದೇಶಕರ ದೃಢೀಕರಣ ಪತ್ರ

**ಕುಂಬಾರ ರಮೇಶ** ಅವರು **ತೇರದಾಳ ಪರಿಸರದ : ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ (ಶಿಲಾಯುಗದಿಂದ–ಇಂದಿನವರೆಗೆ)** ಎಂಬ ಶೀರ್ಷಿಕೆಯ ಈ ಸಂಶೋಧನ ಮಹಾಪ್ರಬಂಧವನ್ನು **ಡಾ. ವಿಜಯಕುಮಾರ ಎಸ್. ಶೇಕದಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಚರಿತ್ರೆ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಹಾರೂಗೇರಿಯ ಶ್ರೀ ಬಿ.ಆರ್ ದರೂರ ಸಂಶೋಧನ ಕೇಂದ್ರದ ಮುಖಾಂತರ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಇಲ್ಲಿಯವರೆಗೆ ಯಾವುದೇ ಪದವಿಗೆ ಇಡೀಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿರುವುದಿಲ್ಲವೆಂದೂ ಈ ಮೂಲಕ ದೃಢೀಕರಿಸುತ್ತೇನೆ.

**ಸ್ಥಳ : ಹಾರೂಗೇರಿ**
**ದಿನಾಂಕ : ೨೫.೦೮.೨೦೧೯**

**ಡಾ. ವಿ. ಎಸ್ ಮಾಳಿ**
**ನಿರ್ದೇಶಕರು**
**ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರ**
**ಹಾರೂಗೇರಿ**
**ತಾ॥ ರಾಯಬಾಗ ಜಿ॥ ಬೆಳಗಾವಿ**

## ಕೃತಜ್ಞತೆಗಳು

ಹಲವು ಹಿರಿಯರ ಆರ್ಶೀವಾದ, ಸ್ನೇಹಿತರ-ಬಂಧುಗಳ ಅಕ್ಕರೆಯ ಹಾರೈಕೆ, ಸಲಹೆ, ಸೂಚನೆ ಹಾಗೂ ಅನುಭವಿಗಳ ಮಾರ್ಗದರ್ಶನದ ಪ್ರತಿಫಲವೇ ನನ್ನ ಈ ಸಂಶೋಧನಾ ಪ್ರಬಂಧ. ಅನೇಕ ಹಿರಿಯ ವಿದ್ವಾಂಸರು, ಸ್ನೇಹಿತರು, ಹಿತೈಷಿಗಳು ಕಾಲ ಕಾಲಕ್ಕೆ ನನಗೆ ಸೂಕ್ತ ಸಲಹೆ, ಸೂಚನೆಗಳನ್ನು ನೀಡಿ ಈ ಪ್ರಬಂಧ ರೂಪಗೊಳ್ಳಲು ಸಹಕರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರೆಲ್ಲರನ್ನು ಸ್ಮರಿಸಿಕೊಳ್ಳುವುದು ನನ್ನ ಆದ್ಯ ಕರ್ತವ್ಯ. ಈ ಕಾರ್ಯವು ಶ್ರೀ ೧೦೮ ಕುಲರತ್ನಭೂಷಣ ಮಹಾರಾಜರ ಕೃಪಾ ಆರ್ಶಿವಾದದಿಂದ ನೆರವೇರಿದೆ ಎಂದು ಭಾವಿಸಿದ್ದೇನೆ. ಅದಕ್ಕಾಗಿ ನಾನು ಅವರಿಗೆ ಮೊದಲು ನನ್ನ ಪ್ರಣಾಮಗಳನ್ನು ಸಮರ್ಪಿಸುತ್ತೇನೆ. ಪಿಎಚ್.ಡಿ. ಅಧ್ಯಯನ ಕೈಗೆತ್ತಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ನಮ್ಮ ನೆಚ್ಚಿನ ಇಂದಿನ ಕುಲಪತಿಗಳಾದ ಮಾನ್ಯ ಡಾ.ಸ.ಚಿ.ರಮೇಶ್, ಸಿದ್ದು ಆಲಗೂರು ಮತ್ತು ಕುಲಸಚಿವರಾದ ಸುಬ್ಬಣ್ಣ ರೈ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಹೆಬ್ಬಾಲೆ ನಾಗೇಶ ಅವರಿಗೆ ನಾನು ಋಣಿಯಾಗಿದ್ದೇನೆ. ಸದಾ ನನಗೆ ಧೈರ್ಯ ತುಂಬಿ, ಈ ಯೋಜನೆಗೆ ಕಟಿ ಬದ್ಧರಾಗುವಂತೆ ಮಾಡಿದ ನನ್ನ ಪೂಜ್ಯ ಗುರುಗಳು ಮಾರ್ಗದರ್ಶಕರಾದ ಡಾ. ವಿಜಯಕುಮಾರ ಎಸ್ ಶೇಕದಾರ ಅವರಿಗೆ ಮತ್ತು ಹಾರೂಗೇರಿಯ ಮಾನ್ಯತಾ ಸಂಸ್ಥೆಯ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಡಾ.ವಿ.ಎಸ್ ಮಾಳಿ, ಶಂಕರ ಘಟನ್ನಟ್ಟಿ ಮತ್ತು ಪ್ರಾಚಾರ್ಯರಿಗೆ ತುಂಬ ಹೃದಯದ ಕೃತಜ್ಞತೆಗಳನ್ನು ಮೊದಲಿಗೆ ಸಲ್ಲಿಸುತ್ತೇನೆ. ಅದೇ ರೀತಿ ಈ ಮಹಾಪ್ರಬಂಧ ರೂಪುಗೊಳ್ಳಲು ಹಲವು ರೀತಿಯ ಮಾರ್ಗದರ್ಶನ ಮತ್ತು ಸಲಹೆಗಳನ್ನು ನೀಡಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ.ಚಿನ್ನಸ್ವಾಮಿ ಸೋಸಲೇ, ಹಿರಿಯ ವಿದ್ವಾಂಸರಾದ ಡಾ.ಟಿ.ಪಿ.ವಿಜಯ್, ಡಾ.ಮೋಹನ್‌ಕೃಷ್ಣ ರೈ, ಡಾ.ಗೋವಿಂದರಾಜ್, ಡಾ.ವಿರೂಪಾಕ್ಷಿ ಪೂಜಾರಹಳ್ಳಿ ವಿಭಾಗದ ಇತರೆ ಸಿಬ್ಬಂದಿಗಳಿಗೆ, ಹಾಗೂ ಪುರಾತತ್ವ ವಿಭಾಗದ ಪ್ರಾಧ್ಯಾಪಕರಾದ ಡಾ.ಸಿ.ಎಸ್.ವಾಸುದೇವನ್, ಡಾ.ರಮೇಶ ನಾಯ್ಕ ಮೊದಲಾದವರಿಗೆ ನನ್ನ ನಮನಗಳನ್ನು ಸಲ್ಲಿಸುತ್ತೇನೆ. ಸದಾ ನನ್ನ ಏಳ್ಗೆಯನ್ನು ಬಯಸಿ ನನ್ನನ್ನು ಹಿಂದಿನಿಂದಲು ಪ್ರೋತ್ಸಾಹಿಸುತ್ತಾ ಬಂದಿರುವ ನನ್ನ ಹಿತೈಷಿಗಳು ಡಾ.ಸುರೇಶ ಬಿರಾದಾರ. ಪ್ರಾಚಾರ್ಯರಾದ ಎನ್.ಎಲ್,ತೇರದಾಳ, ಪ್ರೊ.ಎಸ್.ಎಲ್.ಆರಬಳ್ಳಿ, ಪ್ರೊ.ಎ.ಎಸ್.ಪೂಜಾರಿ, ಡಾ.ಎನ್.ವ್ಹಿ.ಅಸ್ಕಿ, ಎಸ್.ಪಿ.ಹುಕ್ಕೇರಿ, ಪ್ರೀತಿ ಆರಬಳ್ಳಿ. ಸಂತೋಷ ಕರಿಜಾಡರ. ಡಾ.ಆರ್.ಎಚ್.ಗೌಡರ, ಡಾ.ಕಿರಣ. ಬನ್ನಿಗೋಳ, ಕೆ.ಬಿ. ಬನ್ನಿ, ಸುದ್ರೇಶ. ಹೋಳ್ಳೆನ್ನವರ, ಗುರುಜೀ, ಡಾ॥ರಾಜು ಕುಂಬಾರ, ವಿಜಯ, ಪ್ರವೀಣ ನಾಡಗೌಡರು, ಪ್ರಭು ಬಾಗಿ, ವೆಂಕಟೇಶ ಲಿಂಗಸಾನಿ, ಅಪ್ಪು ಬೆಟಗೇರಿ ಮಿತ್ರರಾದ ಮಹಾವೀರ ಗೌಡನವರ, ಶಿವರಾಜ, ನೇಮಣ್ಣಾ ಬಿಲವಡಿ, ಬರಮು ನಾಶಿ, ಸಂತೋಷ ಕರಿಜಾಡರ, ಎಮ್.ಎಸ್.ಪಟ್ಟಣಶೆಟ್ಟಿ. ಶ್ವೇತಾ ರಕ್ಕಸಗಿ. ಧನಪಾಲ

ಶೇಡಬಾಳ, ಬನಪ್ಪ ಕರಿಗಾರ, ಪ್ರೊ.ರಾಯಣಗೌಡರು, ಪ್ರೊ.ಹಾದಿಮನಿ, ಪ್ರೊ.ಗೀತಾಜಂಲಿಶ್ರೀನಿವಾಸ ಪ್ರೊ.ರೇಖಾಮನಿ, ಪ್ರೊ.ಉಷಾರಾಣಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮುಧೋಳ ಎಲ್ಲ ಆತ್ಮಿಯ ಅತಿಥಿ ಉಪನ್ಯಾಸಕ ಸಿಬ್ಬಂದಿ ವರ್ಗ, ಇನ್ನುಳಿದ ಆತ್ಮಿಯ ಬಳಗವಾದ ಸುರೇಶ, ಘಟಿಗೇಪ್ಪಾ, ಶಂಕರ, ಅಶೋಕ, ಸಚೀನ, ನಿಂಗಪ್ಪ, ಪ್ರಭು, ರಮೇಶ, ಅಡಿವೆಪ್ಪ, ಶ್ರೀಶೈಲ, ಆಕಾಶ, ಲಕ್ಷ್ಮಣ, ರಾಹುಲ, ಪ್ರಕಾಶ, ಮಲಕಪ್ಪ, ಅಜೀತ, ಮಲಪ್ಪ, ಈರಣ್ಣಾ, ಸಂತೋಷ, ಪ್ರಕಾಶ, ಗಣೇಶ, ಸೋಮಶೇಖರ, ಅಕ್ಕಂದಿರಾಗಿರುವ ಶ್ರೀಮತಿ ಎಚ್, ವಾಯ್ ಬದನೂರ, ಶಿವಾನಂದ ಹೆಳವರ, ಕೇಶರಗೊಪ್ಪ ಸರ್, ನಾಥಸಿಂಘ, ಕೀರ್ತಿಸಿಂಘ ರಜಪೂತ, ನಾರಾಯಣ ಕೋಕಾಟೆ, ಹಾಗು ಬಳ್ಳಾರಿಯ ವಿ.ಎಸ್.ಕೆ.ವಿ.ವಿಯ ಡಾ.ಎಚ್.ತಿಪ್ಪೇಸ್ವಾಮಿಯವರು ಹಲವು ಸೂಚನೆಗಳನ್ನು ನೀಡಿ ನನ್ನ ಸಂಶೋಧನಾ ಪ್ರಬಂಧ ಗಟ್ಟಿಗೊಳಿಸುವಲ್ಲಿ ನೆರವಾಗಿದ್ದಾರೆ. ಅದೇ ರೀತಿ ಸಹದ್ಯೋಗಿಗಳಾದ ಬಸವರಾಜ್, ಶಿವಕುಮಾರ್, ಮೊದಲಾದವರು ನನ್ನ ಕರಡು ತಿದ್ದುವಲ್ಲಿ ಸಹಕರಿಸಿದ್ದಾರೆ. ಜೊತೆಗೆ ಅಕ್ಕಂದಿರಾದ ಕಲಾವತಿ ನಾಮದೇವ ಕುಂಬಾರ, ಅನ್ನಪೂರ್ಣ ಶಿವಪುತ್ರ ಪೇಠಿ, ರಾಯಪ್ಪ ಎಸ್ ಕುಂಬಾರ, ದ್ರಾಕ್ಷಾಯಣಿ ಬಸವರಾಜ ಕುಂಬಾರ, ಗೀತಾ ಅನಿಲ ಕುಂಬಾರ, ಶಿಲ್ಪಾ ಸಂತೋಷ ಕುಂಬಾರ, ದೀಪಾ ಬಾಳೇಶ ಕುಂಬಾರ, ಉಮಾ ಗೀರಿಶ ಕುಂಬಾರ, ಪ್ರತಿಭಾ ವಿಜಕುಮಾರ ಕುಂಬಾರ, ಶ್ರೀಧರ ಪೇಠಿ, ತಾಯಿಯಾದ ಬಾಳವ್ವ, ನನ್ನ ಧರ್ಮ ಪತ್ನಿ ರೇಖಾ, ಮುದ್ದು ಮಕ್ಕಳಾದ ಲಕ್ಷ್ಮೀ, ಭಾಗರ್ವಿ, ಜ್ಞಾನೇಶ, ಸೂರಜ್, ಶ್ರೇಯಾ, ಪಲ್ಲವಿ, ರಾಜಶ್ರೀ, ಸಹೋದರರಾದ ಗಿರಿಮಲ್ಲಪ್ಪ ಕುಂಬಾರ, ರಮೇಶ ಕುಂಬಾರ (ಶಿಕ್ಷಕರು) ಇವರಿಗೆ ನಾನು ಋಣಿಯಾಗಿದ್ದೇನೆ. ಅಂದವಾಗಿ ಮುದ್ರಣ ಮಾಡಿ ರಟ್ಟು ಕಟ್ಟಿಕೊಟ್ಟ ಕಮಲ ಗ್ರಾಫಿಕ್ಸ್, ಧನ್ಯಕುಮಾರ ಶೇಡಬಾಳ, ಮಂಜುನಾಥ ಬೇನಾಳ ಇವರಿಗೆ, ಒಟ್ಟಿನಲ್ಲಿ ಈ ಸಂಶೋಧನೆಯು ಯಶಸ್ವಿಯಾಗಲು ನೇರ ಇಲ್ಲವೇ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಹಿರಿ ಕಿರಿಯ ವಿದ್ವಾಂಸರಿಗೆ, ಸ್ನೇಹಿತರಿಗೆ ಹಾಗೂ ಸುಂದರಾವಾದ ಬೈಂಡಮಾಡಿ ಕೊಟ್ಟ ಶ್ರೀ ಎಮ್.ಆಯ್.ಕುಂಬಾರ ನನ್ನ ಸಮಸ್ತ ಕುಂಬಾರ ಬಂಧುಗಳಿಗೆ ಹಾಗೂ ಹಿತೈಷಿಗಳಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಂಶೋಧಕರು

ಕುಂಬಾರ ರಮೇಶ

# ಪರಿವಿಡಿ

**ಅಧ್ಯಾಯ ೧ ಪ್ರಸ್ತಾವನೆ** ೧–೧೦

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವ್ಯಾಪ್ತಿ
೧.೩. ಅಧ್ಯಯನದ ವಿಧಾನ
೧.೪. ಅಧ್ಯಯನದ ಸಮೀಕ್ಷೆ
೧.೫. ಅಧ್ಯಯನದ ಸ್ವರೂಪ

ಅಧ್ಯಾಯ ೨ **ತೇರದಾಳ ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ** ೧೧–೯೬

೨.೧. ತೇರದಾಳ ಪರಿಸರದ ಭೌಗೋಳಿಕತೆ
೨.೧.೧. ತೇರದಾಳದ ಹೆಸರಿನ ಹಿನ್ನೆಲೆ
೨.೨. ಭೌಗೋಳಿಕ ಲಕ್ಷಣಗಳು
೨.೩. ಪ್ರಾಗೈತಿಹಾಸಿಕ ಹಿನ್ನೆಲೆ
೨.೪. ತೇರದಾಳ ಪರಿಸರದ ಚರಿತ್ರೆ : ರಾಜಕೀಯ ಮತ್ತು ಆಡಳಿತ ವ್ಯವಸ್ಥೆ
೨.೪.೧. ಪ್ರಾಚೀನ ಕಾಲ ಘಟ್ಟ
೨.೪.೨. ಮಧ್ಯಯುಗೀನ ಕಾಲ ಘಟ್ಟ
೨.೪.೩. ಆಧುನಿಕ ಕಾಲಘಟ್ಟ

**ಅಧ್ಯಾಯ ೩ : ಸಾಮಾಜಿಕ ಜನಜೀವನ** ೯೭–೧೬೪

೩.೧. ಮಾನವ ಸಂಸ್ಕೃತಿಯ ಅರ್ಥ–ವೈಶಿಷ್ಟ್ಯತೆ ಮತ್ತು ಮಹತ್ವ
೩.೨. ವಿವಿಧ ಸಮುದಾಯಗಳು ಮತ್ತು ಶ್ರೇಣಿಕರಣ ವ್ಯವಸ್ಥೆ
೩.೩. ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು
೩.೩.೧. ಹಬ್ಬಗಳು
೩.೩.೨. ಜಾತ್ರೆ ಉತ್ಸವಗಳು, ಇತರೆ ಆಚರಣೆಗಳು
೩.೪. ಕಲಾ ಪರಂಪರೆ ಮತ್ತು ವಿಶಿಷ್ಟ ಕಲಾವಿದರು
೩.೫. ಶೈಕ್ಷಣಿಕ ವ್ಯವಸ್ಥೆ

**ಅಧ್ಯಾಯ ೪ : ಆರ್ಥಿಕ ಜನಜೀವನ** ೧೬೫–೧೮೯

೪.೧. ಕೃಷಿ ವ್ಯವಸ್ಥೆ – ನೀರಾವರಿ ವ್ಯವಸ್ಥೆ
೪.೨. ಉಪ ವೃತ್ತಿಗಳು – ಪಶುಪಾಲನೆ ಮತ್ತು ಇತರೆ ವೃತ್ತಿಗಳು
೪.೩. ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು
೪.೪. ತೆರಿಗೆ ಮತ್ತು ಕಂದಾಯ ವ್ಯವಸ್ಥೆ

**ಅಧ್ಯಾಯ ೫ : ಧಾರ್ಮಿಕ ಜನಜೀವನ** ೧೯೦–೨೧೧

೫.೧. ಹಿಂದೂ ಧರ್ಮ
೫.೨. ಜೈನ ಧರ್ಮ
೫.೩. ಶಾಕ್ತ ಧರ್ಮ
೫.೪. ಮುಸ್ಲಿಂ ಧರ್ಮ
೫.೫. ಇತರೆ ಪ್ರಮುಖ ಧರ್ಮಗಳು

**ಅಧ್ಯಾಯ–೬ ವಾಸ್ತು ಶಿಲ್ಪ ಮತ್ತು ಮೂರ್ತಿ ಶಿಲ್ಪ** ೨೧೨–೨೬೫

೬.೧. ಧಾರ್ಮಿಕ
೬.೨. ಲೌಕಿಕ
೬.೩. ರಕ್ಷಣಾ
೬.೪. ಸ್ಮಾರಕ ಶಿಲ್ಪಗಳು

ಅಧ್ಯಾಯ-೭: ತೇರದಾಳ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟ , ೨೬೬-೨೯೭

೭.೧. ಸ್ವಾತಂತ್ರ್ಯ ಹೋರಾಟದ ಮಹತ್ವ

೭.೨. ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು

೭.೩. ಸ್ವಾತಂತ್ರ್ಯೋತ್ತರ ರಾಜಕೀಯ ಸ್ಥಿತಿಗತಿಗಳು

ಅಧ್ಯಾಯ-೮. ಸಮಾರೋಪ ೨೯೮-೩೧೨

ಅನುಬಂಧಗಳು : ಗ್ರಂಥ ಋಣ ೩೧೩-೩೨೨

ಛಾಯಾ ಚಿತ್ರ ೩೨೩-೩೨೭

## ಅಧ್ಯಾಯ-೧ ಪ್ರಸ್ತಾವನೆ

**'ಚರಿತ್ರೆ'** ಕೇವಲ ಗತಕಾಲದ ಕಥನವಲ್ಲ. ಬದಲಾಗಿ ಅದು ವರ್ತಮಾನದ ಮಾನವನ ಸಮಗ್ರ ಮತ್ತು ವ್ಯವಸ್ಥಿತ ದಾಖಲೆಯೂ ಹೌದು. ಚರಿತ್ರೆ ಮಾನವನ ಸಮಗ್ರ ಜೀವನಕ್ರಮ ಮತ್ತು ಘಟನಾವಳಿಗಳನ್ನು ಕಾಲಾನುಕ್ರಮದಲ್ಲಿ ಅಧ್ಯಯನ ಮಾಡುವ ಜ್ಞಾನಶಿಸ್ತುವಾಗಿದ್ದು, ಮಾನವ ಪ್ರಗತಿಯನ್ನು ಅರಿಯಲು ಅದು ಸಹಾಯಕವಾಗಿದೆ. ಚರಿತ್ರೆ ಸಿಂಹಾಸನದಿಂದ ಪ್ರವೇಶ ಮಾಡಿದರೂ ಸಹ ಅದು ಮಾನವ ಸಮುದಾಯಕ್ಕೆ ಅಗತ್ಯವಾಗಿ ಬೇಕಾಗಿರುವ ಸಾಮಾಜಿಕ, ನೈತಿಕ, ಆರ್ಥಿಕ, ರಾಜಕೀಯ ಮೌಲ್ಯಗಳನ್ನು ನೀಡಿ ಮಾನವನ ಜ್ಞಾನಾಭಿವೃದ್ದಿಗೆ ಸಹಕಾರಿಯಾಗಿದೆ. ಕೇವಲ ನಾಗರಿಕತೆಯ ಏಳುಬೀಳಿನ ಕಥೆಯನ್ನು ಮಾತ್ರ ಅಭ್ಯಾಸ ಮಾಡುವುದು ಚರಿತ್ರೆಯ ಮುಖ್ಯ ಗುರಿ ಅಲ್ಲ, ಬದಲಾಗಿ ಅದು ಇಡೀ ಮನುಕುಲದ ಬೆಳವಣಿಗೆ, ವಿಕಾಸ, ಅಭಿವೃದ್ಧಿಯ ಸಮಗ್ರ ದಾಖಲೆಯಾಗಿದೆ. ಇತಿಹಾಸ ಮಾನವ ಸುಸಂಸ್ಕೃತನಾಗಲು, ಉತ್ತಮ ಬದುಕನ್ನು ರೂಪಿಸಿಕೊಳ್ಳಲು ಸಹಕಾರಿಯಾಗಿದೆ. ಇಂದಿನ ಜಗತ್ತು ಚರಿತ್ರೆಯಿಂದ ಕಲಿಯಬೇಕಾದ ಬಹು ಮುಖ್ಯವಾದ ಪಾಠವೆಂದರೆ ಪರಸ್ಪರ ಮಾನವ ಪ್ರೀತಿ, ಶಾಂತಿ, ಸಹನೆ, ಅಹಿಂಸೆ, ಸಹಿಷ್ಣುತೆ. ಆದರೆ ನಮ್ಮ ಇಂದಿನ ಬದಕು ಈ ಎಲ್ಲಾ ತತ್ವಗಳಿಗೆ ವಿರುದ್ಧವಾಗಿ ರೂಪಿತವಾಗುತ್ತಿರುವುದು ವಿಷಾದನೀಯ. ನಮ್ಮಲ್ಲಿ ಇಂದು ಸ್ವಾರ್ಥ, ದ್ವೇಷ, ಅಸೂಹೆ, ಅಸಹನೆ, ಜನಾಂಗೀಯ ದ್ವೇಷ/ಕಲಹಗಳು ಅಧಿಕವಾಗುತ್ತಿದ್ದು, ಇದನ್ನು ಹೋಗಲಾಡಿಸುವ ಅವಶ್ಯಕತೆ ಇದೆ. ಮಾನವ ಹಿಂದಿಗಿಂತಲೂ ಇಂದು ತನ್ನ ಸ್ವಾರ್ಥಪರ ಆಲೋಚನೆಗಳನ್ನು ಬಿಟ್ಟು, ಮಾನವ ಸಹೃದಯತೆ, ಸಹೋದರತೆ, ಭಾತೃತ್ವಗಳನ್ನು ಹೆಚ್ಚಾಗಿ ಬೆಳಸಿಕೊಳ್ಳಬೇಕಾದ ಅವಶ್ಯಕತೆ ಇದೆ. ಆ ರೀತಿ ಆದಾಗಲೇ ಚರಿತ್ರೆಯನ್ನು ಅಧ್ಯಯನ ಮಾಡಿದ್ದಕ್ಕೆ ನಮ್ಮ ಬದುಕು ಸಾರ್ಥಕವಾಗುತ್ತದೆ. ಅದಕ್ಕಾಗಿಯೇ ಚರಿತ್ರೆಯನ್ನು ಭೂತ ಮತ್ತು ವರ್ತಮಾನಗಳ ಕೊಂಡಿ ಎನ್ನುತ್ತಾರೆ.

**"ಚರಿತ್ರೆ ಎಂದರೆ ಅದು ಸಮಯ ಸಂದರ್ಭದ ಕೂಸು ಮತ್ತು ಅದು ಯಾವಾಗಲೂ ಇತಿಹಾಸಕ್ಕಾರನ ಆಯ್ಕೆಯಾಗಿರುತ್ತದೆ"** ಅಂದರೆ ಇತಿಹಾಸಕಾರನು ಕೆಲ ಇತಿ-ಮಿತಿಗಳಿಗೆ ಒಳಗಾಗಿ ತನಗೆ ಆಸಕ್ತಿಯಿರುವ ಕೆಲ ಸತ್ಯಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ತಾನು ಚರಿತ್ರೆಯನ್ನು ರಚಿಸುತ್ತಾನೆ. ಇದರ ಪರಿಣಾಮ ನಮ್ಮ ಇತಿಹಾಸವು ಕೇವಲ ಕೆಲವರ ಇತಿಹಾಸವಾಗಿ ಮಾರ್ಪಟ್ಟಿರುವುದು ದುರದುಷ್ಟಕರ. ತನ್ನ ಪ್ರದೇಶ-ದೇಶ, ಜಾತಿ, ಧರ್ಮ, ಪಕ್ಷ, ಸಿದ್ಧಾಂತ, ಪಂಥ, ನಂಬಿಕೆ, ಆಚರಣೆಗಳೇ ದೊಡ್ಡವು ಮತ್ತು ಮುಖ್ಯ, ಉಳಿದವೆಲ್ಲಾ ಅಮುಖ್ಯ ಎಂದು ಭಾವಿಸಿ, ಅದೇ ಸಿದ್ಧಾಂತಗಳಿಗೆ ಬದ್ಧರಾಗಿ ಇಲ್ಲಿಯವರೆಗೆ ಬಹುತೇಕ ಇತಿಹಾಸಕಾರರು ಇತಿಹಾಸ ರಚಿಸಿದ್ದಾರೆ. ಇದರಿಂದಾಗಿ ನಮ್ಮಲ್ಲಿ ಇಲ್ಲಿಯವರೆಗೂ **"ಸರ್ವರ ಇತಿಹಾಸ"** ರಚನೆಯಾಗಿಲ್ಲ. ಅದು ಕೆಲವೇ ಕೆಲ ಜಾತಿ, ಧರ್ಮ, ಪ್ರದೇಶಗಳಿಗೆ ಅಥವಾ ಇನ್ನಾವುದೋ ಉದ್ದೇಶಗಳಿಗೆ ಮಾತ್ರ ಸೀಮಿತವಾಗಿ ರಚನೆಯಾಗಿ ಅದು ಕೆಲವರನ್ನು ಮಾತ್ರ ಪ್ರತಿನಿಧಿಸುತ್ತಿರುವುದು ವಿಪರ್ಯಾಸ. ಇದರ ಪರಿಣಾಮವಾಗಿ ಇತಿಹಾಸ ಎಂದರೆ ಕೇವಲ ದಂತ ಕಥೆಗಳ ಶಾಸ್ತ್ರ ಎಂದು ಬಹುತೇಕರು ಇತಿಹಾಸವನ್ನು ಭಾವಿಸಲು ಮತ್ತು ಅಲ್ಲಗೆಳೆಯಲು ಕಾರಣವಾಗಿದೆ. ಆದ್ದರಿಂದ "ಸರ್ವರ ಇತಿಹಾಸ" ರಚನೆಯಾಗಬೇಕಾಗಿರುವುದು ನಮ್ಮ ಇಂದಿನ ತುರ್ತು ಅವಶ್ಯಕತೆಯಾಗಿದೆ. ಇಲ್ಲಿಯವರೆಗೆ ನಿರ್ಲಕ್ಷ್ಯಕ್ಕೆ ಒಳಗಾಗಿರುವ ವಿಷಯಗಳತ್ತ ಹೆಚ್ಚು ಗಮನಹರಿಸಿ ನಾವು ಇತಿಹಾಸವನ್ನು ಪುನರ್ ರಚಿಸಿದಲ್ಲಿ ಒಂದು ಹೊಸ ಬಗೆಯ ಇತಿಹಾಸ ಅಂದರೆ ಸರ್ವ

ಜನರನ್ನು ಪ್ರತಿನಿಧಿಸುವ ಇತಿಹಾಸ ನಿರ್ಮಾಣವಾಗುವುದರಲ್ಲಿ ಯಾವುದೇ ಅನುಮಾನವಿಲ್ಲ. ಈ ಹಿನ್ನೆಲೆಯಲ್ಲಿ ಇಲ್ಲಿಯವರೆಗೆ ನಿರ್ಲಕ್ಷ್ಯಕ್ಕೆ ಒಳಗಾದ ಪ್ರಾದೇಶಿಕ ಇತಿಹಾಸ ಮತ್ತು ಸಾಬಾಲ್ಟ್ರನ್ ಅಧ್ಯಯನಗಳ ರಚನೆಯತ್ತ ನಮ್ಮ ಗಮನಹರಿಸಬೇಕಾದ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರಸಕ್ತ ಅಧ್ಯಯನವನ್ನು ಕೈಗೆತ್ತಿಕೊಂಡು ತೇರದಾಳ ಪರಿಸರದ/ಪ್ರದೇಶದ ಚಾರಿತ್ರಿಕ ವೈಶಿಷ್ಟತೆಯನ್ನು ಮಹತ್ವವನ್ನು ಇಲ್ಲಿ ದಾಖಲಿಸಲಾಗಿದೆ.

ಜಮಖಂಡಿ ತಾಲೂಕು ಕೇಂದ್ರ ಸ್ಥಾನದಿಂದ ಪಶ್ಚಿಮಕ್ಕೆ ೨೯ ಕಿ.ಮೀ. ದೂರದಲ್ಲಿರುವ ತೇರದಾಳವು ಹಲವಾರು ವೈಶಿಷ್ಟ್ಯತೆಗಳಿಗೆ ಹೆಸರುವಾಸಿಯಾಗಿದೆ. ಹಿಂದೆ ಬಿಜಾಪುರ ಜಿಲ್ಲೆಯ ಭಾಗವಾಗಿದ್ದ ಈ ಭೂಪ್ರದೇಶ ಇಂದು ಅಂದರೆ ೧೯೯೭ರ ತರುವಾಯ ಪ್ರಸಕ್ತ ಬಾಗಲಕೋಟೆ ಜಿಲ್ಲೆಯ ವ್ಯಾಪ್ತಿಗೊಳಪಟ್ಟಿದೆ. ಕರ್ನಾಟಕ ಏಕೀಕರಣದ ನಂತರ ೧೯೭೩ರಲ್ಲಿ ಮೈಸೂರು ಮುನ್ಸಿಪಾಲ್ಟಿ ಕಾಯ್ದೆಯನ್ವಯ ಪಂಚಾಯಿತಿಯಿಂದ ಮಾರ್ಪಾಟಾಗಿ ಪುರಸಭೆಯಾಗಿ ಮೇಲ್ದರ್ಜೆಗೇರಿದೆ ಅಲ್ಲದೇ ತೇರದಾಳವು ಇಂದು ವಿಧಾನಸಭಾ ಕ್ಷೇತ್ರವಾಗಿ ರಾಜಕೀಯ ಆಡಳಿತದಲ್ಲಿ ತನ್ನನ್ನು ಗುರುತಿಸಿಕೊಂಡಿದೆ. ಪ್ರಸಕ್ತ ಪಟ್ಟಣ ಪಂಚಾಯಿತಿಯ ಕೇಂದ್ರವಾಗಿರುವ ತೇರದಾಳ ಪರಿಸರವು ಭೌಗೋಳಿಕವಾಗಿ ದಕ್ಷಿಣ ಪ್ರಸ್ಥ ಭೂಮಿಯ ಒಣ ಮತ್ತು ಶುಷ್ಕ ವಲಯಕ್ಕೆ ಸೇರಿದೆ. ತೇರದಾಳದ ಉತ್ತರಕ್ಕೆ ಅಥಣಿ ತಾಲೂಕು, ದಕ್ಷಿಣಕ್ಕೆ ಮುಧೋಳ, ಪೂರ್ವಕ್ಕೆ ಜಮಖಂಡಿ, ಪಶ್ಚಿಮಕ್ಕೆ ರಾಯಬಾಗ ತಾಲೂಕುಗಳ ಗಡಿಗಳನ್ನು ಹೊಂದಿದೆ. ತೇರದಾಳ ಪರಿಸರದ ಸ್ವಲ್ಪ ಅಂತರದಲ್ಲಿಯೇ ಉತ್ತರಕ್ಕೆ ಕೃಷ್ಣಾ ನದಿ ಪೂರ್ವದತ್ತ ಮುಖ ಮಾಡಿ ಅಂಕು ಡೊಂಕಾಗಿ ಹರಿಯುತ್ತಿದೆ. ಇದು ಫಲವತ್ತಾದ ಕಪ್ಪು, ಕೆಂಪು ಮಣ್ಣಿನ ಭೂ ಪ್ರದೇಶವನ್ನು ಹೊಂದಿದೆ.

ಮಹಾರಾಷ್ಟ್ರದ ದಕ್ಷಿಣ ಭಾಗವನ್ನು ಪಟವರ್ಧನ ದೊರೆಗಳು ಆಳುತ್ತಿದ್ದರು. ಇವರ ಸಂಸ್ಥಾನಗಳಲ್ಲಿ ಸಾಂಗ್ಲಿ ಸಂಸ್ಥಾನವು ಒಂದಾಗಿದ್ದು, ಅದು ಎಲ್ಲಕ್ಕಿಂತ ದೊಡ್ಡದಾಗಿತ್ತು. ಅಂದು ತೇರದಾಳವು ೧೩ ಹಳ್ಳಿಗಳನ್ನು ಹೊಂದಿದ ಪ್ರಮುಖವಾದ ತಾಲೂಕಾ ಕೇಂದ್ರವಾಗಿತ್ತು. ಈ ಪ್ರದೇಶವನ್ನು ರಾಷ್ಟ್ರಕೂಟ, ಬದಾಮಿಯ ಚಾಳುಕ್ಯರು, ಕಲ್ಯಾಣದ ಚಾಳುಕ್ಯರು, ಸೌದತ್ತಿಯ ರಟ್ಟರು, ಶಿಲಾಹಾರರು, ದೇವಗಿರಿಯ ಯಾದವರು, ಬಿಜಾಪುರದ ಆದಿಲ್‌ಶಾಹಿಗಳು, ಸಾಂಗ್ಲಿ ಸಂಸ್ಥಾನದ ಅರಸರು ಆಳ್ವಿಕೆ ಮಾಡಿದ್ದಾರೆ. ಈ ಗ್ರಾಮವನ್ನು **'ತೇರಿದಾಳ'** ಎಂದು ಶಾಸನಗಳು ಉಲ್ಲೇಖಿಸಿವೆ. ಈ ಪರಿಸರದಲ್ಲಿ ಅನೇಕ ಪ್ರಾಗೈತಿಹಾಸಿಕ ನೆಲೆಗಳಿವೆ. ತೇರದಾಳದ ಪಶ್ಚಿಮ ದಿಕ್ಕಿಗೆ ೫ ಕಿ. ಮೀ. ದೂರದಲ್ಲಿ **'ವಿಭೂತಿ ಮಡ್ಡಿ'** ಎಂದು ಕರೆಯುವ ದಿಬ್ಬವಿದ್ದು, ಇಲ್ಲಿ ಬೂದಿ ಮಣ್ಣು ಮತ್ತು ಜನವಸತಿ ನೆಲೆಗಟ್ಟುಗಳ ಅವಶೇಷಗಳಿಂದ ತುಂಬಿದೆ. ಅಲ್ಲದೆ ಇದೇ ಪರಿಸರದ ಉತ್ತರ ದಿಕ್ಕಿನಲ್ಲಿರುವ **'ಕಡ್ಲಿಪಲ್ಲಿ'** ಎಂಬ ಗುಡ್ಡದ ೫ ಕಿ.ಮೀ ವ್ಯಾಪ್ತಿಯಲ್ಲಿ ಬರುವ ಹನಗಂಡಿ, ಹಳಿಂಗಳಿ, ಮದನಮಟ್ಟಿ, ಆಸಂಗಿಯ ಸುತ್ತಮುತ್ತಲೂ ೧೦೦೦ ಕ್ಕಿಂತಲೂ ಹೆಚ್ಚು ಬೃಹತ್ ಶಿಲಾಯುಗದ ಗೋರಿಗಳಿದ್ದು, ಅಧ್ಯಯನದ ದೃಷ್ಟಿಯಿಂದ ಮಹತ್ವ ಪಡೆದಿವೆ. ನಂತರದ ದಿನಗಳಲ್ಲಿ ಇವುಗಳಲ್ಲಿ ಜೈನ ಮುನಿಗಳು ವಾಸಿಸುತ್ತಿದ್ದರೆಂದು ಸ್ಥಳೀಯರು ನಂಬಿದ್ದಾರೆ.

ಚಾರಿತ್ರಿಕ ಕಾಲಘಟ್ಟದಲ್ಲಿಯೂ ಈ ಪ್ರದೇಶ ಅತಿ ಮುಖ್ಯವಾದ ಪಾತ್ರವನ್ನು ನಿರ್ವಹಿಸಿರುವುದನ್ನು ಇಲ್ಲಿನ ಶಾಸನಗಳು ಮತ್ತು ಸ್ಮಾರಕಗಳು ಧೃಡಪಡಿಸಿವೆ. ಚಾಳುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದ ಕಾರ್ತಿವಿರ್ಯನ ರಾಜಧಾನಿ ತೇರದಾಳ ಆಗಿತ್ತೆಂದು ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಚಾಳುಕ್ಯರ ಪೆರ್ಮಾಡಿ ಎಂಬ ಅರಸ (೧೧೭೫-೧೧೨೬)

ಗುಜರಾತ್ ಚೋಳ ದೇಶಗಳ ಅರಸರನ್ನು ಗೆದ್ದು ಬಂದ ಬಳಿಕ ಈ ಗ್ರಾಮವನ್ನು ಹಾಗೂ ಕೆರೆಯನ್ನು ಕಟ್ಟಿದನೆಂಬ ಪ್ರತೀತಿ ಇದೆ. ತೇರದಾಳವು ಕುಂತಳ ದೇಶದಲ್ಲಿದ್ದ ಕೂಹುಂಡಿ ದೇಶದ ಒಂದು ಸಣ್ಣ ಆಡಳಿತ ಭಾಗವಾಗಿತ್ತು. ತೇರದಾಳದ ನೇಮಿನಾಥ ಬಸದಿಯಲ್ಲಿ ದೊರೆತ ಶಾಸನಗಳಲ್ಲಿ ಹಲವು ಮಹತ್ವದ ಉಲ್ಲೇಖಗಳಿವೆ. ಅವುಗಳಲ್ಲಿ ಮೊದಲನೆಯ ಶಾಸನವು ಗೊಂಕದೇವನು ತನ್ನ ರಾಜಧಾನಿಯಾದ ತೇರದಾಳದಲ್ಲಿ ಗೊಂಕ ಜಿನಾಲಯವನ್ನು ನಿರ್ಮಿಸಿ ಅಲ್ಲಿ ನೇಮಿ ಜಿನಾಲಯವನ್ನು ಪ್ರತಿಷ್ಠೆ ಮಾಡಿಸಿ ಅಲ್ಲಿಗೆ ಕೋಲ್ಹಾಪುರದ ರೂಪನಾರಾಯಣ ಬಸದಿಯ ಆಚಾರ್ಯರಾದ ಮಾಘನಂದಿಯವರನ್ನು ಕರೆಯಿಸಿ ಬಸದಿಯ ರಿಸಿಯರಾಹರ ದನಕ್ಕೆ ದೇವರ ಪೂಜೆ ಮುಂತಾದುವುದಕ್ಕೆ ಖಂಡಸ್ಫಟಿತ ಜೀರ್ಣೋದ್ಧಾರಕ್ಕೆಂದು ಮುನಿಯ ಕಾಲನ್ನು ತೊಳೆದು ೨೪ ಗೇಣ ಕೋಲನಲ್ಲಿ ೭೨ ಮತ್ತರು ಭೂಮಿ, ಒಂದು ಮತ್ತರು ತೋಟ ಭೂದಾನ ನೀಡುತ್ತಾನೆ. ಆಗ ಅಲ್ಲಿಯ ಗಾವುಂಡಗಳು, ಸೆಟ್ಟರು ಮುಂತಾದವರು ಬೇರೆ ಬೇರೆ ದಾನ ನೀಡುದ್ದಾರೆ. ಅದೇ ರೀತಿ ಕ್ರಿ.ಶ.೧೧೮೧ ಶಾಸನದ ಉಲ್ಲೇಖದ ಪ್ರಕಾರ ಅಯ್ಯಾವೊಳೆ ಐನೂವೋರು ಸ್ವಾಮಿಗಳ ಬಗೆಗಿನ ಪ್ರಶಸ್ತಿಗಳ ಕುರಿತು ವಿವರಗಳಿವೆ. ಇಲ್ಲಿನ ಕ್ರಿ.ಶ.೧೧೮೭ ರಲ್ಲಿ ರಚಿತವಾದ ೩ನೇಯ ಶಾಸನವು ಗೊಂಕ ಜಿನಾಲಯಕ್ಕೆ ದಾನದತ್ತಿಗಳನ್ನು ವಿವರಿಸುತ್ತದೆ. ಸೇವುಣ ಅಥವಾ ಯಾದವ ಅರಸ ಸಿಂಘಣನ ಸೇನಾನಿಯಾಗಿದ್ದ ತೆಜುಗಿ ಮತ್ತು ಅವನ ಮಗ ಬಾಯಿದೇವರು ಕುಂತಳ ಮಹೀವಲ್ಲಭ ಕಲ್ಯಾಣದ ಚಾಳುಕ್ಯ ೪ನೇ ಸೋಮೇಶ್ವರನಿಂದ ಕೊಂಡಿನಾಡನ್ನು ಪಡೆದುಕೊಂಡು ಅದನ್ನು ಆಳುತ್ತಿದ್ದರು. ಆಗ ತೇರದಾಳದ ಗೊಂಕ ಜಿನಾಲಯ ನೇಮಿತೀರ್ಥೇಶ್ವರ ದೇವರಿಗೆ ಕ್ರಿ.ಶ.೧೧೨೩ ಶಾಸನಗಳಲ್ಲಿ ಗೊಂಕರಸನು ಬಿಟ್ಟಿದ್ದ ಭೂಮಿಯನ್ನು ಪೂರ್ಣ ದತ್ತಿ ಮಾಡಿದ್ದುದ್ದೇ ಅಲ್ಲದೆ ಹೊಸದಾಗಿ ಬಸದಿಯ ಅಂಗ ರಂಗಭೋಗಕ್ಕೆ ಅಲ್ಲಿಯ ಮುನಿಗಳ ಆಹಾರಕ್ಕೆ ಬಸದಿಯ ಜೀರ್ಣೋದ್ಧಾರಕ್ಕಾಗಿ ೩೬ ಮತ್ತರ ಭೂಮಿಯನ್ನು ಹಾಗೂ ದೇವಾಲಯಕ್ಕೆ ಒಂದು ನಿವೇಶನವನ್ನು ಬಿಟ್ಟ ವಿಷಯವನ್ನು ದಾಖಲಿಸಿದೆ. ಅಲ್ಲದೆ ಆರನೇಯ ವಿಕ್ರಮಾದಿತ್ಯನ ಕ್ರಿ.ಶ.೧೧೨೫ರ ಶಾಸನವು ರಟ್ಟಕಾರ್ತವೀರ್ಯನ ಮಾಂಡಲೀಕನಾಗಿದ್ದ ಗೊಂಕರಸನು ಇಲ್ಲಿ ಜಿನಾಲಯ ಕಟ್ಟಿಸಿ ನೇಮೀನಾಥ ತೀರ್ಥಂಕರನ ವಿಗ್ರಹವನ್ನು ಪ್ರತಿಷ್ಠಾಪಿಸಿದ. ಆ ಕಾರಣಕ್ಕಾಗಿ ಇಲ್ಲಿನ ಜಿನಾಲಯವನ್ನು ಗೊಂಕ ಜಿನಾಲಯವೆಂದು ಜನರು ಕರೆಯುತ್ತಾರೆ. ಇಲ್ಲಿನ ಕ್ರಿ.ಶ.೧೧೨೩ರ ಕಾಲದ ಶಾಸನವೊಂದು **"ಅರವತ್ತೊಕ್ಕಲುಂ ಹನ್ನಿ ಧಾನ್ಯಕ್ಕೆ ರಾಸಿಗೊಳಗವಂ ಬಿಟ್ಟರು"** ಎಂದು ಉಲ್ಲೇಖಿಸುತ್ತದೆ. ಇದರಿಂದ ಅಲ್ಲಿ ಅರವತ್ತು ಕುಟುಂಬಗಳಿಂದ ಒಡಗೂಡಿದ ಒಕ್ಕಲುತನದ ಸಂಘವೊಂದಿತ್ತೆಂದು ತಿಳಿದು ಬರುತ್ತದೆ.

ತೇರದಾಳದ ಅಲ್ಲಮ ಪ್ರಭು ಸ್ವಾಮಿ ಲಿಂಗಯೋಗಿಯು ಮುಸ್ಲಿಂ ಧರ್ಮದ ಅಬಖಾನನೆಂಬ ಫಕೀರನೊಂದಿಗೆ ಬಂದು ಸುಮಾರು ವರ್ಷಗಳ ಕಾಲ ತೇರದಾಳದಲ್ಲಿ ನೆಲೆಸಿದನಂತೆ ಹಾಗೂ ಬಿಜಾಪುರದ ಆದಿಲ್‌ಷಾಹನು ಕೃಷ್ಣೆಗೌಡ ಎಂಬುವವನಿಗೆ ದೇಸಗತಿ ಸಂಸ್ಥಾನವನ್ನು ಮಾಡಿಕೊಟ್ಟನೆಂದು ಹಾಗೂ ಪ್ರಭು ಸ್ವಾಮಿ ಇರುತ್ತಿದ್ದ ಸ್ಥಳದಲ್ಲಿ ಕೃಷ್ಣೆಗೌಡರು ಗುಡಿಯನ್ನು ಕಟ್ಟಿಸಿದರು. ೧೬ನೇ ಶತಮಾನದಲ್ಲಿ ಆದಿಲ್ ಶಾಹಿಯಿಂದ ಹುಚ್ಚು ಕುದುರೆಯ ಸರದಾರನಾಗಿ ಗಳಿಸಿದ ಕೀರ್ತಿಗೆ ಇಲ್ಲಿನ ನಾಡಗೌಡರ ಮನೆತನವು ಹೆಸರುವಾಸಿಯಾಗಿತ್ತು. ಇಲ್ಲಿನ ಕೋಟೆ, ವಾಡೆ ನಾಡಗೌಡರ ಮನೆತನದ ಕುರುಹುಗಳಾಗಿವೆ ಮತ್ತು ಈ ಮನೆತನದ ವಂಶಸ್ಥರು ಈಗಲೂ ಇಲ್ಲಿ ಇದ್ದಾರೆ.

ತೇರದಾಳದ ಭೌಗೋಳಿಕ ಪರಿಸರವು ೫೧೭೪.೬೭ ಹೆಕ್ಟೇರ್ ಬಯಲುನಾಡು ಪ್ರದೇಶವನ್ನು ಹೊಂದಿದೆ. ಕಪ್ಪು ಎರೆಮಣ್ಣು, ಕೆಂಪುಶಿಲೆ, ಮರಳು ಮಿಶ್ರಿತ ಕೆಂಪುಮಣ್ಣು ಹೊಂದಿದ್ದು, ಜನರ ವಾಸಕ್ಕೆ ಯೋಗ್ಯ ವಾತವಾರಣವಿದೆ. ಐತಿಹಾಸಿಕ ಕಾಲದ ದೊಡ್ಡ ಕೆರೆ ಪಕ್ಕದಲ್ಲಿಯೇ ಜಿರಗೇರಿ ಎಂಬ ಚಿಕ್ಕ ಕೆರೆಯೂ ಇದೆ. ೩೨೯೧.೭೯ ಹೆಕ್ಟೇರ್ ರಕ್ಷಿತಾರಣ್ಯದಲ್ಲಿ ಸಾಮಾಜಿಕ ಅರಣ್ಯ ಇಲಾಖೆಯವರು ವಿವಿಧ ಸಸಿಗಳನ್ನು ನೆಟ್ಟಿದ್ದಾರೆ. ಇಲ್ಲಿ ವಿವಿಧ ಸಮುದಾಯದವರು ನೆಲೆಸಿದ್ದು ವ್ಯವಸಾಯ ಅವರ ಪ್ರಮುಖ ವೃತ್ತಿಯಾಗಿದೆ. ಅಲ್ಲದೇ ಹಲವು ಉಪ ವೃತ್ತಿಗಳನ್ನು ರೂಢಿಸಿಕೊಂಡಿದ್ದಾರೆ. ಇಲ್ಲಿನ ಜನರು ಉತ್ತಮ ಸಂಸ್ಕೃತಿ ಮತ್ತು ಕಲಾಪರಂಪರೆಯನ್ನು ಹೊಂದಿದ್ದಾರೆ.

**೧.೧.ಅಧ್ಯಯನದ ಅವಶ್ಯಕತೆ ಮತ್ತು ಉದ್ದೇಶ**

ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸ ಹಾಗೂ ಪ್ರಾದೇಶಿಕ ಇತಿಹಾಸದ ದೃಷ್ಟಿಯಿಂದ ತೇರದಾಳವು ಅತಿ ಮಹತ್ವದ ಸ್ಥಾನ ಪಡೆದಿದೆ. ಇಂದಿನ ಜಾಗತೀಕರಣದ ನಾಗಲೋಟಕ್ಕೆ ಇಲ್ಲಿನ ಪರಿಸರವು ಸಹ ಸಿಲುಕಿಕೊಂಡಿದ್ದು ಇಲ್ಲಿನ ಪರಂಪರೆ, ಸಂಸ್ಕೃತಿ, ಇತಿಹಾಸ ಎಲ್ಲವೂ ಕಣ್ಮರೆಯಾಗುವ ಅಪಾಯವಿದೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸ ಹಾಗೂ ಅದರ ಮಹತ್ವವನ್ನು ದಾಖಲಿಸಬೇಕಾದ ತುರ್ತು ಅಗತ್ಯವಿದೆ. ತಪ್ಪಿದಲ್ಲಿ ಚರಿತ್ರೆಯ ಕೊಂಡಿಗಳು ಕಳಚಿಕೊಳ್ಳುವ ಅಪಾಯವಿದೆ. ದೇಶವೊಂದರ ಇತಿಹಾಸದಲ್ಲಿ ಸಣ್ಣಪುಟ್ಟ ಪ್ರಾದೇಶಿಕ ಅರಸು ಮನೆತನಗಳು ಮತ್ತು ಶ್ರೀಸಾಮಾನ್ಯರ ಇತಿಹಾಸ, ಅವರ ಪರಂಪರೆ, ಕಲೆ, ಸಂಪ್ರದಾಯ, ಆಚರಣೆ, ಅವರ ಹೋರಾಟ ಮೊದಲಾದ ಅಂಶಗಳು ಸಹ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿವೆ. ಆದರೆ ತೇರದಾಳ ಪರಿಸರದ ಕುರಿತಂತೆ ಇಲ್ಲಿಯವರೆಗೆ ನಡೆದ ಯಾವುದೇ ಅಧ್ಯಯನಗಳು ಸ್ಥಳೀಯ, ಪ್ರಾದೇಶಿಕ ಇತಿಹಾಸ ಹಾಗೂ ಸಾಬಾಲ್ಟ್ರನ್ ಅಧ್ಯಯನದ ಉದ್ದೇಶಗಳನ್ನಿಟ್ಟುಕೊಂಡು ನಡೆದಿಲ್ಲ ಮತ್ತು ಅವುಗಳಿಗೆ ಒತ್ತುಕೊಟ್ಟು ನಡೆದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಈ ಮೇಲಿನ ಅಂಶಗಳಿಗೆ ಆದ್ಯತೆಕೊಟ್ಟು ವ್ಯವಸ್ಥಿತವಾಗಿ ಅಧ್ಯಯನ ನಡೆಸಬೇಕಾದ ಅಗತ್ಯವಿದೆ. ಇದರ ಕೊರತೆಯನ್ನು ತುಂಬುವ ಸಲುವಾಗಿ ವ್ಯವಸ್ಥಿತವಾದ ಅಧ್ಯಯನದ ಅವಶ್ಯಕತೆ ಇದೆ.

ತೇರದಾಳ ಪ್ರದೇಶವು ಹಿಂದಿನ ರಾಜಪ್ರಭುತ್ವದಿಂದ ಇಂದಿನ ಜನತಾ ಪ್ರಭುತ್ವದವರೆಗೆ ರಾಜಕೀಯ ಕ್ಷೇತ್ರದಲ್ಲಿ ತನ್ನದೇ ಆದ ಛಾಪು ಮೂಡಿಸಿದೆ ಅಲ್ಲದೆ ಇಲ್ಲಿನ ಚರಿತ್ರೆಯೂ ಆದ್ವಿತೀಯವಾಗಿದ್ದು, ಮಾನವ ಸಂಸ್ಕೃತಿಯ ಏಳ್ಗೆಗಾಗಿ ತನ್ನದೇ ಆದ ಮಹತ್ವದ ಕೊಡುಗೆಯನ್ನು ನೀಡಿದೆ. ಸಬಾಲ್ಟ್ರರ್ನ್ ಅಧ್ಯಯನವು ಸ್ಥಳಿಯ ಚರಿತ್ರೆ, ಕೆಳಸ್ಥರದ ಜನರ ಮತ್ತು ಸಮುದಾಯದ, ಕುಶಲಕರ್ಮಿಗಳ ಅಧ್ಯಯನಕ್ಕೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಇದುವರೆಗೆ ವ್ಯವಸ್ಥಿತವಾಗಿ ದಾಖಲಿಸಲಾಗದೇ ಇರುವ ತೇರದಾಳ ಪರಿಸರದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಅವಶ್ಯಕವಾಗಿ ಅಧ್ಯಯನ ಮಾಡಬೇಕಾಗಿದೆ. ಇಲ್ಲಿನ ಸ್ಥಳೀಯ ಚರಿತ್ರೆ ಅನಾವರಣಗೊಳಿಸುವುದರ ಜೊತೆಗೆ ಸ್ಥಳೀಯ ಜನರ ವೃತ್ತಿ, ಅವರ ಹೋರಾಟ, ಅವರ ಜನ ಜೀವನ ಕ್ರಮ ಹಾಗೂ ಕಲಾ ವೈಶಿಷ್ಟತೆಗಳ ಮೇಲೆ ಬೆಳಕನ್ನು ಚೆಲ್ಲುವ ಉದ್ದೇಶದಿಂದ ಪ್ರಸಕ್ತ ವಿಷಯವನ್ನು ಸಂಶೋಧನೆಗಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ತೇರದಾಳ ಪರಿಸರದ ಭೌಗೋಳಿಕ ಪರಿಸರ, ಭೌಗೋಳಿಕ ವಿವರ ಮತ್ತು ಅಲ್ಲಿನ ಭೌಗೋಳಿಕ ಲಕ್ಷಣಗಳು ಗುರುತಿಸುವುದು.

೨. ತೇರದಾಳ ಪರಿಸರದಲ್ಲಿನ ಪ್ರಾಗೈತಿಹಾಸಿಕ ನೆಲೆಗಳನ್ನು ಹಳೆ, ಮಧ್ಯ, ನವ, ಬೃಹತ್ ಶಿಲಾಯುಗಗಳ ಹಿನ್ನೆಲೆಯಲ್ಲಿ ಮಾನವ ಸಂಸ್ಕೃತಿಯನ್ನು ಗುರುತಿಸುವುದು.

೩. ಈ ಪ್ರದೇಶದ ಪ್ರಾಚೀನ, ಮಧ್ಯಯುಗೀನ, ಆಧುನಿಕ ಕಾಲಘಟ್ಟ ಹಾಗೂ ಸಮಕಾಲೀನ ಕಾಲಘಟ್ಟಗಳ ಚಾರಿತ್ರಿಕ ಹಿನ್ನೆಲೆ, ಆಳ್ವಿಕೆ ಮಾಡಿದ ವಿವಿಧ ಅರಸರು ಮತ್ತು ಅವರ ರಾಜಕೀಯ ಆಡಳಿತ ವ್ಯವಸ್ಥೆಯನ್ನು ದಾಖಲಿಸುವುದು.

೪. ಈ ಪ್ರದೇಶದ ಸಾಮಾಜಿಕ ಜನಜೀವನ ಇಲ್ಲಿನ ಮಾನವ ಸಂಸ್ಕೃತಿಯ ಅರ್ಥ-ವೈಶಿಷ್ಟ್ಯತೆ ಮತ್ತು ಮಹತ್ವಗಳನ್ನು ಗುರುತಿಸುವುದರೊಂದಿಗೆ ಇಲ್ಲಿನ ವಿವಿಧ ಸಮುದಾಯಗಳು, ಶ್ರೇಣಿಕರಣ ವ್ಯವಸ್ಥೆಗಳನ್ನು ವಿಶ್ಲೇಷಿಸುವುದು.

೫. ಈ ಪರಿಸರದಲ್ಲಿ ನಡೆಯುವ ಹಬ್ಬ-ಜಾತ್ರೆ-ಉತ್ಸವಗಳಲ್ಲಿ ನಡೆಯುವ ವಿವಿಧ ಆಚರಣೆಗಳು ಮತ್ತು ಜನರಲ್ಲಿರುವ ನಂಬಿಕೆ-ಸಂಪ್ರದಾಯಗಳನ್ನು ಗುರುತಿಸಿ ಅವುಗಳ ಮಹತ್ವವನ್ನು ವಿವರಿಸುವುದು.

೬. ಇಲ್ಲಿನ ಕ್ರೀಡಾ ಮತ್ತು ಕಲಾ ಪರಂಪರೆ ಮತ್ತು ಇಲ್ಲಿರುವ ವಿವಿಧ ವಿಶಿಷ್ಟ ಕಲಾವಿದರನ್ನು ಗುರುತಿಸಿ ವಿಶ್ಲೇಷಿಸುವುದು.

೭. ಇಲ್ಲಿನ ಜನರ ಆರ್ಥಿಕ ಜನಜೀವನ ಹಾಗೂ ಕೃಷಿ-ನೀರಾವರಿ ವ್ಯವಸ್ಥೆ, ಪಶುಪಾಲನೆ ವ್ಯವಸ್ಥೆಗಳನ್ನು ಗುರುತಿಸುವುದರೊಂದಿಗೆ ಇಲ್ಲಿನ ಜನರ ಕೃಷಿ ಆಧಾರಿತ ಪ್ರಮುಖ ಉಪ ವೃತ್ತಿಗಳನ್ನು ದಾಖಲಿಸುವುದು.

೮. ಜನರ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು ಹಾಗೂ ತೆರಿಗೆ ಮತ್ತು ಕಂದಾಯ ವ್ಯವಸ್ಥೆಯನ್ನು ವಿವರಿಸುವುದು.

೯. ಇಲ್ಲಿರುವ ದೇವಾಲಯಗಳು, ಜಿನಬಸದಿಗಳು, ಮಸೀದಿ ಮೊದಲಾದ ಧಾರ್ಮಿಕ ಕೇಂದ್ರಗಳ ಸಹಾಯದಿಂದ ಜನರ ಧಾರ್ಮಿಕ ಜನಜೀವನ ಮತ್ತು ಈ ಧಾರ್ಮಿಕ ಕೇಂದ್ರಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ವಿಶ್ಲೇಷಿಸುವುದು.

೧೦. ಇಲ್ಲಿರುವ ರಕ್ಷಣಾ ಸಂಬಂಧಿ ಮತ್ತು ಲೌಕಿಕ ಸ್ಮಾರಕಾವಶೇಷಗಳು ಹಾಗೂ ಇಲ್ಲಿನ ಸ್ಮಾರಕ ಶಿಲ್ಪಗಳ ಸಹಾಯದಿಂದ ಇಲ್ಲಿನ ಮಾನವ ಸಂಸ್ಕೃತಿಯ ವಿಶೇಷತೆಯನ್ನು ವಿಶ್ಲೇಷಿಸುವುದು.

೧೧. ಲಭ್ಯ ಆಕರಗಳ ಸಹಾಯದಿಂದ ಇಲ್ಲಿನ ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಪ್ರಾಚೀನದಿಂದ ಅರ್ವಾಚೀನದವರೆಗೆ ವಿಶ್ಲೇಷಿಸುವುದು.

೧೨. ತೇರದಾಳ ಪರಿಸರದ ಚರಿತ್ರೆಯ ಕಥನದಲ್ಲಿ ತೇರದಾಳ ಗ್ರಾಮ ನಿಷ್ಪತ್ತಿ ವ್ಯಾಖ್ಯಾನ ಅದರ ವ್ಯಾಪಿ ಅವುಗಳ ಸ್ವರೂಪವನ್ನು ಗುರುತಿಸುವುದು. ತೇರದಾಳ ಪರಿಸರದ ಚರಿತ್ರೆಯ ಕಥನದಲ್ಲಿ ಗತ ಹಾಗೂ ವರ್ತಮಾನ ಸಂಬಂಧಗಳ ಮರು ವ್ಯಾಖ್ಯಾನ ಮಾಡುವುದು.

## ೧.೨.ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ

ಯಾವುದೇ ಒಬ್ಬ ಸಂಶೋಧಕ ತನ್ನ ಚಾರಿತ್ರಿಕ ಸಂಶೋಧನೆಯಲ್ಲಿ ನಿಶ್ಚಿತ ಯಶಸ್ಸನ್ನು ಕಾಣಬೇಕೆಂದರೆ ತನ್ನ ಅಧ್ಯಯನ ಕ್ಷೇತ್ರಕ್ಕೆ ಕಾಲ, ದೇಶ ಇಲ್ಲವೇ ಪ್ರದೇಶ ಇಲ್ಲವೇ ರಾಜವಂಶಗಳ ಮಿತಿಗಳನ್ನು ಅಥವಾ ಮೇರೆ/ವ್ಯಾಪ್ತಿಯನ್ನು ಹಾಕಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾದೇಶಿಕ ಮತ್ತು ಸ್ಥಳೀಯ ಇತಿಹಾಸ ರಚನೆಯಲ್ಲಿ ಹಾಗೂ ಕೆಳಸ್ತರದ ಅಧ್ಯಯನದಲ್ಲಿ ಗಮನಾರ್ಹ ಎನಿಸುವ ಪ್ರಸಕ್ತ ವಿಷಯವನ್ನು ತೇರದಾಳ ಪರಿಸರದ ಸುಮಾರು ೨೨ ಗ್ರಾಮಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ. ಈ ಅಧ್ಯಯನದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಮಾನವ ಸಂಸ್ಕೃತಿ ಹೇಗೆ ವಿಕಸನಗೊಂಡಿತೆಂಬುದನ್ನು ಹಾಗೂ ವಿಶೇಷವಾಗಿ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವೈಶಿಷ್ಟತೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ.

ಪ್ರಸಕ್ತ ನೂತನ ತಾಲ್ಲೂಕೂ ಮತ್ತು ಪಟ್ಟಣ ಪಂಚಾಯಿತಿ ಹಾಗೂ ಹೋಬಳಿ ಕೇಂದ್ರ, ವಿಧಾನಸಭಾ ಕ್ಷೇತ್ರದ ಕೇಂದ್ರವಾಗಿರುವ ತೇರದಾಳದ ವ್ಯಾಪ್ತಿಗೊಳಪಡುವ ಸುತ್ತಲಿನ ೨೨ ಗ್ರಾಮಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಕ್ಷೇತ್ರದ ಮೇಲೆ ಇದುವರೆಗೆ ಪ್ರಕಟವಾಗಿರುವ ಗ್ಯಾಸಟೀಯರ್, ಪುಸ್ತಕ ಮತ್ತು ಜನಸಂಖ್ಯೆ, ಕಂದಾಯ ಹಾಗು ಇತರೆ ವಿವಿಧ ವರದಿಗಳನ್ನು ಕೂಲಂಕುಶವಾಗಿ ಪ್ರಥಮವಾಗಿ ಅಧ್ಯಯನ ಮಾಡಲಾಯಿತು. ಇದರ ಆಧಾರದ ಮೇಲೆ ಪರಿಣಿತ ವಿದ್ವಾಂಸರು ನೀಡಿದ ಮಾಹಿತಿಯನ್ನು ಅನುಸರಿಸಿ ಕ್ಷೇತ್ರಕಾರ್ಯ ಮಾಡಬೇಕಾದ ಸ್ಥಳಗಳನ್ನು ಗುರುತಿಸಿಕೊಳ್ಳಲಾಯಿತು. ಆನಂತರ ಎರಡು ಪ್ರ-ಪತ್ರಗಳನ್ನು ತಯಾರಿಸಿಕೊಂಡು (ಪ್ರಬಂಧದ ಅಂತ್ಯದಲ್ಲಿ ನೀಡಲಾಗಿರುವಂತೆ) ವಿವಿಧ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿರುವ ದೇವಾಲಯ, ಬಸದಿ, ಮಠ, ಮಸೀದಿ, ಕೋಟೆ, ವೀರಗಲ್ಲು ಹಾಗೂ ಮಾಸ್ತಿಕಲ್ಲು, ಕೋಟೆ, ವಾಡೆ, ಪುಷ್ಕರಣಿ, ವಾಸದ ಕಟ್ಟಡ ಮೊದಲಾದ ಸ್ಮಾರಕಗಳನ್ನು ವಿಶೇಷವಾಗಿ ಅಧ್ಯಯನ ಮಾಡಿ ಅಗತ್ಯ ಮಾಹಿತಿಗಳನ್ನು ಪ್ರ-ಪತ್ರಗಳಲ್ಲಿ ದಾಖಲಿಸಿಕೊಳ್ಳಲಾಯಿತು ಮತ್ತು ಅಗತ್ಯವಿದ್ದಡೆ ಸ್ಮಾರಕಗಳ ರೇಖಾಚಿತ್ರ, ನಕ್ಷೆ, ಛಾಯಚಿತ್ರ ತೆಗದುಕೊಂಡು ಹೆಚ್ಚಿನ ಮಾಹಿತಿಗಳನ್ನು ಟಿಪ್ಪಣಿ ಮಾಡಿಕೊಳ್ಳಲಾಯಿತು. ಇದಲ್ಲದೆ ಮತ್ತೊಂದು ಪ್ರ-ಪತ್ರದಲ್ಲಿ ಗ್ರಾಮದ ಜನರ ಜೀವನ ಕ್ರಮ, ಸಂಪ್ರದಾಯ, ಆಚರಣೆ, ನಂಬಿಕೆ ಹಾಗೂ ಕಲಾ ಸಂಪ್ರದಾಯದ ವೈಶಿಷ್ಟತೆಗಳನ್ನು ದಾಖಲಿಸಿಕೊಳ್ಳಲಾಯಿತು. ಅಲ್ಲದೇ ಆಯಾ ಗ್ರಾಮಗಳ ಹಿರಿಯರನ್ನು, ಕಲಾವಿದರನ್ನು ಹಾಗೂ ಪರಿಣಿತರನ್ನು ಸಂದರ್ಶಿಸಿ ಅವರಿಂದ ಪ್ರಬಂಧಕ್ಕೆ ಅಗತ್ಯವಾದ ಮಾಹಿತಿಗಳನ್ನು ಪಡೆದು ಧ್ವನಿಮುದ್ರಿಕೆ ಮಾಡಿಕೊಳ್ಳಲಾಯಿತು. ಈ ರೀತಿ ವಿವಿಧ ಮೂಲಗಳಿಂದ ಸಂಗ್ರಹಿತವಾದ ಮಾಹಿತಿಯನ್ನು ಒಂದೆಡೆ ಕಲೆ ಹಾಕಿ ಅವುಗಳನ್ನು ತಾತ್ವಿಕ ವಿಮರ್ಶಗೊಳಪಡಿಸಲಾಯಿತು. ನಂತರ ಅವುಗಳ ಮೇಲೆ ತೌಲನಿಕ ಅಧ್ಯಯನ ನಡೆಸಿ, ವಿದ್ವಾಂಸರೊಟ್ಟಿಗೆ ಚರ್ಚಿಸಿ ಅಂತಿಮವಾಗಿ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

### ೧.೪. ಅಧ್ಯಯನದ ಸಮೀಕ್ಷೆ

ಪ್ರಸಕ್ತ ವಿಷಯದ ಮೇಲೆ ಇಲ್ಲಿಯವರೆಗೆ ಯಾವುದೇ ಸಮಗ್ರ ಅಧ್ಯಯನಗಳು ಕರ್ನಾಟಕದಲ್ಲಿ ಇದುವರೆಗೂ ನಡೆದಿಲ್ಲ. ಆದರೆ ಕೆಲವೊಂದು ಪೂರಕವಾದ ಬಿಡಿ ಅಧ್ಯಯನಗಳು ಮಾತ್ರ ಇಲ್ಲಿಯವರೆಗೆ ನಡೆದಿದ್ದು, ಆ ವಿವರಗಳು ಇಂತಿವೆ. ಬಿಜಾಪುರ ಮತ್ತು ಬಾಗಲಕೋಟೆ ಗ್ಯಾಸಟೀಯರ್‌ಗಳಲ್ಲಿ ಈ ಭೂ–ಭಾಗದ ಭೌಗೋಳಿಕ ಮತ್ತು ಚಾರಿತ್ರಿಕ ವಿಶೇಷತೆಗಳನ್ನು ದಾಖಲಿಸಲಾಗಿದೆ. ಕುಂಬಾರ ರಮೇಶ ದುಂಡಪ್ಪ ಅವರು **'ತೇರದಾಳ ಒಂದು ಚಾರಿತ್ರಿಕ ಅಧ್ಯಯನ'** ಎನ್ನುವ ತಮ್ಮ ಎಂ.ಫಿಲ್ ಪ್ರಬಂಧದಲ್ಲಿ ಇಲ್ಲಿನ ಚಾರಿತ್ರಿಕ ವಿವರಗಳನ್ನು ವಿಶ್ಲೇಷಿಸಿದ್ದಾರೆ. ಅದೇ ರೀತಿ ಡಾ.ಕೆ.ಚೆನ್ನಬಸಪ್ಪನವರು **'ಜಮಖಂಡಿ ತಾಲೂಕಿನ ಶಾಸನಗಳು: ಒಂದು ಸಾಂಸ್ಕೃತಿಕ ಅಧ್ಯಯನ'** ಎನ್ನುವ ತಮ್ಮ ಪ್ರಬಂಧದಲ್ಲಿ ಇಲ್ಲಿನ ಕೆಲ ಶಾಸನಗಳ ವಿಶೇಷತೆಗಳನ್ನು ಚರ್ಚಿಸಿದ್ದಾರೆ. ಹಾಗೂ ಡಾ.ಆರ್.ಬಿ.ಕೊಕಟನೂರ **'ಕೂಹುಂಡಿನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** ಎನ್ನುವ ಪ್ರಬಂಧದಲ್ಲಿ ಇವರು ತೇರದಾಳ ಪರಿಸರದ ಕೆಲ ಶಾಸನಗಳ ವೈಶಿಷ್ಟತೆಯನ್ನು ವಿವರಿಸಿದ್ದಾರೆ. ಅಲ್ಲದೇ ಡಾ.ರು.ಮ.ಷಡಕ್ಷರಯ್ಯನವರ ಮಾರ್ಗದರ್ಶನದಲ್ಲಿ ಸುನಂದಾ ಅವರು ತಮ್ಮ ಎಂ.ಎ ಪದವಿಗಾಗಿ ಸಿದ್ಧಪಡಿಸಿದ **'ಜಮುಖಂಡಿ ತಾಲೂಕಿನ ಹತ್ತು ಗ್ರಾಮಗಳ ದೇವಾಲಯ ಮತ್ತು ಶಿಲ್ಪಗಳು : ಒಂದು ಅಧ್ಯಯನ'** ಎನ್ನುವ ಪ್ರಬಂಧದಲ್ಲಿ ಈ ಭಾಗದ ಕೆಲವು ದೇವಾಲಯಗಳನ್ನು ವಿಶ್ಲೇಷಿಸಿದ್ದಾರೆ. ಪ್ರೊ.ಅಂಬಳಿಕೆ ಹಿರಿಯಣ್ಣನವರು ಸಂಪಾದಿಸಿರುವ **'ಕರ್ನಾಟಕ ಗ್ರಾಮ ಚರಿತ್ರೆ ಕೋಶ'** ಬಾಗಲಕೋಟೆ ಜಿಲ್ಲೆಯಲ್ಲಿ ತೇರದಾಳ ಸುತ್ತಲಿನ ಗ್ರಾಮಗಳ ವಿಶೇಷತೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಇದರೊಂದಿಗೆ ಪ್ರೊ.ಎಸ್.ಬಿ.ಮಟೋಳಿ ಅವರು ರಚಿಸಿರುವ **'ಮುಂಬೈ ಪ್ರಾಂತದ ದಕ್ಷಿಣ ಸಂಸ್ಥಾನಗಳ ಇತಿಹಾಸ ದರ್ಶನ'** ಮತ್ತು **'ಜಮಖಂಡಿಯ ಇತಿಹಾಸ ದರ್ಪಣ' (ಆರಂಭದಿಂದ ಕ್ರಿ.ಶ. ೧೯೪೮ರವರೆಗೆ)** ಎನ್ನುವ ಕೃತಿಗಳಲ್ಲಿ ತೇರದಾಳದ ಚಾರಿತ್ರಿಕ ವಿವರಗಳನ್ನು ನೀಡಿದ್ದಾರೆ. ಅದೇ ರೀತಿ ಡಾ. ದೇವರಕೊಂಡಾರೆಡ್ಡಿ ಸಂಪಾದಿಸಿದ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಂಗ ಪ್ರಕಟಿಸಿರುವ **'ಬಾಗಲಕೋಟೆ ಜಿಲ್ಲೆಯ ಶಾಸನ ಸಂಪುಟ ೯ರಲ್ಲಿ'** ತೇರದಾಳ ಪರಿಸರದಲ್ಲಿ ದೊರೆತ ಶಾಸನಗಳ ಕುರಿತು ವಿವರಿಸಿದ್ದಾರೆ. ಅಲ್ಲದೇ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ **'ಕನ್ನಡ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ'** ಎನ್ನುವ ಸಂಪುಟದಲ್ಲಿ ತೇರದಾಳ ಪರಿಸರದ ಸಂಕ್ಷಿಪ್ತ ಚರಿತ್ರೆಯನ್ನು ಕಾಣುತ್ತೇವೆ. ಅಲ್ಲದೆ ಪ್ರೊ.ಅ.ಸುಂದರ, ಪ್ರೊ.ಬಿ.ಷೇಕ್ ಅಲಿ ಅವರು ಸಂಪಾದಿಸಿರುವ **'ಕರ್ನಾಟಕ ಚರಿತ್ರೆ–ಸಂಪುಟ ೧ರಲ್ಲಿ'**–ಈ ಪ್ರದೇಶದ ತಾಮ್ರ ಯುಗದ ನೆಲೆ, ಮಣ್ ಪಾತ್ರೆಯ, ಬೂದಿವರ್ಣ ಪಾತ್ರೆಗಳ ಮತ್ತು ಶಿಲಾಯುಗದ ಗೋರಿಗಳ ವಿವರಗಳನ್ನು ನೀಡಿದ್ದಾರೆ. ಡಾ.ಸಂಗಮೇಶ ಕಲ್ಯಾಣಿಯವರ ಪಿಎಚ್.ಡಿ ಮಹಾಪ್ರಬಂಧವಾದ **'ಬಾಗಲಕೋಟೆ ಜಿಲ್ಲೆಯ ದೇಸಗತಿ'ಗಳು ಅಲ್ಲದೇ ಈ ಪ್ರದೇಶದ ಮೇಲೆ ರಚಿತವಾಗಿರುವ ಕೆಲ ಬಿಡಿ ಲೇಖನಗಳಿದ್ದು,** ಅವು ಇತಿಹಾಸ ದರ್ಶನ, ಇತಿಹಾಸ ದರ್ಪಣ, ಗತಕಥನ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಮೇಲಿನ ಯಾವುದೇ ಅಧ್ಯಯನಗಳು ತೇರದಾಳ ಪರಿಸರದ ಕುರಿತಂತೆ ಸಮಗ್ರ ಅಧ್ಯಯನ ನಡೆಸಿರುವುದಿಲ್ಲ.

**೧.೫.ಅಧ್ಯಯನದ ಸ್ವರೂಪ**

ತೇರದಾಳದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಎನ್ನುವ ಪ್ರಸ್ತುತ ಅಧ್ಯಯನವನ್ನು ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ೮ ಅಧ್ಯಾಯಗಳನ್ನಾಗಿ ಈ ಮುಂದಿನಂತೆ ವಿಭಾಗಿಸಿಕೊಳ್ಳಲಾಗಿದೆ.

**ಅಧ್ಯಾಯ ೧ ಪ್ರಸ್ತಾವನೆ**

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸಮೀಕ್ಷೆ

೧.೫. ಅಧ್ಯಯನದ ಸ್ವರೂಪ

**ಅಧ್ಯಾಯ ೨ : ತೇರದಾಳ ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ**

೨.೧. ತೇರದಾಳ ಪರಿಸರದ ಭೌಗೋಳಿಕತೆ

೨.೧.೧.ತೇರದಾಳದ ಹೆಸರಿನ ಹಿನ್ನೆಲೆ

೨.೨. ಭೌಗೋಳಿಕ ಲಕ್ಷಣಗಳು

೨.೩. ಪ್ರಾಗೈತಿಹಾಸಿಕ ಹಿನ್ನೆಲೆ

೨.೪. ತೇರದಾಳ ಪರಿಸರದ ಚರಿತ್ರೆ : ರಾಜಕೀಯ ಮತ್ತು ಆಡಳಿತ ವ್ಯವಸ್ಥೆ

೨.೪.೧.ಪ್ರಾಚೀನ ಕಾಲ ಘಟ್ಟ

೨.೪.೨.ಮಧ್ಯಯುಗೀನ ಕಾಲ ಘಟ್ಟ

೨.೪.೩.ಆಧುನಿಕ ಕಾಲಘಟ್ಟ

**ಅಧ್ಯಾಯ ೩ : ಸಾಮಾಜಿಕ ಜನಜೀವನ**

೩.೧. ಮಾನವ ಸಂಸ್ಕೃತಿಯ ಅರ್ಥ–ವೈಶಿಷ್ಟ್ಯತೆ ಮತ್ತು ಮಹತ್ವ

೩.೨. ವಿವಿಧ ಸಮುದಾಯಗಳು ಮತ್ತು ಶ್ರೇಣಿಕರಣ ವ್ಯವಸ್ಥೆ

೩.೩. ನಂಬಿಕೆ,ಸಂಪ್ರದಾಯ ಮತ್ತು ಆಚರಣೆಗಳು

೩.೩.೧.ಹಬ್ಬಗಳು

೩.೩.೨.ಜಾತ್ರೆ ಉತ್ಸವಗಳು, ಇತರೆ ಆಚರಣೆಗಳು

೩.೪. ಕಲಾ ಪರಂಪರೆ ಮತ್ತು ವಿಶಿಷ್ಟ ಕಲಾವಿದರು

೩.೫. ಶೈಕ್ಷಣಿಕ ವ್ಯವಸ್ಥೆ

**ಅಧ್ಯಾಯ ೪ : ಆರ್ಥಿಕ ಜನಜೀವನ**

೪.೧. ಕೃಷಿ ವ್ಯವಸ್ಥೆ – ನೀರಾವರಿ ವ್ಯವಸ್ಥೆ

೪.೩. ಉಪ ವೃತ್ತಿಗಳು – ಪಶುಪಾಲನೆ ಮತ್ತು ಇತರೆ ವೃತ್ತಿಗಳು

೪.೪. ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು

೪.೫. ತೆರಿಗೆ ಮತ್ತು ಕಂದಾಯ ವ್ಯವಸ್ಥೆ

**ಅಧ್ಯಾಯ ೫ : ಧಾರ್ಮಿಕ ಜನಜೀವನ**

೫.೧. ಹಿಂದೂ ಧರ್ಮ

೫.೨. ಜೈನ ಧರ್ಮ

೫.೩. ಶಾಕ್ತ ಧರ್ಮ

೫.೪. ಮುಸ್ಲಿಂ ಧರ್ಮ

೫.೫. ಇತರೆ ಪ್ರಮುಖ ಧರ್ಮಗಳು

**ಅಧ್ಯಾಯ-೬ : ವಾಸ್ತು ಶಿಲ್ಪ ಮತ್ತು ಮೂರ್ತಿ ಶಿಲ್ಪ**

೬.೧. ಧಾರ್ಮಿಕ

೬.೨. ಲೌಕಿಕ

೬.೩. ರಕ್ಷಣಾ

೬.೪. ಸ್ಮಾರಕ ಶಿಲ್ಪಗಳು

**ಅಧ್ಯಾಯ-೭ : ತೇರದಾಳ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟ**

೭.೧. ಸ್ವಾತಂತ್ರ್ಯ ಹೋರಾಟದ ಮಹತ್ವ

೭.೨. ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು

೭.೩. ಸ್ವಾತಂತ್ರ್ಯೋತ್ತರ ರಾಜಕೀಯ ಸ್ಥಿತಿಗತಿಗಳು

**ಅಧ್ಯಾಯ-೮ : ಸಮಾರೋಪ**

ಅನುಬಂಧಗಳು : ಗ್ರಂಥ ಋಣ

ಛಾಯಾ ಚಿತ್ರಗಳು ಮತ್ತು ನಕ್ಷೆಗಳು

ಪ್ರಸಕ್ತ ಅಧ್ಯಯನದ **ಮೊದಲನೆಯ ಅಧ್ಯಾಯವು**-ಪ್ರಸ್ತಾವನೆಯನಾಗಿದ್ದು, ಅದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಇದುವರಗೆ ನಡೆದಿರುವ ಅಧ್ಯಯನದ ಸಮೀಕ್ಷೆ ಹಾಗೂ ಅಧ್ಯಯನದ ಸ್ವರೂಪವನ್ನು ವಿವರಿಸಲಾಗಿದೆ.

**ಅಧ್ಯಾಯ ಎರಡರಲ್ಲಿ**-ತೇರದಾಳ ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಎಂಬ ಅಧ್ಯಾಯದಲ್ಲಿ ಭೌಗೋಳಿಕ ಪರಿಸರ ತೇರದಾಳ ಹೆಸರಿನ ಹಿನ್ನೆಲೆ, ಭೌಗೋಳಿಕ ಲಕ್ಷಣಗಳು, ಹಾಗೂ ಪ್ರಾಗೈತಿಹಾಸಿಕ ಹಿನ್ನೆಲೆಯಲ್ಲಿ ಪ್ರಾಚೀನ, ಮಧ್ಯಯುಗೀನ ಮತ್ತು ಆಧುನಿಕ ಕಾಲಘಟ್ಟಗಳನ್ನು ಕುರಿತು ವಿವರಿಸಲಾಗಿದೆ.

**ಅಧ್ಯಾಯ ಮೂರರಲ್ಲಿ-ಸಾಮಾಜಿಕ ಜನಜೀವನ**-ಮಾನವ ಸಂಸ್ಕೃತಿ ಅರ್ಥ, ವೈಶಿಷ್ಟ್ಯತೆ ಮಹತ್ವ ವಿವಿಧ ಸಮುದಾಯಗಳ ಶ್ರೇಣೀಕತೆಯ ವ್ಯವಸ್ಥೆ, ನಂಬಿಕೆ, ಸಂಪ್ರದಾಯ ಆಚರಣೆಗಳು, ಹಬ್ಬಗಳು, ಜಾತ್ರೆ ಉತ್ಸವಗಳು, ಇತರೆ ಆಚರಣೆಗಳಾದ (ಮದುವೆ, ಋತುಮತಿ, ನಾಮಕರಣ, ಮರಣದ ಸಮಯಲ್ಲಿ) ಕಲಾ ಪರಂಪರೆ ಹಾಗೂ ವಿಶಿಷ್ಟ ಕಲಾವಿದರ ಜೊತೆಗೆ ಅರ್ವಾಚೀನ ಶೈಕ್ಷಣಿಕ ವ್ಯವಸ್ಥೆ ಕುರಿತು ವಿವರಿಸಲಾಗಿದೆ.

**ಅಧ್ಯಾಯ ನಾಲ್ಕರಲ್ಲಿ-ಆರ್ಥಿಕ ಜನಜೀವನ**-ಕೃಷಿ, ಕೃಷಿಯಾಧಾರಿತ ನೀರಾವರಿ ವ್ಯವಸ್ಥೆ, ಪಶುಪಾಲನೆ, ಉಪವೃತ್ತಿ, ಇತರೆ ಆಯಗಾರರ ವೃತ್ತಿಗಳು, ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು, ತೆರಿಗೆ ಹಾಗೂ ಕಂದಾಯ ವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ಐದರಲ್ಲಿ–ಧಾರ್ಮಿಕ ಜನಜೀವನ**–ಹಿಂದೂ, ಜೈನ, ಶಾಕ್ತ, ಮುಸ್ಲಿಂ ಹಾಗೂ ಇತರೆ ಪ್ರಮುಖ ಧರ್ಮಗಳನ್ನು ಕುರಿತು ಚರ್ಚಿಸಲಾಗಿದ್ದು, ತೇರದಾಳ ಪರಿಸರದ ಸಾಮಾಜಿಕ ಜನಜೀವನವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ಆರರಲ್ಲಿ–ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ**–ಧಾರ್ಮಿಕ, ಲೌಕಿಕ, ರಕ್ಷಣಾ, ಹಾಗೂ ಸ್ಮಾರಕ ಶಿಲ್ಪಗಳನ್ನು ಕುರಿತು ವಿವರಿಸಲಾಗಿದೆ. ಇಲ್ಲಿನ ರಕ್ಷಣಾ ಸಂಬಂಧಿ ಸ್ಮಾರಕಾವಶೇಷಗಳಾದ ಕೋಟೆ, ಕೊತ್ತಲ, ಕೋಟೆ ಬಾಗಿಲುಗಳ ವಿಶೇಷತೆ ಮತ್ತು ಕೋಟೆಗಳ ತಾಂತ್ರಿಕ ವೈಶಿಷ್ಟತೆಗಳನ್ನು ಮತ್ತು ಲೌಕಿಕ ಕಟ್ಟಡಗಳ ಸ್ಮಾರಕಾವಶೇಷಗಳು ಹಾಗೂ ಸ್ಮಾರಕ ಶಿಲ್ಪಗಳಾದ ವೀರಗಲ್ಲು, ಮಾಸ್ತಿಗಲ್ಲು, ಶಾಸನ ಶಿಲ್ಪಗಳ ಮಹತ್ವದ ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ಏಳರಲ್ಲಿ–ತೇರದಾಳ ಪರಿಸರದ ಸ್ವಾತಂತ್ರ್ಯ ಹೋರಾಟ**–ಸ್ವಾತಂತ್ರ್ಯ ಹೋರಾಟದ ಮಹತ್ವ, ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು, ಸ್ವಾತಂತ್ರ್ಯೋತ್ತರ ರಾಜಕೀಯ ಸ್ಥಿತಿಗತಿಗಳ ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಈ ಪ್ರಬಂಧದ ಕೊನೆಯ ಅಧ್ಯಾಯ ಸಮಾರೋಪದಲ್ಲಿ** ಅಧ್ಯಯನದ ಒಟ್ಟಾರೆ ಸಾರಾಂಶವನ್ನು ತಿಳಿಸುವ ಮೂಲಕ ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಹಾಗೂ ಸಲಹೆಗಳನ್ನು ನೀಡಲಾಗಿದೆ. ಪ್ರಬಂಧದ ಅಂತ್ಯದಲ್ಲಿ ಅಧ್ಯಯನಕ್ಕೆ ಪೂರಕವಾದ ಅನುಬಂಧಗಳನ್ನು ನೀಡಲಾಗಿದ್ದು, ಅವುಗಳಲ್ಲಿ ಗ್ರಂಥ ಋಣ, ಛಾಯಾ ಚಿತ್ರಗಳು, ನಕಾಶೆಗಳನ್ನು ಒಳಗೊಂಡಿವೆ.

# ಅಧ್ಯಾಯ–೨
# ತೇರದಾಳ ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ

ಅಧ್ಯಾಯ ೨ : ತೇರದಾಳ ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ತೇರದಾಳ ಪರಿಸರದ ಭೌಗೋಳಿಕತೆ

೨.೧.೧. ತೇರದಾಳದ ಹೆಸರಿನ ಹಿನ್ನೆಲೆ

೨.೨. ಭೌಗೋಳಿಕ ಲಕ್ಷಣಗಳು

೨.೩. ಪ್ರಾಗೈತಿಹಾಸಿಕ ಹಿನ್ನೆಲೆ

೨.೪. ತೇರದಾಳ ಪರಿಸರದ ಚರಿತ್ರೆ : ರಾಜಕೀಯ ಮತ್ತು ಆಡಳಿತ ವ್ಯವಸ್ಥೆ

೨.೪.೧. ಪ್ರಾಚೀನ ಕಾಲ ಘಟ್ಟ

೨.೪.೨. ಮಧ್ಯಯುಗೀನ ಕಾಲ ಘಟ್ಟ

೨.೪.೩. ಆಧುನಿಕ ಕಾಲಘಟ್ಟ

**ಅಧ್ಯಾಯ-೨. ತೇರದಾಳ ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ**

**'ಮಾನವ ಪ್ರಕೃತಿಯ ಶಿಶು'** ಅದಕ್ಕಾಗಿಯೇ ಇಡೀ ಮನುಕುಲ ಸದಾ ಪ್ರಕೃತಿಯ ಅಧೀನವಾಗಿದ್ದುಕೊಂಡು ತನ್ನ ಏಳ್ಗೆಯನ್ನು ಕಾಣುತ್ತದೆ. ಯಾವಾಗಲೂ ಅವನ ಏಳ್ಗೆ ಮತ್ತು ಅವನತಿಯು ಸದಾ ಪ್ರಕೃತಿಯನ್ನು ಅವಲಂಬಿಸಿರುತ್ತದೆ. ಅದರಂತೆಯೇ ದೇಶವೊಂದರ ವಿವಿಧ ಅರಸು ಮನೆತನಗಳ ಏಳ್ಗೆ ಮತ್ತು ಅವನತಿ ಅವರ ಕೀರ್ತಿಪತಾಕೆಯೂ ಸಹ ಅಲ್ಲಿನ ಉತ್ತಮ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಉತ್ತಮ ಪರಿಸರದಲ್ಲಿ ಸ್ಥಾಪನೆಯಾಗಿದ್ದ ನಮ್ಮ ದೇಶದ ಕೆಲವೇ ರಾಜಮನೆತನಗಳು ಮಾತ್ರ ಚರಿತ್ರೆಯಲ್ಲಿ ಇಂದಿಗೂ ಚಿರಸ್ಥಾಯಿಯಾಗಿ ಉಳಿದಿವೆ. ಆದರೆ ಯೋಗ್ಯ ಪರಿಸರದಲ್ಲಿ ಸ್ಥಾಪನೆಯಾಗದ ಬಹುತೇಕ ರಾಜಮನೆತನಗಳು ಇಂದು ನಮ್ಮ ಸ್ಮೃತಿಪಟಲದಿಂದ ಮತ್ತು ಚರಿತ್ರೆಯಿಂದ ಕಣ್ಮರೆಯಾಗಿರುವುದಕ್ಕೆ ಅಲ್ಲಿನ ಪರಿಸರವೇ ಕಾರಣವಾಗಿದೆ ಎಂದರೆ ತಪ್ಪಲ್ಲ. ಒಂದು ದೇಶದ ಇತಿಹಾಸವನ್ನು ತಿಳಿಯಬೇಕಾದರೆ ಮೊದಲು ಅಲ್ಲಿನ ಭೌಗೋಳಿಕ ಅಂಶಗಳಾದ ಆ ಪ್ರದೇಶದ ಸ್ಥಾನ, ಜಲಾಶಯಗಳು, ನದಿ ಕಣಿವೆಗಳು, ಕಾಡು, ಮರುಭೂಮಿ, ವಾಯುಗುಣ, ಪರ್ವತಗಳು, ಸಮುದ್ರಗಳು, ಆ ಪ್ರದೇಶದ ಆಕಾರ ಮತ್ತು ವಿಸ್ತಾರ, ಇವುಗಳೆಲ್ಲವನ್ನು ಕೂಡ ತಿಳಿದುಕೊಳ್ಳಬೇಕಾಗುತ್ತದೆ. ಇವು ಒಂದು ಪ್ರದೇಶದಲ್ಲಿನ ನಾಗರಿಕತೆ ಬೆಳೆಯುವುದಕ್ಕೆ ಮತ್ತು ಇತಿಹಾಸ ಬೆಳವಣಿಗೆಗೆ ಪೂರಕವಾಗಿರುತ್ತವೆ. ಜೊತೆಗೆ ಇವು ಸಂಸ್ಕೃತಿಯ ಬೆಳವಣಿಗೆಗೂ ಕೂಡ ಸಹಕಾರಿಯಾಗುತ್ತವೆ. ಅದಕ್ಕಾಗಿಯೇ ಕ್ರಿ.ಪೂ. ಮೂರನೇಯ ಶತಮಾನದ ಗ್ರೀಕ್ ಇತಿಹಾಸಕಾರ ಪಾಲಿಬಿಯಸ್ **"ಭೌಗೋಳಿಕ ಹಿನ್ನೆಲೆಯಲ್ಲಿ ಮಾತ್ರ ಇತಿಹಾಸವನ್ನು ಸರಿಯಾಗಿ ಅರಿಯಲು ಸಾಧ್ಯ"** ಎಂದಿದ್ದಾರೆ[೧]. ಭೌಗೋಳಿಕ ಲಕ್ಷಣಗಳ ಮಹತ್ವವನ್ನು ಕುರಿತಂತೆ ವೀಲ್ ಮತ್ತು ಏರಿಯಲ್ ಡ್ಯೂರಂಟ್‌ರವರು ಈ ರೀತಿ ಹೇಳುತ್ತಾರೆ "ಮಳೆ ಬೀಳುವುದು ತೀರಾ ಅಪರೂಪವಾದರೆ ಮಧ್ಯ ಏಶಿಯಾದಲ್ಲಿ ಆದಂತೆ ನಾಗರಿಕತೆ ಮರುಳು ರಾಶಿಯಲ್ಲಿ ಮಾಯವಾಗುತ್ತದೆ" "ತೀರಾ ಉಗ್ರವಾಗಿ ಬಿದ್ದರೆ ಮಧ್ಯ ಅಮೇರಿಕಾದಲ್ಲಿ ಆದಂತೆ ನಾಗರಿಕತೆ ಕಾಡಿನೊಡನೆಯೇ ಅಡಗಿ ಹೋಗುತ್ತದೆ. ನಮ್ಮ ವೃದ್ಧಿ ಹೊಂದುತ್ತಿರುವ ವಲಯಗಳಲ್ಲಿ ಇಪ್ಪತ್ತು ಡಿಗ್ರಿಯಷ್ಟು ಸರಾಸರಿ ಉಷ್ಣ ಏರಿದರೆ ನಾವು ಮತ್ತೆ ಜಡ ನಾಗರಿಕತೆಗೆ ಸರಿದು ಬಿಡುತ್ತೇವೆ"[೨]. ಈ ಹಿನ್ನೆಲೆಯಲ್ಲಿ ಯಾವುದೇ ಒಂದು ಸ್ಥಳದ ಅಥವಾ ದೇಶದ ಸಮಗ್ರವಾದ ಚರಿತ್ರೆಯನ್ನು ತಿಳಿಯಬೇಕಾದರೆ ಅಲ್ಲಿನ ಭೌಗೋಳಿಕ ಲಕ್ಷಣಗಳ ಬಗ್ಗೆ ಮೊದಲು ತಿಳಿಯುವುದು ತುಂಬಾ ಅಗತ್ಯವಾಗಿದೆ. **"ಇತಿಹಾಸ & ಭೂಗೋಳ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ" "ಇತಿಹಾಸವೆಂಬ ನಾಟಕ ಪ್ರದರ್ಶನಕ್ಕೆ, ರಂಗಸಜ್ಜಿಕೆಯಂತಿರುವುದೇ ಭೂಗೋಳ"**[೩]. ಈ ಹೇಳಿಕೆಯನ್ನು ಪ್ರಸಕ್ತ ಅಧ್ಯಯನ ಕ್ಷೇತ್ರವಾದ ತೇರದಾಳಕ್ಕೂ ಅನ್ವಯಿಸಬಹುದು. ಏಕೆಂದರೆ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಪ್ರಾಚೀನ ಐತಿಹಾಸಿಕ ನಗರವಾದ ತೇರದಾಳ ಸಾವಿರಾರು ವರ್ಷಗಳ ಹಿರಿಮೆ, ಗರಿಮೆ ಗತವೈಭವಗಳ ಇತಿಹಾಸವನ್ನು ಹೊಂದಿದೆ. ತೇರದಾಳ ಮತ್ತು ಅದರ ಸುತ್ತಲಿನ ಪರಿಸರದಲ್ಲಿ ಹಲವಾರು ಶತಮಾನಗಳ ಹಿಂದಿನಿಂದಲೂ ಮಾನವ ವಾಸಮಾಡಿ ತನ್ನ ಪಳೆಯುಳಿಕೆಗಳನ್ನು ನಮಗೆ ಬಿಟ್ಟು ಹೋಗಿದ್ದಾನೆ. ಅಲ್ಲದೇ ಇಲ್ಲಿನ ಚರಿತ್ರೆಯಲ್ಲಿ ಹಲವು ರಾಜವಂಶಸ್ಥರು ಆಳಿ ಅಳಿದು ಹೋಗಿದ್ದಾರೆ. ಹಾಗೆಯೇ ಇಲ್ಲಿನ ಆದಿಮಾನವನಿಗೆ ಸಂಬಂಧಿಸಿದ ಹಲವು ಪ್ರಾಗೈತಿಹಾಸಿಕ ನೆಲೆಗಳು ಸಹ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ತೇರದಾಳದ ಭೌಗೋಳಿಕ

ಪರಿಸರವನ್ನು ವ್ಯವಸ್ಥಿತವಾಗಿ ಗುರುತಿಸದ ಹೊರತು ನಮ್ಮ ದೇಶ ಅಥವಾ ರಾಜ್ಯದ ಇತಿಹಾಸವನ್ನು ವ್ಯವಸ್ಥಿತವಾಗಿ ಕಟ್ಟಲು ಸಾಧ್ಯವಿಲ್ಲ. ಈ ದಿಸೆಯಲ್ಲಿ ಪ್ರತಿಯೊಂದು ಜನಾಂಗದ ಜೀವನವು ಆಯಾ ಭೌಗೋಳಿಕ ಅಂಶಗಳಾದ ಬೆಟ್ಟ-ಗುಡ್ಡ, ನದಿ-ಸರೋವರ, ಪರ್ವತ, ಹವಾಗುಣ, ಅರಣ್ಯಗಳು, ಪೃಥ್ವಿಯ ಮೇಲೆ ಆ ಪ್ರದೇಶ ಸ್ಥಾನ, ಅದರ ಆಕಾರ ಮತ್ತು ವಿಸ್ತಾರ ಮುಂತಾದ ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಅಂತೆಯೇ ಆಡಳಿತದ ಅನುಕೂಲಕ್ಕಾಗಿ ವಿಭಾಗ ಅಥವಾ ಕಂಪಣಗಳನ್ನು ಮಾಡುವಾಗ ಪ್ರಾಚೀನ ಕಾಲದಿಂದ ಇಂದಿನವರೆಗೂ ನೈಸರ್ಗಿಕ ಅಂಶಗಳನ್ನು ಅವಲಂಬಿಸಿರುವುದು ಕಂಡು ಬರುತ್ತದೆ.

ಈ ಮೇಲಿನ ಭೌಗೋಳಿಕ ಅಂಶಗಳಿಗೆ ತೇರದಾಳ ಗ್ರಾಮವು ಹೊರತಾಗಿಲ್ಲವೆಂದು ಹೇಳಬಹುದು. ತೇರದಾಳವು ತನ್ನದೇ ಆದ ಭೌಗೋಳಿಕ ಇತಿಹಾಸವನ್ನು ಹೊಂದಿದೆ. ಇಲ್ಲಿನ ಮಾನವ ವಾಸಯೋಗ್ಯ ಭೌಗೋಳಿಕ ಪರಿಸರದಿಂದಾಗಿ ಇಲ್ಲಿ ಬಹು ಹಿಂದಿನಿಂದ ಮಾನವ ಸಂಸ್ಕೃತಿ ರೂಪುಗೊಂಡಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ಕಾಣಬರುವ ಪ್ರಮುಖ ಭೌಗೋಳಿಕ ಅಂಶಗಳು ಯಾವವು? ಅದರ ಭೂ-ಮೇರೆಗಳು ಯಾವವು? ಮತ್ತು ಅವು ಇಲ್ಲಿನ ಮಾನವ ಸಂಸ್ಕೃತಿಯ ಅಭಿವೃದ್ಧಿಯಲ್ಲಿ ಹೇಗೆ ತನ್ನ ಪಾತ್ರವನ್ನು ನಿರ್ವಹಿಸಿವೆ? ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಆ ಕುರಿತ ವಿವರ ಮುಂದಿನಂತೆ ಇದೆ.

**೨.೧.ತೇರದಾಳ ಪರಿಸರದ ಭೌಗೋಳಿಕ ವಿವರ**

ಜಮಖಂಡಿ ತಾಲೂಕು ಕೇಂದ್ರ ಸ್ಥಾನದಿಂದ ಪಶ್ಚಿಮಕ್ಕೆ ೨೯ ಕಿ.ಮೀ. ದೂರದಲ್ಲಿರುವ ತೇರದಾಳವು ಹಲವಾರು ವೈಶಿಷ್ಟ್ಯತೆಗಳಿಗೆ ಹೆಸರುವಾಸಿಯಾಗಿದೆ. ಹಿಂದೆ ಬಿಜಾಪುರ ಜಿಲ್ಲೆಯ ಭಾಗವಾಗಿದ್ದ ಈ ಭೂಪ್ರದೇಶ ಇಂದು ಅಂದರೆ ೧೯೯೭ರ ತರುವಾಯ ಪ್ರಸಕ್ತ ಬಾಗಲಕೋಟೆ ಜಿಲ್ಲಾ ವ್ಯಾಪ್ತಿಗೊಳಪಟ್ಟಿದೆ. ಕರ್ನಾಟಕ ಏಕೀಕರಣದ ನಂತರ ೧೯೭೩ರಲ್ಲಿ ಮೈಸೂರು ಮುನ್ಸಿಪಾಲ್ಟಿ ಕಾಯ್ದೆಯನ್ವಯ ತೇರದಾಳವು ಪಂಚಾಯಿತಿಯಿಂದ ಮಾರ್ಪಾಟಾಗಿ ಪುರಸಭೆಯಾಗಿ ಪರಿವರ್ತನೆಯನ್ನು ಹೊಂದಿದೆ. ಅಲ್ಲದೇ ತೇರದಾಳವು ಇಂದು ವಿಧಾನಸಭಾ ಕ್ಷೇತ್ರವಾಗಿ, ಹೋಬಳಿ ಕೇಂದ್ರವಾಗಿ ರಾಜಕೀಯ ಆಡಳಿತದಲ್ಲಿ ತನ್ನನ್ನು ಗುರುತಿಸಿಕೊಂಡಿದೆ. ಈ ಹಿಂದೆ ಹಿರಿಯರಾದ ಶಂಭುಲಿಂಗ ಬಾಗಿ ಹಾಗೂ ಇತ್ತೀಚಿನ ಹಿರಿಯರಾದ ಬುಜಬಲಿ ಕೆಂಗಾಲಿ, ಬಸವರಾಜ ಬಾಳಿಕಾಯಿ, ಬರಮು ನಾಶಿ, ಪ್ರವೀಣ ನಾಡಗೌಡ ಹಿರಿಯ ಮತ್ತು ಕಿರಿಯ ನಾಗರಿಕರ ಸಹಕಾರದ ಜೊತೆಗೆ, ಇನ್ನು ಹಲವಾರು ಗಣ್ಯ ಹೋರಾಟಗಾರರಲ್ಲಿ ಪ್ರಮುಖರಾದ ಪ್ರೊ ಬಸವರಾಜ ಕೊಣ್ಣೂರು ನೇತೃತ್ವದ ಹೋರಾಟದ ಫಲವಾಗಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ. ಎಚ್.ಡಿ. ಕುಮಾರಸ್ವಾಮಿಯವರು ದಿನಾಂಕ ೮-೦೨-೨೦೧೮ರ ಕರ್ನಾಟಕ ರಾಜ್ಯದ ಬಜೆಟ್ ಮಂಡನೆಯಲ್ಲಿ ಘೋಷಿಸಲಾದ ೪ ನೂತನ ತಾಲೂಕಗಳ ಪೈಕಿ ಈ ತೇರದಾಳ ಪಟ್ಟಣವೂ ಒಂದು. ಪ್ರಸಕ್ತ ಪಟ್ಟಣ ಪಂಚಾಯಿತಿಯ ಕೇಂದ್ರವಾಗಿರುವ ತೇರದಾಳ ಪರಿಸರ ಭೌಗೋಳಿಕವಾಗಿ ದಕ್ಷಿಣ ಪ್ರಸ್ಥ ಭೂಮಿಯು ಶುಷ್ಕ ವಲಯಕ್ಕೆ ಸೇರಿದೆ. ತೇರದಾಳ ಪರಿಸರದ ಸ್ವಲ್ಪ ಅಂತರದಲ್ಲಿಯೇ ಉತ್ತರಕ್ಕೆ ಕೃಷ್ಣಾ ನದಿ ಪೂರ್ವದತ್ತ ಮುಖ ಮಾಡಿ ಅಂಕು ಡೊಂಕಾಗಿ ಹರಿಯುತ್ತಿದೆ.

ಇದು ಫಲವತ್ತಾದ ಕಪ್ಪು, ಕೆಂಪು ಮಣ್ಣಿನ ಭೂಪ್ರದೇಶವನ್ನು ಹೊಂದಿದೆ. ದಖನ್ ಪ್ರಸ್ಥಭೂಮಿಯ ಭಾಗವಾಗಿರುವ ತೇರದಾಳವು ಪ್ರಸಕ್ತ ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದ್ದು, ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನಲ್ಲಿ ಬರುತ್ತದೆ. ಇದು ಜಮಖಂಡಿಯಿಂದ ಪಶ್ಚಿಮಕ್ಕೆ ೨೯ ಕಿ.ಮೀ. ಮತ್ತು ರಾಯಬಾಗ ತಾಲೂಕಿನ ಕುಡಚಿಯಿಂದ ಸು.೧೭ ಕಿ.ಮೀ.ದೂರದಲ್ಲಿದೆ. ಅದರ ಒಟ್ಟು ವಿಸ್ತೀರ್ಣ **೭,೭೦,೦೦೦** ಹೆಕ್ಟೇರ್ ಆಗಿದೆ. ಕರ್ನಾಟಕದ ಪೀಠಭೂಮಿಯ ಕೇಂದ್ರ ಎನಿಸಿರುವ ಇದು ಸಮುದ್ರ ಮಟ್ಟಕ್ಕಿಂತ ಸರಾಸರಿ **೨೮೦೦** ಅಡಿ **(೬೦೨.೬ಮೀ.)** ಎತ್ತರದಲ್ಲಿದೆ[೪]. **೪೭ಪಿ/೩** ಪ್ರಕಾರ **ಉತ್ತರ ಅಕ್ಷಾಂಶ ೧೬° ೨೯ ರಿಂದ ೧೬° ೩೧ ಮೀನಿಟ** (ಹದಿನಾರು ಡಿಗ್ರಿ ಇಪ್ಪತ್ತರೊಂಬತ್ತು ಮಿನಿಟ್, ಹದಿನಾರು ಡಿಗ್ರಿ ಮೂವತ್ತೊಂದು ಮಿನಿಟ್) ಮತ್ತು **ಪೂರ್ವ ರೇಖಾಂಶ ೭೫° ೨ ರಿಂದ ೭೫° ೪** (ಎಪ್ಪತ್ತೈದು ಡಿಗ್ರಿ ಎರಡು ಮಿನಿಟ್, ಎಪ್ಪತ್ತೈದು ಡಿಗ್ರಿ ನಾಲ್ಕು ಮಿನಿಟ್) ಮಧ್ಯದಲ್ಲಿ ಹರಡಿದೆ. ಇದು ಸಮುದ್ರ ಮಟ್ಟದಿಂದ ಸರಾಸರಿ **೫೪೬** ಮೀಟರ್ ಎತ್ತರವಿದೆ. ವಾರ್ಷಿಕ ಮಳೆಯ ಸರಾಸರಿ ಪ್ರಮಾಣ **೫೦೦** ಮಿ.ಮೀ. ಆಗುತ್ತದೆ. ಇಂದಿನ ಪ್ರಾಚೀನ ಐತಿಹಾಸಿಕ ತೇರದಾಳ ಒಟ್ಟು ಭೌಗೋಳಿಕ ವಿಸ್ತೀರ್ಣ ಸುಮಾರು **೫೨೫** ಚ.ಕಿ.ಮೀ. ವಿಸ್ತಾರವನ್ನು ಹೊಂದಿದೆ. ೨೦೧೧ರ ಪ್ರಕಾರ **೨೬,೧೫೩** ರಷ್ಟು ಜನಸಂಖ್ಯೆಯನ್ನು ಹೊಂದಿದೆ. ತೇರದಾಳ ನಗರವು ಬಯಲು ಹಾಗೂ ಸಮತಲದಲ್ಲಿರುವುದರಿಂದ ವರ್ಷದ ಬಹುಕಾಲದ ಒಣಹವೆಯಿಂದ ಕೂಡಿರುತ್ತದೆ. ಜನವರಿ ಕೊನೆಯಿಂದ ಪ್ರಾರಂಭವಾದ ಬೇಸಿಗೆಯ ತಾಪಮಾನ ಮಾರ್ಚ್, ಏಪ್ರಿಲ್, ಮೇ ತಿಂಗಳಲ್ಲಿ ಹೆಚ್ಚಿರುತ್ತದೆ. **೭೭.೩**[೫]. ಪ್ಯಾರಾನೇಟ್‌ನಷ್ಟು ವರ್ಷದ ಸರಾಸರಿ ಉಷ್ಣಾಂಶವಿರುತ್ತದೆ. ೫೦% ಸಾಪೇಕ್ಷ ಆರ್ದ್ರತೆಯು ಮಾರ್ಚ್ ತಿಂಗಳಿನಲ್ಲಿರುತ್ತದೆ. ಆದರೆ ಜುಲೈ, ಆಗಸ್ಟ್, ಸೆಪ್ಟಂಬರ್‌ನಲ್ಲಿ ಹೆಚ್ಚು ಮಳೆಯಾಗಿ ಅಕ್ಟೋಬರನವರೆಗೂ ಮಳೆ ಬರುತ್ತದೆ. ಸರಾಸರಿ **೪೫೦-೪೭೮**.ಮಿ.ಮೀ. ಮಳೆ ಬೀಳುತ್ತದೆ[೬]. ತೇರದಾಳದ ಉತ್ತರಕ್ಕೆ ಅಥಣಿ ತಾಲೂಕು ದಕ್ಷಿಣಕ್ಕೆ ಮುಧೋಳ, ಪೂರ್ವಕ್ಕೆ ಜಮಖಂಡಿ, ಪಶ್ಚಿಮಕ್ಕೆ ರಾಯಬಾಗ ತಾಲೂಕುಗಳ ಗಡಿಗಳನ್ನು ಹೊಂದಿದೆ. ಉತ್ತರಕ್ಕೆ ಮಹಾರಾಷ್ಟ್ರದ ಮಿರಜ ತಾಲ್ಲೂಕು, ದಕ್ಷಿಣ ಮತ್ತು ನೈರುತ್ಯಕ್ಕೆ ಮುಧೋಳ ತಾಲ್ಲೂಕು, ವಾಯುವ್ಯದಲ್ಲಿ ಧಾರವಾಡ, ಆಗ್ನೇಯ ದಿಕ್ಕಿನಲ್ಲಿ ಬಿಜಾಪುರ ಜಿಲ್ಲೆಯ ಜಿಲ್ಲೆಗಳಿಂದ ತೇರದಾಳವು ಸುತ್ತುವರೆದಿದೆ[೭].

ತೇರದಾಳದಲ್ಲಿ ಒಂದು ನಾಡ ಕಚೇರಿಯಿದ್ದು, ಇದರ ವ್ಯಾಪ್ತಿಯಲ್ಲಿ ೧೧ ಗ್ರಾಮ ಪಂಚಾಯಿತಿಗಳಿದ್ದು, **೨೨** ಗ್ರಾಮಗಳಿವೆ. ಸುಮಾರು **೨೩೦** ಜನವಸತಿ ಕೇಂದ್ರಗಳಿವೆ. ಈ ತಾಲೂಕು ಕೇಂದ್ರ ಮತ್ತು ಗ್ರಾಮಗಳನ್ನು ಒಳಗೊಂಡಂತೆ ತೇರದಾಳದ ಒಟ್ಟು ವ್ಯಾಪ್ತಿ ಸುಮಾರು ೫೨೫ ಚ.ಕಿ.ಮೀ ಇದೆ. ಅಸ್ಕಿ, ಆಸಂಗಿ, ಕಲ್ಲಟ್ಟಿ, ಕಲ್ಲಳ್ಳಿ, ಕಾಲತಿಪ್ಪಿ, ಕುಲಹಳ್ಳಿ, ಗೊಲಬಾಂವಿ, ಚಿಮ್ಮಡ, ಜಗದಾಳ, ತಮದಡ್ಡಿ, ತೇರದಾಳ, ನಾವಲಗಿ, ಬನಹಟ್ಟಿ, ಹಳಿಂಗಳಿ, ಹನಂಗಡಿ, ಯರಗಟ್ಟಿ, ಯಲ್ಲಟ್ಟಿ, ರಬಕವಿ, ರಾಮಪುರ, ಸಾಸಲಟ್ಟಿ, ಹಿಪ್ಪರಗಿ, ಹೊಸೂರು, ಪ್ರಮುಖ ಗ್ರಾಮಗಳಾಗಿವೆ. ಆಸಂಗಿ, ಕುಲಳ್ಳಿ, ಗೊಲಬಾಂವಿ, ಜಗದಾಳ, ನಾವಲಗಿ, ತಮದಡ್ಡಿ, ಮದರಖಂಡಿ, ಯಲ್ಲಟ್ಟಿ, ಹಳಿಂಗಳಿ, ಹನಗಂಡಿ, ಹಿಪ್ಪರಗಿ ಇಲ್ಲಿನ ಗ್ರಾಮಪಂಚಾಯಿತಿಯ ಕೇಂದ್ರಗಳಾಗಿವೆ[೮]. ತೇರದಾಳ ಪುರಸಭೆ ಹಾಗೂ ರಬಕವಿ ಮತ್ತು ಬನಹಟ್ಟಿ ನಗರ ಸಭೆ ಅಸ್ತಿತ್ವದಲ್ಲಿವೆ.

**೨.೧.೧. ತೇರದಾಳ ಹೆಸರಿನ ಹಿನ್ನೆಲೆ**

ತೇರದಾಳವು ಬಹು ಪ್ರಾಚೀನ ಕಾಲದಿಂದಲೂ ಮೌರ್ಯ, ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಸೇವುಣರು, ರಟ್ಟರು, ಹೊಯ್ಸಳ, ಶಿಲಾಹರರು, ವಿಜಯನಗರ, ಬಿಜಾಪುರದ ಆದಿಲ್‌ಶಾಹಿಗಳು, ತೇರದಾಳದ ದೇಸಾಯಿಗಳು, ನಾಡಗೌಡರ, ಬ್ರಿಟಿಷರು ಮೊದಲಾದ ರಾಜಮನೆತನಗಳ ಆಳ್ವಿಕೆಗೆ ಒಳಗಾಗಿದೆ. ತೇರದಾಳ ದೇಸಗತಿ ಮನೆತನದ ಅವನತಿಯ ನಂತರ ಈ ಭೂಭಾಗವು ಕ್ರಮೇಣ ಬ್ರೀಟಿಷರ ನೇರ ಆಳ್ವಿಕೆಗೆ ಒಳಗಾಯಿತು. ಇದು ಪ್ರಾಚೀನ ಐತಿಹಾಸಿಕ ಜಂಬೂದ್ವೀಪದ ಭರತಕ್ಷೇತ್ರದ ಕುಂತಳ (ತುಂಗಭದ್ರೆಯ ಮೇಲಿನ ಭಾಗ ಬಹುತೇಕ ಈಗಿನ ಉತ್ತರ ಕರ್ನಾಟಕ ಪ್ರದೇಶವನ್ನು ಶಾಸನಗಳಲ್ಲಿ ಕುಂತಳವೆಂದು ಕರೆಯಲಾಗಿದೆ) ದೇಶದಲ್ಲಿನ ಕುಂಡಿನಾಡು ೩೦೦೦ ನಾಡಿನಲ್ಲಿ ಬರುವ ತೇರದಾಳ-೧೨ ಕಂಪಣದ ರಾಜಧಾನಿಯಾಗಿ ಮತ್ತು ಪ್ರಮುಖ ಪಟ್ಟಣವಾಗಿ, ವ್ಯಾಪಾರ ಕೇಂದ್ರವಾಗಿ ಅಂದು ಖ್ಯಾತವಾಗಿತ್ತು. ಅಲ್ಲದೇ ಅದು ಅಂದಿನ ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ ಬಿಂದುವೂ ಆಗಿತ್ತೆಂಬುದನ್ನು ಸಮಕಾಲೀನ ದಾಖಲೆಗಳು ಪುಷ್ಟೀಕರಿಸಿವೆ. ತೇರದಾಳದಲ್ಲಿ ದೊರೆತ ಕೆಲ ಪ್ರಮುಖ ಶಾಸನಗಳು ಇಲ್ಲಿನ ಐತಿಹಾಸಿಕತೆಯನ್ನು ಅನಾವರಣ ಮಾಡಿವೆ. ಕಲ್ಯಾಣ ಚಾಳುಕ್ಯರ ಮನೆತನದ ಶ್ರೇಷ್ಠ ದೊರೆ ಆರನೇ ವಿಕ್ರಮಾದಿತ್ಯನಿಗೆ ಸಂಬಂಧಿಸಿದ ಕ್ರಿ.ಶ.೧೧೨೩ರ ತೇರದಾಳ ಶಾಸನವೊಂದು ಚಾಳುಕ್ಯ ಮನೆತನದ ವಂಶಾವಳಿಯ ಕುರಿತು ವಿವರಿಸುವುದರೊಂದಿಗೆ ಚಾಳುಕ್ಯರ ದೊರೆ ಪೆರ್ಮಾಡಿಯೆಂಬ ಅರಸನು (ಕ್ರಿ.ಶ.೧೦೭೫-೧೧೨೬) ವೈರಿಗಳಾದ ಗುಜರಾತ ಚೋಳ ದೇಶಗಳ ಅರಸರನ್ನು ಗೆದ್ದು ಬಂದ ಬಳಿಕ ತೇರದಾಳ ಗ್ರಾಮವನ್ನು ಕಟ್ಟಿಸಿದನು ಎಂದು ಉಲ್ಲೇಖಿಸಿದೆ. ಅಲ್ಲದೇ ಇದು ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದ ರಟ್ಟ ಕಾರ್ತವಿರ್ಯನ ರಾಜಧಾನಿಯಾಗಿತ್ತೆಂದು ಅಲ್ಲಿನ ಶಾಸನಗಳಿಂದ ವ್ಯಕ್ತವಾಗುತ್ತದೆ. ಈ ಊರನ್ನು **'ರಾಜಧಾನಿ ತೇರಿದಾಳ', 'ತೇರದಾಳ'** ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ.೧೧೨೩ರ ಶಾಸನದಲ್ಲಿ ಈ ತೇರದಾಳ-೧೨ರ ವರ್ಣನೆ ಉಲ್ಲೇಖಿತವಾಗಿದ್ದು, ಆ ಕುರಿತ ವಿವರ ಈ ಮುಂದಿದೆ.

**ನಿರುಪಮ ಗನ್ಧಶಾಲಿ ವನದಿಂ ಬ**
**ನದಿಂ ಕೊಳದಿಂ ತಟಾಕದಿಂ ಗಿರಿವನ ತೋಯ ದುರ್ಗ ಕುಳದಿಂದಗಳಿಂ ಬುಧ**
**ಮಾಧವಾರ್ಕ್ಕ ಶಂಕರ ಜಿನ ಸದುಮದಿಂ ವಿಫ(ಪ_ಣಿ ಮಾರ್ಗದಿನೊಪ್ಪವ**
**ತೇರದಾಳ ಪಂನೆರಡಳಿ ಚೆಲ್ವನೇಯ ಪೂಗಳಲುಕಜ**
**ನುಂ ನೆಳೆಯಂ ಧರಿತ್ತಿಯೊಳು ॥**
**ಧನದನವನೆಂದು ಕೊವಿಚಾಡುವ ತಂಮ ಕಾಚನನಿ**
**ಚಯಂಗಳಿಂ ಮಣಿಗಣಂಗಳ ರಾಸಿಗಳಂ ನವೀನಮಣ್ಣನಬಹು**
**ವಸ್ತ್ರದಿಂ ಪಯಗಳಿಂ ವಹುಧಾನ್ಯಾದಿ ನೊಪ್ಪಿತೋರ್ಪ ನಚ್ಚನ**
**ಪರದರ್ಕ್ಕಳಿಂ ಭರಿತವಾಗಿ ಕರಂ ಸೊಗಯಿಕ್ಕು ತತ್ಪುರಂ**[೧೦].

ತೇರದಾಳ ಗ್ರಾಮವೂ ಕೂಂಡಿನಾಡು ಮೂಸಾಸುರ ನಾಡಿನಲ್ಲಿ ಪ್ರಖ್ಯಾತವಾದ ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು. ಅದು ಗಿರಿ-ವನ, ದುರ್ಗಗಳಿಂದ, ಕೆರೆ, ಬಾವಿಗಳಿಂದ,

ಶ್ರೀಮಂತರಿಂದ, ವ್ಯಾಪಾರಿಗಳಿಂದ, ಹೊಸ ವಸ್ತ್ರಗಳನ್ನು ಧರಿಸುವವರಿಂದ, ಹಾಲು ಹೈನುಗಾರಿಕೆಯಿಂದ, ಧ್ಯಾನ, ಸಂಪತ್ತಿನಿಂದಲೂ ಶೋಭಿಸುತ್ತಿತ್ತು ಎಂದು ಮೇಲಿನ ಶಾಸನದಿಂದ ತಿಳಿದು ಬರುತ್ತದೆ.

ತೇರದಾಳ ಎನ್ನುವ ಹೆಸರು ಹೇಗೆ ಬಂದಿತೆಂಬುದು ಇದುವರೆಗೆ ಸ್ಪಷ್ಟವಾಗಿಲ್ಲ. ಈ ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇದನ್ನು ಕೆಲವರು ಸಂಖ್ಯಾವಾಚಕ ಎಂದು, ಇನ್ನೂ ಕೆಲವರು ಪ್ರದೇಶವಾಚಕವಾಗಿ ಬಂದಿರುವ ಸಾಧ್ಯತೆಯನ್ನು ಗುರುತಿಸಿದ್ದಾರೆ. ಆದರೆ ಹಿಂದೆ ಇದನ್ನು ಬಳಕೆಯಲ್ಲಿ ದೇರಿದಲ, ದೇರಿದಾಲವೆಂದೂ ಕರೆಯಲಾಗುತ್ತಿತ್ತು. ಪ್ರಾಯಶಃ ಇದನ್ನೇ ಕಾಲಕ್ರಮೇಣ ದೇರಿ, ತೇರಿ, ತೇರ, ತೇರಾಹ ಇಲ್ಲವೇ ದಾಳ, ಪಾಳ, ಹಾಳ ಎಂದೆಲ್ಲ ಕರೆದು ಆನಂತರ ತೇರಿದಾಲ, ತೇರಿದಾಳ ಎಂದು ಕರೆದಿರುವ ಸಾಧ್ಯತೆ ಇದೆ. ಪರ್ಶಿಯನ್ ಭಾಷೆಯಲ್ಲಿ ತೇರ ಅಂದರೆ ೧೩ ಎಂದಾಗುತ್ತದೆ. ಹಿಂದಿನ ಆಡಳಿತ ವಿಭಾಗ ೧೨ಕ್ಕೆ ಒಂದನ್ನು ಸೇರಿಸಿ ಅದನ್ನು ಅವರು ತೇರಾಹ ಎಂದು ಮೊದಲು ಕರೆದಿರಬೇಕು ಅನಂತರ ಅದುವೇ ತೇರದಾಳವಾಗಿರುವ ಸಾಧ್ಯತೆಯನ್ನು ಶ್ರೀ ೧೦೮ ಕುಲರತ್ನ ಭೂಷಣ ಮಹಾರಾಜರು ಗುರುತಿಸಿದ್ದಾರೆ. ಶಿಲಾಹಾರರ ಮೂಲ ಪುರುಷನಾದ ತೇರದೂರ್ (ತೇರ+ದೂರ್)ನಿಂದಾಗಿ ಈ ಊರು ತೇರದಾಳ ಆಗಿರುವ ಸಾಧ್ಯತೆಯನ್ನು ವಿದ್ವಾಂಸರಾದ ಡಾ.ಸಂಗಮೇಶ ಕಲ್ಯಾಣಿಯವರು ಗುರುತಿಸುತ್ತಾರೆ[೧೧]. ಇದನ್ನೇ ಶಾಸನಗಳು 'ತೇರಿದಾಳ' 'ತೇರದಾಳ' ಎಂದು ಗುರುತಿಸಿವೆ.

ಸಹಜವಾಗಿ ಇದು ಬೆಟ್ಟ-ಗುಡ್ಡ, ನದಿ-ಸರೋವರ, ಕೆರೆಗಳಿಂದ ನಿಸರ್ಗ ಸೌಂದರ್ಯದಿಂದ ಹಾಗೂ ಕೋಟೆಗಳಿಂದ ಆವರ್ತವಾಗಿರುವ ನಿಸರ್ಗದ ಮಡಿಲಲ್ಲಿ ರಮ್ಯ ತಾಣದಲ್ಲಿ ನೆಲೆ ನಿಂತಿದೆ. ಇಲ್ಲಿ ಪ್ರಾರಂಭದಿಂದಲೂ ತೇರದಾಳ ಗ್ರಾಮವು ಮಹಾಮೇಧಾವಿಗಳಿಂದ ಮುನಿಗಳಿಂದ (ಪಂಡಿತರಿಂದ) ಕನಕನಂದಿ ಪಂಡಿತ, ಶ್ರುತ ಕೀರ್ತಿ ತ್ರೈವಿದ್ಯಬ್ರತಿ, ಚಂದ್ರಕೀರ್ತಿ ಪಂಡಿತ, ಪ್ರಭಾಚಂದ್ರ ಪಂಡಿತ, ತ್ರೈವದ್ಯೆ ವಿದ್ಯಾಧರ ಮಹಾಜ್ಞಾನಿಗಳಾದ ಶ್ರೀ ಅಲ್ಲಮ ಪ್ರಭು ದೇವರು, ಕವಿಗಳಾದ ಮಗಿಯ ನರೇಂದ್ರರಂತಹ ಹಾಗೂ ತುಕಾರಾಮರಂತಹ ಹಾಡುಗಾರರಿಂದ ಶೋಭಿಸಿದ ಪುಣ್ಯ ಭೂಮಿಯಾಗಿದೆ.

**೨.೨ ತೇರದಾಳದ ಭೌಗೋಳಿಕ ಲಕ್ಷಣಗಳು**

ತೇರದಾಳದ ಪರಿಸರ ಹಲವು ತೆರನಾದ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಮಾನವ ಸಂಸ್ಕೃತಿಯ ಏಳ್ಗೆ ಮತ್ತು ಅವನತಿಯಲ್ಲಿ ಇಲ್ಲಿನ ಭೌಗೋಳಿಕ ಅಂಶಗಳು ತನ್ನದೇ ಆದ ಪ್ರಭಾವ ಬೀರಿದ್ದು, ಆ ಕುರಿತ ವಿವರ ಮತ್ತು ವೈಶಿಷ್ಟ್ಯತೆಗಳು ಈ ಮುಂದಿನಂತಿವೆ.

**ವಿವಿಧ ಸಮುದಾಯ ಸಂಪನ್ಮೂಲ**

ರಾಜ್ಯದ ಜನಸಾಂದ್ರತೆಯಲ್ಲಿ ಬಾಗಲಕೋಟೆ ಜಿಲ್ಲೆ **೨೭ನೇ** ಸ್ಥಾನದಲ್ಲಿದೆ. ರಾಜ್ಯದ ಜನಸಾಂದ್ರತೆ ಪ್ರತಿ ಚ.ಕಿ.ಮೀಗೆ **೩೧೯** ಇದ್ದರೆ, ಜಿಲ್ಲೆಯಲ್ಲಿನ ಪ್ರತಿ ಚ.ಕಿ.ಮೀ.ಜನಸಾಂದ್ರತೆಯು ೨೮೮ ಇದೆ. **೨೦೧೧ರ** ಜನಗಣತಿಯ ಪ್ರಕಾರ ತೇರದಾಳದ ಒಟ್ಟು ಜನಸಂಖ್ಯೆ **೨೬೧೫೩ರಷ್ಟಿದೆ.** ಇದರಲ್ಲಿ **೧೩೨೩೮** ಪುರುಷರು ಮತ್ತು **೧೨೯೧೫** ಮಹಿಳೆಯರಿದ್ದು, ಪ್ರತಿ ಸಾವಿರ ಪುರುಷರಿಗೆ ಶೇ.**೯೭೪** ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ ನಗರ ಪ್ರದೇಶದಲ್ಲಿ ವಾಸಿಸುವ

ಜನರ ಸಂಖ್ಯೆ ೧೩೨೯.೭೩ರಷ್ಟಿದ್ದರೆ, ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ೩೨೯೫.೩೩ರಷ್ಟಿದೆ. ಜಿಲ್ಲೆಯ ಒಟ್ಟು ಸಾಕ್ಷರತೆಯ ಪ್ರಮಾಣ ಶೇ.೬೮.೮೭ರಷ್ಟಿದ್ದು, ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ.೭೯.೨೯ರಷ್ಟಿದೆ ಮತ್ತು ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೫೮.೪೦ರಷ್ಟಿದೆ[೧೨]. ಈ ಮೇಲಿನ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ಹೆಚ್ಚಾಗಿದೆ. ಜೊತೆಗೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ.

ತೇರದಾಳ ಪರಿಸರದಲ್ಲಿ ಹಲವಾರು ಜಾತಿ/ಜನಾಂಗದವರು ವಾಸವಾಗಿದ್ದು, ಕೃಷಿ ಆಧಾರಿತ ಕುಶಲಕರ್ಮಿಗಳು ಸಹ ಇರುವುದನ್ನು ಕಾಣುತ್ತೇವೆ. ಅಂದರೆ ಕುಂಬಾರಿಕೆ, ಕಂಬಾರಿಕೆ, ಚಮ್ಮಾರಿಕೆ, ಬಡಿಗತನ, ಹೈನುಗಾರಿಕೆ, ಕಂಚುಗಾರಿಕೆ, ಹೀಗೆ ಹಲವಾರು ವೃತ್ತಿಗಳನ್ನು ಮಾಡುವ ಜನರಿದ್ದಾರೆ. ಹಾಗೆಯೇ ಕೂಲಿ ನಾಲಿ ಮಾಡಿಕೊಂಡು ಜೀವನ ಸಾಗಿಸುವವರೂ ಇದ್ದಾರೆ. ಇಲ್ಲಿ ಕೃಷಿಯೇ ಪ್ರಮುಖ ಕಸುಬಾಗಿರುವುದರಿಂದ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿ ಕಂಡುಬರುತ್ತಾರೆ. ಜೊತೆಗೆ ಕೂಲಿಯನ್ನರಸಿ ವಲಸೆ ಹೋಗುವ ಜನರೂ ಸಹ ಇರುವುದನ್ನು ನಾವು ಕಾಣುತ್ತೇವೆ. ಒಟ್ಟಾರೆಯಾಗಿ ಇಲ್ಲಿನ ಜನರ ಆರ್ಥಿಕ ಸ್ಥಿತಿಗತಿ ಬೇರೆ ಜಿಲ್ಲೆಯ ಪ್ರದೇಶಗಳಿಗೆ ಹೋಲಿಸಿಕೊಂಡರೆ ಸಾಧಾರಣವಾಗಿದೆ ಎಂದು ಹೇಳಬಹುದು. ಏಕೆಂದರೆ ಇಲ್ಲಿ ಕೈಗಾರಿಕಾ ಕೇಂದ್ರಗಳು ಬಹು ಕಡಿಮೆ ಇವೆ. ಇತ್ತೀಚಿಗೆ ಆಸಂಗಿ ಬಳಿ ಹಾಲಿನ ಡೈರಿ ಮತ್ತು ಸಿಹಿ ತಿಂಡಿ ಉತ್ಪಾದನಾ ಘಟಕ ಆರಂಭವಾಗಿದ್ದು, ಇಲ್ಲಿನ ಕೆಲವು ಜನರಿಗೆ ಉದ್ಯೋಗ ದೊರೆತಿದೆ. ಇಡೀ ಬಾಗಲಕೋಟೆ ಜಿಲ್ಲೆಯಲ್ಲಿ ನಿರಂತರವಾಗಿ ಜನರಿಗೆ ಉದ್ಯೋಗ ಒದಗಿಸುವ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗಿಲ್ಲ. ಹಾಗಾಗಿ ಇಲ್ಲಿನ ಗ್ರಾಮೀಣ ಕೆಲವು ಜನರು ಕೆಲಸವನ್ನರಸಿ ಮುಂಬೈ-ಪುಣೆ-ಗೋವಾ-ಹೈದರಾಬಾದ್-ಬೆಂಗಳೂರುನಂತಹ ಮಹಾ ನಗರಗಳಿಗೆ ವಲಸೆ ಹೋಗುತ್ತಾರೆ. ಅಲ್ಲದೇ ಬೆರಳೆಣಿಕೆಯಷ್ಟು ಜನರು ವಾಣಿಜ್ಯ-ವ್ಯಾಪಾರದಲ್ಲಿ ತೊಡಗಿಕೊಂಡಿದ್ದಾರೆ. ಇದರೊಂದಿಗೆ ಜಿಲ್ಲೆಯಲ್ಲಿ ವ್ಯವಸಾಯವೇ ಪ್ರಮುಖವಾಗಿದ್ದು. ಅದನ್ನೇ ಹೆಚ್ಚು ಜನರು ನಂಬಿಕೊಂಡಿರುವುದನ್ನು ಸಹ ನಾವು ಕಾಣುತ್ತೇವೆ.

**ಭೌಗೋಳಿಕ ಸಂಪನ್ಮೂಲ**

ತೇರದಾಳ ಮತ್ತು ಅದರ ಸುತ್ತಲಿನ ಭೂ-ಭಾಗಗಳು ಇಲ್ಲಿನ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಬಹು ಮುಖ್ಯವಾದ ಪಾತ್ರ ನಿರ್ವಹಿಸಿವೆ. ಆದ್ದರಿಂದ ತೇರದಾಳದ ಕೇಂದ್ರಭಾಗವನ್ನು ಮುಖ್ಯಭಾಗವೆಂದು ಪರಿಗಣಿಸಿ, ಅದರ ಸುತ್ತಲಿನ ೨೫ ಕಿ.ಮೀ ಭೂ-ಪ್ರದೇಶವನ್ನು ತೇರದಾಳದ ಪರಿಸರ ಎಂದು ಪ್ರಾಸಂಗಿಕವಾಗಿ ಅಧ್ಯಯನದ ಅನುಕೂಲಕ್ಕಾಗಿ ಪರಿಗಣಿಸಲಾಗಿದೆ. ಇಲ್ಲಿನ ಈ ಭೂ-ಭಾಗದ ಲಕ್ಷಣಗಳನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

**ಬೆಟ್ಟ ಸಮೂಹಗಳು**

ಇಲ್ಲಿನ ಭೌಗೋಳಿಕ ಪರಿಸರವು ಬೆಟ್ಟ, ಖನಿಜಗಳಿಂದ ಮತ್ತು ನೀಸ್ ಗ್ರ್ಯಾನೈಟ್(ಕಣ) ಶಿಲೆಗಳಿಂದ ಕಂಗೊಳಿಸುತ್ತಿದೆ. ಸಾಮಾನ್ಯವಾಗಿ ಕ್ರಿಸ್ಟಸ್ ಲೈನ್‌ಸಿಸ್ಟ್ (ಸ್ಪಟಿಕಾತ್ಮಕ ಪದರು ಶಿಲೆ)

ಎಪಿಡಿಯೋರಾಯಿಟ್ಸ ಗ್ರಾನಾಯಿಟ್ (ಜಂಬಿಟ್ಟಿಗೆ) ಮತ್ತು ಲೇಟರ್ ಗ್ರಾನಾಯಿಟ್ಸ ಶಿಲಾ ಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೈಕ್ ಶಿಲೆ, ಕ್ವಾರ್ಟ್ಜಶಿಲೆ, ಕ್ರಿಸ್ಟಲೈನ್‌ಸಿಸ್ಟ್, ಎಪಿಡೊರಾಯಿಟ್ಸ್, ಗ್ರಾನಾಯಿಟ್ ಮೊದಲಾದ ಶಿಲೆಗಳು ಇಲ್ಲಿ ದೊರೆಯುತ್ತವೆ. ಇವುಗಳನ್ನು ಧಾರವಾಡ ಪ್ರದೇಶದಲ್ಲಿರುವಂತೆ ಹಳೆ ಮಾದರಿಯೆಂದು ಗುರುತಿಸಲಾಗಿದೆ. ಉತ್ತರ ಕರ್ನಾಟಕದಲ್ಲಿ ದೊರೆತಿರುವ ವಿವಿಧ ಶಿಲೆಗಳ ಪ್ರಕಾರಗಳನ್ನು ಎರಡು ಭಾಗಗಳಲ್ಲಿ ವಿದ್ವಾಂಸರು ವಿಭಾಗಿಸಿದ್ದಾರೆ. ಅವುಗಳಲ್ಲಿ.

**೧. ಭೀಮಾ ನದಿಯ ದಂಡೆಯ ಮೇಲೆ ಬರತಕ್ಕಂತ ಸ್ಥಳಗಳನ್ನು ಭೀಮಾ ಶ್ರೇಣಿಯೆಂದು**

**೨. ಕೃಷ್ಣಾ, ಘಟಪ್ರಭ ಹಾಗೂ ಮಲಪ್ರಭ ಈ ನದಿಗಳ ದಂಡೆಯ ಮೇಲೆ ಬರತಕ್ಕಂತಹ ಸ್ಥಳಗಳನ್ನು ಸಾಮಾನ್ಯವಾಗಿ 'ಕಲಾದಗಿ' ಶ್ರೇಣಿ ಎಂದು ವಿಭಾಗಿಸಿದ್ದಾರೆ.**

ಕಲಾದಗಿ ಶ್ರೇಣಿಯು ಹೆಚ್ಚು ಕಡಿಮೆ ರಾಯಚೂರು, ಬೆಳಗಾವಿ, ಬಿಜಾಪುರ ಜಿಲ್ಲೆಯ ಪ್ರದೇಶಗಳನ್ನು ಒಳಗೊಂಡಿದೆ. ಇಲ್ಲಿ ಕೃಷ್ಣಾ, ಘಟಪ್ರಭಾ ಮತ್ತು ಮಲಪ್ರಭಾ, ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ಮೊದಲಾದ ನದಿಗಳು ಹರಿಯುತ್ತವೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಕಲಾದಗಿ ಶ್ರೇಣಿಯನ್ನು ಪುನಃ ಮುಖ್ಯವಾಗಿ ೫ ಭಾಗಗಳಲ್ಲಿ ವಿಂಗಡಿಸಲಾಗಿದೆ.

೧. **ಕೊಣ್ಣೂರು ಬೆಟ್ಟ ಸಮೂಹ**
೨. **ಸೌದತ್ತಿ ಬೆಟ್ಟ ಸಮೂಹ**
೩. **ತೇರದಾಳ ಬೆಟ್ಟ ಸಮೂಹ**
೪. **ಐಹೊಳೆ ಬೆಟ್ಟ ಸಮೂಹ**
೫. **ಕಲಾದಗಿ ಬೆಟ್ಟ ಸಮೂಹ**

ಇವುಗಳಲ್ಲಿ ತೇರದಾಳ ಬೆಟ್ಟ ಸಮೂಹವು ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದ್ದು, ಪ್ರಾಚೀನ ಕಾಲದಿಂದಲೂ ಮಾನವ ಸಂಸ್ಕೃತಿಗೆ ಅವಕಾಶ ಕಲ್ಪಿಸಿಕೊಟ್ಟಿದೆ. ಇಲ್ಲಿ ಹರಿಯುವ ಕೃಷ್ಣಾ ನದಿಯ ದಂಡೆಯ ಮೇಲೆ ಬರುವ ಆಸಂಗಿ, ಅಸ್ಕಿ, ತಮದಡ್ಡಿ, ಭದ್ರಗಿರಿ, ಹಳಿಂಗಳಿ, ಹನಗಂಡಿ, ಹಿಪ್ಪರಗಿ, ಮತ್ತು ಮದನಮಟ್ಟಿ ಗ್ರಾಮಗಳಲ್ಲಿ ಬೆಟ್ಟಗಳು ಚಾರಿತ್ರಿಕವಾಗಿ ಮತ್ತು ಭೌಗೋಳಿಕವಾಗಿ ಪ್ರಾಮುಖ್ಯತೆಯನ್ನು ಹೊಂದಿವೆ. ಇಲ್ಲಿರುವ ಕಣಿವೆ ಪ್ರದೇಶವು ವ್ಯವಸಾಯಕ್ಕೆ ಯೋಗ್ಯವಾದ ಫಲವತ್ತಾದ ಕಪ್ಪು ಮಣ್ಣನ್ನು ಹೊಂದಿದ್ದು, ಈ ಪ್ರದೇಶದಲ್ಲಿ ಉಸುಕು ಮತ್ತು ಕಲ್ಲಿನ ದಿಣ್ಣೆಗಳಿವೆ. (ಸುಣ್ಣಗುಡ್ಡ) ತೇರದಾಳದ ಹೆಚ್ಚು ಭಾಗ ಬೋಳು ಬೆಟ್ಟಗಳಿಂದ ಕೂಡಿದ್ದು, ಅಲ್ಲಲ್ಲಿ ಕೆಲ ಕಣಿವೆಗಳಿವೆ. ಇಲ್ಲಿನ ಬೆಟ್ಟಗಳು ದಕ್ಷಿಣ ಆಗ್ನೇಯದಿಂದ ಉತ್ತರ ವಾಯುವ್ಯದ ಕಡೆಗೆ ಸಮಾನಾಂತರದಲ್ಲಿ ಸಾಗಿವೆ. ಅದರಲ್ಲಿ ತೇರದಾಳ ಬೆಟ್ಟ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದೆ. ಇಲ್ಲಿನ ಹಲವು ಪರ್ವತಗಳು ತನ್ನದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿವೆ. ಅವುಗಳಲ್ಲಿ ತೇರದಾಳ ಸಮೀಪದ ಭದ್ರಗಿರಿ ಬೆಟ್ಟ **೩,೮೬೩** ಅಡಿ ಎತ್ತರವಾಗಿದ್ದು, ಹನಗಂಡಿ ಬೆಟ್ಟವು **೩,೮೦೪** ಅಡಿ ಎತ್ತರವಾಗಿದೆ. ಆಸಂಗಿ ಗುಡ್ಡವು **೩,೭೦೦** ಅಡಿ ಹಾಗೂ ಹಳಿಂಗಳಿ ಗುಡ್ಡವು **೩೨೮೫** ಅಡಿ ಎತ್ತರವನ್ನು ಹೊಂದಿವೆ[೧೩]. ಇಲ್ಲಿನ ಹೇರಳವಾದ ಬೆಟ್ಟರಾಶಿಯನ್ನು ಗಮನಿಸಿದಾಗ ಈ ಪ್ರದೇಶವು ಹಿಂದೆ ಸಮೃದ್ಧ ಸಸ್ಯರಾಶಿಯ ತಾಣವಾಗಿತ್ತೆಂಬುದಾಗಿ ತಿಳಿದುಬರುತ್ತದೆ. ಅಲ್ಲದೆ, ಇಲ್ಲಿನ ಆದಿಮ ಸಂಸ್ಕೃತಿಯ ಜನರು ಹಳಿಂಗಳಿ, ಹನಂಗಡಿ, ಮದನಮಟ್ಟಿ, ಆಸಂಗಿ, ಅಸ್ಕಿ, ತೇರದಾಳ, ಮೊದಲಾದ ಪ್ರದೇಶದಲ್ಲಿ

ನಿರ್ಮಿಸಿರುವ ಬೃಹತ್ ಶಿಲಾಗೋರಿಗಳು ಮತ್ತು ಅವರು ಕುಲ್ಲೊಳ್ಳಿ ಮೊದಲಾದೆಡೆ ಗೀರು ಮತ್ತು ಕುಟ್ಟಿ ರಚಿಸಿದ ರೇಖಾ ಚಿತ್ರಗಳಲ್ಲಿ ಹುಲಿ, ಚಿರತೆ, ಆನೆಯಂತಹ ಚಿತ್ರಗಳು ಪ್ರಮುಖವಾಗಿವೆ. ಇದು ಈ ದಟ್ಟ ಅರಣ್ಯದಲ್ಲಿ ಮೇಲಿನ ಪ್ರಾಣಿಗಳು ವಾಸಿಸುತ್ತಿದ್ದ ಸ್ಥಿತಿಯನ್ನು ಸ್ಪಷ್ಟಪಡಿಸುತ್ತವೆ.

ತೇರದಾಳದ ಪೂರ್ವದ ಭಾಗ ಬಯಲು ಪ್ರದೇಶವಾಗಿದೆ. ಈ ಪ್ರದೇಶವು ಸಮತಟ್ಟಾಗಿರುವುದರಿಂದ ಯಾವುದೇ ಹೆಚ್ಚಿನ ಮರಗಿಡಗಳು ಇರುವುದಿಲ್ಲ ಅಲ್ಲದೇ ಈ ಪ್ರದೇಶ ಹೆಚ್ಚು ಕಪ್ಪು ಮಿಶ್ರಿತವಾಗಿದೆ. ಕೆಲವು ಕಡೆ ಕೆಂಪು ಮಿಶ್ರಿತ ಮಣ್ಣಿನಿಂದ ಕೂಡಿದೆ. ಸಮತಟ್ಟಾದ ಪ್ರದೇಶದಲ್ಲಿ ಅಲ್ಲಲ್ಲಿ ಸಣ್ಣ ಬೆಟ್ಟಗಳ ಸಾಲುಗಳನ್ನು ಕಾಣಬಹುದು. ಈ ಸಾಲು ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ಅಂದರೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣಕ್ಕೆ ಹಬ್ಬಿವೆ. ಇವು ಅಲ್ಲಲ್ಲಿ ಸಣ್ಣ ದ್ವೀಪಗಳ ರೀತಿಯಾಗಿ ಮೇಲೆದ್ದಿರುವುದನ್ನು ಕಾಣಬಹುದು. ಈ ರೀತಿ ಅಲ್ಲಲ್ಲಿ ಬೆಟ್ಟಗಳು ಗುಂಪುಗಳಾಗಿರುವುದನ್ನು ಸಾಮಾನ್ಯವಾಗಿ ದಖ್ಖನ್ ಪ್ರಸ್ತಭೂಮಿಯ ಹಲವೆಡೆ ಕಾಣಬಹುದು. ಈ ಲಕ್ಷಣಗಳನ್ನು ಜಿಲ್ಲೆಯ ಉದ್ದಕ್ಕೂ ಸಾಮಾನ್ಯವಾಗಿ ಕಂಡು ಬರುತ್ತವೆ. ಬೆಟ್ಟಗುಡ್ಡಗಳಿರುವುದರಿಂದ ಇಲ್ಲಿ ಸ್ವಲ್ಪ ಮಳೆ ಜಾಸ್ತಿ ಬೀಳುತ್ತದೆ. ಒರಟಾದ ನೆಲ ಹಾಗೂ ಎತ್ತರದ ದಿಣ್ಣೆಗಳು ಇಲ್ಲಿವೆ. ಇವು ಇಳಿಜಾರನ್ನು ಉತ್ತರದ ಕಡೆ ಹೊಂದಿವೆ. ಇದರಿಂದಾಗಿ ಮಳೆಯ ನೀರು ಉತ್ತರದಲ್ಲಿರುವ ಜೀವನದಿ ಕೃಷ್ಣೆಯಲ್ಲಿ ವಿಲೀನವಾಗುತ್ತದೆ.

ಪಶ್ಚಿಮದಲ್ಲಿ ಭೂ ಮೇಲ್ಮೈ ಎತ್ತರದಲ್ಲಿರುವುದರಿಂದ ಕುರುಚಲು ಗಿಡದ ಸಣ್ಣ ಕಾಂಡಗಳಿವೆ. ಮೇಲೆ ತಿಳಿಸಿದ ಬೆಟ್ಟಗಳ ಸಾಲುಗಳಲ್ಲದೆ ಇಲ್ಲಿ ಕೆಲವು ಬಿಡಿ ಬಿಡಿಯಾದ ಬೆಟ್ಟಗಳ ಗುಂಪುಗಳಿವೆ. ಇಲ್ಲಿನ ಬೆಟ್ಟಗಳ ನಡುವೆ ಕಣಿವೆ ಪ್ರದೇಶವಿದ್ದು ವ್ಯವಸಾಯಕ್ಕೆ ಅನುಕೂಲವಾಗಿದೆ. ಅಲ್ಲದೆ ಫಲವತ್ತಾದ ಭೂಮಿಯನ್ನು ಹೊಂದಿದೆ. ಅಲ್ಲದೆ ತೇರದಾಳ ತಾಲೂಕಿನ ಗಡಿಗಳಿಗೆ ಹೊಂದಿಕೊಂಡಿರುವ ಬೆಟ್ಟಗಳು ಕೃಷ್ಣಾ ನದಿ ದಾಟಿ ಬಿಜಾಪುರ ಜಿಲ್ಲೆಯ ಸೆರಗಿನಲ್ಲಿ ಹಾದು ಹೋಗಿ ನೈಸರ್ಗಿಕವಾಗಿ ತೇರದಾಳಕ್ಕೆ ರಕ್ಷಣೆ ಒದಗಿಸಿವೆ.

ಇಲ್ಲಿನ ಬೆಟ್ಟಗಳಲ್ಲಿನ ಶಿಲೆಯು ಧಾರವಾಡ ಶಿಸ್ಟ್ ಶಿಲಾ ಶ್ರೇಣಿಯನ್ನು ಹೊಂದಿವೆ. ಇಲ್ಲಿನ ಬೆಟ್ಟಗಳಲ್ಲಿ ನೀಸ್ ಗ್ರಾನೈಟ್ ಶಿಲೆಗಳನ್ನು ಕಾಣಬಹುದು. ಇಲ್ಲಿನ ಶಿಸ್ಟ್ ಶಿಲಾವರ್ಗದ ಶ್ರೇಣಿಗಳಲ್ಲಿ ಎತ್ತರದ ಕೊಡು ಬೆಟ್ಟಗಳನ್ನು ಕಾಣಬಹುದು ಅದರೊಡನೆ ದೊಡ್ಡ ಕೋರಕಲ್ಲಿನ ಕಣಿವೆಗಳು ಇರುವವು ಸಾಮಾನ್ಯ ಈ ಗ್ರಾನೈಟ್ ಬೆಟ್ಟಗಳಲ್ಲಿ ಕಲ್ಲುಗಳ ಕುಪ್ಪಿಗಳು ದೊಡ್ಡ ದೊಡ್ಡ ರಾಶಿಯಾಗಿದ್ದು ಇಲ್ಲಿ ಬೆಟ್ಟಗಳ ಗುಂಪನ್ನು ಕಾಣಬಹುದಾಗಿದೆ. ಇಲ್ಲಿನ ಬೆಟ್ಟಗಳು ಅಸಾಮಾನ್ಯ ಕಂದು ಇಲ್ಲವೆ ಬೂದು ವರ್ಣದವಾಗಿದ್ದು, ಗ್ರಾನೈಟ್ ಶಿಲಾವರ್ಗಕ್ಕೆ ಸೇರಿವೆ[೧೪]. ಈ ಪ್ರದೇಶದಲ್ಲಿ ಸಾಮಾನ್ಯವಾಗಿ ದೊಡ್ಡ ಬಂಡೆಗಳು ಸೀಳಿವೆ. ಹೀಗೆ ಬಿರುಕು ಬಿಟ್ಟು ಸೀಳಿದವುಗಳಲ್ಲಿ ಕೆಲವು ಮುಂಚಾಚಿ ಕಲ್ಲಾಸರೆಗಳಾದರೆ, ಕೆಲವು ಗುಹೆಗಳಾಗಿವೆ. ಇವು ಆದಿಮಾನವನ ವಸತಿಗೆ ಆಸರೆಯಾಗಿದ್ದವು. ಈ ಬೆಟ್ಟ ಗುಡ್ಡಗಳಲ್ಲಿನ ಗುಹೆಗಳು, ಕಲ್ಲಾಸರೆಗಳು ಆದಿಮಾನವನ ವಾಸಕ್ಕೆ ಒಂದಡೆ ಸಹಕಾರಿಯಾದರೆ ಇನ್ನೊಂದಡೆ ಇಲ್ಲಿನ ಶಿಲೆ ಅವನು ತನಗೆ ಅಗತ್ಯವಾದ ಆಯುದೋಪಕರಣಗಳನ್ನು ತಯಾರಿಸಿಕೊಳ್ಳಲು ಸಹಕಾರಿಯಾಗಿದ್ದರಿಂದ ಈ ಪರಿಸರದಲ್ಲಿ ಅಂದಿನ ಮಾನವ ನೆಲೆ ನಿಲ್ಲಲು ಸಹಕಾರಿಯಾಯಿತು.

**ಜಲಸಂಪತ್ತು**

ತೇರದಾಳದ ಒಟ್ಟು ವಿಸ್ತೀರ್ಣ **೭,೭೦,೭೦೦** ಹೆಕ್ಟೇರ್‌ಗಳಿದ್ದು, **೭೭,೨೫೫** ಹೆಕ್ಟೇರ್ ನೀರಾವರಿ ಮತ್ತು **೭೩,೭೧೯** ಹೆಕ್ಟೇರ್ ಅರಣ್ಯ ಭೂಮಿಯನ್ನೊಂದಿದೆ. ಇಲ್ಲಿ ಪ್ರತಿ ವರ್ಷ **೪೫೦-೪೬೮** ಮಿ.ಮೀಟರ್ ಮಳೆ ಬೀಳುತ್ತದೆ. ಇಲ್ಲಿನ ಬಹುತೇಕ ಪ್ರದೇಶವು ಮಳೆಯನ್ನು ಆಧರಿಸಿದೆ. ಈ ಪರಿಸರದ ಪ್ರಮುಖ ನದಿಯೆಂದರೆ ಕೃಷ್ಣೆ. ಇದು ಮಹಾರಾಷ್ಟದ ರತ್ನಗಿರಿ ಜಿಲ್ಲೆಯ ಮಹಾಬಲೇಶ್ವರದಲ್ಲಿ ಹುಟ್ಟುತ್ತದೆ. ಇಲ್ಲಿ ಹರಿಯುವ ಘಟಪ್ರಬಾ, ದೋಣಿ, ಭೀಮಾ, ಮಲಪ್ರಬಾ ಉಪನದಿ ಮತ್ತು ಹಳ್ಳಗಳು ಹೆಚ್ಚು ನೀರನ್ನು ಒದಗಿಸುತ್ತದೆ[೧೫]. ವಿಶಾಲವಾಗಿ ಹರಿದಿರುವ ಈ ನದಿ ನೀರನ್ನು ಪ್ರಾಚೀನ ಕಾಲದಿಂದಲೂ ತೋಟ ಗದ್ದೆಗಳಿಗೆ ಬಳಸಿಕೊಳ್ಳಲಾಗಿದೆ[೧೬].

ಇಷ್ಟೆಲ್ಲಾ ಜಲಸಂಪತ್ತನ್ನು ಹೊಂದಿದ ಈ ಪ್ರದೇಶ ಪ್ರಾಗ್ಯೆತಿಹಾಸಿಕ ಕಾಲದಿಂದಲೂ ಜನರಿಗೆ ಅವಶ್ಯಕವಾಗಿದ್ದ ಜೀವಸೆಲೆ (ನೀರನ್ನು)ಯನ್ನು ಒದಗಿಸುತ್ತಾ ಬಂದಿದೆ. ಪರಿಣಾಮವಾಗಿ ಇಲ್ಲಿನ ನದಿ, ಹಳ್ಳ, ಕೆರೆಗಳ ಸನಿಹದಲ್ಲಿ ಪ್ರಾಗತಿಹಾಸಿಕ ಕಾಲದ ಜನವಸತಿಯ ತಾಣಗಳು ಕಂಡುಬಂದಿವೆ. ಮಾನವನಿಗೆ ಶಿಲಾಯುಧಗಳನ್ನು ತಯಾರಿಸಲು ಉಪಯುಕ್ತವಾದ ಉಂಡೆಕಲ್ಲುಗಳು ಸಹ ನದಿಯ ಇಕ್ಕೆಲಗಳಲ್ಲಿ ಸ್ವಾಭಾವಿಕವಾಗಿ ದೊರೆಯುತ್ತಿದ್ದರಿಂದಾಗಿ ಪ್ರಾಗ್ಯೆತಿಹಾಸಿಕ ಕಾಲದ ಮನುಷ್ಯ ಈ ಜಿಲ್ಲೆಯ ವಿವಿಧೆಡೆ ನೆಲೆಯೂರಿದ್ದ ಬಗೆಗೆ ಮಾಹಿತಿಗಳು ದೊರಕುತ್ತವೆ. ಹಾಗೆಯೇ ಈ ಭಾಗದಲ್ಲಿ ಅನೇಕ ರಾಜವಂಶಗಳು ಆಳಿ ಅಳಿದು ಅವರ ಸಂಸ್ಕೃತಿಯ ಪ್ರತೀಕಗಳಾದ ದೇವಾಲಯಗಳನ್ನು ನದಿಯ ಇಲ್ಲವೇ ಕೆರೆಯದಂಡೆಯ ಮೇಲೆ ಕಟ್ಟಿಸಿ ನಮಗೆ ಕಲಾ ಕಾಣಿಕೆಯಾಗಿ ಬಿಟ್ಟು ಹೋಗಿದ್ದಾರೆ.

**ಹವಾಗುಣ ಮತ್ತು ಪ್ರಾಣಿ ಸಂಪತ್ತು**

ಅರೆ ಮಲೆನಾಡು ಸೀಮೆ ಎಂದೇ ಪ್ರಸಿದ್ಧಿಯಾಗಿರುವ ತೇರದಾಳವು ಕರ್ನಾಟಕದ ಅತಿ ಕಡಿಮೆ ಮಳೆ ಬೀಳುವ ಜಿಲ್ಲೆಗಳಲ್ಲಿ ಒಂದಾಗಿದ್ದು, ಇದು ರಾಜ್ಯದಲ್ಲಿ ೨ನೇ ಸ್ಥಾನದಲ್ಲಿದೆ[೧೭]. ಇಲ್ಲಿನ ಬಹುತೇಕ ಪ್ರದೇಶವು ಮಳೆಯಾಶ್ರಿತ ಪ್ರದೇಶವಾಗಿದ್ದು, ವಾರ್ಷಿಕವಾಗಿ ಸರಾಸರಿ ಕೇವಲ ೪೫೦ ಮಿ.ಮೀ. ಮಾತ್ರ ಮಳೆ ಬೀಳುತ್ತದೆ. ಇದರಿಂದ ಆಗಿದಾಂಗ್ಗೆ ಜಿಲ್ಲೆಯ ಬಹುತೇಕ ಹಳ್ಳಿಗಳು ಅನಾವೃಷ್ಟಿಯನ್ನು ಅನುಭವಿಸುತ್ತವೆ. ತೇರದಾಳ ಪರಿಸರವು ಬಿಸಲಿಗೆ ತುಂಬಾ ಪ್ರಸಿದ್ಧಿಯಾಗಿದೆ. ಇಲ್ಲಿನ ತಾಪಮಾನ ಗರಿಷ್ಠ ಮಟ್ಟಕ್ಕಿದ್ದಾಗ ಹೊರಗಿನಿಂದ ಬಂದವರು ಇಲ್ಲಿರುವುದು ಕಷ್ಟ. ತೇರದಾಳದಲ್ಲಿ ಬೇಸಿಗೆ ಕಾಲವು ಫೆಬ್ರುವರಿ ಅಂತ್ಯದಿಂದ ಆರಂಭವಾಗಿ ಜೂನ್ ತಿಂಗಳವರೆಗೆ ಇರುತ್ತದೆ. ಆಗ ಶಾಖವು ಸರಾಸರಿ **೧೬.೭°ಸೆ. ದಿಂದ ೨೮.೯°ಸೆ.** ವರೆಗೆ ಇರುತ್ತದೆ. ಕೆಲವು ಸಲ ಇದು **೩೦° ರಿಂದ ೩೨°ಸೆ.** ವರೆಗೆ ಏರುತ್ತದೆ[೧೮]. ಜುಲೈ ತಿಂಗಳಲ್ಲಿ ಆರಂಭವಾಗುವ ಮಳೆಗಾಲ ನವೆಂಬರ್ ತಿಂಗಳವರೆಗೆ ಇರುತ್ತದೆ. ನವೆಂಬರ್ ಕೊನೆಯಿಂದ ಫೆಬ್ರವರಿಯವರೆಗೆ ಇಲ್ಲಿ ಚಳಿಗಾಲವಿರುತ್ತದೆ. ಶುಷ್ಕ ವಾತಾವರಣವಿರುವ ಈ ಪ್ರದೇಶ ಮನುಷ್ಯನ ವಾಸಕ್ಕೆ ಅತ್ಯಂತ ಯೋಗ್ಯವಾಗಿದೆ.

ಈ ಪ್ರದೇಶದ ಕಾಡು ಹಾಗೂ ಬೆಟ್ಟಗುಡ್ಡಗಳಲ್ಲಿ ಕಾಡುಹಂದಿ, ಮುಳ್ಳುಹಂದಿ, ನರಿ, ಜಿಂಕೆ, ತೋಳ, ಮೊಲ ಮೊದಲಾದ ಕಾಡು ಪ್ರಾಣಿಗಳು ಹಾಗೂ ನವಿಲು, ಕಾಗೆ, ಗೂಗೆ, ಗೊರವಂಕ, ಕೌಜಗ, ಗುಡ್ಡಪೀರೆಡೆ, ನೀರುಕೋಳಿ, ಮುಳ್ಳು ಹಂದಿ, ಗುಬ್ಬಿ, ಕಿಂಗ್‌ಫಿಷರ್, ರತ್ನಪಕ್ಷಿ, ಪಾರಿವಾಳ, ಗಿಳಿ, ಕಣ್ಣಕಪ್ಪಲಿ ಮುಂತಾದ ಬಗೆಯ ಪಕ್ಷಿಗಳು ಕಂಡುಬರುತ್ತವೆ. ಅಲ್ಲದೆ ಇಲ್ಲಿನ ಕೆರೆ ಮತ್ತು ನದಿಗಳ ನೀರಿನಲ್ಲಿ ಮೊಸಳೆ, ಮೀನು, ಕಪ್ಪೆ, ಏಡಿ ಮೊದಲಾದ ಜಲಚರಗಳಿವೆ. ಅಲ್ಲದೆ ಮೊಲ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಹಾಗೂ ನಾಗರ, ಮಿಡಿನಾಗರ, ಕೆರೆಹಾವು, ಹಸಿರುಹಾವು, ಹೆಬ್ಬಾವು, ಮಣ್ಣಮುಕ್ಕಿಹಾವು ಹಾಗೂ ಕಪ್ಪು ಮತ್ತು ಕೆಂಪು ಚೇಳು, ಜರಿ ಮೊದಲಾದ ವಿಷಜಂತುಗಳಿವೆ.

**ಪರಿಸರ ಮತ್ತು ಖನಿಜ ಸಂಪನ್ಮೂಲ**

ಈ ಪರಿಸರದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶ **೭೩,೭೮೯** ಹೆಕ್ಟೇರ್ ಮಾತ್ರ ಅರಣ್ಯ ಭೂಮಿಯನ್ನೊಂದಿದೆ. ಅಂದರೆ ಇಲ್ಲಿ ಶೇ.೪೦%ರಷ್ಟು ಅರಣ್ಯವಿದೆ[೭೯]. ಇಲ್ಲಿ ತೇರದಾಳ, ಹನಗಂಡಿ, ಹಳಿಂಗಳಿ, ಭದ್ರಗಿರಿ, ಮದನಮಟ್ಟಿ ಬೆಟ್ಟ ಗುಡ್ಡದಲ್ಲಿ ಮುಂತಾದೆಡೆ ದಟ್ಟ ಅರಣ್ಯವಿದೆ. ಈ ಪ್ರದೇಶವು ಮುಂಗಾರು ಹಾಗೂ ಹಿಂಗಾರು ಮಳೆಯ ಸೆರಗಿನ ಪ್ರದೇಶ ಆದುದರಿಂದ ಅಲ್ಬೇಜಿಯ, ಅಕೇಶಿಯ, ಅರಾಬಿಕ್, ಯುಪೋರ್, ಹುಣಸೆ, ಬೇವು, ಮಾವು, ನೀಲಗಿರಿ, ಆಲ, ಜಾಲಿಗಿಡ, ಕುರುಚಲು, ಬಿಯಾಸ ಜಾತಿಗಳಿಗೆ ಸೇರಿದ ಮರಗಿಡಗಳು ಇಲ್ಲಿ ಹೆಚ್ಚಾಗಿ ಬೆಳೆಯುತ್ತವೆ. ಆದ್ದರಿಂದ ಇಂತಹ ಮರಗಿಡಗಳನ್ನು ಅವಲಂಬಿಸುವ ಪ್ರಾಣಿಗಳಾದ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಇಲ್ಲಿ ಆಲ್ವಿಯುಯಾ ಅಕಾಹಿಯ ಗುಂಪಿಗೆ ಸೇರಿದ ಸಸ್ಯಗಳು ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಬೆಳೆಯುತ್ತಿದ್ದವು. ಇಂದಿಗೂ ಸಹ ಉರುವಲು ಮತ್ತು ಬೇಸಾಯದ ಉಪಕರಣಗಳಿಗೆ ಇವುಗಳನ್ನು ಇಲ್ಲಿ ಬಳಸುತ್ತಾರೆ. ಈ ಪ್ರದೇಶದ ಹೆಚ್ಚು ಭಾಗವು ಕಪ್ಪು ಎರೆಮಣ್ಣಿನಿಂದ ಕೂಡಿದ್ದು, ಇದು ಮೇಲೆ ತಿಳಿಸಿದ ಕುರುಚಲು ಗಿಡಗಳ ಪ್ರದೇಶದಿಂದ ಆವೃತವಾಗಿದೆ. ಇಲ್ಲಿನ ಅರಣ್ಯಗಳಲ್ಲಿ ಜಾಲಿ, ತೆಂಗು, ಹೊನ್ನೆ, ನೀಲಗಿರಿ, ಶ್ರೀಗಂಧ ಮತ್ತು ಬಿದಿರು ಮರಗಳು ಅಲ್ಲಲ್ಲಿ ಹಿಂದೆ ಹೆಚ್ಚಾಗಿ ಬೆಳೆಯುತ್ತಿದ್ದವು. ಈಗ ಅವುಗಳ ಪ್ರಮಾಣ ಸ್ವಲ್ಪ ಕಡಿಮೆಯಾಗಿದೆ. ಇದೇ ಅರಣ್ಯಗಳಲ್ಲಿ ಹೆಚ್ಚಾಗಿ ಕುರುಚಲು ಗಿಡಗಂಟೆ ಮತ್ತು ಹುಲ್ಲು ಹೆಚ್ಚಾಗಿ ಬೆಳೆಯುತ್ತವೆ. ಈ ಪರಿಸರದಲ್ಲಿನ ಕಾಡುಗಳು ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾ ಪದಾರ್ಥಗಳನ್ನು ಪೂರೈಸುತ್ತಿದ್ದು, ಅವುಗಳಲ್ಲಿ ಮುಖ್ಯವಾಗಿ ಕಾಗದ, ಗಂಧ, ಮತ್ತು ಬೆಂಕಿಕಡ್ಡಿ ಕಾರ್ಖಾನೆಗಳಿಗೆ ಕಚ್ಚಾ ವಸ್ತುಗಳನ್ನು ಪೂರೈಸುತ್ತವೆ. ಕಟ್ಟಡ ನಿರ್ಮಾಣಕ್ಕೆ ಬೇಕಾದ ಮರ ಮುಟ್ಟುಗಳು, ಉರುವಲು ಕಟ್ಟಿಗೆ, ಬೊಂಬುಗಳು ಮತ್ತು ಬೆತ್ತಗಳು ಪ್ರಮುಖವಾದ ಅರಣ್ಯ ಉತ್ಪಾದನೆಗಳಾಗಿವೆ. ಬೀಡಿಎಲೆ, ಎಣ್ಣೆಬೀಜ, ಹುಣಸೆಹಣ್ಣು, ಸೀಗೆಕಾಯಿ, ಹಾಲುವಾಣ, ಅಂಟುವಾಳದ ಕಾಯಿ, ಗೇರು ಬೀಜಗಳು ಸಣ್ಣ ಪ್ರಮಾಣದ ಅರಣ್ಯ ಉತ್ಪಾದನೆ ವಸ್ತುಗಳಾಗಿವೆ. ಈ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು ಮತ್ತು ಫಲವತ್ತಾದ ಕಪ್ಪು ಜೇಡಿಮಣ್ಣು ಹರಡಿದೆ. ಮರಳು ಮಿಶ್ರಿತ ಕೆಂಪುಮಣ್ಣು ಸಾಮಾನ್ಯವಾಗಿ ಕೃಷ್ಣಾ ಮತ್ತು ಅದರ ಉಪ ನದಿ ಪ್ರದೇಶಗಳಲ್ಲಿ ಕಂಡುಬರುತ್ತದೆ.

ನೈಸರ್ಗಿಕವಾಗಿ ಇಷ್ಟೆಲ್ಲಾ ಬೆಟ್ಟಗುಡ್ಡಗಳನ್ನು ಹೊಂದಿದ ಈ ಜಿಲ್ಲೆಯ ವಿವಿಧ ಕಡೆಗಳಲ್ಲಿ ವಿಭಿನ್ನ ರೀತಿಯ ಶಿಲಾ ಸಂಪತ್ತನ್ನು, ಖನಿಜ ಸಂಪತ್ತನ್ನು ನೋಡಬಹುದು. ಮೇಲೆ ವಿವರಿಸಿದ ಈ ಭಾಗವು ಪ್ರಾಚೀನ ಆರ್ಕಿಯನ್ ಕಾಂಪ್ಲೆಕ್ಸಗೆ ಸೇರಿದ್ದು[೨೦]. ಇಲ್ಲಿನ ಶಿಲೆಯನ್ನು ಧಾರವಾಡ ಶಿಲಾವರ್ಗ ಮತ್ತು ಕಲಾದಗಿ ಶಿಲಾ ವರ್ಗವೆಂದು ಎರಡು ಭಾಗ ಮಾಡಬಹುದು. ಈ ಮೇಲಿನ ಬೆಟ್ಟಗಳಲ್ಲಿ ಗ್ರಾನೈಟ್(ಹರಳುಶಿಲೆ) ಹೇರಳವಾಗಿ ದೊರೆಯುತ್ತದೆ, ಹಾಗೆಯೇ ಅಲ್ಲಲ್ಲಿ, ಕಾಂಗ್ಲಾಮರೇಟ್, ಬೆಣಚುಕಲ್ಲು ಅಥವಾ ಸ್ಫಟಿಕಾಂತರ ಶಿಲೆ(ಕ್ವಾರ್ಟಜೈಟ್), ಡೊಲರೈಟ್ ಡೈಕ್(ಕಪ್ಪು ಶಿಲೆ), ವಾಲ್ಕನಿಕ್‌ರಾಕ್ಸ (ಅಗ್ನಿಜನ್ಯ ಶಿಲೆ) ಸುಣ್ಣದಕಲ್ಲು, ಸೋಪ್‌ಸ್ಟೋನ್ (ನೀಲಿ ಛಾಯೆಯ ಹಸಿರು ಬಳಪದ ಕಲ್ಲು)ಗಳು ದೊರೆಯುತ್ತವೆ.

ಇಲ್ಲಿನ ಅರಣ್ಯ ಮನುಷ್ಯನಿಗೆ ಅವಶ್ಯಕವಾದ ಹಣ್ಣು ಹಂಪಲು, ಮರ ಮುಟ್ಟು, ಉರುವಲು, ಔಷಧಿಗೆ ಉಪಯುಕ್ತವಾದ ಗಿಡ, ನಾರು-ಬೇರುಗಳನ್ನು ಒದಗಿಸಿದರೆ ಇಲ್ಲಿನ ನದಿ, ಹಳ್ಳಗಳು ಮನುಷ್ಯನಿಗೆ ಅವಶ್ಯಕವಾಗಿ ಬೇಕಾದ ಜೀವಸೆಲೆ (ನೀರು)ಯನ್ನು ಒದಗಿಸಿ ಅವನ ಅವಶ್ಯಕತೆಗಳನ್ನು ಪೊರೈಸಿ ಅವನು ಇಲ್ಲಿ ನೆಲಸಿ ತನ್ನ ಸಂಸ್ಕೃತಿಯನ್ನು ರೂಪಿಸಿಕೊಳ್ಳಲು ಸಹಾಯಕವಾಗಿದೆ. ಅಲ್ಲದೇ ಈ ಮೇಲಿನ ರೀತಿಯ ಮಣ್ಣು ಅವನು ಕೃಷಿ ಚಟುವಟಿಕೆಗಳನ್ನು ಮಾಡಲು ಸಹಕಾರಿಯಾಯಿತು. ಅದೇ ಇಲ್ಲಿ ದೊರೆಯುವ ಖನಿಜ ಸಂಪತ್ತು ಅಂದಿನಿಂದ ಇಂದಿನವರೆಗೆ ವಿವಿಧ ರೀತಿಯಲ್ಲಿ ಅಂದರೆ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಉಪಯುಕ್ತವಾಗಿದೆ.

**ಜನರ ವೃತ್ತಿ ಮತ್ತು ಉಪ ವೃತ್ತಿಗಳು**

ತೇರದಾಳದಲ್ಲಿನ ಜನರ ಪ್ರಮುಖ ವೃತ್ತಿ ಕೃಷಿಯಾಗಿದೆ. ಇಲ್ಲಿನ ಭೂಮಿಯು ಮರಳು ಮಿಶ್ರಿತ ಕಪ್ಪು ಮಣ್ಣು ಮತ್ತು ಜಿಗುಟು ಮಣ್ಣಿನಿಂದ ಕೂಡಿದೆ. ಅಂದರೆ ಕೃಷ್ಣಾ ನದಿಯ ಬಯಲು ಪ್ರದೇಶದಲ್ಲಿ ಕಪ್ಪು ಮಿಶ್ರಿತ ಮರಳಿನಿಂದ ಕೂಡಿದ ಜೇಡಿ ಮಣ್ಣಿನ ಫಲವತ್ತಾದ ಪ್ರದೇಶವಿದ್ದರೆ ಉಳಿದಂತೆ ಕೆಂಪು ಮಣ್ಣಿನ ಪ್ರದೇಶವಿದೆ. ಈ ಪ್ರದೇಶದಲ್ಲಿ ವಾರ್ಷಿಕ ಮಳೆಯ ಪ್ರಮಾಣವು **೬೫೫.೫** ಮಿ.ಮೀಟರ್‌ನಷ್ಟಿದೆ.

ಇಲ್ಲಿನ ರೈತರು ಹೆಚ್ಚಾಗಿ ಮಳೆಯನ್ನೇ ಆಧರಿಸಿದ್ದಾರೆ. ಉಳಿದಂತೆ ಕೆರೆಗಳು, ಬಾವಿಗಳು ಮತ್ತು ಕೊಳವೆ ಬಾವಿಗಳಿಂದ ನೀರನ್ನು ಪಡೆದು ಕೃಷಿಯಲ್ಲಿ ತೊಡಗಿದ್ದಾರೆ. ಇತ್ತೀಚಿನ ಅಂಕಿ-ಅಂಶಗಳ ಪ್ರಕಾರ ತೇರದಾಳ ಪರಿಸರವು ಒಟ್ಟು **೯೪,೮೫೩** ಹೆಕ್ಟೇರ್ ಭೂಮಿಯನ್ನು ಹೊಂದಿದ್ದು, ಇದರಲ್ಲಿ **೪,೭೩೮** ಹೆಕ್ಟೇರ್ ಭೂಮಿ ಅರಣ್ಯದಿಂದ ಆವೃತವಾಗಿದೆ. ಸಾಗುವಳಿಗೆ ಲಭ್ಯವಿಲ್ಲದ ಭೂಮಿ **೯,೩೮೪** ಹೆಕ್ಟೇರ್ ಇದೆ. ಬಂಜರುಭೂಮಿ **೨,೭೮೯** ಹೆಕ್ಟೇರ್ ಇದೆ. ಸಾಗುವಳಿಗೆ ಯೋಗ್ಯವಾದ ಬಂಜರುಭೂಮಿ **೧೭,೪೮೧** ಹೆಕ್ಟೇರ್ ಇದ್ದರೆ ಒಟ್ಟು ಸಾಗುವಳಿಗೆ ಲಭ್ಯವಿರುವ ಭೂಮಿ **೬೯,೯೨೩** ಹೆಕ್ಟೇರ್ ಇದೆ. ಹಾಗೆಯೇ ತಾಲೂಕಿನ ಒಟ್ಟು ಭೂಮಿಯಲ್ಲಿ ೫,೦೫೨ ಹೆಕ್ಟೇರ್ ಪ್ರದೇಶದಲ್ಲಿ ಏತ ನೀರಾವರಿ, **೧೯೩೬** ಹೆಕ್ಟೇರ್ ಪ್ರದೇಶದಲ್ಲಿ ಕೆರೆ ನೀರಾವರಿ, ೩,೩೭೫ ಹೆಕ್ಟೇರ್ ಪ್ರದೇಶದಲ್ಲಿ ಕೊಳವೆ ಬಾವಿಯಿಂದ ಮತ್ತು **೫೯,೫೫೭** ಹೆಕ್ಟೇರ್ ಪ್ರದೇಶವು ಮಳೆಯಾಶ್ರಯದಿಂದ ಕೃಷಿಯನ್ನು ಕೈಗೊಂಡಿರುವುದು ಕಂಡುಬರುತ್ತದೆ ಹಾಗೂ ಬೇಸಿಗೆ ನೀರಾವರಿ ಯೋಜನೆಯಡಿ **೪,೪೫೦** ಹೆಕ್ಟೇರ್ ಭೂಮಿಯನ್ನು ಮೀಸಲಿಡಲಾಗಿದೆಸ[೨೧].

ಇವುಗಳೆಲ್ಲವನ್ನೂ ಗಮನಿಸಿದಾಗ ಇಲ್ಲಿ ಹೆಚ್ಚಾಗಿ ನೀರಾವರಿ ಬೇಸಾಯ ಪದ್ಧತಿ ಹೆಚ್ಚಾಗಿರುವುದು ಕಂಡುಬರುತ್ತದೆ. ಏತ ನೀರಾವರಿ ವ್ಯವಸ್ಥೆ, ಕೆರೆ ನೀರಾವರಿ ವ್ಯವಸ್ಥೆ, ಕೊಳವೆ ಬಾವಿಗಳಿಂದ ನೀರನ್ನು ಪಡೆಯುವ ವ್ಯವಸ್ಥೆ ಇದೆಯಾದರೂ ಈ ವ್ಯವಸ್ಥೆಯನ್ನು ಹೊಂದಿರುವ ಜನ ವರ್ಗವೇ ಬೇರೆಯಿದೆ. ಇಲ್ಲಿ ಮುಖ್ಯವಾಗಿ ಏಕದಳ, ದ್ವಿದಳ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಹತ್ತಿ, ಜೋಳ, ಅರಿಶಿಣ, ಕಬ್ಬು, ಗೋಧಿ, ಶೇಂಗಾ, ಮೆಣಸಿನಕಾಯಿ, ಸೂರ್ಯಕಾಂತಿ, ಅವರೇಕಾಯಿ, ಅಲಸಂದಿ, ಮುಸುಕಿನ ಜೋಳ, ತೊಗರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಜೊತೆಗೆ ತೋಟಗಾರಿಕಾ ಬೆಳೆಗಳಾದ ಹಣ್ಣು, ತರಕಾರಿ, ವೀಳ್ಯದ ಎಲೆ, ಬಾಳೆ, ಸೇವಂತಿಗೆ, ಚೆಂಡು ಹೂವು ಮುಂತಾದವುಗಳನ್ನು ಸಹ ಬೆಳೆಯುತ್ತಾರೆ. ಕಾಲ ಬದಲಾದಂತೆ ಜನರ ಜೀವನ ಕ್ರಮವೂ ಬದಲಾಗತೊಡಗುತ್ತದೆ. ಹಾಗಾಗಿ ಇಂದು ಎಲ್ಲ ಬೆಳೆಗಳು ಸಹ ವಾಣಿಜ್ಯೀಕರಣದ ದೃಷ್ಟಿಯಿಂದ ಬೆಳೆಯುತ್ತಾರೆ. ಇಲ್ಲಿನ ಬಹುತೇಕ ಜನರ ಮುಖ್ಯ ಉದ್ಯೋಗ ಕೃಷಿಯಾಗಿದೆ. ಕೃಷ್ಣಾ ಮತ್ತು ಅದರ ಉಪನದಿಗಳ ಹಾಗೂ ಹಳ್ಳ, ಕೆರೆಗಳ ನೀರನ್ನು ಬಳಸಿಕೊಂಡು ಇಲ್ಲವೆ ಮಳೆಯಾಶ್ರಿತ ನೀರಿನ ಸಹಾಯದಿಂದ ಕೃಷಿಕರು ವ್ಯವಸಾಯ ಕೈಗೊಂಡಿದ್ದಾರೆ. ಕೃಷಿಯೊಂದಿಗೆ ಇಲ್ಲಿನ ರೈತರು ಹೈನುಗಾರಿಕೆ, ಪಶುಪಾಲನೆಯಂತಹ ಕೆಲ ಉಪ ವೃತ್ತಿಗಳನ್ನು ತಮ್ಮ ಹೆಚ್ಚಿನ ಆದಾಯಕ್ಕಾಗಿ ಆಯ್ಕೆ ಮಾಡಿಕೊಂಡಿದ್ದಾರೆ. (ಕೃಷಿ ನೀರಾವರಿಗೆ ಸಂಬಂಧಿಸಿದ ಮಾಹಿತಿ)

ಈ ರೀತಿಯ ಎಲ್ಲ ಸವಲತ್ತುಗಳು ಈ ಭೂಭಾಗದಲ್ಲಿ ಇದ್ದಿದ್ದರಿಂದ ತೇರದಾಳ, ಹನಂಗಡಿ, ಮದನಮಟ್ಟಿ, ಹಳಿಂಗಳಿ, ಆಸಂಗಿ ಮೊದಲಾದ ಸ್ಥಳಗಳಲ್ಲಿ ಆದಿಶಿಲಾಯುಗದಿಂದ ಆದಿಮಾನವನು ವಾಸಿಸಿದ್ದಾನೆ. ಅಲ್ಲದೆ ಮುಂದೆ ಅಂದರೆ ಚಾರಿತ್ರಿಕ ಕಾಲದಲ್ಲಿ ಚಾಳುಕ್ಯ, ಹೊಯ್ಸಳ, ರಟ್ಟರು, ಶಿಲಾಹರರು, ಯಾದವರು, ವಿಜಯನಗರ, ಆದಿಲ್‌ಶಾಹಿಗಳು, ತೇರದಾಳದ, ನಾಡಗೌಡರು, ದೇಸಗತಿ ನಾಯಕರು ಸೇರಿದಂತೆ ಇತರೆ ಪ್ರಬಲ ರಾಜ್ಯಗಳನ್ನು ಕಟ್ಟಲು ಇಲ್ಲಿನ ಭೌಗೋಳಿಕ ಪರಿಸರವು ಸಹಕಾರಿಯಾಯಿತು. ಇದರಿಂದಾಗಿಯೇ ತೇರದಾಳ ಮತ್ತು ಅದರ ಸುತ್ತಲಿನ ನೆಲೆಗಳಲ್ಲಿ ಮನುಷ್ಯ ಪ್ರಾಗೈತಿಹಾಸಿಕ ಕಾಲದಿಂದ ಇತಿಹಾಸ ಕಾಲದಲ್ಲೂ ವಾಸಿಸುತ್ತ ಆ ಪರಂಪರೆ ಇಂದಿಗೂ ಮುಂದುವರಿಯಲು ಕಾರಣವಾಗಿದೆ[೨].

ಬೆಟ್ಟಗಳಿಂದ ಸುತ್ತುವರಿದ ಎತ್ತರವಾದ ಈ ಭೂ ಪ್ರದೇಶ ಪ್ರಕೃತಿದತ್ತ ಸುರಕ್ಷತೆಯನ್ನು ನೀಡಿವೆ. ಇಂತಹ ಬೆಟ್ಟಗಳ ಸಾಲಿನಲ್ಲಿ ನದಿ, ಸಣ್ಣನದಿ, ಹಳ್ಳಗಳು ಹರಿಯುವುದು ಸಾಮಾನ್ಯ ಈ ನೀರಿನ ಪ್ರದೇಶದ ಆಸುಪಾಸಿನಲ್ಲಿ ಇರುವ ಫಲವತ್ತಾದ ಮಣ್ಣಿನಿಂದಾಗಿ ಕೃಷಿಗೆ ಯೋಗ್ಯವಾದ ಪ್ರದೇಶ ದೊರಕಿದೆ. ಮಣ್ಣು ಫಲವತ್ತಾದರೂ ಇಲ್ಲಿ ಮಳೆ ಕಡಿಮೆಯಾದದ್ದರಿಂದ ಇತ್ತೀಚಿನವರೆಗೂ ಈ ಪ್ರದೇಶ ಒಣ ಬೇಸಾಯಕ್ಕೆ ಒಳಪಟ್ಟಿತ್ತು. ಆದರೆ ಕೃಷ್ಣಾನದಿ ಆಣೆಕಟ್ಟು ಮತ್ತು ಕೆಲ ಕೆರೆಗಳ ನಿರ್ಮಾಣದಿಂದ ಹಾಗೂ ಕೊಳವೆ ಬಾವಿಗಳಿಂದಾಗಿ/ತೋಡಿದ ಕಾಲುವೆಗಳಿಂದಾಗಿ ಇಂದು ಈ ಭೂಭಾಗ ನೀರಾವರಿ ಭೂಮಿಯಾಗಿದೆ. ಇಲ್ಲಿಯ ಭೂ ಭೌತಿಕ ಸ್ವರೂಪ ಇಲ್ಲಿ ದೊರೆಯುವ ಅದಿರು, ಖನಿಜ, ಶಿಲಾಸ್ತೋಮ, ಮಣ್ಣು, ಸಸ್ಯಗಳು ಮಾನವನಿಗೆ ಸಹಕಾರಿಯಾಗಿದ್ದವು. ಇದುವೇ ಪ್ರಾಚೀನ ಮನುಷ್ಯ ಬೇಟೆ ಸಂಸ್ಕೃತಿಯಿಂದ ಒಕ್ಕಲು ಸಂಸ್ಕೃತಿ ಆರಂಭಿಸಲು, ಒಕ್ಕಲು ಸಂಸ್ಕೃತಿಯಿಂದ ರಾಜ ಮನೆತನಗಳನ್ನು ಕಟ್ಟುವ ಸಂಸ್ಕೃತಿಗೆ ಪ್ರೇರಣೆಯಾಯಿತು.

ಒಟ್ಟಾರೆ ಹೇಳುವುದಾದರೆ ಭೌಗೋಳಿಕವಾಗಿ ಇದು ಪ್ರಾಚೀನ ಪ್ರದೇಶವಾಗಿದ್ದು, ವಿಶಾಲವಾಗಿ ಹರಡಿಕೊಂಡಿದೆ. ಇಲ್ಲಿ ಹರಿಯುವ ಕೃಷ್ಣಾ ಮತ್ತು ಅದರ ಉಪ ನದಿಗಳು ಹಲವು ರೀತಿಯಲ್ಲಿ ಜನಜೀವನದ ಮೇಲೆ ಪ್ರಭಾವ ಬೀರಿದೆ. ಅಲ್ಲದೆ ಅನೇಕ ಸಂಸ್ಕೃತಿಗಳ ಏಳ್ಗೆಗೂ ಕಾರಣವಾಗಿದೆ. ಇಲ್ಲಿನ ಬೆಟ್ಟಗುಡ್ಡಗಳಲ್ಲಿ ದೊರೆಯುವ ನೀರನ್ನು ಆಧರಿಸಿ ಆದಿಮಾನವ ಈ ಸ್ಥಳವನ್ನು ಆಯ್ಕೆ ಮಾಡಿಕೊಂಡನು. ವ್ಯವಸಾಯದ ಕಸುಬನ್ನು ಆತ ಕರಗತ ಮಾಡಿಕೊಂಡ ನಂತರ ಈ ಸ್ಥಳಗಳಲ್ಲಿದ್ದ ಉತ್ತಮವಾದ ಭೂಮಿ ವ್ಯವಸಾಯಕ್ಕೆ ಆಸರೆಯಾಯಿತು. ಇದು ಮುಂದೆ ಹಲವು ಸಂಸ್ಕೃತಿಗಳ ಉಗಮಕ್ಕೆ ಕಾರಣವಾಯಿತು. ಫಲವತ್ತಾದ ಭೂಮಿ, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ಕೃಷ್ಣಾ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಕಾಡು ಮೊದಲಾದ ಭೌಗೋಳಿಕ ಅನುಕೂಲತೆಗಳಿಂದ ಇಲ್ಲಿ ಪ್ರಾಗೈತಿಹಾಸ ಕಾಲದಿಂದಲೂ ಮಾನವ ವಾಸಿಸಿದನು ಮತ್ತು ಮುಂದೆ ರಾಜ್ಯ, ಸಾಮ್ರಾಜ್ಯಗಳನ್ನು ಕಟ್ಟಿದ ಅರಸರಿಗೆ ಇಲ್ಲಿನ ಭೌಗೋಳಿಕ ಪರಿಸರವೇ ಅವರ ಕೀರ್ತಿಪತಾಕೆ ಹೆಚ್ಚಿಸಿಕೊಳ್ಳಲು ಸಹಾಯಕವಾಯಿತು. ಅವರು ದೇವಾಲಯ, ಅರಮನೆ, ಗುರುಮನೆ, ವಾಸದ ಕಟ್ಟಡಗಳನ್ನು ಶಿಲ್ಪಗಳನ್ನು ನಿರ್ಮಿಸಲು, ತನಗೆ ಬೇಕಾದ ಆಯುಧೋಪಕರಣಗಳನ್ನು ತಯಾರಿಸಿಕೊಳ್ಳಲು ಹಾಗೂ ತಮ್ಮ ರಾಜಾಜ್ಞೆಗಳನ್ನು ಹೊರಡಿಸಲು ಬೇಕಾದ ಕಚ್ಚಾವಸ್ತುಗಳಾದ ಶಿಲೆ, ಲೋಹ, ಮಣ್ಣು ಹಾಗೂ ಮರ ಮುಟ್ಟುಗಳನ್ನು ಒಂದೆಡೆ ಒದಗಿಸಿತು. ಇನ್ನೊಂದಡೆ ಇಲ್ಲಿನ ಫಲವತ್ತಾದ ಭೂಪ್ರದೇಶ ಅವನು ಕೃಷಿಯನ್ನು ಕಂಡುಕೊಂಡು ವಿವಿಧ ಆಹಾರದ ಬೆಳೆಗಳನ್ನು ಬೆಳೆಯಲು ಸಹಾಯಕವಾಯಿತು.

ಮತ್ತೊಂದಡೆ ಇಲ್ಲಿನ ನೈಸರ್ಗಿಕ ಪರಿಸರ ತಾಯಿ ಮಗುವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಸಂರಕ್ಷಿಸುವಂತೆ ಇಡೀ ಮನುಕುಲವನ್ನು ಇಲ್ಲಿನ ಬೆಟ್ಟಗುಡ್ಡಗಳು ರಕ್ಷಿಸಿ ಮಾನವನ ಅಭಿವೃದ್ಧಿಗೆ ಮತ್ತು ಸಂಸ್ಕೃತಿ ಪ್ರಸರಣಕ್ಕೆ ನೇರವಾಗಿ ಕಾರಣವಾಯಿತು. ಅದರಂತೆ ಇಲ್ಲಿನ ಪರಿಸರದಲ್ಲಿರುವ ಬೃಹತ್ ಏಕಶಿಲಾ ಬೆಟ್ಟಗಳು, ದೊಡ್ಡ ದೊಡ್ಡ ಗ್ರಾನೈಟ್ ಕಲ್ಲುಗುಂಡಗಳ ರಾಶಿಯನ್ನು ಹೊದ್ದುಕೊಂಡಿರುವ ಬೆಟ್ಟಸಾಲುಗಳು, ನಿಸರ್ಗ ನಿರ್ಮಿತವಾದ ಬೃಹತ್ ಗವಿಗಳು, ಕಂದರಗಳು, ಏಕಶಿಲಾ ಬೆಟ್ಟಗಳು, ಬಂಡೆಗಳ ಕಡಿದಾದ ಇಳಿಜಾರುಗಳು ಇಲ್ಲಿನ ನಿಸರ್ಗ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿವೆ. ಬೆಟ್ಟಗುಡ್ಡಗಳ ನಡುವೆ ನುಸುಳಿ ಹರಿಯುವ ಇಲ್ಲಿನ ಹಳ್ಳ ಮತ್ತು ನದಿಗಳು ಹಾಗೂ ಮಾನವ ನಿರ್ಮಿತ ಕೆರೆಗಳು ಈ ಪ್ರದೇಶಕ್ಕೆ ಮತ್ತೊಂದು ವರದಾನವಾಗಿವೆ. ಇಂದಿಗೂ ಈ ಪ್ರದೇಶದಲ್ಲಿ ಹಲವಾರು ಅಪರೂಪದ ಪ್ರಾಣಿವರ್ಗ ಹಾಗೂ ಸಸ್ಯವರ್ಗ ಕಂಡು ಬರಲು ಇದು ಕಾರಣವಾಗಿದೆ. ಇಲ್ಲಿ ಹಲವಾರು ಅಪರೂಪದ ಗಿಡಮೂಲಿಕೆಗಳು ಇರುವುದಾಗಿ ಹಲವಾರು ದೇಶ ವಿದೇಶಗಳ ಔಷಧ ತಜ್ಞರು ಹಾಗೂ ಸಂಶೋಧಕರು ದೃಢಪಡಿಸುತ್ತಾರೆ. ಜೈನ ಮುನಿಗಳಾದ ಶ್ರೀ ೧೦೮ ಕುಲರತ್ನ ಭೂಷಣ ಮಾಹಾರಾಜರು ಹಳಿಂಗಳಿಯ ಭದ್ರಗಿರಿ ಬೆಟ್ಟದಲ್ಲಿ ಸಾವಿರಾರು ಅಪರೂಪದ ಗಿಡಮೂಲಿಕೆಗಳು ಹಾಗೂ ಔಷಧಿ ಸಸ್ಯಗಳನ್ನು ಬೆಳೆಸಿದ್ದಾರೆ. ಇದರಿಂದಾಗಿ ಈ ಪ್ರದೇಶದಲ್ಲಿ ಹಲವಾರು ಸಾಧು ಸಂತರು ಮತ್ತು ಜನಪದರು ನಾಟಿ ವೈದ್ಯ ಪದ್ಧತಿಯನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿದ್ದಾರೆ ಇದಕ್ಕೆ ಇಲ್ಲಿನ ಉತ್ತಮ ಪರಿಸರವೇ ಕಾರಣವಾಗಿದೆ.

ಈ ಪ್ರದೇಶವು ನದಿ ಬಯಲಿನ ಪ್ರದೇಶವಾದ್ದರಿಂದ ಇಲ್ಲಿ ವಿವಿಧ ಸಮುದಾಯಗಳು ತಮ್ಮ ನೆಲೆಯನ್ನು ಕಂಡುಕೊಂಡಿವೆ. ಅವರಲ್ಲಿ ವಿಶೇಷವಾಗಿ ಪಶುಸಂಗೋಪನಾ ವೃತ್ತಿಯ ಮತ್ತು ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಕುರುಬರು, ಲಂಬಾಣಿಗರು, ಗೊಲ್ಲರು, ಬೇಡರು ಈ ಪ್ರದೇಶದಲ್ಲಿ ಹೇರಳವಾಗಿ ಕಂಡುಬರುತ್ತಾರೆ. ಕಾರಣ ಅವರಿಗೆ ಅನುಕೂಲವಾದ ನೀರು ಮತ್ತು ಹುಲ್ಲು ಇಲ್ಲಿನ ಪರಿಸರದಲ್ಲಿ ಹೇರಳವಾಗಿ ದೊರೆಯುತ್ತದೆ. ಅದೇ ರೀತಿ ಬೇಟೆಯಾಡಲು ಅನುಕೂಲವಾದ ಅರಣ್ಯ ಪ್ರದೇಶ ಹಾಗೂ ಪ್ರಾಣಿವರ್ಗ ಇಲ್ಲಿ ಹೆಚ್ಚಾಗಿದುದ್ದರಿಂದ ಬೇಡರು, ಅಡವಿ ಚುಂಚರು, ಮ್ಯಾಸ ಬೇಡರು, ಹಕ್ಕಿಪಿಕ್ಕಿಗಳು, ಕೊರಚರು ಮುಂತಾದ ಬುಡಕಟ್ಟು ಸಮುದಾಯಗಳು ಮತ್ತು ಪಶುಪಾಲಕ ಸಮುದಾಯಗಳು ಈ ಪ್ರದೇಶದಲ್ಲಿ ಬಹು ಹಿಂದಿನಿಂದ ಇಲ್ಲಿ ನೆಲೆನಿಂತಿವೆ. ಇದಕ್ಕೆ ಇಲ್ಲಿನ ಭೌಗೋಳಿಕ ಪರಿಸರವೇ ಬಹು ಮುಖ್ಯ ಕಾರಣವಾಗಿದೆ.

ಪ್ರಕೃತಿ ಮಾನವನಿಗೆ ಸದಾ ಉಪಕಾರವನ್ನು ಮಾಡುತ್ತಲೇ ಬಂದಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ದೊರೆಯುವ ಶಿಲೆ (ಗ್ರಾನೈಟ್, ಸೋಪ್ ಸ್ಟೋನ್ ಇತ್ಯಾದಿ) ಮರ (ಹೊನ್ನೆ, ಬೀಟೆ, ಶ್ರೀಗಂಧ ಇತ್ಯಾದಿ) ಸುಣ್ಣದಕಲ್ಲು, ಜೇಡಿಮಣ್ಣು ಇವುಗಳು ಒಂದಲ್ಲಾ ಒಂದು ರೀತಿ ದೇವಾಲಯದ ನಿರ್ಮಾಣದಲ್ಲಿ ಸಹಕಾರಿಯಾಗಿವೆ. ಹಾಗೇಯೇ ಅನೇಕ ದೇವಾಲಯ ಮತ್ತು ಮೂರ್ತಿ ಶಿಲ್ಪಗಳನ್ನು ನಿರ್ಮಿಸಲು ಈ ಭೌತಿಕ ಪರಿಸರವೇ ಸ್ಫೂರ್ತಿ ನೀಡಿದೆ. ಅಂದಿನಿಂದ ಇಂದಿನವರೆಗೂ ಪರಿಸರವನ್ನು ಅವಲಂಬಿಸಿಯೇ ಮಾನವ ಜೀವನ ಸಾಗಿಸುತ್ತಿದ್ದಾನೆ. ತೇರದಾಳ ಜಿಲ್ಲೆಯ ವ್ಯಾಪ್ತಿಯಲ್ಲಿ ಇರುವ ಅಸಂಖ್ಯಾತ ಸ್ಮಾರಕ/ದೇವಾಲಯಗಳು ಹಾಗೂ ಮೂರ್ತಿಗಳ ನಿರ್ಮಾಣಕ್ಕೆ ರಾಜರು, ಶಿಲ್ಪಿಗಳು, ಕೂಲಿಗಳು ನೇರವಾಗಿ ಕಾರಣಕರ್ತರಾದರೆ, ಅದಕ್ಕಿಂತಲೂ ಹೆಚ್ಚಾಗಿ ಪರೋಕ್ಷವಾಗಿ ಪ್ರಕೃತಿ ತನ್ನಲ್ಲಿನ ಕಚ್ಚಾವಸ್ತುಗಳನ್ನು ಇಂತಹ ಕೆಲಸಕ್ಕಾಗಿ ಒದಗಿಸಿದೆ. ಈ ಭೌಗೋಳಿಕ ಪರಿಸರದ ಪ್ರಭಾವ ಇಲ್ಲಿನ ಸ್ಮಾರಕ ನಿರ್ಮಾಣದಲ್ಲಿ ಬಿಂಬಿತವಾಗಿರುವುದನ್ನು ನಾವು ಕಾಣಬಹುದು.

### ೨.೪ ತೇರದಾಳ ಪರಿಸರದ ಚರಿತ್ರೆ : ರಾಜಕೀಯ ಮತ್ತು ಆಡಳಿತ ವ್ಯವಸ್ಥೆ

ಸೃಷ್ಟಿಯಲ್ಲಿ ಮಾನವನಿಗೆ ಒಂದು ಸುಧೀರ್ಘವಾದ ಇತಿಹಾಸವಿದೆ. ಸುಮಾರು ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಮನುಷ್ಯ ಜೀವಿಸಿದ್ದ ಎನ್ನುವುದಕ್ಕೆ ಸಾಕ್ಷ್ಯಾಧಾರಗಳಿವೆ[೨೩]. ಏಷ್ಯಾ ಖಂಡದಲ್ಲಿಯೇ ಅತಿ ಪ್ರಾಚೀನ ಪ್ರಾಗೈತಿಹಾಸಿಕ ನಿವೇಶನ ಮತ್ತು ಚರಿತ್ರೆ ಹೊಂದಿದ ಹೆಗ್ಗಳಿಕೆ ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಿಗಿದೆ. ಈ ಜಿಲ್ಲೆಗಳ ವ್ಯಾಪ್ತಿಯಲ್ಲಿನ ಕೆಲ ಪ್ರಾಗೈತಿಹಾಸಿಕ ನೆಲೆಗಳಲ್ಲಿ ದೊರೆತ ಕೆಲವು ಅವಶೇಷಗಳು ಅಂದಿನ ಕಾಲದ ಜನ ಜೀವನಕ್ಕೆ ಸಾಕ್ಷಿಗಳಾಗಿವೆ. ಅದೇ ರೀತಿ ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವು ರಾಜಮನೆತನಗಳು ಹಾಗೂ ಸಾಮಂತರು ಚಾರಿತ್ರಿಕ ಕಾಲದಲ್ಲಿ ಆಳ್ವಿಕೆ ನಡೆಸಿ ಅಮರರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ತೇರದಾಳ ಪರಿಸರದಲ್ಲಿನ ಪ್ರಾಗೈತಿಹಾಸಿಕ ವೈಶಿಷ್ಟತೆ ಮತ್ತು ಚಾರಿತ್ರಿಕ ಕಾಲಘಟ್ಟದಲ್ಲಿನ ವಿವಿಧ ರಾಜಮನೆತನಗಳು ಹೊಂದಿದ್ದ ಸ್ಥಾನ ಮಾನಗಳ ಕುರಿತು ಮತ್ತು ಅವರ ಕೊಡುಗೆಗಳ ಕುರಿತು ಈ ಮುಂದೆ ವಿವರಿಸಲಾಗಿದೆ.

#### ಪ್ರಾಗೈತಿಹಾಸಿಕ ಹಿನ್ನೆಲೆಯಲ್ಲಿ ಮಾನವ ಸಂಸ್ಕೃತಿ

ಮನುಷ್ಯ ಬರವಣಿಗೆಯನ್ನು ಕಂಡುಕೊಳ್ಳುವ ಮೊದಲು ಅವನ ಜೀವನದ ರೀತಿ ನೀತಿಗಳು ಅಷ್ಟೇನೂ ಸುಧಾರಿಸದೇ ಇದ್ದ ಕಾಲಾವಧಿಯನ್ನು ಸರಳವಾಗಿ ಇತಿಹಾಸ ಪೂರ್ವ

ಕಾಲ, ಇಲ್ಲವೇ ಪ್ರಾಗೈತಿಹಾಸಿಕ ಕಾಲವೆಂದು ಕರೆಯಲಾಗುತ್ತದೆ[೨೧]. ಈ ಅವಧಿಯಲ್ಲಿ ಅರಣ್ಯದಲ್ಲಿ ವಾಸವಾಗಿದ್ದ ಮಾನವ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆಹಾರಕ್ಕಾಗಿ ಅಲೆಯುತ್ತಿದ್ದನು. ಇದನ್ನು **'ಪುಡ್ ಅಂಡ್ ಗ್ಯಾದರಿಂಗ್ ಸ್ಟೇಜ್'** ಎಂದು ಗುರುತಿಸಲಾಗಿದೆ. ಬಾಗಲಕೋಟೆ ಜಿಲ್ಲೆಯ ತೇರದಾಳ ಪರಿಸರದ ವ್ಯಾಪ್ತಿಯಲ್ಲಿ ಕೆಲವು ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿದ್ದು ಅವುಗಳಲ್ಲಿ ಆ ಕಾಲದ ಮನುಷ್ಯ ಉಪಯೋಗಿಸಿ ಬಿಟ್ಟು ಹೋದ ಕೆಲವು ಅವಶೇಷಗಳು ದೊರೆತಿವೆ ಅವು ಅವನ ಜೀವನಕ್ರಮದ ಕುರುಹುಗಳಾಗಿವೆ.

ಮಾನವನ ಪ್ರಾಗೈತಿಹಾಸಿಕ ಕಾಲಘಟ್ಟವನ್ನು (ಅವನ ಆರಂಭಿಕ ಕಾಲಘಟ್ಟದಿಂದ ಆದಿ ಇತಿಹಾಸ ಕಾಲದವರೆಗೆ) ಅಧ್ಯಯನದ ಅನುಕೂಲಕ್ಕಾಗಿ **ಶಿಲಾಯುಗ (ಸ್ಟೋನೇಜ್)** ಮತ್ತು **ಲೋಹಯುಗ (ಮೇಟಲ್ ಏಜ್)** ಎಂಬ ಎರಡು ಪ್ರಧಾನ ಕಾಲಘಟ್ಟಗಳಾಗಿ ವಿಭಾಗಿಸಲಾಗಿದೆ. ಲೋಹದ ಬಳಕೆ ಆರಂಭವಾಗುವವರೆಗೆ ಶಿಲೆಯನ್ನೆ ಮಾನವ ಅವಲಂಬಿಸಿದ್ದ ಕಾಲಾವಧಿಯನ್ನು ಶಿಲಾಯುಗ (ಸ್ಟೋನೇಜ್) ಎಂದು ಕರೆಯುತ್ತಾರೆ[೨೫]. ಈ ಎರಡು ಯುಗಗಳನ್ನು **ಹಳೇ ಶಿಲಾಯುಗ(ಪೆಲಿಯೋಲಿಥಿಕ್), ಸೂಕ್ಷ್ಮ ಶಿಲಾಯುಗ (ಮೆಸೋಲಿಥಿಕ್), ನವಶಿಲಾಯುಗ (ನಿಯೋಲಿಥಿಕ್), ಶಿಲಾತಾಮ್ರಯುಗ (ಚಾಲ್ಕೋಲಿಥೀಕ್), ಬೃಹತ್ ಶಿಲಾಯುಗ (ಮೆಗಾಲಿಥಿಕ್/ಕಬ್ಬಿಣಯುಗ)** ಎನ್ನುವ ಕಾಲಘಟ್ಟಗಳಾಗಿ ವಿಭಾಗಿಸಲಾಗಿದೆ.

ಇಂದಿನ ಬಾಗಲಕೋಟೆ ಜಿಲ್ಲೆಯ ಈ ಕಾಲದ ಮಾನವನ ಜೀವನ ಕ್ರಮವನ್ನು ಅರಿತುಕೊಳ್ಳಲು ಅನೇಕ ವಿದ್ವಾಂಸರು ಮುಂದಾಗಿದ್ದು ಅವರಲ್ಲಿ ಬ್ರಿಟಿಷ್ ಭೂವಿಜ್ಞಾನಿಯಾದ ರಾಬರ್ಟ್ ಬ್ರೂಸ್ ಪುಟ್ ಮೊದಲಿಗರು. ಅವರಿಗೆ ಭಾರತದ ಪ್ರಾಗೈತಿಹಾಸಿಕ ಅಧ್ಯಯನದ ಪಿತಾಮಹ ಎಂಬ ಹೆಗ್ಗಳಿಕೆ ಇದೆ. ಮುಂದೆ ಏಳು ದಶಕಗಳ ನಂತರ ಕ್ರಿ.ಶ.೧೯೪೪ರಲ್ಲಿ ಲಂಡನ ವಿಶ್ವವಿದ್ಯಾಲಯದ ಝುಯಿನರ್ ಎಫ್.ಇ. ಮತ್ತು ಎಚ್.ಡಿ. ಸಂಕಾಲಿಯಾ, ಶ್ರೀ ಆರ್.ವ್ಹಿ ಜೋಶಿ, ಅ. ಸುಂದರ, ನಾರಾಯಣಬಾಬು ಮೊದಲಾದವರು ಕೃಷ್ಣಾ ನದಿಯ ಬಯಲು ಪ್ರದೇಶದಲ್ಲಿ ಸರ್ವೇಕ್ಷಣ ನಡೆಸಿ, ಪ್ರಾಗೈತಿಹಾಸಿಕ ಕಾಲಕ್ಕೆ ಸೇರಿದ ನೂರಾರು ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ[೨೬].

ಇಂದಿನ ಬಾಗಲಕೋಟೆ ಜಿಲ್ಲೆಯ ತೇರದಾಳ ಪರಿಸರದಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಪುರಾವೆಗಳು ನಮಗೆ ಲಭ್ಯವಾಗಿವೆ. ತೇರದಾಳ, ಹಿಪ್ಪರಗಿ, ಕುಲ್ಲೊಳ್ಳಿ, ಕಡ್ಲಿಪಲ್ಲಿ, ಕೃಷ್ಣ ನದಿ ದಂಡೆ ಪ್ರದೇಶ, ಮದನಮಟ್ಟಿ, ಭದ್ರಗಿರಿ, ಕುಡಚಿ, ರಬಕವಿ, ಆಸಂಗಿ, ಅಸ್ಕಿ, ಬನಹಟ್ಟಿ, ಹನಗಂಡಿ, ಹಳಿಂಗಳಿ, ಮೊದಲಾದ ಕಡೆ ಆದಿಹಳೆಯ ಶಿಲಾಯುಗ, ನೂತನ ಶಿಲಾಯುಗ, ಶಿಲಾತಾಮ್ರಯುಗ ಮತ್ತು ಬೃಹತ್ ಶಿಲಾಯುಗಗಳ ಸಂಸ್ಕೃತಿಯ ಕುರುಹುಗಳು ದೊರೆತಿರುವುದು ವಿಶೇಷವಾಗಿದೆ. ಇವುಗಳ ಆಧಾರದಿಂದ ಮೇಲಿನ ನೆಲೆಗಳು ಪ್ರಾಚೀನ ಮಾನವನ ಆವಾಸ ಸ್ಥಾನಗಳಾಗಿದ್ದವೆಂದು ಹೇಳಬಹುದು[೨೭]

ಶಿಲಾಯುಗದ ಮಾನವನು ಇಲ್ಲಿನ ವಿವಿಧ ಸ್ಥಳಗಳನ್ನು ತನ್ನ ನಿವಾಸಕ್ಕಾಗಿ ಆರಿಸಿಕೊಳ್ಳುವಲ್ಲಿ ಇಲ್ಲಿಯ ನಿಸರ್ಗದತ್ತ ಪರಿಸರವೇ ಮುಖ್ಯ ಕಾರಣ. ಇಲ್ಲಿನ ಭೂ-ಭಾಗವೂ ದೊಡ್ಡ, ಸಣ್ಣ ಬಂಡೆಗಳು, ಗುಡ್ಡಗಳು, ಗುಡ್ಡ, ಬೆಟ್ಟಗಳು, ವಿಸ್ತಾರವಾದ ಹಾಸು ಬಂಡೆಗಳ ನಡುವೆ ಗುಡ್ಡಗಳಿದ್ದು, ಶಿಲಾಯುಗದ ಮಾನವನಿಗೆ ಅನುಕೂಲಕರವಾದ ನೆರಳಿನ ಆಶ್ರಯವನ್ನು ಒದಗಿಸಿದ್ದವು. ಅಲ್ಲದೇ ಇಲ್ಲಿ ಹರಿಯುವ ನದಿ ಮತ್ತು ಅದನ್ನು ಕೂಡಿಕೊಳ್ಳುವ ಚಿಕ್ಕ-ಚಿಕ್ಕ ಹಳ್ಳ,

ತೊರೆಗಳು ಅವರ ಜೀವನಾವಶ್ಯಗಳಲ್ಲಿ ಒಂದಾದ ನೀರನ್ನು ಒದಗಿಸುತ್ತಿದ್ದವು. ಹಿಂದೆ ಇಲ್ಲಿನ ಹಳ್ಳ, ಕೊಳ್ಳ, ಕಣಿವೆ, ಗುಡ್ಡ ಗುಹೆ ಮುಂತಾದವುಗಳಲ್ಲಿ ಎಲೆಬಳ್ಳಿ, ಗಡ್ಡೆ, ಗೆಣಸು, ಹಣ್ಣು, ನೀರು ಮುಂತಾದವುಗಳು ಹೇರಳವಾಗಿ ಹಾಗೂ ಸುಲಭವಾಗಿ ದೊರೆಯುತ್ತಿದ್ದಿರಬೇಕು ಮತ್ತು ತನ್ನ ಉಪಯೋಗಕ್ಕೆ ಬೇಕಾದ ಕಲ್ಲಿನ ಆಯುಧಗಳನ್ನು ನಿರ್ಮಿಸಲು ಸರಿಯಾದ ಗಟ್ಟಿಯಾದ ಕಲ್ಲುಗಳು ಬೆಣಚು ಕಲ್ಲುಗಳು ಮುಂತಾದವುಗಳು ಹೇರಳವಾಗಿ ಸ್ಥಳದಲ್ಲಿಯೇ ಲಭಿಸುತ್ತಿದ್ದವು. ಅಲ್ಲಲ್ಲಿ ಕಾಣಬರುವ ಗುಹೆಗಳು ಛಾವಣಿ ಇರುವ ಬಂಡೆಗಳು ಅವನನ್ನು ಮಳೆ, ಗಾಳಿ, ಬಿಸಿಲುಗಳಿಂದ ರಕ್ಷಿಸುತ್ತಿದ್ದವು ಮತ್ತು ವಿಶ್ರಾಂತಿ ಸಮಯದ ಚಟುವಟಿಕೆಗಳಿಗೆ ಅನುಕೂಲ ತಾಣಗಳಾಗಿದ್ದವು ಈ ಎಲ್ಲಾ ಕಾರಣಗಳಿಂದಾಗಿ ತೇರದಾಳ ಪರಿಸರ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು ಶಿಲಾಯುಗದ ಮಾನವನ ಚಟುವಟಿಕೆಗಳ ಆಶ್ರಯ ತಾಣಗಳಾದವು. ತೇರದಾಳ ಪರಿಸರದಲ್ಲಿ ದೊರೆತ ವಿವಿಧ ನಮೂನೆಯ ಪಾಚ್ಯ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಪ್ರಾಗೈತಿಹಾಸಿಕ ಕಾಲದ ಜನಜೀವನದ ಮೇಲೆ ಬೆಳಕು ಚೆಲ್ಲಬಹುದು. ಇವುಗಳ ಆಧಾರದ ಮೇಲೆ ಬಾಗಲಕೋಟೆ/ಬಿಜಾಪುರ ಜಿಲ್ಲೆ ಮತ್ತು ಕರ್ನಾಟಕದಲ್ಲಿ ಆದಿಮಾನವ ಸಂಸ್ಕೃತಿ ಹೇಗೆ ಬೆಳವಣಿಗೆ ಹೊಂದಿತು ಎಂಬುದನ್ನು ಈ ಮುಂದಿನಂತೆ ಗಮನಿಸಬಹುದಾಗಿದೆ.

**ಹಳೆ ಶಿಲಾಯುಗ (ಪ್ಯಾಲಿಯೋಲಿಥಿಕ್)**

ಕ್ರಿ.ಪೂ.ಸು.೨,೫೦,೦೦೦ ದಿಂದ ಕ್ರಿ.ಪೂ.೧,೦೦,೦೦೦ ಗ್ರೀಕ್ ಭಾಷೆಯಲ್ಲಿ **ಪ್ಯಾಲಿಯೋ** ಎಂದರೆ ಹಳೆಯ ಎಂದು, **ಲಿಥಿಕ್** ಎಂದರೆ ಶಿಲೆ ಎಂದು ಅರ್ಥ. ಈ ಕಾಲಘಟ್ಟವನ್ನು ಹಳೆ ಶಿಲಾಯುಗ ಸಂಸ್ಕೃತಿ (**ಪ್ಯಾಲಿಯೋಲಿಥಿಕ್ ಕಲ್ಚರ್**) ಎಂದು ಕರೆಯಲಾಗುತ್ತದೆ. ಈ ಯುಗದಲ್ಲಿ ಮಾನವನು ಪ್ರಾಣಿಯಂತೆ ಜೀವನ ನಡೆಸುತ್ತಿದ್ದು ಒರಟಾದ ಆಯುಧಗಳನ್ನು ಬಳಸುತ್ತಿದ್ದನು. ಅವನು ಬಳಸುತ್ತಿದ್ದ ಆಯುಧಗಳಲ್ಲಿ ಸಾಮಾನ್ಯವಾಗಿ ಬೆಣಚು ಕಲ್ಲುಗಳನ್ನು ಬಳಸುತ್ತಿದ್ದರಿಂದ ಅವನನ್ನು **"ಬೆಣಚು ಕಲ್ಲಿನ ಮಾನವ"** ಎಂಬುದಾಗಿ ವಿದ್ವಾಂಸರು ಕರೆದಿದ್ದಾರೆ[೨೮]. ಈ ಯುಗದ ಮಾನವನ ಮುಖ್ಯ ಆಯುಧಗಳೆಂದರೆ ಅಬ್ಬೆ ವಿಲಿಯನ್, ಅಷೂಲಿಯನ್ ಮಾದರಿಯ ಕೈಗೊಡಲಿ, ಬರ್ಚಿ, ಸೀಳುಗತ್ತಿ, ಮಚ್ಚುಗತ್ತಿ, ಕೊರೆಗ, ಬಾಣದ ಮೊನೆ ಮುಂತಾದವು. ಇವುಗಳಲ್ಲಿ ಅತ್ಯಂತ ವೈಶಿಷ್ಟ್ಯವಾದ ಆಯುಧವೆಂದರೆ ಕೈಗೊಡಲಿ ಇತ್ಯಾದಿ ಇವುಗಳನ್ನು ವಿವಿಧ ನಮೂನೆಗಳಲ್ಲಿ ರೂಪಿಸಲಾಗುತ್ತಿತ್ತು. ಇದರ ಹಿಡಿಕೆಯ ಭಾಗ ದಪ್ಪವಾಗಿದ್ದು ಅಲಗಿನ ಭಾಗ ಮೊನಚಾಗಿರುತ್ತಿತ್ತು. ಎರಡೂ ಭಾಗಗಳಲ್ಲಿಯೂ ಚಕ್ಕೆಗಳನ್ನು ತೆಗೆದಿದ್ದು ಅಂಜೂರಾಕೃತಿಯಲ್ಲಿತ್ತು. ಕೆಲವು ಕೈಗೊಡಲಿಗಳು ಅಂಡಾಕಾರ, ಬದಾಮಾಕಾರ, ತ್ರಿಕೋನಾಕಾರ, ಈಟಿ ಮೊನೆಯಾಕಾರ ಮತ್ತು ಮಾನವನ ಹೃದಯಾಕಾರಗಳಲ್ಲಿಯೂ ಕಂಡುಬಂದಿವೆ. ಭಾರತದಲ್ಲಿ ಆದಿ ಹಳೆ ಶಿಲಾಯುಗದ ಸಂಸ್ಕೃತಿಯ ಅವಶೇಷಗಳು ೧೮೬೩ರಲ್ಲಿ ಬೆಳಕಿಗೆ ಬಂದಿವೆ. ಇದೇ ಸಮಯದಲ್ಲಿ ಕರ್ನಾಟಕದ ಮಲಪ್ರಭಾ ನದಿಕೊಳ್ಳದಲ್ಲಿಯೂ ಈ ಸಂಸ್ಕೃತಿಯ ಅವಶೇಷಗಳು ದೊರೆತಿವೆ. ಈ ರೀತಿಯ ನೆಲೆಗಳು ಉತ್ತರ ಕರ್ನಾಟಕದ ನದಿ ಪಾತ್ರದಲ್ಲಿಯೇ ಹೆಚ್ಚಾಗಿ ಕಂಡುಬರುತ್ತಿದ್ದು ಇಂತಹ ಮೊಟ್ಟಮೊದಲ ಅಧ್ಯಯನವನ್ನು ಆರ್.ಪಿ. ಜೋಷಿಯವರು (೧೯೫೫) ಮಲಪ್ರಭಾ ನದಿಕೊಳ್ಳದಲ್ಲಿ ಕೈಗೊಂಡರು[೨೯]. ಬಾಗಲಕೋಟೆ ಜಿಲ್ಲೆಯ ತೇರದಾಳ, ಹನಗಂಡಿ, ಹಳಿಂಗಳಿ, ಮದನಮಟ್ಟಿ ಎಂಬಲ್ಲಿ ಈ ಸಂಸ್ಕೃತಿಯ ಉಪಕರಣಗಳು ದೊರೆತಿವೆ[೩೦]. ಇದರಿಂದ ಈ

ಅವಧಿಯಲ್ಲಿ ಮಾನವನು ಇಲ್ಲಿ ವಾಸವಾಗಿದ್ದನು ಎಂಬುದು ಸ್ಪಷ್ಟವಾಗುತ್ತದೆ. ಅಧ್ಯಯನದ ಅನುಕೂಲಕ್ಕಾಗಿ ಆದಿಮಾನವನ ಈ ಜೀವನ ಕ್ರಮವನ್ನು ಪುನ: ಆದಿಹಳೆಶಿಲಾಯುಗ-(**೭ಲಕ್ಷ ಅಥವಾ ಅದಕ್ಕೂ ಮುಂಚೆ**) ಮತ್ತು ಮದ್ಯ ಹಳೆಶಿಲಾಯುಗ-(**ಕ್ರಿ.ಪೂ.೭೦,೦೦೦-೩೦,೦೦೦**) ಹಾಗೂ ಅಂತ್ಯ ಹಳೆಶಿಲಾಯುಗ-(**ಕ್ರಿ.ಪೂ.೪೦,೦೦೦-೧೦,೦೦೦**) ಎನ್ನುವ ಮೂರು ಭಾಗಗಳಾಗಿ ವಿಭಾಗಿಸಲಾಗಿದೆ.

ಸುಮಾರು ೭ ಲಕ್ಷದಿಂದ ೧.೨೫ ಲಕ್ಷ ವರ್ಷಗಳ್ಟು ಹಳೆಯದೆಂದು ಗುರುತಿಸಲಾದ ಆದಿ ಹಳೆ ಶಿಲಾಯುಗದ (ಅಪ್ಪರ್ ಪ್ಯಾಲೋಲಿಥಿಕ್) ಅವಶೇಷಗಳು ಭಾರತದಾದ್ಯಂತ ಅನೇಕ ಸ್ಥಳಗಳಲ್ಲಿ ಕಂಡು ಬಂದಿವೆ. ಕರ್ನಾಟಕದಲ್ಲಿ ಈ ಸಂಸ್ಕೃತಿಗೆ ಸೇರಿದ ಸ್ಥಳಗಳು ವಿವಿಧೆಡೆ ದೊರೆಕಿವೆ. ಅವುಗಳಲ್ಲಿ ಕೃಷ್ಣಾ ಮೇಲ್ದಂಡೆ ಮತ್ತು ಘಟಪ್ರಭಾದ ೧೫ ಸ್ಥಳಗಳಲ್ಲಿ ಹಾಗೂ ಕಲಾದಗಿ, ಅನಗವಾಡಿ, (ಬಿಜಾಪುರ) ಗುಲಬಾಳ್ ಕಿಬ್ಬನಹಳ್ಳಿ (ತುಮಕೂರ್ ಜಿಲ್ಲೆ), (ಸುರಪುರ ತಾಲೂಕ್ ಗುಲ್ಬರ್ಗ. ಜಿ.) ನಿಟ್ಟೂರ್ (ಸಿರುಗುಪ್ಪ.ತಾ. ಬಳ್ಳಾರಿ.ಜಿ.), ಹುಣಸಗಿ, (ಸುರಪುರ ತಾ. ಗುಲ್ಬರ್ಗ ಜಿ.) ನೆಲೆಗಳು ಪ್ರಮುಖವಾಗಿವೆ[೩೧.]

ತೇರದಾಳದ ಸಮೀಪದ ಬಿಜಾಪುರ ಜಿಲ್ಲೆಯ ಅನಗವಾಡಿ ಈ ಸಂಸ್ಕೃತಿಗೆ ಸೇರಿದ ಪ್ರಮುಖ ನೆಲೆ. ಇಲ್ಲಿ ಆದಿ, ಮಧ್ಯ, ಅಂತ್ಯ ಶಿಲಾಯುಗದ ಅವಶೇಷಗಳು ದೊರಕಿವೆ. ಇಲ್ಲಿ ನಡೆದ ಉತ್ಖನನದಿಂದ ಹಿಮಯುಗದ ಕೊನೆಯ ಕಾಲಕ್ಕೆ ಹೋಲುವಂತಹ ಹಲವು ಉಪಕರಣಗಳು ದೊರೆತಿವೆ. ಅವುಗಳಲ್ಲಿ ಕೊಡಲಿ ಮಚ್ಚುಗತ್ತಿ, ಸೀಳುಗತ್ತಿ, ಹರಿಯುವ ಚಕ್ಕೆ ಇವುಗಳಲ್ಲಿ ಕೈ ಕೊಡಲಿಗಳು ಪ್ರಮುಖವಾಗಿವೆ. ಅದೇ ರೀತಿ ಭೀಮ, ಕೃಷ್ಣ, ಸಂಗಮ ಪ್ರದೇಶದಲ್ಲಿಯ ಗುಲಬಾಳು (ಸುರಪುರ ತಾಲೂಕು)ದ ಎರಡು ನೆಲೆಗಳಲ್ಲಿ ಮತ್ತು ಕಲಾದಗಿ ಸಮೀಪವಿರುವ ಖ್ಯಾಡ್ ಮತ್ತು ಡಾಣಕಶಿರೂರುಗಳಲ್ಲಿ ಫ್ರಾನ್ಸ್ ದೇಶದ ಅಶ್ಯೂಲ್ ಮಾದರಿಯ ಉಪಕರಣಗಳು ದೊರೆತಿವೆ. ಇವುಗಳನ್ನು ಸಣ್ಣದಾದ ಕಲ್ಲುಗಳಿಂದ ತಯಾರಿಸುವುದು ಗಮನಾರ್ಹ. ಈ ಮೇಲಿನ ನೆಲೆಗಳಲ್ಲಿ ದೊರೆತ ಆಯುಧೋಪಕರಣಗಳು ಫ್ರಾನ್ಸ್, ದಕ್ಷಿಣ ಆಫ್ರಿಕಾದ ವಿವಿಧ ನೆಲೆಗಳಲ್ಲಿ ಮತ್ತು ಮಹಾರಾಷ್ಟ್ರ (ಚರ್ಕಿ) ಮತ್ತು ಪಂಜಾಬಿನ (ಸೋನಾರಗಾಂ) ವಿವಿಧ ನೆಲೆಗಳಲ್ಲಿ ದೊರೆತ ಆಯುಧಗಳಿಗೆ ಹೋಲಿಕೆಯಾಗುತ್ತವೆ. ಇಲ್ಲಿ ದೊರೆತ ಉಪಕರಣಗಳನ್ನು ವಿವಿಧ ಕೆಲಸ ಕಾರ್ಯಗಳಿಗಾಗಿ ಆದಿಮಾನವ ಉಪಯೋಗಿಸಿಕೊಂಡಿದ್ದಾನೆ. ಒಂದು ಉದ್ದನೆಯ ಕೋಲಿಗೆ ಕೈಕೊಡಲಿಯನ್ನು ಗಟ್ಟಿಯಾಗಿ ಕಟ್ಟಿ ಅದನ್ನು ಗಡ್ಡೆ ಗೆಣಸು ಅಗೆಯುವುದಕ್ಕೆ, ಇಲ್ಲವೇ ಪ್ರಾಣಿಗಳನ್ನು ಬೇಟೆಯಾಡುವುದಕ್ಕೆ ಉಪಯೋಗಿಸಿರಬಹುದು. ಅಲ್ಲದೇ ಚಕ್ಕೆ ಕಲ್ಲಿನ ದುಂಡು ಕಲ್ಲನ್ನು ಚಕ್ರ ಎಸೆತದ ಹಾಗೆ ಪ್ರಾಣಿಗಳಿಗೆ ಗುರಿ ಇಟ್ಟು ಹೊಡೆಯಲು ಉಪಯೋಗಿಸಿಕೊಂಡಿದ್ದಾನೆ. ಮಚ್ಚು ಮತ್ತು ಸೀಳುಗತ್ತಿಗಳು ಬೇಟೆಯಾಡಿದ ಪ್ರಾಣಿಗಳ ಮಾಂಸವನ್ನು ತುಂಡು ತುಂಡು ಮಾಡಲು, ಎಲುಬುಗಳನ್ನು ಸೀಳಿ ಅವುಗಳಲ್ಲಿಯ ಮಜ್ಜೆಯನ್ನು ಸಂಗ್ರಹಿಸಲು ಉಪಯೋಗಿಸಿರಬಹುದು.

ಅದೇ ರೀತಿ ಕರ್ನಾಟಕದ ಕೃಷ್ಣ, ತುಂಗಭದ್ರ ಪ್ರದೇಶಗಳಲ್ಲಿ ಮಧ್ಯ ಹಳೆ ಶಿಲಾಯುಗ (ಮಿಡಲ್ ಪ್ಯಾಲೋಲಿಥಿಕ್) ಸಂಸ್ಕೃತಿಗೆ ಸೇರಿದ ನಿವೇಶನಗಳು ಹೆಚ್ಚಾಗಿ ದೊರೆತಿವೆ. ಅವುಗಳಲ್ಲಿ ಸಂಗನಕಲ್ಲು, ಬ್ರಹ್ಮಗಿರಿ, ನಿಟ್ಟೂರು, ಸಾಲವಾಡಗಿ, ಮಟಕದೇವನಹಳ್ಳಿ (ಬುಡಪನಹಳ್ಳಿ) ಮತ್ತು ಕೂಚುಬಾಳು, ಕೋವಳ್ಳಿ (ಮುದ್ದೇಬಿಹಾಳು ತಾಲೂಕು ಈಗ ಬಾಗಲಕೋಟೆ ಜಿಲ್ಲೆ)

ಮೊದಲಾದೆಡೆ ದೊರೆತಿವೆ. ಈ ಕಾಲದಲ್ಲಿ ಆದಿ ಹಳೆ ಶಿಲಾಯುಗ ಕಾಲಕ್ಕಿಂತಲೂ ಭಿನ್ನವಾಗಿ ಉತ್ತಮ ಜಾತಿಯ ಜಾಸ್ಪರ್, ಚರ್ಟ್ ಮೊದಲಾದ ಶಿಲೆಗಳನ್ನು ಬಳಸಿ ವಿವಿಧ ಆಯುಧೋಪಕರಣಗಳನ್ನು ತಯಾರಿಸಿಕೊಂಡನು. ಈ ಹಂತದಲ್ಲಿ ಆದಿಮಾನವನು ತನ್ನ ಜೀವನ ಕ್ರಮದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡನು. ಹಳೆ ಶಿಲಾಯುಗ ಸಂಸ್ಕೃತಿಯ ಕೊನೆಯ ಹಂತವೇ ಅಂತ್ಯ ಹಳೆಯ ಶಿಲಾಯುಗವಾಗಿದೆ. ಮೊಟ್ಟ ಮೊದಲಿಗೆ **೧೯೫೫** ರಲ್ಲಿ ಸಾಲವಾಡಗಿಯಲ್ಲಿ ಈ ಕಾಲಕ್ಕೆ ಸೇರಿದ ಉಪಕರಣ ಉತ್ಪಾದನಾ ನೆಲೆಯನ್ನು **ಅ.ಸುಂದರ**ರವರು ಗುರುತಿಸಿದರು. ಇದೇ ನಿವೇಶನದಲ್ಲಿ ಸಂಗ್ರಹಿಸಿದ ಉಪಕರಣಗಳ ವಿಷಯವಾಗಿ ಎಂ.ಶೇಷಾದ್ರಿಯವರು ವಿವರಣಾತ್ಮಕ ಅಧ್ಯಯನವನ್ನು ಮಾಡಿದ್ದಾರೆ. ಮಾಂಜ್ರಾ, ದೋಣ, ಕೃಷ್ಣ, ತುಂಗಾ, ಶಿಂಷಾ ಹಾಗೂ ಪನ್ನಾರ್ ನದಿ ಕೊಳ್ಳಗಳಲ್ಲಿ ಈ ನೆಲೆಗಳು ಹೆಚ್ಚಾಗಿ ಕಂಡು ಬಂದಿವೆ ಕರ್ನಾಟಕ ಚರಿತ್ರೆ[೨೨].

ಕೇವಲ ಶಿಲಾಯುಧಗಳೇ ಅಷ್ಟೆ ಅಲ್ಲದೇ ಎಲುಬು, ದಂತ ಮತ್ತು ಜಿಂಕೆಯ ಕವಲು ಕೊಂಬು ಮೊದಲಾದವುಗಳಿಂದ ಉಪಕರಣಗಳನ್ನು ತಯಾರಿಸಿ ಬಳಸಿದ ಉದಾಹರಣೆಗಳಿವೆ. ಈ ಹಂತದಲ್ಲಿ ಮೂರು ತಂತ್ರಗಳನ್ನು ಅಳವಡಿಸಿಕೊಂಡು ಶಿಲಾ ಉಪಕರಣಗಳನ್ನು ತಯಾರಿಸುತ್ತಿದ್ದರು. ಅವುಗಳೆಂದರೆ ೧) **ಪರೋಕ್ಷ ಒತ್ತಡ ತಂತ್ರ** ೨) **ವೃಕ್ಷ ಸ್ಥಳ ಒತ್ತಡ** ೩) **ನೇರ ಒತ್ತಡ ತಂತ್ರ** ಈ ಹಿಂದಿನ ಕಾಲಗಳಿಗೆ ಹೋಲಿಸಿದರೆ ಈ ಹಂತದ ತಂತ್ರ ಜ್ಞಾನವು ಹೆಚ್ಚು ಸುಧಾರಿಸಿತ್ತು.

ತೇರದಾಳ ನಗರದ ಉತ್ತರಕ್ಕಿರುವ ಕೃಷ್ಣಾ ನದಿಯ ಬಯಲು ಪ್ರದೇಶವು ಹಳೆಯ ಶಿಲಾಯುಗದ ವಿವಿಧ ಉಪ ಹಂತಗಳಲ್ಲಿ ಮಾನವನ ಚಟುವಟಿಕೆಗಳಿಗೆ ಆಶ್ರಯ ನೀಡಿದೆ. ತೇರದಾಳ, ಮದನಮಟ್ಟಿ, ಕುಲ್ಲೊಳ್ಳಿ, ಹಾರೂಗೇರಿ, ಮುಗಳಖೋಡ ಮೊದಲಾದೆಡೆ ಈ ಕಾಲಘಟ್ಟಗಳ ಆದಿ ಮಾನವನ ನೆಲೆಗಳಿದ್ದುದನ್ನು ಇತಿಹಾಸ ತಜ್ಞರು ಶೋಧಿಸಿದ್ದಾರೆ. ಈ ಕಾಲಘಟ್ಟದಲ್ಲಿ ಆದಿ ಮಾನವನು ಗುಡ್ಡದ ತಗ್ಗು ಹಾಗೂ ನದಿಗಳ ದಂಡೆಯ ಪ್ರದೇಶದಲ್ಲಿ ನಿಸರ್ಗ ಗವಿ ಅಥವಾ ಕಲ್ಲಾಸರೆಗಳ ಆಶ್ರಯದಲ್ಲಿ ವಾಸಿಸುತ್ತಿದ್ದನೆಂದು ಗುರುತಿಸಲಾಗಿದೆ. ಈ ಕಾಲಕ್ಕೆ ಸೇರಿದ ಅವಶೇಷಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. **ಇಂಗಾಲ-೧೪** ಪರೀಕ್ಷೆಯಂತೆ ಈ ಹಂತದ ಕಾಲಮಾನವು ಇಂದಿಗೆ ಸುಮಾರು ೧೦,೦೦೦ ವರ್ಷಗಳಿಂದ ೨೫,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇದ್ದಿತೆಂದು ತಿಳಿಯುತ್ತದೆ[೩೩]. ಇದರಿಂದ ಹಳೆ ಶಿಲಾಯುಗ ಕಾಲದ ಮಾನವ ತೇರದಾಳ ಪರಿಸರದಲ್ಲಿ ವಾಸವಾಗಿದ್ದನು ಎಂದು ಹೇಳಬಹುದು. ಈ ಕಾಲದ ಆದಿ ಮಾನವ ನಿಸರ್ಗದಲ್ಲಿ ದೊರೆಯುವ ಆಹಾರ ಸಂಪಾದನೆಯ ಹಂತದಲ್ಲಿದ್ದರೂ ನೈಸರ್ಗಿಕ ಗವಿ ಮುಂತಾದ ರಕ್ಷಣೆಯ ಸ್ಥಳಗಳಲ್ಲಿ ಇರುತ್ತಿದ್ದರೆಂಬುದು ಮಾತ್ರ ತಿಳಿದುಬಂದಿದ್ದು ಈ ಹಂತದ ಮಾನವನ ದೈನಂದಿನ ಕಾರ್ಯಚಟುವಟಿಕೆಯನ್ನು ಆಹಾರ ಸಂಗ್ರಹಣೆ ಮತ್ತು ಬೇಟೆಗಾರಿಕೆ ಸಂಸ್ಕೃತಿಯೆಂದು ಕರೆಯಲಾಗಿದೆ.

**ಮಧ್ಯ /ಸೂಕ್ಷ್ಮ ಶಿಲಾಯುಗ ಸಂಸ್ಕೃತಿ-(ಕ್ರಿಪೂ೭,೦೦೦-೩,೦೦೦)**

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ ಇಲ್ಲವೆ ಸೂಕ್ಷ್ಮ ಶಿಲಾಯುಗವೆಂದು **(ಮೆಸೋಲಿಥಿಕ್ ಕಲ್ಚರ್)** ಕರೆಯಲಾಗಿದೆ. ಗ್ರೀಕ್

ಭಾಷೆಯಲ್ಲಿ **ಮೆಸೋ** ಎಂದರೆ ಸೂಕ್ಷ್ಮ ಎಂದು, **ಲಿಥಿಕ್** ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲದಲ್ಲಿ ಮಾನವ ಶಿಲೆಯಿಂದ ಬಹಳ ಸೂಕ್ಷ ಉಪಕರಣಗಳನ್ನು ತಯಾರಿಸಿಕೊಂಡು ಅವುಗಳನ್ನು ತನ್ನ ಬಳಕೆಗೆ ಬಳಸಿಕೊಂಡಿದ್ದರಿಂದ ಈ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಮಾನವ ಜೀವನದ ಸಾಂಸ್ಕೃತಿಕ ಮುನ್ನಡೆಯಲ್ಲಿ ಈ ಹಂತದ ಪಾತ್ರ ಗಮನಾರ್ಹವಾದುದು. ಈ ಅವಧಿಯಲ್ಲಿ ಬೇಟೆಯಾಡುವುದು, ಮೀನು ಹಿಡಿಯುವುದು. ಆಹಾರ ಸಂಗ್ರಹಣೆ ಜೀವನದ ವ್ಯವಸ್ಥೆ ಇದ್ದಿತು. ಇದರಲ್ಲಿ ಮುಖ್ಯ ಬೆಳವಣಿಗೆಯೆಂದರೆ ಬೇಸಾಯ ಮಾಡುವುದು, ಇದು ನಂತರದ ನೂತನ ಶಿಲಾಯುಗದಲ್ಲಿ ಅಭಿವೃದ್ಧಿಯಾಯಿತು. ಈ ಕಾಲದ ಆಹಾರೋತ್ಪಾದನೆಯ ಬೆಳವಣಿಗೆಯಿಂದಾಗಿ ಈ ಕಾಲವನ್ನು ಸ್ಥಿತ್ಯಂತರ (Mesolithic) ಹಂತವೆಂದು ಸಹ ಗುರುತಿಸಲಾಗಿದೆ.

ಭಾರತ ಮತ್ತು ಕರ್ನಾಟಕದಲ್ಲಿ ಈ ಕಾಲದ ನಿವೇಶನಗಳು ೧೮೮೯ರ ವೇಳೆಗೆ ಬೆಳಕಿಗೆ ಬಂದಿದ್ದರೂ ಅವುಗಳ ವೈಜ್ಞಾನಿಕ ಅಧ್ಯಯನ ಆರಂಭವಾದುದು ೧೯೫೬ರ ನಂತರವೇ ಈ ಸಂಸ್ಕೃತಿಯ ಶಿಲೋಪಕರಣಗಳು ಸುರಪುರ ದೋಆಬ್, ಬೆಂಗಳೂರು ಮತ್ತು ಬಿಜಾಪುರ ಜಿಲ್ಲೆ[೩೪]. ಕೃಷ್ಣಾನದಿ ಪಾತ್ರ ದಕ್ಷಿಣ ಕನ್ನಡ ಜಿಲ್ಲೆಯ ಮಾಣಿ ಮತ್ತು ಉಪ್ಪಿನಂಗಡಿ ಬೀದರ್ ಜಿಲ್ಲೆಯ ಮಾಂಜ್ರ ಮ್ರತ್ತು ಕಾರಂಜಾ ಕಣಿವೆ ಪ್ರದೇಶ ಮಲೆನಾಡು ಮತ್ತು ಅರೆ ಮಲೆನಾಡು ಪ್ರದೇಶದ ಬಳ್ಳಾರಿ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆ ಹಾಗೂ ತುಮಕೂರು ಜಿಲ್ಲೆಯ ಶಿಂಷಾ ಮತ್ತು ಪೆನ್ನಾರ್‌ನದಿ ಪ್ರಾಂತಗಳಲ್ಲಿ ದೊರೆತಿರುವ ನೆಲೆಗಳು ಈ ಸಂಸ್ಕೃತಿಯ ವಿಸ್ತೃತ ಬೆಳವಣಿಗೆಗೆ ಹಾಗೂ ಪ್ರಸರಣದ ಬಗೆಗೆ ತಿಳಿಯಲು ಸಹಾಯಕವಾಗಿವೆ[೩೫].

ಆ ಕಾಲದ ಬಂಡೆಯ ಮೇಲಿನ ವರ್ಣಚಿತ್ರಗಳು ಇವರ ಸಾಂಸ್ಕೃತಿಕ ಸಾಮಾಜಿಕ ಆರ್ಥಿಕ ಪದ್ದತಿ ಹಾಗೂ ನಂಬಿಕೆಗಳ ಬಗೆಗೆ ತಿಳಿಸುವುದರ ಜೊತೆಗೆ ಅವರ ಕಲೆಗಾರಿಕೆಯ ವಿಶಿಷ್ಟತೆಯನ್ನು ತಿಳಯಪಡಿಸುತ್ತದೆ ಎಂದು ಅ.ಸುಂದರ ರವರು ಅಭಿಪ್ರಾಯ ಪಟ್ಟಿದ್ದಾರೆ. ಈ ಸಂಸ್ಕೃತಿಯ ಹಂತದಲ್ಲಿ ಮಾನವನು ತನ್ನ ಅಲೆಮಾರಿ ಜೀವನ ಕೈಬಿಟ್ಟು, ಆತ ಒಂದೆಡೆ ನೆಲೆನಿಂತಿದ್ದೂ ಅಲ್ಲದೆ ಬೇಟೆ, ಮೀನುಗಾರಿಕೆ ಆಹಾರ ಸಂಗ್ರಹಣೆಯ ಜೊತೆಗೆ ಆಹಾರ ಉತ್ಪಾದನೆಯನ್ನೂ ಸಹಾ ಆರಂಭಿಸಿದನು. ಆದ್ದರಿಂದ ಈ ಕಾಲಮಾನವು ಮಾನವನ ಸ್ಥಿತ್ಯಂತರದ ಹಂತವಾಗಿದೆ. ಈ ಅಲ್ಪ ಸಮಯದ ಮುನ್ನಡೆಯು ಮಾನವ ಇತಿಹಾಸದಲ್ಲಿ ಗಮನಾರ್ಹವಾಗಿದೆ.

ಈ ಕಾಲದ ಮಾನವನು ಹೆಚ್ಚು ಸುಧಾರಿಸಿದವನಾಗಿದ್ದನು. ಆಹಾರಕ್ಕಾಗಿ ಅಲೆದಾಡುತ್ತ ಹಣ್ಣು-ಹಂಪಲಗಳನ್ನು ಅರಸುತ್ತಾ, ಪ್ರಾಣಿಗಳನ್ನು ಬೇಟೆಯಾಡುತ್ತಾ, ಅಲೆಮಾರಿ ಬದುಕನ್ನು ನಡೆಸುತ್ತಿದ್ದ ಮಾನವನು ಈ ಯುಗದಲ್ಲಿ ಆಹಾರ ಸಂಗ್ರಹಣೆಯ ಮಿಗಿಲಾಗಿ ಆಹಾರ ಉತ್ಪಾದನಾ ಸಾಮರ್ಥ್ಯವನ್ನು ಸಾಧಿಸಲು ಮುಂದಾದನು. ಪ್ರಾಣಿಗಳ ಬೇಟೆಯ ಜೊತೆಗೆ ಅವುಗಳನ್ನು ಹಿಡಿದು ಪಳಗಿಸಲು ಯತ್ನಿಸಿದ್ದನು. ಈ ಅವಧಿಯಲ್ಲಿಯೇ ಅತೀ ಸೂಕ್ಷ್ಮವಾದ ಶಿಲಾಯುಧಗಳಾದ ಬಾಣ, ಕುರುಪಿ, ಕುಡಗೋಲು, ಚಾಕು, ಕತ್ತಿ ಮೊದಲಾದ ಸಲಕರಣೆಗಳನ್ನು ಮಾಡಿಕೊಂಡು ಆಹಾರ ಸಂಗ್ರಹಣೆ ಹಾಗೂ ಉತ್ಪಾದನಾ ಕಾರ್ಯಗಳಿಗೆ ಬಳಸಲಾಗುತ್ತಿತ್ತು. ಕೃಷಿಗೆ ಪೂರಕವಾಗಿ ನೆಲ ಅಗಿಯಲು ಬೆಳೆಗಳನ್ನು ಕೊಯ್ಯಲು ಈ ಉಪಕರಣಗಳನ್ನು

ಬಳಸಲಾಗುತ್ತಿತ್ತು. ಆಗಲವಾದ ಹುಲ್ಲಿನ ಗರಿ ಇಲ್ಲವೆ ದರ್ಭೆಗಳನ್ನು ಉಪಯೋಗಿಸಿ, ಚಾಪೆ ಹೆಣೆಯುವದು, ವೃತ್ತಾಕಾರದ ವಸತಿ ನಿರ್ಮಾಣ, ಮೃತಪಟ್ಟವರ ಶವ ಸಂಸ್ಕಾರ ಮಾಡುವುದು ಮುಂತಾದ ಚಟುವಟಿಕೆಗಳನ್ನು ರೂಢಿಸಿಕೊಂಡು ಸಮುದಾಯ ಬದುಕನ್ನು ನಡೆಸಲು ಮುಂದಾದನು. ಈ ಹಂತದ ಶಿಲೋಪಕರಣಗಳು ಅತಿ ಕಿರು ಗಾತ್ರದವುಗಳಾಗಿವೆ. ಇದು ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣವಾಗಿವೆ. ಇದರೊಂದಿಗೆ ಬಂಡೆಗಳ ಮೇಲೆ ಚಿತ್ರಿಸಿದ ವರ್ಣಚಿತ್ರಗಳು ಅವರ ಕಲೆಗಾರಿಕೆಯ ಪ್ರತೀಕವಾಗಿವೆ ಎಂದು ಅ.ಸುಂದರ ಅವರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಅಲೆಮಾರಿ ಹಂತದ ಮಾನವನ ಜೀವನ ಕ್ರಮವು ಕಾಲ ಕ್ರಮೇಣ ಸಹ ಬಾಳ್ವೆಗೆ ಎಡೆಮಾಡಿಕೊಟ್ಟಿತು. ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಹಂತದಲ್ಲಿ ಜನರು ಪರಸ್ಪರ ತಿಳುವಳಿಕೆಯಿಂದ ವ್ಯವಸ್ಥಿತ ಸಮಾಜವನ್ನು ರೂಪಿಸತೊಡಗಿದರು.

ತೇರದಾಳ ಸಮೀಪದ ಹಳಿಂಗಳಿ, ಹಿಪ್ಪರಗಿ, ಮದನಮಟ್ಟಿ, ಹನಗಂಡಿ, ಹಾರೂಗೇರಿಗಳಲ್ಲಿ ಈ ಹಂತದ ನೆಲೆಗಳಿದ್ದು, ವಿವಿಧ ಮಾದರಿಯ ಚರ್ಟ್ ಶಿಲೆಯಲ್ಲಿ ತಯಾರಿಸಲಾದ ಶಿಲಾ ಉಪಕರಣಗಳನ್ನು ಶೋಧಿಸಲಾಗಿದೆ. ಅವುಗಳಲ್ಲಿ ಸಮಾನಾಂತರ ಅಂಚುಗಳುಳ್ಳ ಅಲಗುಗಳು, ಚಿಕ್ಕ ಅಲಗುಗಳು, ಬಾಗಿದ ಅಲಗುಗಳು, ಮೊನೆಗಳು ಸಣ್ಣ ಬೈರಿಗೆಗಳು, ಆಹಾರ ಕತ್ತರಿಸುವ ಚಿಕ್ಕ ಮಚ್ಚುಗಳು ಮೊದಲಾದವು ಪ್ರಮುಖವಾಗಿವೆ. ಇವುಗಳ ಆಧಾರದ ಮೇಲೆ ತೇರದಾಳ ಪರಿಸರವು ಈ ಕಾಲದ ಮಾನವನ ಆವಾಸಸ್ಥಾನವಾಗಿತ್ತೆಂದು ನಿರ್ಣಯಿಸಬಹುದು. ಆದರೂ ಈ ಸಂಸ್ಕೃತಿಯ ಕುರಿತು ಹೆಚ್ಚಿನ ಅಧ್ಯಯನಗಳು ಆಗಬೇಕಾದ ಅವಶ್ಯಕತೆ ಇದೆ[೩೬].

**ನೂತನ ಶಿಲಾಯುಗ ಸಂಸ್ಕೃತಿ : ಕ್ರಿ.ಶ.ಪೂ.೩೦೦೦-ಕ್ರಿ.ಶ.ಪೂ.೧೫೦೦**

ಗ್ರೀಕ್ ಭಾಷೆಯಲ್ಲಿ **ನಿಯೋ** ಎಂದರೆ ನವೀನ/ಹೊಸದು ಎಂದು, **ಲಿಥಿಕ್** ಎಂದರೆ ಸ್ಟೋನ್ ಎಂಬ ಅರ್ಥವಿದೆ. ಈ ಹಂತದಲ್ಲಿ ಮನುಷ್ಯ ಜೀವನದ ರೀತಿ ನೀತಿಗಳು ಸಾಕಷ್ಟು ಬದಲಾವಣೆ ಗೊಂಡವು ಅಲ್ಲದೆ ಈ ಕಾಲಘಟ್ಟದಲ್ಲಿ ಶಿಲಾಯುದಗಳನ್ನು ಉಜ್ಜಿ ನಯಗೊಳಿಸಿ ತಯಾರಿಸುತ್ತಿದ್ದರಿಂದಾಗಿ ಈ ಯುಗವನ್ನು ನೂತನ ಶಿಲಾಯುಗ ಸಂಸ್ಕೃತಿ (ನಿಯೋಲಿಥಿಕ್ ಕಲ್ಚರ್) ಎಂದು ಕರೆಯಲಾಗುತ್ತದೆ. ಈ ಅವಧಿಯಲ್ಲಿ ಮನುಷ್ಯ ತನ್ನ ಅಲೆಮಾರಿ ಜೀವನವನ್ನು ತೊರೆದು ಒಂದೇ ಸ್ಥಳದಲ್ಲಿ ನೆಲೆಸಲು ಆರಂಭಿಸಿದನು. ಅಲ್ಲದೆ ಈ ಹಿಂದಿನ ಕಾಲದಲ್ಲಿ (ಸೂಕ್ಷ್ಮಶಿಲಾಯುಗ) ಆರಂಭವಾಗಿದ್ದ ಪಶುಪಾಲನೆ ಮತ್ತು ಕೃಷಿ ಪದ್ಧತಿಗಳು ಈ ಕಾಲದಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿದವು. ಬೂದುವರ್ಣದ ಪಾತ್ರೆಗಳ ತಯಾರಿಕೆ, ವ್ಯವಸ್ಥಿತವಾದ ವಾಸದ ಮನೆಗಳ ನಿರ್ಮಾಣ, ಶವಸಂಸ್ಕಾರ ಪದ್ಧತಿ ಹಾಗೂ ಕಲ್ಲಾಸರೆಗಳಲ್ಲಿ ಚಿತ್ರಗಳನ್ನು ಬಿಡಿಸುವ ಕಲೆಗಾರಿಕೆಯನ್ನು ವಿಶೇಷವಾಗಿ ಅಳವಡಿಸಿಕೊಂಡನು. ಇವು ಈ ಯುಗದ ವೈಶಿಷ್ಟಗಳಾಗಿವೆ. ಈ ಎಲ್ಲ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡ ಗೋರ್ಡಾನ್ ಚೈಲ್ಡ್ ಮತ್ತು ಬ್ರೈನ್ಎಂ.ಪ್ರಾಗನ್‌ರವರು ಈ ಕಾಲಘಟ್ಟವನ್ನು **"ಕ್ರಾಂತಿಕಾರಕ ಕಾಲ ಘಟ್ಟ"** (**ಎ ರೆವಲೂಷನರಿ ಪಿರಿಯಡ್**) ಎಂದು ಕರೆದಿದ್ದಾರೆ[೩೭].

ಕರ್ನಾಟಕದಲ್ಲಿ ನೂತನ ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದ ಶೋಧನೆಗಳು ಪ್ರಥಮವಾಗಿ ೧೮೭೨ರಲ್ಲಿ ಶೋಧಿತವಾದವು. ಫ್ರೇಸರ್ ಅವರು ಬಳ್ಳಾರಿ ಜಿಲ್ಲೆ ಕಪ್ಪುಗಲ್ಲು

ಬೆಟ್ಟದಲ್ಲಿ ನೂತನ ಶೀಲೋಪಕರಣ ಹಾಗೂ ವಾಸ್ತವ್ಯದ ನೆಲೆಯೊಂದನ್ನು ಗುರುತಿಸಿದವರು ರಾರ್ಬಟ್ ಬ್ರೂಸ್ ಪೂಟ್ ರವರು. ಕೋಲಾರ್ ಜಿಲ್ಲೆ ಶ್ರೀನಿವಾಸಪುರ ಮತ್ತು ಬೀರಿಮಂಗಳ ನೆಲೆಗಳನ್ನು ಶೋಧಿಸಿದರು. ಮೈಸೂರು ಜಿಲ್ಲೆ ಲಕ್ಷ್ಮೀಪುರ ಮತ್ತು ನರಸೀಪುರ, ಮಂಡ್ಯ ಜಿಲ್ಲೆಯ ಫ್ರೆಂಚ್ ಹಿಲ್ಸ್ ಮುಂತಾದೆಡೆಗಳಲ್ಲಿಯೂ ನೂತನ ಶಿಲಾಯುಗದ ಸಂಸ್ಕೃತಿಯ ನೆಲೆಗಳು ಶೋಧಿತವಾದವು. ಬ್ರಹ್ಮಗಿರಿ, ಮಸ್ಕಿ, ಪಿಕ್ಲೆಹಾಳ್. ತೆಕ್ಕಲಕೋಟೆ ಹಳ್ಳೋರು, ಕುಪ್ಪಗಲ್, ತಿ.ನರಸೀಪುರ, ಕೊಡೆಕಲ್, ಹೆಮ್ಮಿಗೆ, ಕೋಲಾರ ಜಿಲ್ಲೆಯ ಬನಹಳ್ಳಿಗಳಲ್ಲಿ ಉತ್ಖನನ ಮಾಡಲಾಗಿದೆ. ಬಾಗಲಕೋಟೆ ಮತ್ತು ಇತರೆ ಜಿಲ್ಲೆಗಳಲ್ಲಿ ದೊರೆತ ಪ್ರಾಚ್ಯಾವಶೇಷಗಳ ಅಧ್ಯಯನದಿಂದಾಗಿ ಕರ್ನಾಟಕದಲ್ಲಿ ಈ ಸಾಂಸ್ಕೃತಿಕ ಹಂತವು ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ತಿಳಿಯುತ್ತದೆ[೩೮].

ಈ ಸಂಸ್ಕೃತಿಯ ಶೀಲೋಪಕರಣಗಳಲ್ಲಿ ವೈವಿಧ್ಯತೆಯಿದ್ದು ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕೆತ್ತುಳಿ, ಉಜ್ಜುಗ ಅಥವಾ ಅರೆಯುವ ಕಲ್ಲು, ಕವಣೆಕಲ್ಲು ಮತ್ತು ಉಂಗುರ ಕಲ್ಲು ಮೊದಲಾದುವು ಪ್ರಮುಖವಾದವುಗಳಾಗಿವೆ. ಇವುಗಳನ್ನು ವಿಶೇಷ ತಂತ್ರಗಾರಿಕೆ ಬಳಸಿ ನಾಲ್ಕು ಹಂತಗಳಲ್ಲಿ ಸಿದ್ದಗೊಳಿಸಲಾಗುತ್ತಿತ್ತು. ಇಂತಹ ಉಪಕರಣಗಳು ಸಮಾನ್ಯವಾಗಿ ತ್ರಿಭುಜಾಕಾರದಲ್ಲಿರುತ್ತವೆ. ಉಪಕರಣಗಳು ಸಂಯುಕ್ತ ಉಪಕರಣಗಳಾಗಿದ್ದು ಮೂಳೆ, ಮರದ ಮಾದ್ಯಮಗಳಿಗೆ ಸಿಕ್ಕಿಸಿ ಉಪಯೋಗಿಸಲಾಗುತಿತ್ತು. ಡೈಕ್, ಡಾಲರೈಟ್, ಕಣಶಿಲೆ ಮತ್ತು ಬಳಪದ ಕಲ್ಲುಗಳನ್ನು ಬಳಸಿ ಈ ಉಪಕರಣಗಳನ್ನು ತಯಾರಿಸಲಾಗುತ್ತಿತ್ತು.

ತೇರದಾಳ ಪರಿಸರದ ಕೃಷ್ಣಾ ನದಿಯ ದಡದಲ್ಲಿರುವ ಹಿಪ್ಪರಗಿ, ಶಿರಗುಪ್ಪಿ, ಕುಲ್ಲೊಳ್ಳಿ ಮದನಮಟ್ಟಿ, ಹಳಿಂಗಳಿ, ಭದ್ರಗಿರಿ, ಶೇಗುಣಶಿ ತೇರದಾಳನ ಪಶ್ಚಿಮಕ್ಕೆ ಐದು ಕಿ.ಮೀ. ದೂರದಲ್ಲಿ ಬೂದಿಮಣ್ಣು ಹಾಗೂ ಇತರ ಜನವಸತಿಯ ನೆಲಗಟ್ಟುಗಳು ಇದ್ದ ಅವಶೇಷಗಳು ತುಂಬಿರುವ ದಿಬ್ಬವಿದ್ದು, ಇಲ್ಲಿ ಈ ಸಂಸ್ಕೃತಿಯ ಕುರುಹುಗಳು ಪತ್ತೆಯಾಗಿವೆ. ಇಲ್ಲಿ ಈ ಕಾಲದ ನವ ಶಿಲಾಯುಗ ಕಾಲದ ಕೈಕೊಡಲಿಗಳು ಮತ್ತು ಬೂದು, ಕಪ್ಪು ಬಣ್ಣದ ಮಡಿಕೆ ಚೂರುಗಳು ಮತ್ತು ಬೂದಿ ದಿಬ್ಬಗಳಿವೆ[೩೯]. ಇಲ್ಲಿ ದೊರೆತ ಅವಶೇಷಗಳು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ತೆಕ್ಕಲಕೋಟೆಗಳಂತೆ ಮಹಾರಾಷ್ಟ್ರದ ಇನಾಮಗಾಂವ ಮದ್ಯ ಭಾರತದ ಜೋರ್ವೆಗಳಲ್ಲೂ ಗುರುತಿಸಲಾಗಿದೆ. ಇದರ ಆಧಾರದ ಮೇಲೆ ತೇರದಾಳ ಪರಿಸರವು ಸಹ ನವಶಿಲಾಯುಗ ಕಾಲದ ಮಾನವನ ಅವಾಸಸ್ಥಾನವಾಗಿತ್ತೆಂದು ಹೇಳಬಹುದು.

**ಶಿಲಾ ತಾಮ್ರ ಯುಗ ಸಂಸ್ಕೃತಿ:- (ಕಿ.ಪೂ.೨,೨೦೦-೮೦೦)**

ತಾಮ್ರದಿಂದ ಆಭರಣ, ಆಯುಧ, ಮೊದಲಾದವುಗಳನ್ನು ತಯಾರಿಸಲಾಗುತ್ತಿತ್ತು. ಆದ್ದರಿಂದ ಈ ಸಂಸ್ಕೃತಿಯನ್ನು ಶಿಲಾ ತಾಮ್ರಯುಗ (**ಚಾಲ್ಕೋಲಿಥಿಕ್ ಪಿರಿಯಡ್**) ವೆಂದು ಕರೆಯಲಾಗುತ್ತದೆ. ಈ ಕಾಲದಲ್ಲಿ ಶಿಲಾಯುಧಗಳೊಂದಿಗೆ ಕಂಚು ಮತ್ತು ತಾಮ್ರದ, ಚಪ್ಪಟೆಯಾದ ಕೊಡಲಿ, ಉಳಿ ಮುಂತಾದ ಉಪಕರಣಗಳು ಜೊತೆ ಜೊತೆಯಾಗಿ ತಯಾರಿಸುತ್ತಿದ್ದರು. ಲೋಹ ತಯಾರಿಕೆಯ ತಂತ್ರಜ್ಞಾನದಿಂದ ಕಂಚು ಹಾಗೂ ತಾಮ್ರದ ಆಯುಧೋಪಕರಣ ಹಾಗೂ ಆಭರಣಗಳನ್ನು ಇವರು ತಯಾರಿಸಬಲ್ಲವರಾಗಿದ್ದರು. ಜಮಖಂಡಿ ತಾಲೂಕಿನ ತೇರದಾಳ ಗ್ರಾಮದಲ್ಲಿ ಈ ಸಂಸ್ಕೃತಿಗೆ ಸೇರಿದ ತಾಮ್ರದ ಬಳೆಗಳು ಸಿಕ್ಕಿವೆ. ಅದರಂತೆ

ಬೂದು ಬಣ್ಣದ ಮಡಿಕೆಯ ಚೂರುಗಳು, ಕೃಷ್ಣಾ ನದಿಯ ಬಯಲಿನಲ್ಲಿರುವ ತೇರದಾಳ, ಹನಗಂಡಿ, ಆಸಂಗಿ, ಕುಲ್ಲೊಳ್ಳಿ, ಹಿಪ್ಪರಗಿ, ಶಿರಗುಪ್ಪಿ ಜಗದಾಳ, ಚಿಮ್ಮಡ, ಕನ್ನೊಳ್ಳಿ, ಕೊಣ್ಣೂರ ಮೊದಲಾದ ಸ್ಥಳಗಳಲ್ಲಿ ಲಭಿಸಿವೆ.

ಭಾರತದಾದ್ಯಂತ ಇಂಥ ಅನೇಕ ನೆಲೆಗಳು ಕಂಡುಬಂದಿವೆ. ಹರಪ್ಪ ಸಂಸ್ಕೃತಿಯಲ್ಲಿ ತಾಮ್ರದಿಂದ ತಯಾರಿಸಿದ ವಿವಿಧ ನಮೂನೆಯ ಆಯುಧೋಪಕರಣಗಳು ದೊರೆತಿವೆ. ಕರ್ನಾಟದಲ್ಲಿ ಕೆಲವು ಕಡೆ ಈ ಸಂಸ್ಕೃತಿಯ ಕುರುಹುಗಳು ದೊರೆತಿದ್ದು, ಅಧ್ಯಯನಕ್ಕೆ ಯೋಗ್ಯವಾಗಿವೆ. ಅತಿ ಕಡಿಮೆ ಪ್ರಮಾಣದಲ್ಲಿ ಕಂಡು ಬಂದಿರುವ ಈ ಆಯುಧಗಳಲ್ಲಿ ತಾಮ್ರ ಇಲ್ಲವೆ ಕಂಚಿನ ಚಪ್ಪಟೆ ಕೊಡಲಿ, ತಂತಿ, ನೀರಿನ ಗಾಳ ಮತ್ತು ತೆಳ್ಳನೆ ಬಾಯುಳ್ಳ ಅಲಗಿನ ಉಪಕರಣಗಳು ಕೃಷ್ಣಾನದಿ ಪ್ರದೇಶದ ಕೆಲವು ನೆಲೆಗಳಲ್ಲಿ ದೊರೆತಿವೆ. ದಕ್ಷಿಣ ಭಾರತದ ಅತ್ಯಂತ ಗಮನಾರ್ಹವಾದ ಉಪಕರಣವೆಂದರೆ ರಾಯಚೂರು ಹತ್ತಿರ ಕಲ್ಲೂರು ಗ್ರಾಮದಲ್ಲಿ ಶಿಲಾ-ತಾಮ್ರಯುಗದ ನೆಲೆಯಲ್ಲಿ ದೊರೆತ ಉದ್ದನೆಯ ಖಡ್ಗಗಳು ಪ್ರಮುಖವಾದವು. ಇದೇ ರೀತಿ ಸಣ್ಣ ಮಾದರಿಯ ಕಠಾರಿಯಂಥ ಉಪಕರಣ ಭೀಮಾನದಿ ಉಗಮ ಪ್ರದೇಶದ ಚಂದೋಳಿ ಗ್ರಾಮದಲ್ಲಿ ಮತ್ತು ಬ್ರಹ್ಮಗಿರಿಯಲ್ಲಿ ಒಂದು ಚಿಕ್ಕ ಚಾಕು ದೊರೆತಿವೆ.

ಈ ಹಂತದಲ್ಲಿ ತಾಮ್ರದ ಆಯುಧಗಳ ಬಳಕೆ, ಸುಟ್ಟ ಮಣ್ಣಿನ ಪಾತ್ರೆಗಳ ಬಳಕೆ, ಸುಧಾರಿಸಿದ ಬೇಸಾಯ ಪದ್ದತಿಯ ಅಳವಡಿಕೆ, ಈ ಸಾಂಸ್ಕೃತಿಕ ಹಂತದ ಮುಖ್ಯ ಲಕ್ಷಣಗಳು. ಭೀಮಾ ಮತ್ತು ಕೃಷ್ಣಾ ನದಿ ಪಾತ್ರವು ಉತ್ತಮ ಕರಿಮಣ್ಣಿನ ಪ್ರದೇಶವಾದುದರಿಂದ ಉತ್ತರ ಕರ್ನಾಟಕದ ಪ್ರದೇಶವನ್ನು ತಮ್ಮ ವಾಸ್ತವ್ಯಕ್ಕೆ ಆರಿಸಿಕೊಂಡು ಸುತ್ತ ಮುತ್ತಲಿನ ಪ್ರದೇಶಕ್ಕೆ ಪ್ರಸರಣ ವಾಗಿರುವುದನ್ನು ಕಾಣಬಹುದಾಗಿದೆ. ಇಲ್ಲಿನ ಮಣ್ಣಿನ ಪಾತ್ರೆಗಳನ್ನು ಜೋರ್ವೆ ಮತ್ತು ಸಾವಳದ ಮಡಿಕೆ ಮಾದರಿಗಳೆಂದು ಕರೆಯಲಾಗುತ್ತದೆ. ಶಿಲಾ ತಾಮ್ರಯುಗದ ಜನರು ಸೌಂದರ್ಯ ಪ್ರಜ್ಞೆ ಉಳ್ಳವರಾಗಿದ್ದರೆಂದು ಅವರ ಮಣ್ಣಿನ ಗೊಂಬೆ ಹಾಗೂ ದೊರೆತ ವರ್ಣ ಚಿತ್ರಗಳಿಂದ ತಿಳಿಯಬಹುದಾಗಿದೆ. ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿಯ ಹಂತಕ್ಕೆ ಸೇರಿದವುಗಳೆಂದು ಭಾವಿಸಿರುವ ಬೂದಿ ದಿಬ್ಬಗಳು ಕರ್ನಾಟಕದ ಉತ್ತರ ಭಾಗಗಳಲ್ಲಿ ಹೆಚ್ಚಾಗಿಯೂ ನಂತರದ ಭಾಗದಲ್ಲಿ ಪ್ರಾತಿನಿಧಿಕವಾಗಿಯೂ ಇರುವುದು ಕಂಡುಬರುತ್ತವೆ. ತದನಂತರ ಕಾಲದಲ್ಲಿ ಮಾನವನು ಬರವಣಿಗೆಯನ್ನು ಕಂಡುಕೊಂಡನು. ಆದರೆ ಇದನ್ನು ಇದುವರೆಗೆ ಅರ್ಥೈಸಲು ಸಾಧ್ಯವಾಗಿಲ್ಲ. ಕೃಷ್ಣಾ ಮೇಲ್ದಂಡೆಯ ನೆಲೆಗಳ ಶಿಲಾ ತಾಮ್ರಯುಗ ಸಂಸ್ಕೃತಿಯ ಕಾಲಮಾನ ಸುಮಾರು ಕ್ರಿ.ಪೂ.೨೩೦೦-೧೦೦೦ ಎಂದು ನಿರ್ಧರಿಸಲಾಗಿದೆ.

ತೇರದಾಳದ ಸಮೀಪ ಇರುವ ಕೊಣ್ಣೂರು, ಮಲ್ಲಾಪುರ ಮೊದಲಾದ ಕಡೆ ಈ ಸಂಸ್ಕೃತಿಯ ಕೆಲ ಕುರುಹುಗಳು ದೊರೆತಿದ್ದು, ಅವುಗಳ ಆಧಾರದ ಮೇಲೆ ಅಂದಿನ ಜನಜೀವನ ಅರಿಯಬಹುದಾಗಿದೆ. ಇದೇ ರೀತಿ ರಾಜ್ಯದ ಇತರೆಡೆಯೂ ಈ ಕಾಲಘಟ್ಟದ ಅವಶೇಷಗಳು ದೊರೆತಿವೆ. ಇವುಗಳ ಆಧಾರದ ಮೇಲೆ ತೇರದಾಳ ಮತ್ತು ಅದರ ಸುತ್ತಲಿನ ನೆಲೆಗಳು ಶಿಲಾ ತಾಮ್ರ ಕಾಲದ ಮನುಷ್ಯನ ಆವಾಸ ತಾಣವಾಗಿತ್ತೆಂದು ಹೇಳಬಹುದಾಗಿದೆ.

ತೇರದಾಳದಲ್ಲಿ ಈ ಕಾಲಘಟ್ಟಕ್ಕೆ ಸೇರಿದ ಶವ ಸಮಾಧಿ ದೊರೆತಿದೆ. ಇದರ ಸಮೀಪದಲ್ಲೆಲ್ಲಾ ಬೃಹತ್ ಶಿಲಾ ಗೋರಿಗಳಿದ್ದು, ಶಿಲಾ-ತಾಮ್ರಯುಗದ ಶವಕುಣಿಯು ಒಂದು ಕಲ್ಲಿನ ಪೊಟರೆಯಲ್ಲಿತ್ತು. ಅದರಲ್ಲಿನ ಶವದ ತಲೆಯ ಬಳಿ ಕೊಳವೆಯ ನೀರಿನ ಪಾತ್ರೆ, ಸೊಂಟದ ಬಳಿ ಒಂದು ತಾಮ್ರದ ಬಳೆ ಇದ್ದವು. ಇವೆಲ್ಲವೂ ನಿಖರವಾಗಿ ಶಿಲಾ-ತಾಮ್ರಯುಗದ ಸಂಸ್ಕತಿಯವು ಆದ್ದರಿಂದ ಇದೊಂದು ಅಪರೂಪ ಮಾದರಿಯ ಶಿಲಾ-ತಾಮ್ರಯುಗದ ಸಂಸ್ಕೃತಿಯ ಶವಸಂಸ್ಕಾರ ಪದ್ದತಿ ಎಂದು ಹೇಳಬಹುದು. ತೇರದಾಳ ಮೊದಲಾದ ನೆಲೆಗಳ ಶಿಲಾ ತಾಮ್ರಯುಗ ಹಂತಗಳಿಂದ ಸಂಗ್ರಹಿಸಿದ ಇದ್ದಿಲುಗಳ ಕಾಲಮಾನಗಳನ್ನು ಇಂಗಾಲ ೧೪ ಎಂಬ ವೈಜ್ಞಾನಿಕ ತಂತ್ರದಿಂದ ನಿಶ್ಚಯಿಸಲಾಗಿದೆ. ಕೃಷ್ಣಾ ಮೇಲ್ದಂಡೆಯ ಈ ಭಾಗದ ಈ ಸಂಸ್ಕೃತಿಗಳ ಕಾಲಮಾನ ಸುಮಾರು ಕಿ.ಪೂ.೨೩೦೦-೧೦೦೦ ಎಂದು ನಿರ್ಧರಿಸಬಹುದು.

ಇದೇ ಕಾಲಕ್ಕೆ ಸೇರಿದ ಗವಿ ವರ್ಣಚಿತ್ರ, ಬಂಡೆಗಲ್ಲಿನ ಮೇಲೆ ಕೊರೆದ ಚಿತ್ರಗಳು ತೇರದಾಳ ಸಮೀಪದ ಆಸಂಗಿ ಮತ್ತು ಕುಲ್ಲೊಳ್ಳಿಗಳಲ್ಲಿವೆ. ಕುಲ್ಲೊಳ್ಳಿ (ಜಮಖಂಡಿ ತಾಲ್ಲೂಕು, ವಿಜಾಪೂರ ಜಿಲ್ಲೆ) ಯಲ್ಲಿನ **ಗೀರು ಮತ್ತು ಕುಟ್ಟಿದ ರೇಖಾ ಚಿತ್ರಗಳನ್ನು ಅಲ್ವಿನ್ ದಂಪತಿಗಳು ತಾವು ಶೋಧಿಸಿ ಅಧ್ಯಯನ ಮಾಡಿದ್ದಾರೆ**. ಈ ಗ್ರಾಮಗಳ ನಡುವೆ ಸುಮಾರು ಒಂದು ಮೈಲು ಸುತ್ತಳತೆಯ ಕಲ್ಲಿನ ಗುಡ್ಡವಿದ್ದು, ಅದಕ್ಕೆ **'ಗೊಂಬಿ ಗುಡ್ಡ'** ವೆಂದು ಕರೆಯುತ್ತಾರೆ. ಇಲ್ಲಿ ಪ್ರಾಚೀನ ಕಾಲದ ಜನರು ಕಲ್ಲಿನಲ್ಲಿ ಕೆತ್ತಿದ ರೇಖಾ ಚಿತ್ರಗಳಿವೆ. ಈ ಚಿತ್ರದಲ್ಲಿ ಆವೇಶದಿಂದ ಕಾದಾಡುವ ಗೂಳಿಗಳು (ಗೂಳಿಗಳ ಕಾಳಗ), ಮನುಷ್ಯರು, ಒಂಟೆಗಳು, ಒಂಟೆಯ ಸವಾರರು, ಆನೆಗಳು, ಚಿಗರೆಗಳು ಇವೇ ಮೊದಲಾದ ಪ್ರಾಣಿಗಳ ಗಿರು ಚಿತ್ರಗಳಿದ್ದು, ಇವುಗಳಲ್ಲಿ ರೇಖಾಮಂಡಲ ಚಿತ್ರ ಅಪರೂಪದ್ದಾಗಿದೆ. ಇಲ್ಲಿಯ ಎದುರು ಬದುರಾಗಿ ನಿಂತಿರುವ ಗೂಳಿಗಳ ಗೀರು ರೇಖೆಗಳು ಸೂಕ್ಷ್ಮವಾಗಿದ್ದು, ಕೋಡುಗಳು (ಕೊಂಬ) ಮುಂದಕ್ಕೆ ಬಾಗಿವೆ. ಇವು ತಾಮ್ರ ಇಲ್ಲವೆ ಮಧ್ಯ ಶಿಲಾಯುಗದ ಜನರ ರಚನೆಯಾಗಿರಬೇಕೆಂದು ಅ.ಸುಂದರ ಅವರು ಅಭಿಪ್ರಾಯಪಟ್ಟಿದ್ದಾರೆ. ಅದರಂತೆ ಜಮಖಂಡಿಯ ಪಶ್ಚಿಮಕ್ಕೆ ೮ ಕಿ.ಮೀ. ದೂರದಲ್ಲಿದ್ದ ಬಂಡಿಗಣಿ ಎಂಬ ಗ್ರಾಮದ ಗುಡ್ಡದಲ್ಲಿಯೂ ಸಹ ಗುಹೆಗಳಲ್ಲಿ ಕಲ್ಲಿನ ಮೇಲೆ ಬಿಳಿ ಬಣ್ಣದಿಂದ ತೆಗೆದ ಚಿತ್ರಗಳಿದ್ದು, ಅವುಗಳಲ್ಲಿ ದೇವಾಲಯ ಮತ್ತು ತೇರಿನ ಸುತ್ತ ಜನ ಬೇರೆ ಬೇರೆ ಭಂಗಿಯಲ್ಲಿ ನಿಂತಿರುವುದು ಕಂಡು ಬರುತ್ತದೆ. ಇದಕ್ಕೆ **"ನೂರಲಪ"** ಎಂದು ಹೆಸರು[೮೦]. ಈ ಮೇಲಿನ ಚಿತ್ರಗಳ ಮೇಲಿಂದ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆಯು ಈ ಭಾಗದಲ್ಲಿ ಸಮೃದ್ಧವಾಗಿತ್ತೆಂದು ತಿಳಿದುಬರುತ್ತದೆ. ತೇರದಾಳ ಮೊದಲಾದ ನೆಲೆಗಳ ಶಿಲಾ ತಾಮ್ರಯುಗ ಹಂತಗಳಿಂದ ಸಂಗ್ರಹಿಸಿದ ಇದ್ದಿಲುಗಳ ಕಾಲಮಾನಗಳನ್ನು ಇಂಗಾಲ ೧೪ ಎಂಬ ವೈಜ್ಞಾನಿಕ ತಂತ್ರದಿಂದ ನಿಶ್ಚಯಿಸಲಾಗಿದೆ. ಕೃಷ್ಣಾ ಮೇಲ್ದಂಡೆಯ ಸಂಸ್ಕೃತಿಗಳ ಕಾಲಮಾನ ಸುಮಾರು ಕಿ.ಪೂ.೨೩೦೦-೧೦೦೦ ಎಂದು ಹೇಳಬಹುದು.

**ಕಬ್ಬಿಣ ಯುಗ ಅಥಾವ ಬೃಹತ್ ಶಿಲಾಯುಗ ಸಂಸ್ಕೃತಿ-(ಕ್ರಿ.ಪೂ.೧೨೦೦-೨೦೦)**

ಸತ್ತ ಮನುಷ್ಯನ ದೇಹ (ನಿರ್ಜೀವವಾದ ದೇಹ)ವನ್ನು ಹೂತು (ಸಮಾಧಿ ಮಾಡಿ) ಅದರ ಮೇಲೆ ಬೃಹತ್ ಶಿಲೆಗಳಿಂದ ಗೋರಿಗಳನ್ನು ಕಟ್ಟುದವುದಕ್ಕೆ ಬೃಹತ್ ಶಿಲಾಯುಗ(**ಮೆಗಾಲಿಥಿಕ್ ಏಜ್**)ಎಂದು ಕರೆಯಲಾಗುತ್ತಿದೆ. ಜೊತೆಗೆ ಈ ಹಂತದಲ್ಲಿ ಕಬ್ಬಿಣದ

ಬಳಿಕೆ ಆರಂಭಗೊಂಡಿದ್ದರಿಂದ ಈ ಕಾಲವನ್ನು ಕಬ್ಬಿಣಯುಗವೆಂತಲೂ **(ಐರನ್ ಏಜ್)** ಕರೆಯಲಾಗುತ್ತದೆ. ಶವ ಸಂಸ್ಕಾರದ ಜೊತೆಗೆ ಆ ವ್ಯಕ್ತಿ ದಿನನಿತ್ಯ ಬಳಸುತ್ತಿದ್ದ ವಸ್ತುಗಳನ್ನು ಗೋರಿಗಳಲ್ಲಿ ಸಾಮಾನ್ಯವಾಗಿ ಇಡುತ್ತಿದ್ದರು. ಸಾಮಾನ್ಯವಾಗಿ ಹಳ್ಳಿಯಲ್ಲಿ ಇವುಗಳನ್ನು **'ಮೋರಿಯರ ಮನೆ, ಪಾಂಡವರ ಮನೆ, ಗಿಡ್ಡರ ಮನೆ ಗೂಡು'** ಇವೇ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ಒಂದು ಸಂಸ್ಕೃತಿಯ ಕುರುಹುಗಳು ಜಗತ್ತಿನಾದ್ಯಂತ ನಾನಾ ಭಾಗಗಳಲ್ಲಿ ಕಂಡು ಬರುತ್ತವೆ. ದಕ್ಷಿಣ ಭಾರತದ ಮಟ್ಟಿಗೆ ಮೊಟ್ಟ ಮೊದಲ ಬೃಹತ್ ಶಿಲಾಯುಗದ ಗೋರಿಗಳನ್ನು ಕೇರಳ ರಾಜ್ಯದ ಬವಿಗೆಟನ್ ಎಂಬಲ್ಲಿ ಗುರುತಿಸಲಾಯಿತು[೪೧]. ಅದೇ ರೀತಿಯಾಗಿ ಕರ್ನಾಟಕದಲ್ಲಿ ಮೊಟ್ಟಮೊದಲಿಗೆ ಈ ಸಂಸ್ಕೃತಿಯ ಕುರುಹುಗಳನ್ನು ಪತ್ತೆ ಹಚ್ಚಿದವರೆಂದರೆ ಬ್ರಿಟಿಷ್ ಅಧಿಕಾರಿಯಾಗಿದ್ದ ಮೇಡೋಸ್ ಟೇಲರ್ ಅವರು ಕ್ರಿ.ಶ.೧೮೫೧-೧೮೫೩ ಗುಲ್ಬರ್ಗಾ, ರಾಯಚೂರು, ಬಳ್ಳಾರಿ ಜಿಲ್ಲೆಗಳಲ್ಲಿ ಈ ಕುರುಹುಗಳನ್ನು ಪತ್ತೆ ಹಚ್ಚಿದರು. ಅಲ್ಲದೇ ಈ ಸಂಸ್ಕೃತಿಯ ಮೇಲೆ ವಿಶೇಷ ಬೆಳಕನ್ನು ಚೆಲ್ಲಿದವರೆಂದರೆ ಕಾಂಗ್ರೆವ್, ಮೆಕೆನ್ಜ಼ಿ, ಅಲೆಗ್ಸಾಂಡರ್ ರೇ, ಡಾ.ವಿ.ಡಿ.ಕೃಷ್ಣಸ್ವಾಮಿ, ಶ್ರೀ.ಎಮ್.ಎಚ್.ಕೃಷ್ಣ ಅ.ಸುಂದರ, ಡಾ.ವಿರೂಪಾಕ್ಷಿ ಪೂಜಾರಳ್ಳಿ, ಡಾ.ಎಸ್.ವೈ.ಸೋಮಶೇಖರ, ಡಾ.ಎಚ್.ತಿಪ್ಪೇಸ್ವಾಮಿ ಮುಂತಾದ ಇತಿಹಾಸಕಾರರು.

ದಕ್ಷಿಣ ಭಾರತದಲ್ಲಿ ಮೊಟ್ಟ ಮೊದಲ ಉತ್ಖನನಕ್ಕೆ ಒಳಪಟ್ಟ ಇಂತಹ ಸಂಸ್ಕೃತಿಯ ನೆಲೆಯೆಂದರೆ **"ಬ್ರಹ್ಮಗಿರಿ"**. ಡಾ.ಎಮ್.ಎಚ್.ಕೃಷ್ಣ ಮತ್ತು ಮಾರ್ಟಿಮರ್ ವೀಲ್ಹರ್‌ರವರಿಂದ ಉತ್ಖನನವಾಗಲ್ಪಟ್ಟ ಇದು ನವಶಿಲಾಯುಗ, ಬೃಹತ್ ಶಿಲಾಯುಗ ಹಾಗೂ ಇತಿಹಾಸ ಕಾಲದ ಕುರುಹುಗಳನ್ನು ಹೊಂದಿರುವ ಪ್ರಮುಖ ನೆಲೆಯಾಗಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಮಾನವನ್ನು ಹಲವಾರು ವಿದ್ವಾಂಸರು ನಿರ್ಧಿಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಇದರ ಕಾಲಮಾನವನ್ನು ಋಗ್ವೇದ, ಶತಪತ, ಬ್ರಾಹ್ಮಣ ಮತ್ತು ಸಂಗಮ ಸಾಹಿತ್ಯಿಕ ಆಧಾರಗಳಲ್ಲಿ ಪ್ರಮುಖವಾಗಿ ಗುರುತಿಸಲು ಪ್ರಯತ್ನಿಸಿದ್ದಾರೆ. ಅನ್ವೇಷಣೆ ಮತ್ತು ಉತ್ಖನನಗಳಲ್ಲಿ ಸಿಕ್ಕಂತ ನಿರ್ಧಿಷ್ಟವಾದ ಆಧಾರಗಳಿಂದ ಪ್ರಾಚ್ಯ ವಿದ್ವಾಂಸರು ಇದರ ಕಾಲಮಾನವನ್ನು ಗುರುತಿಸುವಲ್ಲಿ ಸಾಕಷ್ಟು ಪ್ರಯತ್ನಿಸಿದ್ದಾರೆ. ಡಾ.ಎಮ್.ಎಚ್. ಕೃಷ್ಣರವರು ಇದರ ಕಾಲವನ್ನು ಕ್ರಿ.ಪೂ.೧೫೦೦-೧೦೦೦ ಎಂದು ಹೇಳಿದ್ದಾರೆ. ಸರ್ ಮಾರ್ಟಿವರ್ ವೀಲ್‌ರವರು ಬ್ರಹ್ಮಗಿರಿಯ ಉತ್ಖನನದಲ್ಲಿ ಸಿಕ್ಕಿರುವಹ ಕುರುಹುಗಳ ಮೇಲಿಂದ ಇದರ ಕಾಲವನ್ನು ಕ್ರಿ.ಪೂ. ೨ನೇ ಶತಮಾನದಿಂದ ಕ್ರಿ.ಶ. ೧ನೇ ಶತಮಾನವೆಂದು ವಿವರಿಸಿದ್ದಾರೆ.

ಭಾರತದಲ್ಲಿ ಇತರ ಸಂಸ್ಕೃತಿಗಳಂತೆ ಸಾಮಾನ್ಯವಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಲ್ಗೋರಿಗಳು ಮತ್ತು ವಸತಿ ನೆಲೆಗಳು ಕಂಡುಬಂದಿವೆ. ಬ್ರಹ್ಮಗಿರಿ, ನುಂಕೆಮಲೆ, ಜಟ್ಟಿಂಗರಾಮೇಶ್ವರ, ಕಪ್ಪಗಲ್ಲು, ಸಂಗನಕಲ್ಲು, ಹೀರೆಬೆನಕಲ್, ಕುಮತಿ, ಹುಲಿಕುಂಟೆ, ವಟಗಲ್ ಮೊದಲಾದವು ಈ ಕಾಲದ ರಾಜ್ಯದ ಪ್ರಮುಖ ನೆಲೆಗಳಾಗಿವೆ. ಇಡೀ ಭಾರತದಲ್ಲಿಯೇ ವಿಶಿಷ್ಟ ಪೂರ್ಣವೆನಿಸಿರುವ ಶಿಲುಬೆಯಾಕಾರದ ಕಲ್ಗೋರಿಯನ್ನು ಅ.ಸುಂದರ ಅವರು ಬೆಳಕಿಗೆ ತಂದು, ಈ ಸಂಸ್ಕೃತಿಯನ್ನು, ಅದರಲ್ಲಿಯೂ ಮುಖ್ಯವಾಗಿ ಕಲ್ಗೋರಿಗಳ ವಿನ್ಯಾಸವನ್ನು ಗುರುತಿಸುವಲ್ಲಿ ಪ್ರಾದೇಶಿಕ ಭೌಗೋಳಿಕ ಸನ್ನಿವೇಶ ಅಲ್ಲಿ ದೊರಯುವ ಶಿಲಾಮಾದರಿಗಳು ಲೋಹನಿಕ್ಷೇಪಕಗಳು ಹೇಗೆ ಪಾತ್ರವಹಿಸುತ್ತವೆ ಎಂಬುದನ್ನು ಅವರು ನಿರೂಪಿಸಿದ್ದಾರೆ[೪೨].

ಅನ್ವೇಷಣೆ, ಉತ್ಖನನಗಳಿಂದ ವಿವಿಧ ಪ್ರಕಾರದ ಗೋರಿಗಳನ್ನು ಕರ್ನಾಟಕದಲ್ಲಿ ವಿದ್ವಾಂಸರು ಗುರುತಿಸಿದ್ದಾರೆ. ಇವುಗಳಲ್ಲಿ ಹಾದಿಕೋಣೆ, ಕಂಡಿಕೋಣೆ, ಆಯಾತಾಕಾರದ ಕೊರೆದು ತಯಾರಿಸಿದ ಶವಕುಣಿಗಳು, ಮಡಿಕೆಯ ಶವಪೆಟ್ಟಿಗೆಗಳುಳ್ಳ ದುಂಡುವೃತ್ತಗಳು, ನಿಲಿಸುಗಲ್ಲುಗಳು, ಶಿಲಾವೃತ್ತ, ಶವ ಕುಳಿ, ಆಸ್ಥಿ ಪಾತ್ರೆ, ಕಲ್ಲುಗುಂಪೆಗಳು, ಏಕಾಶಿಲಾ ಮಾನವಾಕೃತಿಗಳು ಮುಖ್ಯವಾಗಿವೆ, ಇವುಗಳಲ್ಲಿ ಅಪರೂಪವಾಗಿ ನಿರ್ಮಿಸಿರುವ ಬೃಹದಾಕಾರದ ಕಲ್ಲಿನ ಗೊಂಬೆಗಳಿವೆ. (ಏಕಾಶಿಲಾ ಮಾನವಾಕೃತಿಗಳು)ಚಪ್ಪಟೆ ಕಲ್ಲಿನಲ್ಲಿ ಮನುಷ್ಯಾಕೃತಿಯನ್ನು ಹೋಲುವ ಗೊಂಬೆಗಳು ನಮ್ಮ ಗಮನ ಸೆಳೆಯುತ್ತವೆ. ಇಂಥ ಗೊಂಬೆಗಳು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಸುಮಾರು ೧೬ಕ್ಕಿಂತಲೂ ಹೆಚ್ಚಿನ ಸ್ಥಳಗಳಲ್ಲಿವೆ[೪೩]. ರಾಜ್ಯದ ಹಿರೆಬೆಣಕಲ್ಲು, ಕುಮತಿ, ಹುಲಿಕುಂಟೆಗಳಲ್ಲಿ ಇಂಥದೆ ಗೊಂಬೆಗಳಿವೆ. ಕರ್ನಾಟಕದಲ್ಲಿನ ಅತಿ ಹೆಚ್ಚು ಸಂಖ್ಯೆಯ ನೆಲೆಗಳು ಇದೇ ಸಾಂಸ್ಕೃತಿಕ ಹಂತಕ್ಕೆ ಸೇರಿದವುಗಳಾಗಿದ್ದು, ಈ ಹಂತದಲ್ಲಿ ಕಬ್ಬಿಣದ ಜೊತೆಗೆ ಅತಿ ಹೆಚ್ಚು ಪ್ರಮಾಣದಲ್ಲಿ ಕಪ್ಪು ವರ್ಣದ, ಪೂರ್ಣ ಕಪ್ಪು ಮತ್ತು ಪೂರ್ಣ ಕೆಂಪು ವರ್ಣದ ಮಡಿಕೆಗಳ ಉಪಯೋಗವಿದ್ದದನ್ನು ಗುರುತಿಸಲಾಗಿದೆ.

ತೇರದಾಳ ಹಾಗೂ ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ಈ ಕಾಲಘಟ್ಟಕ್ಕೆ ಸೇರಿದ ಸುಮಾರು ೧೦೦೦ ಕ್ಕಿಂತ ಹೆಚ್ಚು ಶಿಲಾ ಗೋರಿಗಳು ಕಂಡುಬರುತ್ತವೆ. ಈ ಪರಿಸರದಲ್ಲಿ ಕೃಷ್ಣ ನದಿಯ ದಂಡೆಯ ಮೇಲೆ ಬರುವ ಪ್ರದೇಶಗಳ ಸುಮಾರು ೯ ಕಿಲೋ ಮೀಟರ ಪ್ರದೇಶದ ಅಂತರದಲ್ಲಿ ಈ ಕಾಲದ ನೆಲೆಗಳು ಕೇಂದ್ರಿಕೃತವಾಗಿವೆ. ತೇರದಾಳ ಸಮೀಪದ **ಕಡ್ಲಿಪಲ್ಲಿ** ಎಂಬ ಹೆಸರಿನ ಗುಡ್ಡದಲ್ಲಿ ಹಲವು ಬೃಹತ್ ಶಿಲಾಗೋರಿಗಳನ್ನು ಕಾಣುತ್ತೇವೆ. ಅದೇ ರೀತಿ ತೇರದಾಳದ ಉತ್ತರದಲ್ಲಿರುವ ಗುಡ್ಡ ಪ್ರದೇಶದ ಸಮೀಪದಲ್ಲಿನ ಹನಗಂಡಿ, ಹಳಿಂಗಳಿ, ಮದನಮಟ್ಟಿ ಮತ್ತು ಆಸಂಗಿ ಪರಿಸರದೊಳಗೆ ನೂರಾರು ಬೃಹತ್ ಶಿಲಾಗೋರಿಗಳು ಐದು ಕಿ.ಮೀ. ಪ್ರದೇಶದಲ್ಲಿ ವ್ಯಾಪಿಸಿವೆ. ಗ್ರಾಮಗಳಲ್ಲಿ ಈ ಬೃಹತ್ ಶಿಲಾಯುಗದ ಗೋರಿಗಳಿವೆ. **'ತೇರದಾಳ'** ನೆಲೆಯ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿದವರೆಂದರೆ **"ಕನ್ನಡ ಸಂಶೋಧನ ಕೇಂದ್ರ"** ಧಾರವಾಡದ ಡಾ.ಎ.ಎಮ್. ಅಣ್ಣಿಗೇರಿಯವರು ಹಾಗೂ ವಿದ್ವಾಂಸರಾದ ಪ್ರೊ.ಅ.ಸುಂದರರವರು, ತೇರದಾಳ ಹಾಗೂ ಅದರ ಸುತ್ತಲಿನಲ್ಲಿ ಸಿಗುವ ಈ ಗೋರಿಗಳು ಗ್ರೀಕ್ ಅಥವಾ ಲ್ಯಾಟಿನ್ ಮಾದರಿಯ ಪಾಸೆಜ್ ಚೇಂಬರಗಳನ್ನು ಹೊಂದಿವೆ ಎಂದು ವಿಶೇಷವಾಗಿ ಅವರು ತೋರಿಸಿ ಕೊಟ್ಟಿದ್ದಾರೆ[೪೪]. ಅವರು ಕೊಣ್ಣೂರು ಮತ್ತು ಸವದತ್ತಿಯಲ್ಲಿ ಅನ್ವೇಷಣಾ ಕಾರ್ಯದಲ್ಲಿ ಇರುವ ಶಿಲಾಗೋರಿಗಳನ್ನು ಆಧಾರವಾಗಿಟ್ಟುಕೊಂಡು ತೇರದಾಳ, ಹನಗಂಡಿ ಮತ್ತು ಹಳಿಂಗಳಿ ಈ ಪ್ರದೇಶಗಳಲ್ಲಿ ಹಾದಿ ಕೋಣಿ ಗೋರಿಗಳು ಮತ್ತು ಚಿಕ್ಕ ಚೌಕಾದ ಕೋಣೆ ಗೋರಿಗಳು. ಹಾಗೂ ವೃತ್ತ ಕಲ್ಲುರಾಶಿಗಳನ್ನು ಹೊಂದಿರುವಂತ ಗೋರಿಗಳೆನ್ನುವ ಮೂರು ಪ್ರಕಾರಗಳನ್ನು ಗುರುತಿಸಿದ್ದಾರೆ. ಐತಿಹಾಸಿಕ ತೇರದಾಳ ಪ್ರದೇಶದ ವಿವಿಧ ನೆಲೆಗಳಲ್ಲಿ ದೊರೆತಿರುವ ಹಾದಿಕೋಣೆ ಗೋರಿಗಳನ್ನು ಪುನಃ ಅವರು **ಮೂರು** ಪ್ರಕಾರಗಳಲ್ಲಿ ವಿಂಗಡಣೆ ಮಾಡಿದ್ದಾರೆ.

೧. **ಗ್ರೀಕ್ ಅಥವಾ ಲ್ಯಾಟೀನ್ ಮಾದರಿಯ ಅಡ್ಡಾದ ಹಾದಿಕೋಣೆ ಗೋರಿಗಳು**
೨. **ಹಾದಿವುಳ್ಳ ವೃತ್ತಾಕಾರದ ಕೋಣಿ ಗೋರಿಗಳು**
೩. **ಕೊಣ್ಣೂರು ಮಾದರಿಯ ಹಾದಿ-ಕೋಣೆ ಗೋರಿಗಳು**

ಇವುಗಳಲ್ಲಿ ತೇರದಾಳದ ಪಶ್ಚಿಮ ಮತ್ತು ಉತ್ತರಕ್ಕೆ ಹೆಚ್ಚಾಗಿ ಗ್ರೀಕ್ ಅಥವಾ ಲ್ಯಾಟಿನ್ ಮಾದರಿಯ ಅಡ್ಡಾದ ಹಾದಿಕೋಣೆ ಗೋರಿಗಳು ಹೆಚ್ಚಾಗಿ ಕಾಣಬಹುದೆಂಬುದನ್ನು ಅವರು ಸಾಕ್ಷಿ ಸಮೇತವಾಗಿ ನಿರೂಪಿಸಿದ್ದಾರೆ.

**೧. ಗ್ರೀಕ್ ಅಥವಾ ಲ್ಯಾಟೀನ್ ಮಾದರಿಯ ಅಡ್ಡಾದ ಹಾದಿಕೋಣೆ ಗೋರಿಗಳು**

ಈ ಗೋರಿಗಳು ಸಾಮಾನ್ಯವಾಗಿ ಉದ್ದವಾಗಿದ್ದು ಉತ್ತರ-ದಕ್ಷಿಣವಾಗಿವೆ. ಇದರಲ್ಲಿಯ ಹಾದಿ (ದಾರಿ) ಬಹಳ ಚಿಕ್ಕದಾಗಿರುತ್ತದೆ. ಗೋರಿಯ ಹಾದಿ ಕೋಣೆ(ಚೇಂಬರ್)ಗಿಂತ ಮೇಲೆ ರಚಿತವಾಗಿರುತ್ತದೆ. ಇದರಲ್ಲಿ ಸಾಮಾನ್ಯವಾಗಿ ೯(ಅರ್ತೋರ್ಸ್ಟ್ಯಟ್ಸ)ಗಳು ಎಂಟು ಕಡೆಗೆ ಇರುತ್ತವೆ. ಗೋರಿಗಳ ಮೇಲ್ಗಡೆಗೆ ಕಲ್ಲು ಚಪ್ಪಡಿಗಳನ್ನು ಸರಿಯಾಗಿ ಇರುತ್ತವೆ. (ಕ್ಯಾಪ್ ಸ್ಟೋನ್) ಪೂರ್ವ, ಪಶ್ಚಿಮ ಮತ್ತು ಉತ್ತರಕ್ಕೆ ಕಲ್ಲನ್ನು ನಿಲ್ಲಿಸಿ ಮೇಲೊಂದು ಕಲ್ಲನ್ನು ಇಟ್ಟಿರುತ್ತಾರೆ. ಇದಕ್ಕೆ **'ಟೋಪಿಕಲ್ಲು'** ಎಂದೂ ಕೂಡಾ ಕರೆಯುತ್ತಾರೆ. ಮೇಲಿನ ಕಲ್ಲು ಗೋರಿಯ ಆಕಾರಕ್ಕೆ ತಕ್ಕಂತೆ ವಿಶಾಲವಾಗಿರುತ್ತದೆ. ಕೆಲವೊಂದು ಗೋರಿಗಳಲ್ಲಿ ನಾಲ್ಕು ಕಡೆ ಕಲ್ಲು ಚಪ್ಪಡಿಗಳಿಟ್ಟು ಜೋಡಿಸಲಾಗಿದೆ. ರಂಧ್ರ ಕೂಡ ಇರುವುದಿಲ್ಲ. ಹಾದಿ ಕೋಣೆ ಗೋರಿಗಳು ಕೆಲವು ಸಲ ಕಲ್ಲು ರಾಶಿಗಳಿಂದ ಮೇಲಿನ (ಟೋಪಿ ಕಲ್ಲಿನ) ವರೆಗೆ ಮುಚ್ಚಿರುತ್ತಾರೆ. ಈ ಹಾದಿಕೋಣೆ ಗೋರಿಗಳು ಮೇಲಿನ ಕಲ್ಲು ರಾಶಿಗಳು ಆಯತಾಕಾರಗಳಾಗಿದ್ದರೆ ಕೆಲವೊಮ್ಮೆ ವೃತ್ತಾಕಾರವಾಗಿರುತ್ತವೆ. ಮೇಲಿನ ಟೋಪಿ ಕಲ್ಲಿಗೆ ಆಧಾರವಾಗಿ ಕಂಬಗಳನ್ನು ನಿಲ್ಲಿಸುತ್ತಿದ್ದರು. ತೇರದಾಳದಲ್ಲಿ ೨೪ ಮೀಟರ್ X ೮ ಮೀಟರ್ ಅಳತೆಯನ್ನು ಹೊಂದಿರುವ ಗೋರಿಯೊಂದನ್ನು ಪ್ರೊ.ಅ.ಸುಂದರರವರು ಪತ್ತೆ ಹಚ್ಚಿದ್ದಾರೆ[೪೫]. ಕೆಲವು ಸಲ ಅದೇ ವೃತ್ತದಲ್ಲಿಯ ಗೋರಿಗಳನ್ನು ಕಲ್ಲು ರಾಶಿಗಳಿಂದ ಸುತ್ತುವರಿಸುತ್ತಿದ್ದರು. ಈ ಕಲ್ಲು ರಾಶಿಗಳ ಸುತ್ತುವರೆಗೆ ಆಯಾ ಗೋರಿಗಳ ಅಳತೆಯನ್ನು ಹೊಂದಿರುತ್ತಿದ್ದವು.

**೨. ಹಾದಿವುಳ್ಳ ವೃತ್ತಾಕಾರದ ಕೋಣೆ ಗೋರಿಗಳು**

ವೃತ್ತಕಾರದ ಈ ಕೋಣೆಗೋರಿಯು ಸಹ ಚಿಕ್ಕದಾದ ಹಾದಿಯನ್ನು ಹೊಂದಿರುತ್ತದೆ. ಅಲ್ಲದೇ ಒಳಗಿನ ಗೋರಿಯು (ವೃತ್ತಾಕಾರದಲ್ಲಿನ) ಆಯತಾಕಾರದಲ್ಲಿರುತ್ತದೆ. ಇದರ ಮೇಲಿನ ಟೋಪಿ ಕಲ್ಲಿಗೆ ಆಧಾರವಾಗಿ ಕಂಬಗಳನ್ನು ನಿಲ್ಲಿಸುತ್ತಿದ್ದರು. ಇವುಗಳಿಗೆ ಸಂಪೂರ್ಣ (ರಂಧ್ರವಿಲ್ಲದ) ಶಿಲಾ ಫಲಕಗಳು ಸುತ್ತಲೂ ಕಟ್ಟಲ್ಪಟ್ಟಿರುತ್ತದೆ. ಈ ಹಾದಿವುಳ್ಳ ವೃತ್ತಾಕಾರದ ಕೋಣೆಗೋರಿಗಳು ಸಾಮಾನ್ಯವಾಗಿ ಎರಡು ಮೀಟರ್ ಸುತ್ತಳತೆಯನ್ನು ಹೊಂದಿದೆ.

**೩. ಕೊಣ್ಣೂರು ಮಾದರಿಯ ಹಾದಿ-ಕೋಣೆ ಗೋರಿಗಳು**

ಆಯತಾಕಾರದಲ್ಲಿರುವ ಈ ಗೋರಿಗಳು ಸಹ ದಕ್ಷಿಣದಲ್ಲಿ ಚಿಕ್ಕದಾದ ಹಾದಿಯನ್ನು ಹೊಂದಿರುತ್ತವೆ. ಇವುಗಳು ಕೂಡಾ ಆಯತಾಕಾರದಲ್ಲಿ ಅಥವಾ ವೃತ್ತಾಕಾರದಲ್ಲಿರುತ್ತವೆ. ಇವು ಸಾಮಾನ್ಯವಾಗಿ ೨ ಮೀಟರ್ ೧ X ೧ ಮೀಟರ್ ೨೦ ಸೆಂ. ಮೀಟರ್ X ೮೦ ಸೆಂ. ಮೀಟರ್ ಅಳತೆ ಹೊಂದಿವೆ. ಇಂತಹ ಸುಮಾರು ೨೦ ಗೋರಿಗಳ ಮಾದರಿ ಹಳಿಂಗಳಿಯಲ್ಲಿ ಹಾಗೂ ೫ ಗೋರಿಗಳ ಮಾದರಿಗಳು ತೇರದಾಳದಲ್ಲಿ ಕಂಡು ಬಂದಿವೆ. ಆದರೆ ಇವುಗಳಲ್ಲಿ ಹೆಚ್ಚಿನವುಗಳು ನಾಶವಾಗಿದ್ದನ್ನು ನಾವು ಕಾಣುತ್ತೇವೆ.

**೧. ಚಿಕ್ಕ ಚೌಕಾದ ಕೋಣೆ ಗೋರಿಗಳು**

ಇಂತಹ ಮಾದರಿಗಳು ಕೊಣ್ಣೂರು ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬಂದಿದೆ. ಇವು ಹಾದಿಯನ್ನು (ಪ್ಯಾಸೇಜ್) ಹಾಗೂ ಅದಕ್ಕೆ ರಂಧ್ರಗಳನ್ನು (ಪೋರ್ಟ್-ಹೋಲ್) ಹೊಂದಿರುವುದಿಲ್ಲ. ಕೆಲವು ಸಲ ಎರಡು-ಮೂರು ವೃತ್ತಗಳು ಕೂಡಿಕೊಂಡು ಒಂದು ಕೋಣೆ ಗೋರಿಯಾಗಿರುತ್ತವೆ. ಸಾಮಾನ್ಯವಾಗಿ ಕೋಣೆಗಳು ೬೦ ಸೆಂಟಿ ಮೀಟರ್‌ನಿಂದ ಒಂದು ಸೆಂಟಿ ಮೀಟರ್‌ವರೆಗೆ ಚೌಕಾಕಾರವಾಗಿರುತ್ತವೆ. ಇದರ ಸುತ್ತಳತೆ ೨ ಮೀಟರ್ ನಿಂದ ೩ ಮೀಟರ್ ವಿಸ್ತೀರ್ಣದಲ್ಲಿರುತ್ತದೆ.

**೨. ವೃತ್ತ ಕಲ್ಲು ರಾಶಿಗಳನ್ನು ಹೊಂದಿದಂತಹ ಕಲ್ಲು ಗೋರಿಗಳು**

ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದ ಸಮೀಪದ ಹಳಿಂಗಳಿಯ ದಕ್ಷಿಣ ಭಾಗದ ಎತ್ತರದ ಪ್ರದೇಶದ ಮೇಲೆ ಇಂತಹ ಸುಮಾರು ೧೮ ಮಾದರಿಯ ಗೋರಿಗಳು ಕಂಡು ಬಂದಿದ್ದು, ಇಂತಹ ಗೋರಿಗಳು ಬೇರೆ ಪ್ರದೇಶದಲ್ಲಿಯೂ ಗೋಚರಿಸುತ್ತವೆ. ಈ ಶಿಲಾಗೋರಿಗಳು ಬೇರೆ ಬೇರೆ ಅಳತೆಯನ್ನು ಹೊಂದಿವೆ. ಅತಿ ಚಿಕ್ಕ ಗೋರಿ ಎಂದರೆ ಸುಮಾರು ಎರಡು ಮೀಟರದ್ದಾಗಿದ್ದು ಅತೀ ಹೆಚ್ಚೆಂದರೆ ಹನ್ನೆರಡು ಮೀಟರ್ ಸುತ್ತಳತೆಯನ್ನು ಹೊಂದಿದೆ. ಇವುಗಳಲ್ಲಿ ೪ ರಿಂದ ೬ ಮೀಟರ್ ಸುತ್ತಳತೆಯನ್ನು ಹೊಂದಿರುವ ಶಿಲಾ ಗೋರಿಗಳು ಸಾಮಾನ್ಯವಾಗಿವೆ[೪೬]. ವೃತ್ತ ಶಿಲಾಗೋರಿಗಳು ದೊಡ್ಡ ಕಲ್ಲುಗಳಿಂದ ಅಥವಾ ಆಯತಾಕಾರದ ಶಿಲಾಫಲಕಗಳಿಂದ ಸುತ್ತವರೆದಿರುತ್ತವೆ. ಇದರ ವೃತ್ತ ಮಾತ್ರ ಸರಿಸಮನಾಗಿರುತ್ತದೆ.

ಇವುಗಳನ್ನು ಕಟ್ಟಲು ಸಾಮಾನ್ಯವಾಗಿ ಉಸುಕು ಮತ್ತು ಕಲ್ಲುಗಳನ್ನು ಹೆಚ್ಚಾಗಿ ಉಪಯೋಗಿಸಿದ್ದಾರೆ. ವೃತ್ತಗಳ ಸುತ್ತಗಳಲ್ಲಿ ಬಳಸಿದ ಕಲ್ಲುಗಳು, ಬಿಳಿ, ಬೂದುಬಣ್ಣ (ವೈಟಷ ಗ್ರೇ ಸ್ಟೋನ್) ದಿಂದ ಕೂಡಿವೆ. ಆದರೆ ಇಲ್ಲಿಯ ಗ್ರೀಕ್ ಅಥವಾ ಲ್ಯಾಟಿನ್ ಮಾದರಿಯ ಗೋರಿಗಳಲ್ಲಿ ಬಿಳಿಯ ಬೆಣಚು ಕಲ್ಲನ್ನು ಬಳಸಿದ್ದಾರೆ[೪೭]. ಸುತ್ತಳತೆಯ ಕಲ್ಲುರಾಶಿ ಗೋರಿಗಳಲ್ಲಿ ದಖನ್ ಪ್ರಸ್ಥಭೂಮಿಯ ಶಿಲೆಯನ್ನು ಬಳಸಲಾಗಿದೆ. ಮುಖ್ಯವಾಗಿ ಈ ಯುಗವನ್ನು ಗುರುತಿಸಲು ಗೋರಿಗಳನ್ನು ಗುರುತಿಸಲಾಗುತ್ತಿದೆ. ಮುಖ್ಯವಾಗಿ ಈ ಯುಗದ ಜನರು ಒಂದು ಕಡೆ ಶಾಶ್ವತವಾಗಿ ನೆಲೆ ನಿಂತು ಕಬ್ಬಿಣದ ಬಳಕೆಯನ್ನು ಮಾಡಿಕೊಂಡಿರುವುದು ತಿಳಿದುಬರುತ್ತದೆ. ಜನರಲ್ಲಿ ಈ ಹೊತ್ತಿಗಾಗಲೇ ನಂಬಿಕೆಗಳು, ಆಚರಣೆಗಳು ತಲೆ ಎತ್ತಿದ್ದವು. ಅಂದರೆ ಶವಸಂಸ್ಕಾರವು ಇವರಲ್ಲಿ ಒಂದು ನಂಬಿಕೆಯಾಗಿ ರೂಢಿಯಲ್ಲಿತ್ತು[೪೮]. ಹಾಗಾಗಿ ಮಾನವ ಸತ್ತ ನಂತರ ದೇಹವನ್ನು ಹೂಳುವುದು ಮತ್ತು ಅದರ ಮೇಲೆ ಒಂದು ಗೋರಿಯನ್ನು ನಿರ್ಮಿಸುವುದು ಕಂಡುಬರುತ್ತದೆ. ಹಾಗಾಗಿ ಮಾನವ ತನ್ನ ಅನುಕೂಲಕ್ಕಾಗಿ ರೂಢಿ ಸಂಪ್ರದಾಯಗಳನ್ನು ಜಾರಿಗೊಳಿಸಿಕೊಂಡಿದ್ದನು. ಒಟ್ಟಿನಲ್ಲಿ ಈ ಯುಗದ ಸಂಸ್ಕೃತಿಯ ಕುರುಹುಗಳು ತೇರದಾಳ ಪರಿಸರದಲ್ಲಿ ದೊರೆತಿದ್ದರಿಂದ ಈ ಪ್ರದೇಶದಲ್ಲಿ ಬೃಹತ್ ಶಿಲಾಯುಗದ ಮಾನವ ವಾಸವಾಗಿದ್ದನು ಎಂಬುದು ವೇದ್ಯವಾಗುತ್ತದೆ.

ಬೃಹತ್ ಶಿಲಾಯುಗ ಹಂತದಿಂದ ಮಾನವನ ಪ್ರಮುಖ ಬೆಳವಣಿಗೆಯಲ್ಲಿ ಕಬ್ಬಿಣ ತಯಾರಿಕೆಯೂ ಒಂದು ಅದಿರಿನಿಂದ ಕಬ್ಬಿಣ ಉತ್ಪಾದನೆ ಕಂಡುಕೊಂಡ ನಂತರ ಸಾಮಾಜಿಕವಾಗಿ ಕ್ರಾಂತಿಕಾರಿ ಬದಲಾವಣೆಯಾಗಿರುವುದನ್ನು ಗುರುತಿಸಬಹುದು. ಕಬ್ಬಿಣ ಉತ್ತರ

ಭಾರತದಿಂದ ದಕ್ಷಿಣಕ್ಕೆ ಹರಡಿತ್ತೆಂದು ಸಾಮಾನ್ಯವಾಗಿ ನಂಬಲಾಗಿದೆ. ಆದರೆ ಬ್ರಹ್ಮಗಿರಿಯಲ್ಲಿ ಉತ್ಖನನ ಕೈಗೊಂಡ ಮಾರ್ಟಿಮರ್ ವ್ಹಿಲರ್ ಅವರು ಉತ್ತರ ಭಾರತದಲ್ಲಿ ಬಳಕೆಯಲ್ಲಿರುವ ಮೊದಲೇ ಇಲ್ಲಿ ಕಬ್ಬಿಣದ ಉತ್ಪಾದನೆ ನಡೆಯುತ್ತಿತ್ತೆಂದು ಹೇಳಿದ್ದಾರೆ.

ಒಟ್ಟಿನಲ್ಲಿ ಆದಿ ಸಂಸ್ಕೃತಿಯು ಕಾಲದಿಂದ ಕಾಲಕ್ಕೆ ಈ ಮೇಲಿನ ರೀತಿ ವಿಕಾಸ ಹೊಂದಿತ್ತೆಂಬುದನ್ನು ಮೇಲಿನ ವಿವರಗಳಿಂದ ತಿಳಿಯಬಹುದಾಗಿದೆ. ತೇರದಾಳ ಪರಿಸರದಲ್ಲಿ ದೊರೆತ ಮಡಿಕೆ ಚೂರು, ಯುಧೋಪಕರಣಗಳು ಮತ್ತು ಇತರೆ ಪ್ರದೇಶಗಳಲ್ಲಿ ದೊರೆತ ಈ ಕಾಲದ ಅವಶೇಷಗಳಿಗೆ ಹೆಚ್ಚು ಸಾಮಿಪ್ಯವಾಗಿವೆ. ಹಾಗೆಯೇ ನೆರೆಯ ಬಳ್ಳಾರಿ, ಶಿವಮೊಗ್ಗ, ಧಾರವಾಡ ಜಿಲ್ಲೆಯ ವಿವಿಧ ನೆಲೆಗಳಲ್ಲಿ ದೊರೆತ ಅವಶೇಷಗಳಿಗೂ ಹೋಲಿಕೆಯಾಗುತ್ತವೆ. ಆದುದರಿಂದ ತೇರದಾಳ ಪರಿಸರವು ಸಹ ಪ್ರಾಗೈತಿಹಾಸಿಕ ಸಂಸ್ಕೃತಿಯ ಜನರ ವಾಸಸ್ಥಾನವಾಗಿತ್ತು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಹಳಿಂಗಳಿಯಲ್ಲಿ ದೊರೆತ ಕಬ್ಬಿಣದ ಉಪಕರಣಗಳನ್ನು ವೈಜ್ಞಾನಿಕ ಶಾಲೆಗಳಲ್ಲಿ ವಿಧಿವತ್ತಾಗಿ ವಿಶ್ಲೇಷಿಸಲಾಗಿದೆ, ಈ ಅಧ್ಯಯನಗಳಿಂದ ಆಯಾಯ ಪ್ರದೇಶದಲ್ಲಿಯ ಅದಿರುಗಳನ್ನು ಸಂಗ್ರಹಿಸಿ ಕರಗಿಸಿ, ಪದರು ಜೋಡಣೆ ತಂತ್ರದಿಂದ ಕಬ್ಬಿಣದ ಸಾಮಾನುಗಳನ್ನು ಮಾಡಲಾಗಿದೆ ಎಂದು ಗೊತ್ತಾಗಿದೆ. ಈ ಕಬ್ಬಿಣವು ಉತ್ತಮ ತರಗತಿಯ ಉಕ್ಕು ಆಗಿರುವುದು ಇಂದು ವಿಶೇಷ ಸಂಗತಿ.

**ಚಾರಿತ್ರಿಕ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆ**

ಹಲವು ವೈಶಿಷ್ಟಗಳಿಗೆ ಹೆಸರು ವಾಸಿಯಾಗಿರುವ ಜಿಲ್ಲೆಗಳಲ್ಲಿ ಇಂದಿನ ಬಾಗಲಕೋಟೆ ಜಿಲ್ಲೆಯೂ ಒಂದು. ಈ ಜಿಲ್ಲೆಯ ತೇರದಾಳ ಪ್ರದೇಶವನ್ನು ಕ್ರಿ.ಶ.ಮೂರನೇ ಶತಮಾನದಿಂದ ಕ್ರಮವಾಗಿ ಇಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ನೊಳಂಬರು ಸೇವುಣರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು, ಬಿಜಾಪುರ ಆದಿಲಶಾಹಿಗಳು, ನಂತರ ಮೊಗಲರು ಸವಣೂರು ನವಾಬರು ಮತ್ತು ಮರಾಠರು, ಜಮಖಂಡಿ ಸಂಸ್ಥಾನಿಕರು, ಪಟವರ್ಧನರು, ಮೊದಲಾದವರು ಇಲ್ಲಿ ಆಳ್ವಿಕೆ ಮಾಡಿ ಚರಿತ್ರೆಯಲ್ಲಿ ತಮ್ಮದೇ ಆದ ಛಾಪು ಮೂಡಿಸಿರುವುದು ಇಲ್ಲಿ ದೊರೆತಿರುವ ಶಾಸನಗಳಿಂದ ತಿಳಿದುಬರುತ್ತದೆ. ದೊರೆತಿರುವ ಲಭ್ಯ ಆಧಾರಗಳ ಮೇಲೆ ಈ ಪ್ರದೇಶವನ್ನು ಆಳ್ವಿಕೆ ಮಾಡಿದ ವಿವಿಧ ರಾಜವಂಶೀಯರ ಚರಿತ್ರೆಯನ್ನು ಈ ಮುಂದಿನಂತೆ ಸಂಕ್ಷಿಪ್ತವಾಗಿ ಅಧ್ಯಯನ ಮಾಡಬಹುದು.

**೨.೪.೧ ಪ್ರಾಚೀನ ಕಾಲ ಘಟ್ಟ**

ತೇರದಾಳ ಪ್ರದೇಶವನ್ನು ಪ್ರಾಚೀನ ಕಾಲಘಟ್ಟದಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಳುಕ್ಯರು, ಕಲ್ಯಾಣದ ಕಲಚೂರಿಗಳು ಆಳ್ವಿಕೆ ಮಾಡಿದ್ದು, ತಮ್ಮದೇ ಆದ ಕೊಡುಗೆಗಳನ್ನು ಈ ಪ್ರದೇಶಕ್ಕೆ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಆ ಕುರಿತಂತೆ ಮುಂದಿನಂತೆ ವಿಶ್ಲೇಷಿಸಲಾಗಿದೆ.

**ಮೌರ್ಯರ ಆಳ್ವಿಕೆ**

ಕ್ರಿಸ್ತ ಪೂರ್ವ ನಾಲ್ಕನೇಯ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯವು ಸ್ಥಾಪನೆಯಾಗುವ ಮೊದಲೇ ಉತ್ತರದ ಸಾಮ್ರಾಜ್ಯ ಸ್ಥಾಪಕರು ದಕ್ಷಿಣ ಭಾರತದ ಅನೇಕ ಪ್ರದೇಶಗಳನ್ನು ಗೆದ್ದು

ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ್ದರು. ಮೌರ್ಯರಿಗಿಂತ ಮೊದಲು ನಂದರು, ಶೈಶುನಾಗರು (ಶಿಶುನಾಗರು) ಕರ್ನಾಟಕದ ಕೆಲವು ಭಾಗಗಳನ್ನು ಆಳಿರುವುದಕ್ಕೆ ಆಧಾರಗಳಿವೆ. ನಂದರನ್ನು ಸೋಲಿಸಿ ಮೌರ್ಯರು ಅನುಕ್ರಮವಾಗಿ ದಕ್ಷಿಣ ಭಾರತವನ್ನು ಒಳಗೊಂಡ ಮಗಧ ರಾಜ್ಯದ ಒಡೆಯರಾದರೆಂದು ತಿಳಿದು ಬರುತ್ತದೆ. ಹನ್ನೆರಡನೇಯ ಶತಮಾನದ ಶಿಕಾರಿಪುರದ ಶಾಸನಗಳು ಉಲ್ಲೇಖಿಸುವಂತೆ ಆ ಪ್ರದೇಶಲ್ಲಿ ಹಿಂದೆ ನಂದರ ಆಳ್ವಿಕೆಯಿದ್ದಿತ್ತೆಂಬುದನ್ನು ಸೂಚಿಸುತ್ತವೆ. ಕರ್ನಾಟಕದಲ್ಲಿ ಚಂದ್ರವಳ್ಳಿ, ಬ್ರಹ್ಮಗಿರಿ, ಸಿದ್ದಾಪುರ, ಜಟ್ಟಿಂಗ ರಾಮೇಶ್ವರ (ಬಿಜಾಪುರಜಿಲ್ಲೆ) ಮಸ್ಕಿ, ಕೊಪ್ಪಳ (ರಾಯಚೂರು ಜಿಲ್ಲೆ) ಉಡೇಗೊಳಂ, ನಿಟ್ಟೂರು (ಬಳ್ಳಾರಿ ಜಿಲ್ಲೆ) ಹಾಗು ಸನ್ನತಿ (ಗುಲ್ಬರ್ಗಾ ಜಿಲ್ಲೆ) ಯಲ್ಲಿ ಆಶೋಕನ ಕಾಲದ ಶಾಸನಗಳು ದೊರತಿವೆ. ಇವುಗಳಿಂದ ಗುಲಬರ್ಗಾ, ರಾಯಚೂರು, ಬಳ್ಳಾರಿ ಮತ್ತು ಬಿಜಾಪುರ, ಬಾಗಲಕೋಟೆ ಪ್ರದೇಶಗಳು, ಮೌರ್ಯ ಸಾಮ್ರಾಜ್ಯದ ಅಧೀನದಲ್ಲಿದ್ದವೆಂದು ಹೇಳಬಹುದು.

ಮೌರ್ಯ ಸಾಮ್ರಾಜ್ಯ ಸ್ಥಾಪಕನಾದ ಚಂದ್ರಗುಪ್ತ ಮೌರ್ಯನು ತನ್ನ ಕೊನೆಯ ಕಾಲದಲ್ಲಿ ಜೈನ ಮತಾವಲಂಬಿಯಾಗಿ ದಕ್ಷಿಣಕ್ಕೆ ಬಂದು ಕನ್ನಡ ನಾಡಿನ ಪ್ರಸಿದ್ಧ ಜೈನ ಕ್ಷೇತ್ರವಾದ ಶ್ರವಣಬೆಳಗೊಳದಲ್ಲಿ ಜೈನ ಧರ್ಮದ ವಿಧಿಯಂತೆ ಸಲ್ಲೇಖನ ವ್ರತವನ್ನಾಚರಿಸಿ, ಅಲ್ಲಿಯೇ ದೇಹಬಿಟ್ಟನೆಂದು ಶ್ರೀರಂಗಪಟ್ಟಣ ಮತ್ತು ಶ್ರವಣಬೆಳಗೊಳದಲ್ಲಿ ದೊರೆತ ೯ರಿಂದ ೧೫ನೇ ಶತಮಾನಗಳವರೆಗೆ ಶಾಸನಗಳಿಂದ ತಿಳಿದುಬರುತ್ತದೆ. ಇವನು ಕ್ರಿ.ಪೂ.೩೨೪ ರಿಂದ ಕ್ರಿ.ಪೂ.೩೦೦ರವರೆಗೆ ರಾಜ್ಯವಾಳಿದನು. ಈತನು ಶ್ರವಣಬೆಳಗೊಳಕ್ಕೆ ಹೋಗುವಾಗ ಮಾರ್ಗ ಮಧ್ಯದಲ್ಲಿ ಅಂದರೆ ಇಂದಿನ ತೇರದಾಳ ಸಮೀಪದ ಖ್ಯಾತ ಜೈನ ಕೇಂದ್ರವಾದ ಹಳಿಂಗಳಿ ಭದ್ರಗಿರಿಯಲ್ಲಿ ಕೆಲ ಕಾಲ ತಂಗಿ ವಿಶ್ರಮಿಸಿಕೊಂಡನೆಂದು ಅಲ್ಲಿನ ಶ್ರಾವಕ ಹಾಗೂ ಶ್ರಾವಕಿಯರು, ಜೈನ ಮುನಿಗಳಾಧ ಶ್ರೀ ೧೦೮ ಕುಲರತ್ನ ಮಹಾರಾಜರು ಹೇಳುತ್ತಾರೆ.

ಚಂದ್ರಗುಪ್ತ ಮೌರ್ಯನ ತರುವಾಯ ಅವನ ಮಗನಾದ ಬಿಂದುಸಾರನು ಕ್ರಿ.ಪೂ.೩೦೦ ರಿಂದ ಕ್ರಿ.ಪೂ. ೨೭೩ರ ವರೆಗೆ ರಾಜ್ಯವಾಳಿದನು. ಕ್ರಿ.ಶ. ೧೨ನೇ ಶತಮಾನದ ಶಿಕಾರಿಪುರ ಶಾಸನದಲ್ಲಿ ಕರ್ನಾಟಕದ ಕುಂತಳ ರಾಜ್ಯವು ಭೀಮಾ ಮತ್ತು ವೇದಾವತಿ ನದಿಗಳ ಮಧ್ಯದಲ್ಲಿರುವ ನಾಡಾಗಿತ್ತು. ಹೀಗಾಗಿ ಕರ್ನಾಟಕದ ಬಹುಭಾಗವು ಬಿಂದುಸಾರನ ಮೌರ್ಯ ಸಾಮ್ರಾಜ್ಯದಲ್ಲಿ ಸೇರಿತ್ತೆಂದು ಹೇಳಬಹುದಾಗಿದೆ ಚಕ್ರವರ್ತಿ ಬಿಂದುಸಾರನು ದಕ್ಷಿಣಕ್ಕೆ ದಂಡೆತ್ತಿ ಬಂದಾಗ ತ್ರಿರಾಜ್ಯಗಳು ಅಂದರೆ ಚೋಳ, ಚೇರ, ಪಾಂಡ್ಯ ಅವನನ್ನು ತಡೆದವು. ಮೌರ್ಯ ಸಾಮ್ರಾಜ್ಯವು ದಕ್ಷಿಣದ ತುದಿಗೆ ವ್ಯಾಪಿಸಲಿಲ್ಲ ಎಂದು ಇತಿಹಾಸಕಾರರು ತಿಳಿಸುತ್ತಾರೆ. ಒಟ್ಟಿನಲ್ಲಿ ಕುಂತಲವು ಅಶೋಕನ ಆಳ್ವಿಕೆಗೆ ಮೊದಲೇ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದಿತೆಂಬುದು ನಿರ್ವಿವಾದವಾದ ವಿಷಯವಾಗಿದೆ. ಕುಂತಲ ಸೀಮೆಯು ಭೀಮ ಮತ್ತು ವೇದಾವತಿ ನದಿಗಳ ಮಧ್ಯದಲ್ಲಿದ್ದು ಪಶ್ಚಿಮ ಘಟ್ಟಗಳನ್ನು ಸರಹದ್ದನ್ನಾಗಿ ಹೊಂದಿದ್ದಿತು. ಶಿವಮೊಗ್ಗ, ಬಳ್ಳಾರಿ, ಧಾರವಾಡ, ಬಿಜಾಪುರ ಮೊದಲಾದ ಪ್ರದೇಶಗಳು ಕುಂತಲದಲ್ಲಿ ಸೇರಿದ್ದವು.

ಬಿಂದುಸಾರನ ಮಗನಾದ ಅಶೋಕ ಚಕ್ರವರ್ತಿಯು ಭಾರತದಲ್ಲಿ ವಿಶಾಲ ಸಾಮ್ರಾಜ್ಯವನ್ನು ಕಟ್ಟಿ ಕ್ರಿ.ಪೂ.೨೭೩ ರಿಂದ ಕ್ರಿ.ಪೂ.೨೩೩ರ ವರೆಗೆ ಅತ್ಯಂತ ವೈಭವದಿಂದ ರಾಜ್ಯವಾಳಿದನು. ಇವನು ತನ್ನ ಸಾಮ್ರಾಜ್ಯದ ಮೇರೆಗಳನ್ನು ಗುರುತಿಸಲು ನಿಲ್ಲಿಸಿದ ಒಂಬತ್ತು ಬಂಡೆಗಲ್ಲಿನ ಶಿಲಾಲೇಖನಗಳು ಉತ್ತರ ಕರ್ನಾಟಕದಲ್ಲಿ ದೊರೆತಿರುವುದರಿಂದ ಉತ್ತರ ಕರ್ನಾಟಕವು ಅಶೋಕ ಚಕ್ರವರ್ತಿಯ ಸಾಮ್ರಾಜ್ಯದ ದಕ್ಷಿಣದ ಮೇರೆಯಾಗಿತ್ತೆಂದು ಕಂಡು

ಬರುತ್ತದೆ. ಅದರಂತೆ ಜಮಖಂಡಿ ತಾಲೂಕಿನ ತೇರದಾಳವು ಉತ್ತರ ಕರ್ನಾಟಕದ ಒಂದು ಭಾಗವಾಗಿದ್ದರಿಂದ ಇದು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಗೊತ್ತಾಗುತ್ತದೆ. ಬಿಜಾಪುರ ಜಿಲ್ಲೆ ಮತ್ತು ಅದರ ಸುತ್ತಲಿನ ಪ್ರದೇಶಗಳು ಸಹ ಮೌರ್ಯರ ಅಧೀನಕ್ಕೊಳಗಾಗಿದ್ದವೆಂದು ಹೇಳಬಹುದು.

ಈ ಪ್ರದೇಶವು ಅಶೋಕನ ಕಾಲಕ್ಕೆ ಮೌರ್ಯ ಸಾಮ್ರಾಜ್ಯದ ದಕ್ಷಿಣ ತುದಿಯು ಧರ್ಮ ಪ್ರಸಾರದ ಪ್ರಮುಖ ಘಟಕವಾಗಿತ್ತೆಂದು ಈ ಜಿಲ್ಲೆಯಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ತಿಳಿದುಬರುತ್ತದೆ. ತೇರದಾಳಕ್ಕೆ ಅನತಿ ದೂರದಲ್ಲಿರುವ ಕೊಪ್ಪಳದ ಪಲ್ಕಿಗುಂಡು, ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಉಡೇಗೋಳ ಮತ್ತು ನಿಟ್ಟೂರುಗಳಲ್ಲಿ ಮತ್ತು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟ್ಟಂಗ ರಾಮೇಶ್ವರ ಹಾಗೂ ರಾಯಚೂರು ಜಿಲ್ಲೆಯ ಮಸ್ಕಿಗಳಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ಶಾಸನಗಳು ದೊರೆತಿದ್ದು, ಅವು ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ. ಅಶೋಕನ ಎರಡು ಮತ್ತು ಹದಿಮೂರನೇಯ ಶಾಸನಗಳು ದಕ್ಷಿಣದ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತವೆ. ತೇರದಾಳ ಮತ್ತು ಮೊದಲಾದೆಡೆ ದೊರೆಯುವ ಬೃಹತ್ ಶಿಲಾಯುಗದ ಸಮಾಧಿಗಳನ್ನು ಜನರು ಮೋರಿಯರ ಮನೆ ಅಥವಾ ಮೌರ್ಯರ ಮನೆ ಎಂದು ಕರೆಯುತ್ತಾರೆ. ಇಲ್ಲಿನ ಭದ್ರಗಿರಿಯಲ್ಲಿ ಜೈನ ಮುನಿಗಳು ವಾಸಿಸಿದ ಹಲವಾರು ಗುಹೆ/ಗುಂಪಾಗಳಿವೆ. ಅಲ್ಲದೇ ಅಲ್ಲಿಯೇ ಹಲವು ಶಿಲಾ ಮತ್ತು ಲೋಹದ ತೀರ್ಥಂಕರ ವಿಗ್ರಹಗಳು ದೊರೆತಿವೆ. ಇದರೊಂದಿಗೆ ತೇರದಾಳದಲ್ಲಿ ಖ್ಯಾತ ಗೊಂಕ ಜಿನಾಲಯವಿದ್ದು, ಅಲ್ಲಿ ಹೆಚ್ಚಾಗಿ ಜೈನರು ವಾಸವಾಗಿದ್ದಾರೆ. ಈ ಎಲ್ಲಾ ಅಂಶಗಳು ಮೌರ್ಯರ ಆಳ್ವಿಕೆ ಇಲ್ಲಿಯವರೆಗೆ ವಿಸ್ತಾರವಾಗಿತ್ತೆಂದು ಹೇಳಲು ಇರುವ ಪ್ರಮುಖ ಸಾಕ್ಷಿಗಳಾಗಿವೆ.

ಸಂಘಂ ಸಾಹಿತ್ಯ ಕೃತಿಗಳಲ್ಲಿಯೂ ಮೌರ್ಯರು ದಕ್ಷಿಣ ಭಾರತದೊಂದಿಗೆ ಸಂಪರ್ಕವಿರಿಸಿಕೊಂಡಿದ್ದರ ಪ್ರಸ್ತಾಪವು ಬರುತ್ತದೆ. ಅಶೋಕನ ಮರಣಾನಂತರ ಮೌರ್ಯ ಸಾಮ್ರಾಜ್ಯವು ಕ್ಷೀಣವಾಗತೊಡಗಿತು. ದಕ್ಷಿಣ ಭಾರತದಲ್ಲಿ ಮೌರ್ಯ ಸಂತತಿಯ ಅರಸರು ಹಲವಾರು ಶತಮಾನಗಳ ಕಾಲ ಆಳಿದರು. ಕೊಂಕಣದ ಮೌರ್ಯರು ಕ್ರಿ.ಶ. ಏಳನೇಯ ಶತಮಾನದವರೆಗೂ ಆಳಿದರು.

ಹಂಪಿಯ ಉತ್ಖನನದಲ್ಲಿ ಮತ್ತು ಆನೆಗೊಂದಿಗಳಲ್ಲಿ ಬೌದ್ಧರಿಗೆ ಸಂಬಂಧಪಟ್ಟ ಜಾತಕ ಕಥೆಯ ಫಲಕಗಳು, ಕೆಲ ಶಿಲ್ಪಗಳು ಮೊದಲಾದ ಆಧಾರಗಳು ದೊರತಿರುವುದರಿಂದ ಬಿಜಾಪುರ ಜಿಲ್ಲೆ ಮತ್ತು ಅದರ ಸುತ್ತಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು, ಅವರ ದಕ್ಷ ಆಡಳಿತ ಪದ್ಧತಿಯಿಂದ ಪ್ರಯೋಜನ ಹೊಂದಿದ್ದವು ಎನ್ನಬಹುದು. ಜೊತೆಗೆ ಅವರ ಸಾಂಸ್ಕೃತಿಕ ಪರಂಪರೆಯ ವ್ಯಾಪ್ತಿಗೆ ಒಳಗಾದವು. ಮೌರ್ಯ ಸಾಮ್ರಾಟರ ಉದಾರ ಧ್ಯೇಯಗಳು ಅದರಲ್ಲೂ ಅವರ ಧಾರ್ಮಿಕ ಸಹಿಷ್ಣತೆ ಇಲ್ಲಿನ ಜನರ ಅನುಕರಣೆಯ ಆದರ್ಶಗಳಾದವು.

ಮೌರ್ಯ ಸಾಮ್ರಾಟ ಅಶೋಕನ 'ಬ್ರಹ್ಮಗಿರಿ ಶಾಸನ'ವು 'ಇಸಿಲಾ' ಸ್ಥಳವನ್ನು ಹೆಸರಿಸಿದ್ದು, ಇದು ಮೌರ್ಯ ಸಾಮ್ರಾಜ್ಯದ 'ಸುವರ್ಣಗಿರಿ' ಘಟಕದ ಆಡಳಿತ ಕೇಂದ್ರವಾಗಿತ್ತು. ಚಿತ್ರದುರ್ಗದ ಚಂದ್ರವಳ್ಳಿ ಉತ್ಖನನದಲ್ಲಿ ದೊರೆತ ನಾಣ್ಯಗಳ ಮೇಲೆ ಭೋಧಿವೃಕ್ಷ, ವೃಷಭ, ಸ್ವಸ್ತಿಕ, ಚೈತ್ಯ ಮುಂತಾದ ಚಿನ್ಹೆಗಳಿರುವುದರಿಂದ, ಮೌರ್ಯ ಚಕ್ರವರ್ತಿ ಅಶೋಕನ ಕಾಲದಿಂದ ಕದಂಬ ಮಯೂರವರ್ಮನ ಕಾಲದವರೆಗೆ ಈ ಪ್ರದೇಶದಲ್ಲಿ ಬೌದ್ಧ ಮತ ಪ್ರಚಾರದಲ್ಲಿತ್ತೆಂದು ತಿಳಿಯಬಹುದಾಗಿದೆ.

ಈ ರೀತಿಯಲ್ಲಿ ತೇರದಾಳ ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ಮೌರ್ಯರ ಶಾಸನ ಮತ್ತಿತರ ಅವಶೇಷಗಳು ಹೆಚ್ಚು ದೊರೆಯದೆ ಹೋದರೂ ಸಹ ಆ ಸಾಮ್ರಾಟರ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯೂ ಮುಂದುವರೆಯಿತೆಂದು ಹೇಳಲು ಪಕ್ಕದ ಚಿತ್ರದುರ್ಗ, ರಾಯಚೂರು, ಬಳ್ಳಾರಿ, ಕೊಪ್ಪಳ ಪ್ರದೇಶದಲ್ಲಿ ಹೇರಳವಾಗಿ ಶಾಸನಗಳು, ಅವಶೇಷಗಳು ದೊರೆತಿವೆ. ಇದರಿಂದಾಗಿ ಈ ಪ್ರಾಂತ್ಯವು ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

**ಶಾತವಾಹನ ಆಳ್ವಿಕೆ (ಕ್ರಿ.ಪೂ.೨೨೦-ಕ್ರಿ.ಶ.೨೩೦)**

ಶಾತವಾಹನರು ಡೆಕ್ಕನದ ಪ್ರಸ್ಥಭೂಮಿಯಲ್ಲಿ ಪ್ರಪ್ರಥಮವಾಗಿ ಐತಿಹಾಸಿಕ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಮೌರ್ಯ ಸಾಮ್ರಾಜ್ಯ ಪತನವಾದ ನಂತರ ಇವರು ಕ್ರಿ.ಪೂ.೨೩೫ ರಿಂದ ಕ್ರಿ.ಶ.೨೧೫ರ ವರೆಗೆ ದಕ್ಷಿಣದಲ್ಲಿ ಸುಮಾರು ೪೫೦ ವರ್ಷಗಳವರೆಗೆ ರಾಜ್ಯಭಾರ ಮಾಡಿದರು. ಡಾ. ಸುಕುಂಥಕರ್‌ರವರು ಶಾತವಾಹನರ ಕುಟುಂಬ ಕನ್ನಡ ಪ್ರದೇಶದಿಂದ ಬಂದಿದೆ ಎಂದು ಹೇಳಿದ್ದಾರೆ. ರಾಜಶೇಖರನ ಕಾವ್ಯಮೀಮಾಂಸೆಯಲ್ಲಿ ವಾತ್ಸ್ಯಾಯನನ ಕಾಮಸೂತ್ರದಲ್ಲಿ, ಪ್ರಾಕೃತದ ಗಾಥಾಸಪ್ತಸತಿಯಲ್ಲಿ **'ಹಾಲರಾಜ'** ಕುಂತಲದ ರಾಜನೆಂದು ಉಲ್ಲೇಖಿಸಿವೆ. ಪುರಾಣದಲ್ಲಿ ಗೌತಮಿಪುತ್ರ ಶಾತಕರ್ಣಿ ಕುಂತಲ ಪ್ರದೇಶವನ್ನು ಆಳುತ್ತಿದ್ದ ಬಗ್ಗೆ ತಿಳಿಯುತ್ತದೆ. ಕರ್ನಾಟಕದ ಬಹುಭಾಗವನ್ನಾಳಿದ ಮೊಟ್ಟಮೊದಲನೇಯ ಪ್ರಮುಖ ರಾಜವಂಶದವರಾದ ಈ ಶಾತವಾಹನರು ತಮ್ಮನ್ನು **'ಕುಂತಳಸ್ವಾಮಿ'**ಗಳೆಂದು ಕರೆದುಕೊಂಡದ್ದುಂಟು (ಇವರಿಗೆ **ಆಂಧ್ರರು, ಆಂಧ್ರ ಭೃತ್ಯರು, ಶಾತಕರ್ಣಿಗಳು** ಎಂದು ಕರೆಯಲಾಗಿದೆ). ಸುಮಾರು ಮೂವತ್ತು ಮಂದಿ ದೊರೆಗಳಿದ್ದ ಈ ಮನೆತನದ ಬಗ್ಗೆ ಇದುವರೆಗೆ ದೊರೆತಿರುವ ಶಾಸನಗಳು ಅತ್ಯಲ್ಪ. ಈ ಮನೆತನದಲ್ಲಿ ಸಿಮುಖ, ೧ನೇ ಕೃಷ್ಣ, ೧ನೇ ಶಾತಕರ್ಣಿ, ೨ನೇ ಶಾತಕರ್ಣಿ, ಹಾಲಶಾತಕರ್ಣಿ, ಗೌತಮೀಪುತ್ರ ಶಾತಕರ್ಣಿ, ವಸಿಷ್ಟಪುತ್ರ ಪುಲುಮಾವಿ, ಶ್ರೀ ಶಾತಕರ್ಣಿ ಮೊದಲಾದ ಅರಸರು ಆಗಿ ಹೋಗಿದ್ದಾರೆ. ಆರ್.ಜಿ. ಬಂಡಾರಕರ್ ರವರ ಪ್ರಕಾರ, ಶಾತವಾಹನರು ಮಹಾರಾಷ್ಟ್ರದ **ಪೈಠಣವನ್ನು** ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಡೆಕ್ಕನ್ ಪ್ರದೇಶದಲ್ಲಿ ಆಳುತ್ತಿದ್ದರು. ಇವರ ಎರಡನೇಯ ಶಾಖೆಯು **ಕುಂತಲದಲ್ಲಿ,** ಕರ್ನಾಟಕದಲ್ಲಿ (ಧರಣೀಕೋಟೆ ಅಥವಾ ಧನಕಟಕ) ಮೂರನೇಯ ಶಾಖೆಯು **ಆಂಧ್ರದಲ್ಲಿ (ಶ್ರೀಕಾಕುಲಂ)** ರಾಜ್ಯಭಾರ ಮಾಡುತ್ತಿದ್ದರು. ರಾಜಶೇಖನ **"ಕಾವ್ಯ ಮಿಮಾಂಸೆ"**ಯಲ್ಲಿ ಶಾತವಾಹನರು, ಕುಂತಲದಲ್ಲಿ ರಾಜ್ಯಭಾರ ಮಾಡುತ್ತಿದ್ದರೆಂದು ಹೇಳಿದೆ. ಕುಂತಲ-ಭೀಮಾ ಮತ್ತು ವೇದಾವತಿ ನದಿಗಳ ನಡುವಿನ ಪ್ರದೇಶ ಹೀಗಾಗಿ ತೇರದಾಳವು ಕುಂತಲ ಪ್ರದೇಶದಲ್ಲಿ ಬರುತ್ತಿದ್ದರಿಂದ ಇದು ಆ ಸಾಮ್ರಾಜ್ಯದ ಭಾಗವಾಗಿತ್ತೆಂದು ತಿಳಿದು ಬರುತ್ತದೆ. ಶಾತವಾಹನರ ಕಾಲಕ್ಕೆ ಈ ಪ್ರದೇಶ ಸೇರಿದೆ ಎಂದು ಹೇಳಲಾಗುತ್ತದೆಯಾದರೂ ಅವರು ಹಾಕಿಸಿರುವ ಶಾಸನಗಳಾವವೂ ಇದುವರೆಗೆ ಇಲ್ಲಿ ದೊರೆತಿಲ್ಲ. ಆದರೆ ಪಲ್ಲವರಿಗೆ ಸಂಬಂಧಿಸಿದ ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯ ಪ್ರಾಕೃತ ಶಾಸನದಲ್ಲಿ **'ಶಾತವಾಹನೀರಠ್ಠ'** ಎಂಬ ಉಲ್ಲೇಖವಿದೆ. ಶಾತವಾಹನೀ ರಾಷ್ಟ್ರದ **'ಚಿಲ್ಲರೇಕಕೋಡುಂಕೇ'** ಎಂಬ ಗ್ರಾಮವನ್ನು ಪಲ್ಲವ ರಾಜನು ದತ್ತಿಯಾಗಿ ನೀಡಿರುವಂತೆ ಹೇಳಿರುವುದರಿಂದ ಪಲ್ಲವರ ಕಾಲಕ್ಕೆ ಈ ಪ್ರದೇಶವು ಅವರ ಸಾಮ್ರಾಜ್ಯಕ್ಕೆ ಸೇರಿದ್ದರೂ ಪಲ್ಲವರು ತಮ್ಮ ಸಾಮ್ರಾಜ್ಯದ ಭಾಗಗಳನ್ನು ಗುರುತಿಸುವಾಗ ಈ ಭಾಗವನ್ನು **'ಶಾತವಾಹನೀರಠ್ಠ'** ಎಂಬ ಹೆಸರಿನಿಂದಲೇ ಕರೆದಿರುತ್ತಾರೆ

ಎಂದು ಕರಣಂ ವಿರುಪಾಕ್ಷಗೌಡರು ಅಭಿಪ್ರಾಯಪಡುತ್ತಾರೆ[೪೯]. ಶಾತವಾಹನೀರಠ್ಠ ಎಂಬುದು ಪಲ್ಲವರ ಸಾಮ್ರಾಜ್ಯದ ಭಾಗವಾಗಿತ್ತು ಎಂಬುದು ಇದರಿಂದ ವೇದ್ಯವಾಗುತ್ತದೆ. ಕಲ್ಲೊಳ್ಳಿ ಹಾಗೂ ಭದ್ರಗಿರಿಗಳಲ್ಲಿ ಇವರ ಕಾಲಕ್ಕೆ ಸೇರಿದ ಮಡಿಕೆ ಚೂರುಗಳು ದೊರೆತಿವೆ. ಅವುಗಳಲ್ಲಿ ಕಪ್ಪು ಕೆಂಪು ಬಣ್ಣದ ಮಡಿಕೆಗಳು ಬಿಳಿ ವರ್ಣದ ರೇಖಾಚಿತ್ರಗಳನ್ನು ಒಳಗೊಂಡಿವೆ. ಈ ಸಾಂಸ್ಕೃತಿಕ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಶಾತವಾಹನರ ಆಳ್ವಿಕೆ ಹಿಂದೆ ಈಗಿನ ತೇರದಾಳದ ಕೆಲ ಸ್ಥಳಗಳಿಗೂ ವಿಸ್ತರಿಸಿತ್ತು ಎಂದು ಹೇಳಬಹುದಾಗಿದೆ.

**ಬಾದಾಮಿ ಚಾಳುಕ್ಯರ ಆಳ್ವಿಕೆ**

ಶಾತವಾಹನರ ನಂತರ ಈ ಪ್ರದೇಶವನ್ನು ಆಳಿದ ಅರಸರೆಂದರೆ ಬಾದಾಮಿಯ ಚಾಳುಕ್ಯರು. ಕ್ರಿ.ಶ.೬ನೇ ಶತಮಾನದಿಂದ ೮ನೇ ಶತಮಾನದವರೆಗೆ ಕರ್ನಾಟಕದಲ್ಲಿ ವಿಶಾಲ ಸಾಮ್ರಾಜ್ಯವನ್ನು ಕಟ್ಟಿ ಆಳಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಸಾಮ್ರಾಜ್ಯವು ಕಾವೇರಿ ನದಿಯಿಂದ ನರ್ಮದಾ ನದಿಯವರೆಗೆ ವಿಸ್ತರಿಸಿತ್ತು. ಅಖಂಡ ಕರ್ನಾಟಕದ ಪ್ರಪ್ರಥಮ ಚಕ್ರವರ್ತಿಗಳಾಗಿ ಬಾದಾಮಿಯ ಚಾಳುಕ್ಯರು ಇನ್ನೂರು ವರ್ಷಗಳ ಕಾಲ ಕ್ರಿ.ಶ.೭೫೩ ವೈಭವದಿಂದ ಆಳಿದರು. ರಾಷ್ಟ್ರಕೂಟ ದೊರೆ ೨ನೆಯ ಕರ್ಕನನ್ನು ಚಾಳುಕ್ಯ ವಂಶದ ಇಮ್ಮಡಿ ತೈಲಪನು ಅಧಿಕಾರದಿಂದ ಕೆಳಗಿಳಿಸಿ, ಚಾಳುಕ್ಯ ವಂಶವನ್ನು ಪುನಃ ಸ್ಥಾಪಿಸಿದನು. ಅದರ ವೈಭವವನ್ನು ಮತ್ತೆ ಕಾಣುವಂತೆ ಮಾಡಿದನು.

ಇಮ್ಮಡಿಯ ಪುಲಿಕೇಶಿಯು ಈ ಮನೆತನದ ಶ್ರೇಷ್ಠ ದೊರೆಯಾಗಿದ್ದು ಸಕಲೋತ್ತರಾಪತಿಯಾದ ಹರ್ಷವರ್ಧನನ್ನು ನರ್ಮದಾ ನದಿಯ ದಂಡೆಯ ಮೇಲೆ ಸೋಲಿಸಿ "ಪರಮೇಶ್ವರ"ನೆಂಬ ಬಿರುದನ್ನು ಧರಿಸಿದ್ದನು. (ಐಹೊಳೆ ಶಾಸನದಲ್ಲಿ ಹೇಳಿದಂತೆ) ಇವನಿಗೆ ಸಕಲ ದಕ್ಷಿಣಪಥೇಶ್ವರ, ರಣವಿಕ್ರಮ ಎಂಬ ಬಿರುದುಗಳಿದ್ದವು. ಜಯಸಿಂಹನು ಬಾದಾಮಿ ಚಾಳುಕ್ಯವಂಶದ ಮೂಲ ಪುರುಷ. ಇವನ ನಂತರ ಅಧಿಕಾರಕ್ಕೆ ಬಂದ ಮೊದಲನೇಯ ಪುಲಕೇಶಿಯು (ಕ್ರಿ.ಶ.೫೪೦ ರಿಂದ ೫೬೬ರವರೆಗೆ) ಸಮರ್ಥ ದೊರೆ ಎನಿಸಿ ಉತ್ತಮ ಕಾರ್ಯಗಳನ್ನು ಕೈಗೊಂಡನೆಂದು ಬಾದಾಮಿ ಶಾಸನದಿಂದ ತಿಳಿದುಬರುತ್ತದೆ[೫೦]. ಈತನಿಗೆ ಕೀರ್ತಿವರ್ಮ, ಮಂಗಳೇಶ ಎಂಬ ಇಬ್ಬರು ಮಕ್ಕಳಿದ್ದು, ತಂದೆಯ ಮರಣದ ನಂತರ ಆಳ್ವಿಕೆ ನಡೆಸಿದ್ದರೆಂದು ತಿಳಿದುಬರುತ್ತದೆ. ಇವರಾದ ಬಳಿಕ ಪಟ್ಟಕ್ಕೆ ಬಂದ ಇಮ್ಮಡಿ ಪುಲಿಕೇಶಿಯು ಈ ವಂಶದಲ್ಲಿಯೇ ಶ್ರೇಷ್ಠ ಚಕ್ರವರ್ತಿ. ತಂದೆಯ ಸಾವಿನಿಂದ ನೊಂದ ಪಲ್ಲವರ ನರಸಿಂಹ ವರ್ಮನಿಗೂ ಮತ್ತು ಇಮ್ಮಡಿ ಪುಲಕೇಶಿಗೂ ನಡೆದ ಯುದ್ಧದಲ್ಲಿ ಪುಲಿಕೇಶಿ ಮರಣ ಹೊಂದಿದನು. ನಂತರ ಈತನ ಮಗ ಒಂದನೇ ವಿಕ್ರಮಾದಿತ್ಯನು (ಕ್ರಿ.ಶ.೬೫೫ ರಿಂದ ೬೮೧) ಆಳ್ವಿಕೆ ನಡೆಸಿ, ಚಾಳುಕ್ಯ ಮನೆತನದ ಕೀರ್ತಿ ಮತ್ತು ಪ್ರತಿಷ್ಠೆಗಳನ್ನು ಪುನಃ ಉಳಿಸಿಕೊಂಡನು. ಇವನ ನಂತರ ವಿನಯಾದಿತ್ಯನು (ಕ್ರಿ.ಶ.೬೮೧ ರಿಂದ ೬೯೬) ಅಧಿಕಾರಕ್ಕೆ ಬಂದನು. ಇವನ ನಂತರ ಇವನ ಮಗ ವಿಕ್ರಮಾದಿತ್ಯ, ಇವನ ನಂತರ ಇವನ ಮಗ ವಿನಯಾದಿತ್ಯ ಅಧಿಕಾರಕ್ಕೆ ಬಂದನು. ಇವನ ನಂತರ ಎಡನೇ ವಿಕ್ರಮಾದಿತ್ಯನು (ಕ್ರಿ.ಶ.೭೩೩–೭೪೪) ಅಧಿಕಾರಕ್ಕೆ ಬಂದನು. ತರುವಾಯ ಎರಡನೇಯ ಕೀರ್ತಿವರ್ಮ (ಕ್ರಿ.ಶ.೭೪೪–೭೫೨) ಅಧಿಕಾರಕ್ಕೆ ಬಂದನು. ಚಾಳುಕ್ಯವಂಶ ಇವನ ಕಾಲದಲ್ಲಿ ಅವನತಿಯ ಹಾದಿ ಹಿಡಿಯಿತು[೫೧]. ದಿನೇ ದಿನೇ ರಾಜ್ಯದ ಆಡಳಿತವು ಕುಸಿಯ ತೊಡಗಿದಾಗ ಅನೇಕ ಸಾಮಂತರು ಸ್ವತಂತ್ರರಾಗತೊಡಗಿದರು. ರಾಷ್ಟ್ರಕೂಟ

ಮನೆತನದ ದಂತಿದುರ್ಗನು ಕೀರ್ತಿವರ್ಮನನ್ನು ಸೋಲಿಸಿ, ತನ್ನ ಅಧಿಪತ್ಯವನ್ನು ಸ್ಥಾಪಿಸಿದನು. ಇವರ ರಾಜಧಾನಿ "ಬಾದಾಮಿ"ಯು, ಜಮಖಂಡಿಯಿಂದ ಕೇವಲ ೭೪ ಕಿ.ಮೀ. ಅಂತರದ ಮೇಲಿದ್ದು, ಇಲ್ಲಿಯ ಪುರಾತನ ಜಂಬುಕೇಶ್ವರ ದೇವಾಲಯವು ಚಾಳುಕ್ಯರ ಶಿಲ್ಪಕಲಾ ಮಾದರಿಯನ್ನು ಹೋಲುತ್ತಿದ್ದರಿಂದ ಈ ಭಾಗವು (ಜಮಖಂಡಿ) ಚಾಳುಕ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ತೇರದಾಳ ಸಮೀಪದ ಜಮಖಂಡಿಯ ಜಂಬುಕೇಶ್ವರ ಮತ್ತು ಇತರೆ ಕೆಲ ದೇವಾಲಯಗಳು ಚಾಳುಕ್ಯ ಶೈಲಿಯಲ್ಲಿವೆ. ಇವುಗಳ ಆಧಾರದ ಮೇಲೆ ಈ ಪ್ರದೇಶವು ಇವರ ಅಧೀನಕ್ಕೊಳಪಟ್ಟಿತ್ತೆಂದು ಹೇಳಬಹುದು[೫೨]. ಈ ಮೇಲಿನ ವಿವರಗಳಿಂದ ಬಾದಾಮಿ ಚಾಳುಕ್ಯರ ಆಳ್ವಿಕೆಯು ಈಗಿನ ತೇರದಾಳ ಪರಿಸರದವರೆಗೆ ವಿಸ್ತರಿಸಿತ್ತು ಎಂದು ಹೇಳಬಹುದು.

**ರಾಷ್ಟ್ರಕೂಟರ ಆಳ್ವಿಕೆ**

ರಾಷ್ಟ್ರಕೂಟ ಮನೆತನಗಳಲ್ಲಿ ಮಾನ್ಯಖೇಟ ಅಥವಾ ಮಳಖೇಡದ ಶಾಖೆ ಪ್ರಮುಖವಾದುದು[೫೩]. ತೇರದಾಳ ಪರಿಸರದಲ್ಲಿ ರಾಷ್ಟ್ರಕೂಟರ ಶಾಸನಗಳು ಬಹುಸಂಖ್ಯೆಯಲ್ಲಿ ದೊರೆಯದಿದ್ದರೂ ಈ ಭಾಗದಲ್ಲಿ ಇವರ ಆಳ್ವಿಕೆ ಸುಮಾರು ಕ್ರಿ.ಶ.೭೫೮ ರಿಂದ ಕ್ರಿ.ಶ.೯೮೨ರವರೆಗೆ ಇದ್ದಿತೆಂದು ಈ ಜಿಲ್ಲೆಯ ವಿವಿಧ ಕಡೆ ದೊರೆತ ಶಾಸನಗಳು ದೃಢಪಡಿಸಿವೆ. ರಾಷ್ಟ್ರಕೂಟ ಮನೆತನದ ದಂತಿದುರ್ಗನು ಚಾಳುಕ್ಯರ ಕೀರ್ತಿವರ್ಮನನ್ನು ಸೋಲಿಸಿ, ತನ್ನ ಅಧಿಪತ್ಯವನ್ನು ಸ್ಥಾಪಿಸಿದನು. ಸುಮಾರು ಮೂರು ಶತಮಾನಗಳ ಕಾಲ ಕರ್ನಾಟಕವನ್ನು ಆಳಿದ ಕೀರ್ತಿ ರಾಷ್ಟ್ರಕೂಟರಿಗೆ ಸಲ್ಲುತ್ತದೆ. ಇವರ ರಾಜಧಾನಿ ಮಳಖೇಡವಾಗಿತ್ತು. ದಂತಿದುರ್ಗ, ೧ನೇ ಕೃಷ್ಣ, ಧ್ರುವ, ಗೋವಿಂದ, ಅಮೋಘವರ್ಷ, ೨ನೆ ಕೃಷ್ಣ ಮೊದಲಾದವರು ಪ್ರಖ್ಯಾತ ಅರಸರು. ಇವರ ಸಾಮ್ರಾಜ್ಯವು ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಾವೇರಿ ನದಿಯವರೆಗೆ ಪಶ್ಚಿಮದಲ್ಲಿ ಅರಬ್ಬೀ ಸಮುದ್ರದವರೆಗೆ, ಪೂರ್ವದಲ್ಲಿ ಆಂಧ್ರಪ್ರದೇಶದ ವಾರಂಗಲ್, ಕಡಪಾ ಜಿಲ್ಲೆಗಳವರೆಗೆ ವಿಸ್ತರಿಸಿತ್ತು. ನೃಪತುಂಗನ ಕವಿರಾಜ ಮಾರ್ಗದಲ್ಲಿ ಹೇಳಿರುವಂತೆ ಕಾವೇರಿಯಿಂದ ಗೋದಾವರಿ ನದಿಯವರೆಗಿದ್ದ ವಿಶಾಲ ಪ್ರದೇಶವು ಕರ್ನಾಟಕದ್ದಾಗಿತ್ತು ಎಂಬುದು ವಿದಿತ. ಆದರೆ ಈ ಕಾಲಕ್ಕೆ ಸಂಬಂಧಿಸಿದ ಯಾವುದೇ ಶಿಲಾಶಾಸನಗಳು ಜಮಖಂಡಿ ಭಾಗದಲ್ಲಿ ದೊರೆತಿಲ್ಲ. ಆದರೆ ಮುಮ್ಮಡಿ ಕೃಷ್ಣನ ಕಾಲ (ಕ್ರಿ.ಶ.೯೩೯–೯೬೬)ದ ಎರಡು ಶಾಸನಗಳು ಲಭ್ಯವಾಗಿವೆ. ಒಂದು ಇಂಡಿ ತಾಲೂಕಿನ ಸಾಲೋಟಗಿ ಗ್ರಾಮದಲ್ಲಿ ಮತ್ತೊಂದು ಬಿಜಾಪುರ ತಾಲೂಕಿನ ಕಾರಜೋಳ ಗ್ರಾಮದಲ್ಲಿಯ ಕ್ರಿ.ಶ.೯೫೭ರಲ್ಲಿ (ಕಾಖಂಡಕಿ ಗ್ರಾಮದ ಹತ್ತಿರ) ರಚಿತವಾದ ಶಾಸನವು ದೊರೆತಿವೆ. ಕಾರಜೋಳ ಗ್ರಾಮವು ಜಮಖಂಡಿಯಿಂದ ಸುಮಾರು ೫೦–೬೦ ಕಿ.ಮೀ. ದೂರದಲ್ಲಿದ್ದರಿಂದ ಇಲ್ಲಿಯೂ ಸಹ (ಜಮಖಂಡಿಯಲ್ಲಿಯೂ ಸಹ) ರಾಷ್ಟ್ರಕೂಟರ ಆಳ್ವಿಕೆ ಇದ್ದಿತೆಂದು ಹೇಳಬಹುದು[೫೪].

ನಾಡನ್ನು ಹಲವು ಗ್ರಾಮಗಳ ಘಟಕಗಳನ್ನಾಗಿ ಮಾಡಿ ರಾಷ್ಟ್ರಕೂಟರು ಆಳುತ್ತಿದ್ದರೆಂದು ತಿಳಿದುಬರುತ್ತದೆ. ಕದಂಬಳಗೆ–೧೦೦೦, ಮಂಡಳಿ–೧೦೦೦ ಇತ್ಯಾದಿಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ದೇವಾಲಯಗಳಿಗೆ, ಬಸದಿಗಳಿಗೆ, ದೇವರ ಪ್ರೀತ್ಯಾರ್ಥವಾಗಿ ದಾನದತ್ತಿಗಳನ್ನು ಬಿಡುತ್ತಿದ್ದರು. ಆ ದತ್ತಿಗಳನ್ನು ಪಾಠ ಹೇಳುವ ಪಂಡಿತರಿಗೆ. ಅಲ್ಲಿ ವಿದ್ಯಾಭ್ಯಾಸಕ್ಕಾಗಿ ಬರುವ ವಿದ್ಯಾರ್ಥಿಗಳಿಗೆ (ಅನುಕೂಲಕ್ಕಾಗಿ) ನೀಡುತ್ತಿದ್ದರು. ಮಾಂಡಲೀಕರು ಅಧಿಕಾರಿಗಳು ಜನತೆಯಿಂದ ತಾವು ಪಡೆಯುತ್ತಿದ್ದ ಸುಂಕಗಳನ್ನು ದೇವಾಲಯಗಳ

ಸಹಾಯಾರ್ಥವಾಗಿ ತಮಗೆ ಒಳ್ಳೆಯದಾಗಲೆಂದು, ಪುಣ್ಯವುಂಟಾಗಬೇಕೆಂದು ದತ್ತಿ ಬಿಟ್ಟುಕೊಡುತ್ತಿದ್ದರು. ಈ ಸಂದರ್ಭದಲ್ಲಿ ಬಂದ 'ಗಾವುಂಡ ಸುಂಕ', 'ವಡ್ಡಾರಾವುಳದ ಪನ್ನಾಯದ ಸುಂಕ' 'ಪೆರ್ಜುಂಕ' ಎಂಬ ಮಾತುಗಳು ಆಗಿನ ಕಾಲದ ತೆರಿಗೆಗಳನ್ನು ವಿಷದಪಡಿಸುತ್ತವೆ.

ತೇರದಾಳ, ರಬಕವಿ, ಬನಹಟ್ಟಿ, ಜಮಖಂಡಿಗಳಲ್ಲಿ ಇವರ ಶೈಲಿಯನ್ನು ಹೋಲುವ ದೇವಾಲಯಗಳು ಕಂಡು ಬಂದಿವೆ. ಇವುಗಳ ಆಧಾರದಿಂದಲೂ ರಾಷ್ಟ್ರಕೂಟರು ನೇರವಾಗಿ ಇಲ್ಲವೇ ತಮ್ಮ ಸಾಮಂತ ಅಧೀನಾಧಿಕಾರಿಗಳ ಮುಖೇನ ಈಗಿನ ತೇರದಾಳ ಹಾಗೂ ಅದರ ಆಸು-ಪಾಸಿನ ಪ್ರದೇಶಗಳಲ್ಲಿ ಅನೇಕ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡು ಜನರಿಂದ ಮೆಚ್ಚಿಗೆಗಳಿಸಿದ್ದರೆಂದು ಹೇಳಬಹುದು. ಭಾರತದಲ್ಲೇ ಯಶಸ್ವಿ ರಾಜಕೀಯ ಶಕ್ತಿಯಾಗಿ ಮೆರೆದುದು ರಾಷ್ಟ್ರಕೂಟ ಸಾಮ್ರಾಟರ ಹಿರಿಮೆ. ಸಾಮ್ರಾಜ್ಯವು ಇಂದಿನ ಮಹಾರಾಷ್ಟ್ರ, ಕರ್ನಾಟಕ ಮಧ್ಯ ಪ್ರದೇಶದ ಹಲವು ಭಾಗಗಳು ಮತ್ತು ಆಂಧ್ರಪ್ರದೇಶ. ತಮಿಳುನಾಡುಗಳ ಕೆಲವು ಭಾಗಗಳನ್ನು ಒಳಗೊಂಡಿದ್ದಿತು.

**ಕಲ್ಯಾಣಿ ಚಾಳುಕ್ಯರು**

ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ.೯೭ ರಿಂದ ೧೧೯೮ ರವರೆಗೆ ಆಳ್ವಿಕೆ ಮಾಡಿದ ಇವರನ್ನು ಕಲ್ಯಾಣಿ ಚಾಳುಕ್ಯರೆಂದು ಕರೆಯಲಾಗುತ್ತದೆ. ರಾಷ್ಟ್ರಕೂಟ ದೊರೆ ೨ನೇ ಕರ್ಕನನ್ನು ಚಾಳುಕ್ಯ ವಂಶದ ಇಮ್ಮಡಿ ತೈಲಪನು ಅಧಿಕಾರದಿಂದ ಕೆಳಗಿಳಿಸಿ ಈ ವಂಶವನ್ನು ಸ್ಥಾಪಿಸಿದನು. ಈ ಸಾಮ್ರಾಜ್ಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಹಲವು ಭಾಗಗಳನ್ನು ಒಳಗೊಂಡಿತ್ತು. ಆರಂಭದಲ್ಲಿ ಮಾನ್ಯಖೇಟದಿಂದ ರಾಜ್ಯಭಾರ ಮಾಡುತ್ತಿದ್ದ ಇವರು ಅನಂತರ ಬೀದರ್ ಜಿಲ್ಲೆಯ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಇವರು ಬಾದಾಮಿ ಚಾಳುಕ್ಯರ ವಂಶಜರೆಂದು ತಮ್ಮನ್ನು ತಾವು ಕರೆದುಕೊಂಡಿದ್ದಾರೆ. ಇವರು ಮೊದಲು ರಾಷ್ಟ್ರಕೂಟರ ಸಾಮಂತರಾಗಿದ್ದರು.

ಈ ವಂಶದ ಸ್ಥಾಪಕನಾದ ೨ನೇ ತೈಲಪನು ಕ್ರಿ.ಶ.೯೭೩ರಲ್ಲಿ ಪಟ್ಟಕ್ಕೆ ಬಂದ ವಿಷಯ ಆರನೇ ವಿಕ್ರಮಾದಿತ್ಯನ ಗದಗ ಶಾಸನದಿಂದ ತಿಳಿಯುತ್ತದೆ. ಜಯಸಿಂಹನ ಮಗನೇ ಮೊದಲನೇ ಸೋಮೇಶ್ವರ (ಕ್ರಿ.ಶ.೧೦೪೨-ಕ್ರಿ.ಶ.೧೦೬೮) ತೈಲಪನ ತರುವಾಯ ಕಾಣಬರುವ ಸಮರ್ಥ ದೊರೆ. ಕ್ರಿ.ಶ.೧೦೬೮ರಲ್ಲಿ ಪ್ರಥಮ ಸೋಮೇಶ್ವರ ಚಕ್ರವರ್ತಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹಿರೇಕುರುವತ್ತಿ ಬಳಿ ಹರಿಯುವ ತುಂಗಭದ್ರ ನದಿಯಲ್ಲಿ ಸ್ವ-ಪ್ರೇರಣೆಯಿಂದ ಹಾರಿ ಜಲ ಸಮಾಧಿಯನ್ನು ಹೊಂದಿದ್ದನ್ನು ಅವನಿಗೆ ಗುಣಮುಖವಾಗದ ಕಾಯಿಲೆಯೂ ಇತ್ತೆಂದು ಹೇಳಲಾಗಿದೆ. ಕ್ರಿ.ಶ.೧೦೭೨ರಲ್ಲಿ ಪ್ರಥಮ ಸೋಮೇಶ್ವರ ಚಕ್ರವರ್ತಿಯ ಪುತ್ರನಾದ ಜಯಸಿಂಹನು, ಕೋಗಳಿ ಬಲ್ಲಕುಂದೆ ನೊಳಂಬವಾಡಿಗಳ ಆಡಳಿತವನ್ನು ನಡೆಸಿದಂತೆ ತೋರುತ್ತದೆ. ಸೋಮೇಶ್ವರನ ಮಕ್ಕಳಲ್ಲೊಬ್ಬನಾದ ವಿಷ್ಣುವರ್ಧನನು ಕ್ರಿ.ಶ.೧೦೬೮ ರಿಂದ ಕ್ರಿ.ಶ.೧೦೬೬ರವರೆಗೆ ನೊಳಂಬವಾಡಿ ಪ್ರಾಂತ್ಯವನ್ನು ಆಳುತ್ತಿದ್ದನೆಂದು ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಕ್ರಿ.ಶ.೧೦೬೪ ರಲ್ಲಿ ಚಾಳುಕ್ಯರ ಯುವರಾಜ ವಿಷ್ಣುವರ್ಧನ ವಿನಯಾದಿತ್ಯ (೧ನೇ ಸೋಮೇಶ್ವರನ ಪುತ್ರ) ಕಂಪಿಲಿ ನೆಲೆವೀಡಿನಿಂದ ನೊಳಂಬವಾಡಿಯನ್ನು ಆಳ್ವಿಕೆ ಮಾಡಿದ ವಿವರ ದೊರೆಯುತ್ತದೆ[೫೫]. ಕಲ್ಯಾಣಿ ಚಾಳುಕ್ಯ ವಂಶದಲ್ಲಿ ಶ್ರೇಷ್ಠನಾದ ೬ನೇ

ವಿಕ್ರಮಾದಿತ್ಯನು (ಕ್ರಿ.ಶ.೧೦೭೬-೧೧೨೬) ೫೦ ವರ್ಷಗಳ ವರೆಗೆ ದಕ್ಷತೆಯಿಂದ ಆಳಿದನು. ಇವನಿಗೆ ವಿಕ್ರಮಾಂಕ ತ್ರಿಭುವನ ಮಲ್ಲ ಎಂಬ ಬಿರುದುಗಳಿದ್ದವು. ಚೋಳರೊಡನೆ ಕೈಗೊಂಡ ಯುದ್ಧಗಳಲ್ಲಿ ಸಾಮಂತ ಅರಸರಾದ ಉಚ್ಚಂಗಿಯ ಪಾಂಡ್ಯರು ಇವನಿಗೆ ಹೆಚ್ಚಿನ ಸಹಾಯ ನೀಡಿದರು. ಇವನ ಕಾಲದ ಒಂದು ಶಾಸನವು ಜಮಖಂಡಿ ತಾಲೂಕಿನ ಕಡಕೋಳ ಗ್ರಾಮದ ಮಾಧವನ ಹೊಲದಲ್ಲಿ ದೊರೆತಿದೆ. ಇದರಲ್ಲಿ ೬ನೇ ವಿಕ್ರಮಾದಿತ್ಯನು ಜಮಖಂಡಿಯ ಅಗ್ರಹಾರಕ್ಕಾಗಿ ಭೂಮಿ, ಧನ, ಕನಕ, ದಾನವನ್ನಿತ್ತ ಉಲ್ಲೇಖವಿದೆ[೫೬]. ಆಗ ಸುಮಾರು ೪೦೦ ಜನ ಬ್ರಾಹ್ಮಣರು ಈ ಅಗ್ರಹಾರದಲ್ಲಿದ್ದುಕೊಂಡು ನಿರಂತರ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುತ್ತಿದ್ದರೆಂದು ವಿವರಿಸಲಾಗಿದೆ. ಇದರಿಂದ ಜಮಖಂಡಿಯು ಕಲ್ಯಾಣದ ಚಾಳುಕ್ಯರು ಆಳ್ವಿಕೆಗೆ ಒಳಪಟ್ಟಿತ್ತೆಂದು ಗೊತ್ತಾಗುತ್ತದೆ. ಆರನೇ ವಿಕ್ರಮಾದಿತ್ಯನ ನಂತರ ಸಿಂಹಾಸನಕ್ಕೆ ಬಂದ ಅವನ ಮಗ ಮುಮ್ಮಡಿ ಸೋಮೇಶ್ವರನು (ಕ್ರಿ.ಶ.೧೧೨೬-ಕ್ರಿ.ಶ.೧೧೩೮) ಶಾಂತ ರೀತಿಯಲ್ಲಿ ಆಳ್ವಿಕೆ ನಡೆಸಿದನು. ಈತನ ನಂತರ ೬ನೇ ವಿಕ್ರಮಾದಿತ್ಯನ ರಾಣಿ ಚಂದ್ರಲೇಖೆಯ ಮಗನಾದ ಮೂರನೇ ಸೋಮೇಶ್ವರನು ೧೧೨೭ರಲ್ಲಿ ಅಧಿಕಾರಕ್ಕೆ ಬಂದನು. ಈತನಿಗೆ 'ಭೂಲೋಕ ಮಲ್ಲ' ಎಂಬ ಬಿರುದಿತ್ತು. ೩ನೇ ಸೋಮೇಶ್ವರನು ರಾಜಕೀಯಕ್ಕಿಂತ ಹೆಚ್ಚಿನ ಒಲವು ಸಾಹಿತ್ಯ ಕಲೆಗಳ ಕಡೆಗೆ ತೋರಿದ್ದನು. ಈತನು ಘನಪಂಡಿತನಾಗಿದ್ದು ಕ್ರಿ.ಶ.೧೧೩೦ರಲ್ಲಿ 'ಅಭಿಲಾಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೊಲ್ಲಾಸ' ಎಂಬ ಜ್ಞಾನಕೋಶದ ಉದ್ಗ್ರಂಥವನ್ನು ರಚಿಸಿದ್ದಾನೆ[೫೭]. ಈತನು ಕ್ರಿ.ಶ.೧೧೨೭ ರಿಂದ ೧೧೩೮ರವರೆಗೆ ಕಲ್ಯಾಣ ಚಾಳುಕ್ಯ ರಾಜ್ಯವನ್ನಾಳಿದನು. ಈತನ ನಂತರ ಈತನ ರಾಣಿಯಾದ ಎಕ್ಕಲದೇವಿಯ ಮಕ್ಕಳಾದ ಇಮ್ಮಡಿ ಜಗದೇಕಮಲ್ಲ (ಕ್ರಿ.ಶ.೧೧೩೮-ಕ್ರಿ.ಶ.೧೧೫೧) ಮತ್ತು ಮುಮ್ಮಡಿ ತೈಲಪರು ರಾಜ್ಯವನ್ನಾಳಲು ಮುಂದಾದರು. ಇವರನ್ನು ಉಲ್ಲೇಖಿಸುವ ಕೆಲವು ಶಾಸನಗಳು ಬಾಗಲಕೋಟೆ ಜಿಲ್ಲೆಯಲ್ಲಿವೆ. ಇಮ್ಮಡಿ ಜಗದೇಕ ಮಲ್ಲನ ನಂತರ ದೊರೆ ಮುಮ್ಮಡಿ ತೈಲಪನು ಕ್ರಿ.ಶ.೧೧೫೧-ಕ್ರಿ.ಶ.೧೧೬೩ ಎಲ್ಲಾ ರೀತಿಯಿಂದಲೂ ಅಸಮರ್ಥನೆನಿಸಿದ್ದನು. ಇವನ ದೌರ್ಬಲತೆಯನ್ನು ಉಪಯೋಗಿಸಿಕೊಂಡು ಅನೇಕ ಸಾಮಂತರು ಸ್ವತಂತ್ರರಾದರು. ಈ ಮಧ್ಯೆ ಕಾಕತೀಯ ವಂಶದ ಪ್ರೋಲನಿಂದ ಸೋತಿದ್ದು, ಚಾಳುಕ್ಯರ ಕೀರ್ತಿಗೆ ಧಕ್ಕೆ ತಂದಿತು. ಈತನು ಕ್ರಿ.ಶ.೧೧೫೦ರಲ್ಲಿ ಸಿಂಹಾಸನವೇರಿದನು. ಈತನಿಗೆ ತೈಲಪ ಮತ್ತು ನೂರ್ಮಡಿ ತೈಲಪನೆಂಬ ಹೆಸರುಗಳಿದ್ದವು. ಇವನು ಅಪ್ರತಿಮನೆನಿಸಿ ಅನೇಕ ಶಾಸನಗಳನ್ನು ಈ ಜಿಲ್ಲೆಯಲ್ಲಿ ಹೊರಡಿಸಿದ್ದಾನೆ. ಚಾಳುಕ್ಯ ದೊರೆಗಳಿಂದ ಪೂರ್ಣ ಸ್ವಾತಂತ್ರ ಪಡೆದುಕೊಳ್ಳಲು ನಾಲ್ವಡಿ ಸೋಮೇಶ್ವರನ ವಿರುದ್ಧ ಇವನು ದಂಗೆ ಎದ್ದನೆಂಬುದಾಗಿಯೂ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಜಮಖಂಡಿ ಸಂಸ್ಥಾನಕ್ಕೆ ಒಳಪಟ್ಟ ಇಂದಿನ ಜಮಖಂಡಿ ತಾಲೂಕಿನಲ್ಲಿದ್ದ ಕೊಣ್ಣೂರು ಗ್ರಾಮದಲ್ಲಿ ಮೂರು ಶಾಸನಗಳು ದೊರೆತಿವೆ. ಅವುಗಳಲ್ಲಿ ಚಾವಡಿ ಹತ್ತಿರ ಒಂದು ಶಾಸನವಿದ್ದು, ಇನ್ನೊಂದು ಶಾಸನವು ಕೊಣ್ಣೂರು ಗ್ರಾಮದಲ್ಲಿದೆ. ಅಲ್ಲದೇ ಅಲ್ಲಿನ ಹನುಮಂತ ದೇವರ ಗುಡಿಯ ಆವರಣದಲ್ಲಿ ಮತ್ತೊಂದು ಶಾಸನವಿದೆ. ಈ ಶಾಸನಗಳಿಂದ, ಕಲ್ಯಾಣ ಚಾಳುಕ್ಯ ಅರಸನಾದ ನಾಲ್ಕನೇಯ ಸೋಮೇಶ್ವರನು, ಜಮಖಂಡಿ ಭಾಗದ ಮೇಲೆ ಅಂದರೆ ತೇರದಾಳ ಪರಿಸರದಲ್ಲಿ ಅಧಿಕಾರವನ್ನು ಸ್ಥಾಪಿಸಿದನೆಂದು ತಿಳಿದು ಬರುತ್ತದೆ[೫೮]. ಕಲ್ಯಾಣ ಚಾಳುಕ್ಯರ ಮನೆತನದ ಶ್ರೇಷ್ಠ ದೊರೆ ಆರನೇ ವಿಕ್ರಮಾದಿತ್ಯನಿಗೆ ಸಂಬಂಧಿಸಿದ ಕ್ರಿ.ಶ.೧೧೨೩ರ ತೇರದಾಳ ಶಾಸನವೊಂದು ಚಾಳುಕ್ಯ ಮನೆತನದ ವಂಶಾವಳಿಯ ಕುರಿತು ವಿವರಿಸುವುದರೊಂದಿಗೆ ಚಾಳುಕ್ಯರ ದೊರೆ ಪೆರ್ಮಾಡಿಯೆಂಬ ಅರಸನು

(ಕ್ರಿ.ಶ.೧೦೭೫-೧೧೨೬) ವೈರಿಗಳಾದ ಗುಜರಾತ ಚೋಳ ದೇಶಗಳ ಅರಸರನ್ನು ಗೆದ್ದು ಬಂದ ಬಳಿಕ ತೇರದಾಳ ಗ್ರಾಮವನ್ನು ಕಟ್ಟಿಸಿದನು ಎಂಬ ಉಲ್ಲೇಖವನ್ನು ಶಾಸನಗಳ ಮೂಲಕ ತಿಳಿಯಬಹುದು.

ದಂ ವಿಖ್ಯಾತಂ ತ್ರೈಲೋಕ್ಯಮಲ್ಲನಾಹವಮಲ್ಲಂ ॥ ವ ॥ ಅಂತು ಸಮಸ್ತ
ಧಾತ್ರೀವಲ್ಲಭಗ ವಲ್ಲಭನಾದಾಹವಮಲ್ಲದೇವನ ಪ್ರಿಯತನೂಜನ್ ॥ ಘನ
ದೋರ್ವ್ವಳ್ರಾಂತದಿಂ ಗೂರ್ಜ್ಜರ ನ್ರಿಪಬಳಮಂ ಗೆಲ್ದು ಮಾಘೂಂತ
ಚೋಳಾವನಿಪಂಗಾಭೀಳ ಕಾಳಾ
ನನಮನೊಸೆದು ಸಂಗ್ರಾಮದೊಳು ತೋಛಿ ಬೀತಾವನಿಪರ್ಗ್ಗಾತಂಕಮಂ ಪುಟ್ಟಿಸದ
ಸುನಯದಿಂ ವಿಶ್ವ ಭೂಚಕ್ರಮಂ ಸಜ್ಜನವಾಗಲು ರಾಯಕೋಳಾಹಳನೆನೆ ತಳೆದಂ
ರಾಯ ಪೆರ್ಮಾಡಿರಾಯಂ ॥ ವ ॥ ಅಂತು ಕುಂತಳ.
ಮಹೀತಳ ಕಾಂತಾಕಾಂತಾನೆನಿಸಿದ ವೀರಪೆರ್ಮ್ಮಾಡಿರಾಯನ ಕಟ್ಟಿದಲಗೆನಿಸಿದ
ತೇರಿದಾಳದ ವೀರಗೊಂಕ ಕ್ಷಿತೀಶ್ವರನನ್ವಯದೊಳೆನೆಬರಾನುಂ ಸಲೆ ನಿಜಜನನಿಗಂ ಜನಕರ್ಗ್ಗೆ
ಪೂರ್ವ್ವ ಪುಣ್ಯವೆಂಬ ಕಳ್ಪಾವನಿಜನಕೆ ಫಲವುದಯಿಸುವಂ

ತೇರದಾಳವು ತಾಲೂಕು ಕೇಂದ್ರ ಜಮಖಂಡಿಯಿಂದ ಪಶ್ಚಿಮಕ್ಕೆ ೨೯ ಕಿ.ಮೀ. ದೂರದಲ್ಲಿದ್ದು, ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದ ರಟ್ಟ ಕಾರ್ತವೀರ್ಯನ ರಾಜಧಾನಿಯಾಗಿತ್ತೆಂದು ಶಾಸನಗಳಿಂದ ವ್ಯಕ್ತವಾಗುತ್ತದೆ. ಶಾಸನಗಳಲ್ಲಿ ಈ ಊರನ್ನು **'ರಾಜಧಾನಿ ತೇರದಾಳ'** ಎಂದು ಉಲ್ಲೇಖಿಸಲಾಗಿದೆ. ತೇರದಾಳವು ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಪ್ರಮುಖ ಜೈನ ಕೇಂದ್ರವಾಗಿತ್ತೆಂದು ತಿಳಿದು ಬರುತ್ತದೆ. ಇಲ್ಲಿರುವ ನೇಮಿನಾಥ ಬಸದಿಯ ಹೊರಗಿನ ಮಂಟಪದ ಗೋಡೆಯಲ್ಲಿರುವ ಆರನೇ ವಿಕ್ರಮಾದಿತ್ಯನ ಕ್ರಿ.ಶ.೧೧೨೩ರ ಶಾಸನವು ಆತನ ಮಾಂಡಲಿಕನಾಗಿದ್ದ ರಟ್ಟ ಕಾರ್ತವೀರ್ಯನು ಆಳುತ್ತಿದ್ದಾಗ ರಾಜಧಾನಿ ತೇರದಾಳದ ಗೊಂಕದೇವರಸನು ಇಲ್ಲಿ ಗೊಂಕ ಜಿನಾಲಯ ಮತ್ತು ನೇಮಿನಾಥ ತೀರ್ಥಂಕರರ ವಿಗ್ರಹಗಳನ್ನು ಪ್ರತಿಷ್ಠಾಪಿಸಿದುದರ ಬಗ್ಗೆ ಉಲ್ಲೇಖಿಸಿರುವುದನ್ನು ಕಾಣುತ್ತೇವೆ. ಈ ಶಾಸನವು ಅಯ್ಯಾಹೊಳೆ ಐನೂರ್ವರ ಧರ್ಮಮನೋಭಾವನೆ ಮತ್ತು ತೇರದಾಳದ ಆರ್ಥಿಕ ಸಮೃದ್ಧಿಯ ಮೇಲೆ ಸಾಕಷ್ಟು ಬೆಳಕು ಚೆಲ್ಲುತ್ತದೆ. ಹೀಗಾಗಿ ತೇರದಾಳ ಪ್ರದೇಶವು ಕಲ್ಯಾಣದ ಚಾಳುಕ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಗೊತ್ತಾಗುತ್ತದೆ[೨೯].

**ಕಲ್ಯಾಣದ ಕಲಚೂರಿಗಳು**

ಕಲ್ಯಾಣಿ ಚಾಳುಕ್ಯರ ನಂತರ ಅವರ ಸಾಮಂತರಲೊಬ್ಬನಾದ ಕಲಚೂರಿ ವಂಶದ ೨ನೆಯ ಬಿಜ್ಜಳನು ಕ್ರಿ.ಶ.೧೧೫೬ರಲ್ಲಿ ಸ್ವತಂತ್ರನಾಗಿ ಕಲ್ಯಾಣಿ ಚಾಳುಕ್ಯ ದೊರೆ ಮುಮ್ಮಡಿ ತೈಲಪನನ್ನು ಬಂಧಿಸಿ, ಕಲ್ಯಾಣ ನಗರದಲ್ಲಿ ಕಲಚೂರಿ ವಂಶವನ್ನು ಸ್ಥಾಪಿಸಿದನು. ಕಲಚೂರಿಯರ ಕಾಲಾವಧಿಯಲ್ಲಿ ಪ್ರಮುಖ ಧಾರ್ಮಿಕ ಕ್ರಾಂತಿ ಉಂಟಾಯಿತಾದರು ಅವರಿಗೆ ಸಂಬಂಧಪಟ್ಟ ಮಾಹಿತಿಗಳು ಜಿಲ್ಲೆಯಲ್ಲಿ ಅತಿ ಕಡಿಮೆ ದೊರೆತಿದ್ದೂ, ಅಷ್ಟೇನು ಗಮನಾರ್ಹವಾಗಿಲ್ಲ. ಆದರೆ ತೇರದಾಳ ಪ್ರದೇಶದ ಮೇಲೆ ಅಧಿಕಾರವನ್ನು ಸ್ಥಾಪಿಸಿದ್ದರೆಂದು ವಿವರಿಸುವ ನಾಲ್ಕೈದು ಶಾಸನಗಳು ಇದೇ ಪರಿಸರದಲ್ಲಿವೆ.

೧. ಜಮಖಂಡಿಯ ನೆರೆಯ ಗ್ರಾಮವಾದ ಶಿರೋಳನ ಕಾಡಸಿದ್ದೇಶನ ದೇವಾಲಯದಲ್ಲಿದ್ದ ಕ್ರಿ.ಶ.೧೧೩೪ರ ಶಾಸನದಲ್ಲಿ ಕಲಚುರಿಯ ಅರಸನಾದ ಬಿಜ್ಜಳನು ಜಂಬುದ್ವೀಪವೆಂಬ ಜಮಖಂಡಿಯ ಅಗ್ರಹಾರಕ್ಕೆ ದತ್ತಿಕೊಟ್ಟನೆಂಬ ಉಲ್ಲೇಖವಿದೆ.
೨. ಕ್ರಿ.ಶ.೧೧೬೪ರಲ್ಲಿ ಕಲಚುರಿ ಅರಸನಾದ ಬಿಜ್ಜಳನು ಜಮಖಂಡಿ ತಾಲೂಕಿನ ತುಂಗಳ ಗ್ರಾಮದಲ್ಲಿದ್ದ ಮಲ್ಲಿಕಾರ್ಜುನ ದೇವಾಲಯಕ್ಕೆ ದತ್ತಿಕೊಟ್ಟನೆಂದು ಇಲ್ಲಿನ ಶಾಸನದಲ್ಲಿ ಹೇಳಲಾಗಿದೆ.
೩. ಜಮಖಂಡಿ ತಾಲೂಕಿನ ಟಕ್ಕೊಡ ಗ್ರಾಮದ ಮಾರುತಿ ದೇವಾಲಯಕ್ಕೆ ದತ್ತಿ ಕೊಟ್ಟನೆಂದು ಕ್ರಿ.ಶ.೧೧೬೪ರ ಶಾಸನದಲ್ಲಿ ಹೇಳಿದೆ.
೪. ಕ್ರಿ.ಶ.೧೧೭೫ರ ಶಾಸನವು ಕಲಚುರಿ ಅರಸನಾದ ನೇಮಿದೇವನ ಶಾಸನವು ಜಮಖಂಡಿಯ ನಂದಿಗೆಪ್ಪನ ಗುಡಿಯಲ್ಲಿದೆ.

ಈ ಮೇಲಿನ ಶಾಸನಗಳಿಂದ ಕಲ್ಯಾಣ ಚಾಳುಕ್ಯರು ಮತ್ತು ಕಲ್ಯಾಣದ ಕಲಚೂರಿಗಳು ಆಳ್ವಿಕೆ ನಡೆಸಿದ್ದನ್ನು ಧೃಢಪಡಿಸಿವೆ[೬೦]. ಕಲಚೂರಿಗಳು ಹಾಗೂ ಕಲ್ಯಾಣ ಚಾಳುಕ್ಯರ ಸಾಮ್ರಾಜ್ಯಗಳ ಅಂತ್ಯದೊಂದಿಗೆ ಕರ್ನಾಟಕದಲ್ಲಿ ಸೇವುಣ ಮತ್ತು ಹೊಯ್ಸಳರು ಅಧಿಕಾರಕ್ಕೆ ಬಂದರು.

### ೨.೪.೨ ಮಧ್ಯಯುಗೀನ ಕಾಲ ಘಟ್ಟ

ತೇರದಾಳ ಪ್ರದೇಶವನ್ನು ಮಧ್ಯಯುಗೀನ ಕಾಲಘಟ್ಟದಲ್ಲಿ ಸೇವುಣ, ವಿಜಯನಗರದ ಅರಸರು, ಆದಿಲ್ ಶಾಹಿಗಳು, ಪಟವರ್ಧನರು, ದೇಸಾಯಿಗಳು, ಮೊಘಲರು, ಮರಾಠರು ಆಳ್ವಿಕೆ ಮಾಡಿದ್ದು ತಮ್ಮದೇ ಆದ ಕೊಡುಗೆಗಳನ್ನು ಈ ಪ್ರದೇಶಕ್ಕೆ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಆ ಕುರಿತಂತೆ ಮುಂದಿನಂತೆ ವಿಶ್ಲೇಷಿಸಲಾಗಿದೆ.

**ದೇವಗಿರಿಯ ಯಾದವರು (ಸೇವುಣರು)**

ಕ್ರಿ.ಶ. ಸುಮಾರು ೮೩೫-೧೩೧೩ ರವರೆಗೆ ಆಳಿದ ಕರ್ನಾಟಕದ ಸೇವುಣರು ವಿಶೇಷವಾಗಿ ದೇವಗಿರಿ ಯಾದವರೆಂದೇ ಭಾರತದ ಇತಿಹಾಸದಲ್ಲಿ ಹೆಸರಾಗಿದ್ದಾರೆ. ಮಹಮ್ಮದೀಯರ (ಮುಸ್ಲಿಮರ) ದಾಳಿಯ ಪೂರ್ವದಲ್ಲಿ ಇವರು ಅತ್ಯಂತ ಪ್ರಭಾವಿತ ಅರಸರಾಗಿದ್ದು ಇವರು ಡೆಕ್ಕನ್ ಪ್ರದೇಶವನ್ನು ಆಳಿದರು. ಮಹಮ್ಮದೀಯ ಚರಿತ್ರೆಕಾರರಾದ ಅಮೀರ್‌ಖುಸ್ರು, ಫರಿಸ್ತ, ಬರನಿ ಮುಂತಾದವರು ಅವರನ್ನು ಯಾದವರೆಂದು ಕರೆದಿದ್ದಾರೆ. ಇದನ್ನೇ ಅನುಸರಿಸಿದ ಫ್ಲೀಟ್‌ರವರು ತಮ್ಮ **'ಡೈನಾಸ್ಟಿಕ್ ಆಫ್ ಕೆನಾರಿಸ್ ಡಿಸ್ಟ್ರಿಕ್ಟ್ ಆಫ್ ಬಾಂಬೆ ಪ್ರೆಸಿಡೆನ್ಸಿ'** ಎಂಬ ಗ್ರಂಥದಲ್ಲಿ ಸೇವುಣರನ್ನು ದೇವಗಿರಿಯ ಯಾದವರೆಂದು ಕರೆದಿದ್ದಾರೆ. ನಂತರದ ಚರಿತ್ರೆಕಾರರು ಇದನ್ನೇ ಅನುಸರಿಸುತ್ತಾ ಬಂದಿದ್ದಾರೆ. ಹೇಮಾದ್ರಿಯ 'ರಾಜಪ್ರಶಸ್ತಿ'ಯು ಈ ರಾಜವಂಶದ ಎರಡನೇ ದೊರೆ ಸೇವುಣ ಚಂದ್ರನಿಂದ ಈ ವಂಶಕ್ಕೆ ಸೇವುಣ ವಂಶವೆಂದು ಹೆಸರು ಬಂದಿತೆಂದು ತಿಳಿಸುತ್ತದೆ. ಹೊಯ್ಸಳರು, ಚಾಲುಕ್ಯರು, ಕಾಕತೀಯರು ಅವರನ್ನು ಸೇವುಣರೆಂದೇ ಕರೆದಿದ್ದಾರೆ. ಅಂದರೆ ಸಮಕಾಲೀನ ರಾಜರುಗಳು ಇವರನ್ನು ಸೇವುಣರೆಂಬ ಹೆಸರಿನಿಂದ ಕರೆಯುತ್ತಿದ್ದರು[೬೧].

ಇವರ ಮೊದಲಿನ ರಾಜಧಾನಿ ಇಂದಿನ ವಿಜಾಪುರ ತಾಲೂಕಿನ ತೆಲಗಿ ಗ್ರಾಮವಾಗಿತ್ತೆಂದು ಕೆಲವರು ಹೇಳಿದರೆ, ಇನ್ನೂ ಕೆಲವರು ತಡವಲಗಾ ಗ್ರಾಮವಾಗಿತ್ತೆಂದು

ಹೇಳುತ್ತಾರೆ. ನಂತರ ಇವರು ತಮ್ಮ ರಾಜಧಾನಿಯನ್ನು ದೇವಗಿರಿಗೆ ಅಥವಾ ಆಧುನಿಕ ದೌಲತಾಬಾದಕ್ಕೆ ವರ್ಗಾಯಿಸಿದರು. ಐದನೇ ಬಿಲ್ಲಮನ ಆಳ್ವಿಕೆಯಲ್ಲಿ ಇವರ ಸಾಮ್ರಾಜ್ಯವು ದಕ್ಷಿಣದಲ್ಲಿ ಕೃಷ್ಣಾ ನದಿಯ ವರೆಗೆ ವಿಸ್ತರಿಸಿತ್ತು[೬೨]. ಕೃಷ್ಣಾ ನದಿಯು ಜಮಖಂಡಿ ಭಾಗದಲ್ಲಿ ಹರಿಯುತ್ತಿರುವದರಿಂದ ಯಾದವರ ಸಾಮ್ರಾಜ್ಯವು ಈ ಪ್ರದೇಶದವರೆಗೆ ಹರಡಿತ್ತೆಂದು ಗೊತ್ತಾಗುತ್ತದೆ. ಶ್ರೀನರಸಿಹಮೂರ್ತಿಯವರು ರಚಿಸಿದ "ದೇವಗಿರಿಯ ಸೇವುಣರು" ಎಂಬ ಕೃತಿಯಲ್ಲಿ ಎರಡನೇಯ ಭಿಲ್ಲಮನ ಸಾಮ್ರಾಜ್ಯವು ಇಂದಿನ ವಿಜಯಪುರ, ಸೊಲ್ಲಾಪುರ, ಗುಲಬರ್ಗಾ, ರಾಯಚೂರ ಜಿಲ್ಲೆಗಳನ್ನು ಮತ್ತು ಹಿಂದಿನ ಜಮಖಂಡಿ ಸಂಸ್ಥಾನ ಮತ್ತು ಬೋರ ರಾಜ್ಯಗಳನ್ನೊಳಗೊಂಡಿತ್ತೆಂದು ಹೇಳಲಾಗಿದೆ. ಅದರಂತೆ ಯಾದವ ಮನೆತನದಲ್ಲಿ ಪ್ರಖ್ಯಾತಿಯನ್ನು ಪಡೆದ ಸಿಂಘಣನೆಂಬ ದೊರೆಯ ಕಾಲದಲ್ಲಿ ಇವರ ಕೀರ್ತಿಯು ಉಚ್ಚಮಟ್ಟಕ್ಕೇರಿತ್ತು. ಇವನ ೩೬ ವರುಷದ ದೀರ್ಘಕಾಲದ ಆಳ್ವಿಕೆಯಲ್ಲಿ ಅವನ ಹೆಸರಿನ ಅನೇಕ ಹಳ್ಳಿಗಳನ್ನು ನಿರ್ಮಿಸಲಾಯಿತು[೬೩].

ದೇವಗಿರಿಯ ಸೇವುಣರನ್ನು ಕುರಿತ ಶಾಸನಗಳು ಮತ್ತು ಅವರು ಕಟ್ಟಿಸಿದ ದೇವಾಲಯಗಳು ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ದೊರೆತಿವೆ. ತೇರದಾಳ ಪರಿಸರದಲ್ಲಿ ಇವರ ಶಾಸನಗಳು ದೊರೆತಿರುವುದರಿಂದ ಈ ಭಾಗವು ಅಂದು ಅವರ ಅಧೀನಕ್ಕೊಳಪಟ್ಟಿದ್ದವೆಂಬುದು ಸ್ಪಷ್ಟವಾಗುತ್ತದೆ. ಸೇವುಣ ರಾಜ್ಯವು ಚಿತ್ರದುರ್ಗ ಶಿವಮೊಗ್ಗ, ಹಾಸನ, ಧಾರವಾಡ, ಬಿಜಾಪುರ, ರಾಯಚೂರು, ಬೀದರ ಮತ್ತು ಬಳ್ಳಾರಿ ಜಿಲ್ಲೆಗಳ ಪ್ರದೇಶಗಳನ್ನು ಒಳಗೊಂಡಿತ್ತು.

ಸೇವುಣ ಸಿಂಘಣ (ಕ್ರಿ.ಶ.೧೨೧೦-ಕ್ರಿ.ಶ.೧೨೪೭) ಈ ಮನೆತನದ ಪ್ರಖ್ಯಾತ ಹಾಗೂ ಸಮರ್ಥ ದೊರೆಗಳಲ್ಲೊಬ್ಬ, ಆರಂಭದಲ್ಲಿ ಕೃಷ್ಣಾ ನದಿಯಿಂದಾಚೆಯವರೆಗೂ ಇವರು ಹೊಯ್ಸಳರಿಂದ ದೂಡಲ್ಪಟ್ಟರು. ಆದರೂ ಕ್ರಮೇಣ ಬಲಗೊಂಡ ಸೇವುಣರು ಹೊಯ್ಸಳರನ್ನು ತುಂಗಭದ್ರ ನದಿಯವರೆಗೂ ಹಿಮ್ಮೆಟ್ಟಿಸಿ, ತಮ್ಮ ವಿಜಯಪತಾಕೆಯನ್ನು ಹಾರಿಸಿದರು. ಬಹುಶಃ ಇಮ್ಮಡಿ ಬಲ್ಲಾಳನ ಮರಣಾನಂತರ ಹೊಯ್ಸಳ ಸೋಮೇಶ್ವರನ ಕಾಲಕ್ಕೆ (ಕ್ರಿ.ಶ.೧೨೩೫-೧೨೫೬) ಸೇವುಣ ಸಿಂಘಣನು ದಕ್ಷಿಣ ಭಾರತದಲ್ಲಿ ತನ್ನ ರಾಜ್ಯವನ್ನು ವಿಸ್ತರಿಸಿದನೆಂದು ತಿಳಿದು ಬರುತ್ತದೆ.

ಈ ವಂಶದಲ್ಲಿ ಮಹಾದೇವನ ನಂತರ ಕಂಧರನ ಮಗ ರಾಜಮಚಂದ್ರ ಅಧಿಕಾರಕ್ಕೆ ಬಂದ ಈತನಿಗೆ ಮಾಳವರಾಯ ಮದನ ತ್ರಿನೇತ್ರ, ಗೂರ್ಜರ ರಾಯ ವಾರಣಾಂಕುಶ ತೆಲಂಗರಾಯಲ ಮದನ ತ್ರಿನೇತ್ರ, ಗೊರ್ಜರರಾಯ ವಾರಣಾಂಕುಶ ತೆಲಂಗರಾಯ ಸ್ಥಾಪನಾಚಾರ್ಯ, ಹೊಯ್ಸಣರಾಯ ಸಾಮ್ರಾಜ್ಯ ಲಕ್ಷ್ಮಿಹರಣ ಮುಂತಾದ ಬಿರುದುಗಳಿದ್ದವು.

೧. ಜಮಖಂಡಿ ತಾಲೂಕಿನ ಮದರಖಂಡಿ ಗ್ರಾಮದ ಶಾಸನದಲ್ಲಿ ಯಾದವ ಅರಸನಾದ ಸಿಂಘಣನು, ಮದರಖಂಡಿ ಗ್ರಾಮದ "ಮಧುರಖಂಡೇಶ್ವರ", ದೇವಾಲಯಕ್ಕೆ ಭೂಮಿಯನ್ನು ದತ್ತಿಯಾಗಿಕೊಟ್ಟನೆಂದು ಪ್ರಸ್ಥಾಪಿಸಲಾಗಿದೆ[೬೪]. ಮದರಖಂಡಿ ಗ್ರಾಮವು ಜಮಖಂಡಿಯಿಂದ ಕೇವಲ ನಾಲ್ಕು ಕಿ.ಮೀ. ಅಂತರದಲ್ಲಿದ್ದು ಸಂಸ್ಥಾನಿಕರ ಕಾಲದಲ್ಲಿ ಒಂದು ಸಾಂಸ್ಕೃತಿಕ ನೆಲೆಯಾಗಿತ್ತು. ಅಲ್ಲದೇ ಯಾದವ ಅರಸನಾದ ರಾಮಚಂದ್ರದೇವನ ಕಾಲದ ಒಂದು ಶಾಸನವು[೬೫]. ಕ್ರಿ.ಶ.೧೩೦೬ರಲ್ಲಿ ಜಮಖಂಡಿ ತಾಲೂಕಿನ ಕಾಜೀಬೀಳಗಿ ಗ್ರಾಮದ ಕಾಶಿಲಿಂಗನ ಗುಡಿಯಲ್ಲಿದೆ. (ಈಶ್ವರ ದೇವಾಲಯದಲ್ಲಿದೆ). ಅದರಲ್ಲಿ ಬೈರೇಗೌಡ ಎಂಬುವರು ಬೆಳಗಲಿಯ

ಕಲ್ಲಿನಾಥ ದೇವಾಲಯಕ್ಕೆ ಭೂಮಿಯನ್ನು ದಾನವಾಗಿಕೊಟ್ಟದನ್ನು ಸರ್ವಾಧಿಕಾರಿ, ಮಹಾಪ್ರಧಾನ, ರಂಗನಾಥನು ಮಾನ್ಯ ಮಾಡಿದನು ಎಂದು ಬರೆಯಲಾಗಿದೆ.

ಇದಲ್ಲದೆ ಯಾದವರ ಕಾಲದ ಕೆಲವು ಶಾಸನಗಳು ಕುಂದಗೋಳದಲ್ಲಿಯ ದುರ್ಗಾ ದೇವಾಲಯದಲ್ಲಿ ಮತ್ತು ಜಮಖಂಡಿ ತಾಲೂಕಿನ ಕೊಣ್ಣೂರ ಮತ್ತು ಸಾವಳಗಿ ಗ್ರಾಮದಲ್ಲಿವೆ. ಇವುಗಳ ಮೇಲಿಂದ ಸುಮಾರು ೧೨ ಮತ್ತು ೧೩ನೇ ಶತಮಾನಗಳಲ್ಲಿ ಜಮಖಂಡಿಯ ಭಾಗವು ಯಾದವರ ಆಳ್ವಿಕೆಗೆ ಒಳಪಟ್ಟಿತ್ತೆಂದು ಗೊತ್ತಾಗುತ್ತದೆ.

ಅಲ್ಲದೇ ಯಾದವ ದೊರ ಸಿಂಘಣನ ಆಳ್ವಿಕೆಗೆ ಸಂಬಂಧಿಸಿದ ಕ್ರಿ.ಶ.೧೧೮೧ರ ಕಾಲದ ಶಾಸನವೊಂದು ತೇರದಾಳ ಗ್ರಾಮದ ನೇಮಿನಾಥ ಬಸದಿಯ ಹೊರಗಿನ ಮಂಟಪದ ಗೋಡೆಯ ಮೇಲೆ ಲಭ್ಯವಾಗಿದ್ದು ಶಾಸನದಲ್ಲಿ ಸಿಂಘಣನ ದಂಡನಾಯಕನಾದ ತೇಜುಗಿ ಮತ್ತು ಅವನ ಮಗನಾದ ಭಾಯಿದೇವನ ವರ್ಣನೆಯಿಂದ ಆರಂಭವಾಗುತ್ತದೆ. ಈ ಭಾಯಿದೇವನು ಕೊಂಡಿ ೩೦೦೦ ಕೊಂಡಾಡುವ ಹಾಗೆ ಆಳ್ವಿಕೆಯನ್ನು ನಡೆಸುತ್ತಿದ್ದನು. ಈ ಭಾಯಿದೇವ ದಂಡನಾಥನಿಗೆ ರಾಯದಂಡನಾಥ ಗಂಡಪೆಂಡಾರಂ ಎಂಬ ವಿಶೇಷ ಬಿರುದು ಇತ್ತು. ಈ ಭಾಯಿದೇವನು ತೇರದಾಳದ ಗೊಂಕ ಜಿನಾಲಯಕ್ಕೆ ಹಿಂದೆ ಗೊಂಕಅರಸನು ಬಿಟ್ಟಿದ್ದ ೭೨ ಮತ್ತರಿನ ಉತ್ತರಕ್ಕೆ ಬಡಗಲ ಕೊಲಲ್ಲಿ ೩೬ ಮತ್ತುರು ಭೂಮಿಯನ್ನು ದಾನವಾಗಿ ನೀಡಿರುತ್ತಾರೆ. ಇದರೊಂದಿಗೆ ಅಂಗಡಿಗೇರೆಯಲ್ಲಿ ನಿವೇಶನವೊಂದನ್ನು ನೀಡಿದಂತೆ ಉಲ್ಲೇಖವಿದೆ[೬೬]. ಹೀಗೆ ಸೇವುಣರು ತಮ್ಮ ಆಳ್ವಿಕಾವಧಿಯಲ್ಲಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿದ್ದರೆಂದು ಅವರ ಶಾಸನಗಳು ಉಲ್ಲೇಖಿಸುತ್ತವೆ. ಒಟ್ಟಾರೆಯಾಗಿ ಸೇವುಣ ಅರಸರು ತೇರದಾಳ ಪರಿಸರದಲ್ಲಿ ಆಳ್ವಿಕೆಮಾಡಿ ಹಲವು ಪ್ರಜಾಹಿತ ಕಾರ್ಯಗಳನ್ನು ಕೈಗೊಂಡಿದ್ದರೆಂಬುದನನ್ನು ಮರೆಯುವಂತಿಲ್ಲ.

**ವಿಜಯನಗರ ಅರಸರ ಆಳ್ವಿಕೆ**

ಹೊಯ್ಸಳ ಸಾಮ್ರಾಜ್ಯವು ಪತನದ ತರುವಾಯ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು ಮರೆತು ಹೋದ ಹಾಗೂ ಎಂದೆಂದೂ ಮರೆಯಲಾಗದ ಮಹಾ ಸಾಮ್ರಾಜ್ಯವೆಂದು ವಿದ್ವಾಂಸರು ಬಣ್ಣಿಸಿದ್ದಾರೆ[೬೭]. ಕ್ರಿ.ಶ.೧೩೩೬ ರಿಂದ ಕ್ರಿ.ಶ.೧೫೬೫ರವರೆಗೆ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಎಂಬ ನಾಲ್ಕು ಪ್ರಮುಖ ಅರಸು ಮನೆತನದವರು ಆಳಿದರು. ವಿಜಯನಗರ ಅರಸರು ನೇರವಾಗಿ ಇಲ್ಲವೇ ಅವರ ಸಾಮಂತರು/ದೇಶಿ ಸಂಸ್ಥಾನಗಳ ಮೂಲಕ ಇಂದಿನ ತೇರದಾಳದ ಕೆಲವು ಭಾಗಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಆಳ್ವಿಕೆ ನಡೆಸಿದರು. ಇಲ್ಲಿನ ಶಾಸನಗಳು ಮತ್ತು ಸ್ಮಾರಕಗಳ ಸಹಾಯದಿಂದ ಇವರ ಚರಿತ್ರೆಯನ್ನು ರಚಿಸಲು ಸಹಾಯಕವಾಗಿವೆ.

ಈ ಸಾಮ್ರಾಜ್ಯವನ್ನು ಸಂಗಮ ವಂಶವು ಕ್ರಿ.ಶ.೧೩೩೬ ರಿಂದ ೧೪೮೫ರ ವರೆಗೆ ೯ ಜನ ಅರಸರು ಆಳ್ವಿಕೆ ನಡೆಸಿದರು[೬೮]. ಸಂಗಮ ವಂಶವು ಕ್ರಿ.ಶ.೧೩೩೬ರಲ್ಲಿ ಹರಿಹರ, ಒಂದನೇ ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಸಹೋದರರಿಂದ ಸ್ಥಾಪನೆಯಾಯಿತು. ಒಂದನೇ ಹರಿಹರನಿಗೆ ೧೩೩೬ರಲ್ಲಿ ವೀರಬಲ್ಲಾಳನು ಸಮಸ್ತ ಅಧಿಕಾರವನ್ನು ನೀಡಿದನು[೬೯]. ಹರಿಹರ ಕ್ರಿ.ಶ.೧೩೪೨ರಲ್ಲಿ ಸ್ವತಂತ್ರವಾದ ಮತ್ತು ಸುಭದ್ರವಾದ ವಿಜಯನಗರದ ತಳಹದಿಯನ್ನು ಹಾಕಿದನು. ಈತ ರಾಜ್ಯವನ್ನು ಬಾದಾಮಿಯವರೆಗೆ ವಿಸ್ತರಿಸಿದನು[೭೦]. ೨ನೇ ಹರಿಹರ ರಾಯನು ವಿಷ್ಣು ಭಕ್ತನಾಗಿದ್ದು, ನಗರದಲ್ಲಿನ ವಿಷ್ಣು ದೇವಾಲಯಕ್ಕೆ ದತ್ತಿಬಿಟ್ಟ ಬಗ್ಗೆ ಶಾಸನ ವಿವರಿಸುತ್ತದೆ[೭೧].

ಎರಡನೇ ಕಂಪಣನು ಗುಲಬರ್ಗಾದ ಮಹಮ್ಮದ್ ಷಾ ಮತ್ತು ಅನಂತರ ಬಂದ ಮುಜಾಹಿದ್ ಇವರೊಡನೆ ಅನೇಕ ಯುದ್ಧಗಳನ್ನು ಮಾಡಿದನು. ಈತ ಮುಸಲ್ಮಾನರ ದಾಳಿಗಳಿಂದ ನಾಶವಾದ ಮಧುರೈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನು[೨೨]. ಕ್ರಿ.ಶ.೧೪೦೪ ರಲ್ಲಿ ಎರಡನೇ ಬುಕ್ಕ ಸಿಂಹಾಸನಕ್ಕೆ ಬಂದನು. ಇವನ ಅಕಾಲಿಕ ಮರಣದಿಂದ ಕ್ರಿ.ಶ.೧೪೦೬ರಲ್ಲಿ ಒಂದನೇ ದೇವರಾಯನು ಸಿಂಹಾಸನಕ್ಕೆ ಏರಿದನು. ಈತನು ಅಧಿಕಾರಕ್ಕೆ ಬಂದ ಕೂಡಲೇ ಬಹುಮನಿ ರಾಜ್ಯದ ಸುಲ್ತಾನ ಫಿರೋಜ್ ಷಾನೊಂದಿಗೆ ಯುದ್ಧ ಮಾಡಿದನು. ಕೊನೆಗೆ ಒಂದನೇ ದೇವರಾಯ ವಿವಾಹ ಮಾಡಿ ಮೈತ್ರಿ ಸಂಬಂಧ ಬೆಳೆಸಿದ ಇವನ ಆಡಳಿತದ ಸಂದರ್ಭದಲ್ಲಿ ವಿದೇಶಿ ಪ್ರವಾಸಿಗ ಇಟಲಿ ದೇಶದ ನಿಕೋಲೋಕೊಂಟಿ ವಿಜಯನಗರವನ್ನು ಸಂದರ್ಶಿಸಿದನು. ನ್ಯೂನಿಜ್‌ನು 'ದೇವರಾಯ ಸದಾಕಾಲ ಮೂರರೊಂದಿಗೆ ಯುದ್ಧದಲ್ಲಿ ತೊಡಗಿರುತ್ತಿದ್ದನು' ಎಂದು ಹೇಳುತ್ತಾನೆ. ಇವನ ನಂತರ ಈತನ ಮಗನಾದ ವೀರ ವಿಜಯರಾಯನು ಕ್ರಿ.ಶ.೧೪೧೨ ರಿಂದ ೧೪೧೩ರ ವರೆಗೆ ಆಳ್ವಿಕೆ ನಡೆಸಿದನು. ಈತನ ನಂತರ ಎರಡನೇ ದೇವರಾಯನು ಸಿಂಹಾಸನಕ್ಕೆ ಬಂದನು. ಈತನಿಗೆ 'ಗಜಬೇಂಟೆಗಾರ' ಎಂಬ ಬಿರುದಿತ್ತು. ಈತ ಸಂಗಮ ವಂಶದ ಪ್ರಸಿದ್ಧ ದೊರೆಯಾಗಿದ್ದನು. ಪರ್ಶಿಯಾ ದೇಶದ ಪ್ರವಾಸಿಗ ಅಬ್ದುಲ್ ರಜಾಕ್ ಈತನ ಆಳ್ವಿಕೆ ಕಾಲದಲ್ಲಿ ಭೇಟಿ ನೀಡಿದ್ದನು. ಈತನ ಆಳ್ವಿಕೆಯ ಕಾಲದಲ್ಲಿ ಸಾಮ್ರಾಜ್ಯವು ಸಿಲೋನಿನಿಂದ ಹಿಡಿದು ಗುಲಬರ್ಗಾದವರೆಗೂ ಒರಿಸ್ಸಾ-ಬಂಗಾಳಗಳಿಂದ ಮಲಬಾರಿನವರೆಗೂ ಈತ ರಾಜ್ಯವನ್ನು ವಿಸ್ತರಿಸಿದನು. ಈತನ ಆಳ್ವಿಕೆ ಕಾಲವು ವಿಜಯನಗರದ ಚರಿತ್ರೆಯಲ್ಲಿ ವೈಭವಯುತ ಕಾಲವಾಗಿತ್ತು[೨೩]. ಎರಡನೇ ದೇವರಾಯನ ಕಾಲದಲ್ಲಿ ಬಹುಮನಿ ಸುಲ್ತಾನರ ದಾಳಿಗಳು ಮೇಲಿಂದ ಮೇಲೆ ಸಂಭವಿಸುತ್ತಿದ್ದವು. ಈ ದಾಳಿಗಳನ್ನು ಎದುರಿಸಲು ದೇವರಾಯ ತನ್ನ ಸೈನ್ಯದಲ್ಲಿ ಮುಸ್ಲಿಂ ಸೈನಿಕರನ್ನು ನೇಮಿಸಿಕೊಂಡನು. ಈತನ ಆಳ್ವಿಕೆ ಕಾಲದಲ್ಲಿ ಭೇಟಿ ನೀಡಿದ್ದ ಪರ್ಶಿಯಾ ದೇಶದ ಪ್ರವಾಸಿಗನಾದ ಅಬ್ದುಲ್ ರಜಾಕನು ಭೇಟಿ ನೀಡಿ ಇದನ್ನು 'ಇಂತಹ ಇನ್ನೊಂದು ಸಾಮ್ರಾಜ್ಯವನ್ನು ಕಣ್ಣಿನಿಂದ ನೋಡಲಾರರು ಕಿವಿಯಿಂದ ಕೇಳಲಾರರು' ಎಂದು ವರ್ಣಿಸಿದನು.

ಈತನ ನಂತರ ಸಹೋದರನಾದ ಪ್ರತಾಪ ದೇವರಾಯ ಅಲ್ಪಕಾಲ ಆಳ್ವಿಕೆ ಮಾಡಿದನು. ನಂತರ ಈತನ ಮಗನಾದ ಮಲ್ಲಿಕಾರ್ಜುನ(ಕ್ರಿ.ಶ.೧೪೪೬-೧೪೬೫) ಅಧಿಕಾರಕ್ಕೆ ಬಂದನು. ಆದರೆ ಈತ ಸಮರ್ಥನಾಗಿರಲಿಲ್ಲ. ಆಗ ಈತನ ಚಿಕ್ಕಪ್ಪನ ಮಗನಾದ ವಿರೂಪಾಕ್ಷನು ಈ ಕ್ಷೋಭಕಾರಕ ಪರಿಸ್ಥಿತಿಯ ಲಾಭ ಪಡೆದು ಅಧಿಕಾರಕ್ಕೆ ಬಂದನು. ನಂತರ ಸಮರ್ಥ, ವೀರಪುರುಷನೂ, ಕ್ರಿಯಾಶೀಲನೂ ಮತ್ತು ಮಹತ್ವಕಾಂಕ್ಷಿಯೂ ಆದ ಸಾಳುವ ಒಂದನೇ ನರಸಿಂಹನು ಕ್ರಿ.ಶ.೧೪೮೫ರಲ್ಲಿ ಸಿಂಹಾಸನ ಏರಿ ಸಾಳುವ ವಂಶವನ್ನು ಸ್ಥಾಪಿಸಿದನು[೨೪]. ನರಸಿಂಹನ ಇಬ್ಬರು ಮಕ್ಕಳಲ್ಲಿ ಹಿರಿಯ ಮಗನಾದ ಇಮ್ಮಡಿ ನರಸಿಂಹನನ್ನು ಪಟ್ಟಾಭಿಷೇಕ ಮಾಡಿದನು. ಆದರೆ ಆಡಳಿತವೆಲ್ಲವೂ ತುಳುವ ನರಸನಾಯಕನ ಕೈಯಲ್ಲಿ ಕೇಂದ್ರೀಕೃತವಾಗಿತ್ತು. ತುಳುವ ವಂಶದ ಆಳ್ವಿಕೆ ಪ್ರಾರಂಭವಾಯಿತು[೨೫].

ತುಳುವ ವಂಶದ ಪ್ರಸಿದ್ಧ ದೊರೆಗಳೆಂದರೆ ಶ್ರೀಕೃಷ್ಣದೇವರಾಯ, ಅಚ್ಯುತರಾಯ ಪ್ರಮುಖರು. ಶ್ರೀಕೃಷ್ಣದೇವರಾಯನು ಕ್ರಿ.ಶ.೧೫೦೯ ರಿಂದ ೧೫೩೦ರ ವರೆಗೆ ಆಳ್ವಿಕೆ ನಡೆಸಿದನು. ಈತನು ಕ್ರಿ.ಶ.೧೫೨೦ರಲ್ಲಿ ಬಿಜಾಪುರ ಇಸ್ಮಾಯಿಲ್ ಆದಿಲ್‌ಶಾಹಿಯ ವಿರುದ್ಧ ರಾಯಚೂರ

ಕಾಳಗವನ್ನು ಮಾಡಿ ಯಶಸ್ವಿಯಾದನು ಮತ್ತು ಕೆಳದಿಯ (ಅರಸನಾದ) ನಾಯಕನಾದ ಸದಾಶಿವನಾಯಕನಿಗೆ ಜಮಖಂಡಿಯ ಮೇಲೆ ದಾಳಿ ಮಾಡಲು ಹೇಳಿ ಕಳುಹಿಸಿದನು. ಅದರಲ್ಲಿ ಸದಾಶಿವ ನಾಯಕನು ಜಯಶಾಲಿಯಾಗಿ, ಜಮಖಂಡಿಯ ನೆರೆಯಲ್ಲಿದ್ದ ಮಧುರಖಂಡಿಯನ್ನು ತನ್ನ ಮುಖ್ಯ ಠಾಣೆಯನ್ನಾಗಿ ಮಾಡಿಕೊಂಡು ಕೆಲವು ದಿವಸಗಳವರೆಗೆ ಜಮಖಂಡಿಯ ಮೇಲೆ ಅಧಿಕಾರವನ್ನು ನಡೆಸಿದನು. ಆದರೂ ವಿಜಯನಗರದ ಅಧಿಕಾರವು ಈ ಭಾಗದ ಮೇಲೆ ಬಹಳ ದಿನಗಳವರೆಗೆ ಉಳಿಯಲಿಲ್ಲ. ಶ್ರೀಕೃಷ್ಣದೇವರಾಯ ಸಮರ್ಥ ರೀತಿಯಲ್ಲಿ ರಾಜ್ಯವನ್ನು ಆಳಿದನು. ಶ್ರೀಕೃಷ್ಣದೇವರಾಯನು ತನ್ನ ಗ್ರಂಥ 'ಆಮುಕ್ತ ಮೌಲ್ಯದ'ದಲ್ಲಿ ಉಲ್ಲೇಖಿಸಿರುವ ರೀತಿಯಲ್ಲಿ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯನ್ನು ನಡೆಸುತ್ತಿದ್ದನು[೨೧]. ವಿಜಯನಗರ ಸಾಮ್ರಾಜ್ಯವು ಶ್ರೀಕೃಷ್ಣದೇವರಾಯನ ಕಾಲದಲ್ಲಿ ವೈಭವದ ಶಿಖರ ಮುಟ್ಟಿತು.

ಈತನ ಮರಣದ ನಂತರ ಸಹೋದರನಾದ ಅಚ್ಯುತರಾಯನು ಉತ್ತರಾಧಿಕಾರಿಯಾಗಿ ನೇಮಕವಾದನು. ಅಚ್ಯುತರಾಯ ಕ್ರಿ.ಶ.೧೫೩೦ ರಿಂದ ೧೫೪೩ರ ವರೆಗೆ ಆಳ್ವಿಕೆ ನಡೆಸಿದನು. ಇವನ ಮರಣದ ನಂತರ ಒಂದನೇ ವೆಂಕಟ(ಕ್ರಿ.ಶ.೧೫೪೩)ಆಡಳಿತಕ್ಕೆ ಬಂದನು. ನಂತರ ಸದಾಶಿವರಾಯನಿಗೆ (ಕ್ರಿ.ಶ.೧೫೪೩-೧೫೭೧) ಪಟ್ಟಾಭಿಷೇಕವಾಯಿತು. ಹೆಸರಿಗೆ ಮಾತ್ರ ರಾಜನಾಗಿದ್ದ ಇವನು ಎಲ್ಲಾ ಅಧಿಕಾರ ರಾಮರಾಯನ ಕೈಯಲ್ಲಿತ್ತು. ಈತನ ದುರಾಸೆ ಮತ್ತು ತಪ್ಪು ಲೆಕ್ಕಾಚಾರದಿಂದ ರಕ್ಕಸ-ತಂಗಡಿ ಯುದ್ಧ ನಡೆದು ವಿಜಯನಗರದ ಪತನಕ್ಕೆ ಕಾರಣವಾಯಿತು[೨೨]. ಕ್ರಿ.ಶ.೧೫೬೫ ಈ ಯುದ್ಧದ ನಂತರ ಸದಾಶಿವರಾಯ ಮರಣ ಹೊಂದಿದನು. ಸದಾಶಿವರಾಯನ ಜೊತೆಯಲ್ಲಿಯೇ ತುಳುವ ವಂಶ ಕೊನೆಗೊಂಡಿತು. ಇದರಿಂದ ಅರವೀಡು ವಂಶ ಕ್ರಿ.ಶ.೧೫೭೧ರಲ್ಲಿ ಆರಂಭವಾಗಿ ತಿರುಮಲ ಸಿಂಹಾಸನವೇರಿದನು. ನಂತರ ಕ್ರಿ.ಶ.೧೫೭೨ರಲ್ಲಿ ಶ್ರೀರಂಗರಾಯನು ಅಧಿಕಾರಕ್ಕೆ ಬಂದನು. ೧೪೬ ವರ್ಷಗಳ ದೀರ್ಘ ಆಳ್ವಿಕೆ ನಡೆಸಿದ ಅರವೀಡು ವಂಶದ ಅರಸರು ದುರ್ಬಲರಾಗಿದ್ದರಿಂದ ಕ್ರಮೇಣ ಈ ಸಾಮ್ರಾಜ್ಯ ಅವನತಿಯಾಯಿತು[೨೩].



**ಬಹುಮನಿ ಮತ್ತು ಆದಿಲ್‌ಶಾಹಿಗಳು**

ಸುಮಾರು ೧೩ನೇ ಶತಮಾನದಲ್ಲಿ ಜಮಖಂಡಿ ಮತ್ತು ಅದರ ಸಮೀಪದ ತೇರದಾಳ ಭಾಗದ ಮೇಲೆ ಮುಸ್ಲಿಮರ ಆಳ್ವಿಕೆಯು ಪ್ರಾರಂಭವಾದಂತೆ ತೋರುತ್ತದೆ. "ಬುರಾನ್-ಇ-ಮಸ್ಸೈರ" ಎಂಬ ಪರ್ಷಿಯನ್ ಕೃತಿಯಲ್ಲಿ ಹೇಳಿದಂತೆ ಕೃಷ್ಣಾ ಮತ್ತು ಘಟಪ್ರಭಾ ನದಿಗಳ ನಡುವಿನ ಪ್ರದೇಶಗಳಲ್ಲಿ ೧೪ನೇ ಶತಮಾನದಲ್ಲಿ (೧೩೫೨-೫೫) 'ನಾರಾಯಣ'ನೆಂಬ ಅರಸನು ಮುಧೋಳದಲ್ಲಿ ರಾಜ್ಯವಾಳುತ್ತಿದ್ದನು ಮತ್ತು ಅವನ ಸಂಗಡ 'ಮೈನೂದ್ದೀನ' ಎಂಬ ಬಹಮನಿ ರಾಜ್ಯದ ಅಧಿಕಾರಿಯು ಈ ಭಾಗದ ಆಡಳಿತದ ಮೇಲ್ವಿಚಾರಣೆಯನ್ನು ಮಾಡುತ್ತಿದ್ದನು[೨೪].

ಮುಂದೆ ಕ್ರಿ.ಶ.೧೩೫೩-೫೪ರಲ್ಲಿ ಮುಧೋಳದ ಅರಸನಾದ ನಾರಾಯಣನು ಮತ್ತು ಬಹಮನಿ ರಾಜ್ಯದ ಅಧಿಕಾರಿಯಾದ ಮೈನೂದ್ದೀನ ಇರ್ವರು ಬಹಮನಿ ಸಾಮ್ರಾಜ್ಯದ ಸಂಸ್ಥಾಪಕನಾದ ಅಲ್ಲಾವುದ್ದೀನ ಹಸನಗಂಗೂ ಬಹಮನಿಯ ಸ್ವಾಮಿತ್ವವನ್ನು ಈ ಭಾಗದ ಮೇಲೆ ಒಪ್ಪಿಕೊಳ್ಳಲು ತಿರಸ್ಕರಿಸಿದರು. ಇದರಿಂದ ರೊಚ್ಚಿಗೆದ್ದ ಹಸನ ಗಂಗೂ ಬಹಮನಿಯು ಕ್ರಿ.ಶ.೧೩೫೫ರ ಸುಮಾರಿಗೆ ಇವರ ಮೇಲೆ ದಾಳಿ ಮಾಡಿದನು. ಆಗ ಮೈನುದ್ದೀನನು ಸೋತು ಶರಣಾಗತನಾಗಿ, ಬಹಮನಿಯ ಸ್ವಾಮಿತ್ವವನ್ನು ಸ್ವೀಕರಿಸಿದನು. ಆದರೆ ನಾರಾಯಣನೆಂಬ

ಅರಸನು ಬಹಮನಿ ಸುಲ್ತಾನ ಹಸನಗಂಗೂವಿನೊಂದಿಗೆ ಯುದ್ಧ ಮಾಡಲು ಗೋಪಾಳನೆಂಬ ಸರ್ದಾರನನ್ನು ಮುಧೋಳ ಕೋಟೆಯಲ್ಲಿ ನಿಯಮಿಸಿ ತಾನು ಸ್ವತಃ ಸುಭದ್ರವಾದ ಜಮಖಂಡಿ ಕೋಟೆಗೆ ಬಂದು ಅಲ್ಲಿ ಆಶ್ರಯ ಹೊಂದಿದನು[೮೦]. ಆದರೆ ಮುಧೋಳ ಕೋಟೆಯನ್ನು ಗೆದ್ದುಕೊಂಡ ನಂತರ ಹಸನಗಂಗೂ ಬಹಮನಿಯು ಜಮಖಂಡಿಯ ಕೋಟೆಯ ಮೇಲೆ ದಾಳಿ ಮಾಡಿ ನಾರಾಯಣನನ್ನು ಸೋಲಿಸಿ ಸೆರೆಹಿಡಿದನು. ಸೋತು ಸೆರೆಯಾಳಾದ ನಾರಾಯಮನು ಬಹಮನಿಯ ಜೊತೆಗೆ ಒಪ್ಪಂದ ಮಾಡಿಕೊಂಡು ಅವನ ಸ್ವಾಮಿತ್ವವನ್ನು ಒಪ್ಪಿಕೊಂಡದ್ದರಿಂದ ಅವನ ಸಾಮಂತನಾಗಿ (ಮುಧೋಳದಲ್ಲಿ) ಅಧಿಕಾರದಲ್ಲಿ ಮುಂದುವರಿಯಲು ಸುಲ್ತಾನನು ಅನುಮತಿಸಿದನು. ಇದರಿಂದ ಆ ವೇಳೆಯಲ್ಲಿ ಜಮಖಂಡಿಯ ಕೋಟೆಯು ಮುಧೋಳದ ದೊರೆ ನಾರಾಯಣನ ಅಧೀನದಲ್ಲಿದ್ದ ಅಂಶ ವೇದ್ಯವಾಗುತ್ತದೆ[೮೧]. ಮುಂದೆ ಕೆಲಕಾಲದ ನಂತರ ಬಿಜಾಪುರ ಆದಿಲ್‌ಶಾಹಿ ಅರಸರು ಜಮಖಂಡಿ ಭಾಗದ ಮೇಲೆ ದಾಳಿಮಾಡಲು ಪ್ರಾರಂಭಿಸಿದರು. ಆಗ ಬಹಮನಿ ಸುಲ್ತಾನನಾದ ೩ನೇ ಮಹಮ್ಮದಶಹನು, ಬಿಜಾಪುರದ ಯುಸಫ್-ಆದಿಲ್-ಖಾನನ ಬಂಡಾಯವನ್ನು ಹತ್ತಿಕ್ಕಲು ಗೋವಾ ಮತ್ತು ಕೊಂಕಣದ ಸುಬೇದಾರನಾದ ಬಹಾದ್ದೂರ ಗಿಲಾನಿ ಮತ್ತು ವಿಜಯನಗರ ಅರಸರಿಗೆ ತಿಳಿಸಿದನು. ಅದರಂತೆ ಕ್ರಿ.ಶ.೧೪೯೧ರಲ್ಲಿ ಸೋಲಿಸಿ ಓಡಿಸಿದನು. ನಂತರ ಬಹಾದ್ದೂರ್ ಗಿಲಾನಿಯು ಜಮಖಂಡಿಯಲ್ಲಿಯೇ ನಿಂತು ಬಹಮನಿ ಮತ್ತು ಆದಿಲ್‌ಶಾಹಿಗಳ ನಡುವೆ ವಿರಸ ಹುಟ್ಟಿಸಲು ಯತ್ನಿಸಹತ್ತಿದನು. ಬಹಾದ್ದೂರ ಗಿಲಾನಿಯ ಈ ರಾಜಕೀಯ ಕುತಂತ್ರವನ್ನು ತಿಳಿದ ಮಹಮ್ಮದಷಹ ಬಹಮನಿಯು ಅವನ ಸದ್ದನ್ನು ಅಡಗಿಸಲು ಆದಿಲ್‌ಷಾನ ಸಹಾಯವನ್ನು ಪಡೆದುಕೊಂಡು ಕ್ರಿ.ಶ.೧೪೬೨ರಲ್ಲಿ ಜಮಖಂಡಿಯ ಮೇಲೆ ದಾಳಿ ಮಾಡಿ ಬಹಾದ್ದೂರ ಗಿಲಾನಿಯನ್ನು ಸ್ೋಲಿಸಿದನಲ್ಲದೆ ಆ ಹೋರಾಟದಲ್ಲಿ ಗಿಲಾನಿಯು ಅಸುನೀಗಿದನು. ಇದರಿಂದ ಮೊಹಮ್ಮದ ಬಹಮನಿಯು ಪುನಃ ಜಮಖಂಡಿಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಆದರೆ ಮಹಮ್ಮದ ಶಹಾನು ತನ್ನ ಸರ್ದಾರನಾದ "ಕಾಸೀಮ ಬರೀದ"ನ ಸಲಹೆಯ ಮೇರೆಗೆ ಜಮಖಂಡಿಯು ವಿಜಾಪುರಕ್ಕೆ ಸಮೀಪವಿರುವದರಿಂದ ಅದನ್ನು (ಜಮಖಂಡಿಯನ್ನು) ಆದಿಲ್‌ಶಾಹಿಗಳ ಆಡಳಿತಕ್ಕೆ ಒಪ್ಪಿಸಿದನು. ಅಂದಿನಿಂದ ಅಂದರೆ ಕ್ರಿ.ಶ.೧೪೯೨-೯೩ ರಿಂದ ಕ್ರಿ.ಶ.೧೬೮೬ರ ವರೆಗೆ ಜಮಖಂಡಿ ಮತ್ತು ಅದರ ಸಮೀಪದ ತೇರದಾಳ ಪ್ರದೇಶವು ವಿಜಾಪುರ ಆದಿಲ್‌ಶಾಹಿಗಳ ಆಡಳಿತಕ್ಕೆ ಒಳಪಟ್ಟಿತ್ತು. ಆಗ ಆದಿಲ್‌ಶಾಹಿಯ ಪ್ರತಿನಿಧಿಯೆಂದು "ಕಮಾಲ ಖಾನ್ ದಖ್ಖನಿ" ಎಂಬುದನ್ನು ಈ ಭಾಗದ ಮೇಲೆ ಆಡಳಿತವನ್ನು ನಡೆಸುತ್ತಿದ್ದನು[೮೨].

**ಮೊಘಲರು ಮತ್ತು ಮರಾಠರು ಹಾಗೂ ಪೇಶ್ವೆಗಳು**

ಕ್ರಿ.ಶ.೧೬೮೬ರ ನಂತರ ಮೊಘಲ ಅರಸನಾದ ಔರಂಗಜೇಬನು ಬಿಜಾಪುರವನ್ನು ಜಯಸಿದ ಮೇಲೆ ಸುಮಾರು ೫೦ ವರ್ಷಗಳ ವರೆಗೆ ಈ ಭಾಗವು ಮೊಘಲ ಸಾರ್ವಭೌಮತ್ವಕ್ಕೆ ಒಳಪಟ್ಟಿತ್ತು. ಮುಂದೆ ಕ್ರಿ.ಶ.೧೭೫೫ ರಿಂದ ಜಮಖಂಡಿ ಮತ್ತು ಅದರ ಸುತ್ತಲಿನ ಪ್ರದೇಶವು ಮರಾಠರ ವಶಕ್ಕೆ ಬಂದಿತು. ಕ್ರಿ.ಶ.೧೭೬೩-೬೪ರಲ್ಲಿ ಪೇಶ್ವೇಮಾಧವರಾವನು ಇದನ್ನು ತನ್ನ ಪ್ರಖ್ಯಾತ ಸೇನಾಪತಿಯಾದ ಪರಶುರಾಮಭಾವು ಪಟವರ್ಧನರಿಗೆ ವಹಿಸಿಕೊಟ್ಟನು[೮೩].

**೩.೨.೩ ಆಧುನಿಕ ಕಾಲಘಟ್ಟ**

ಮೊಗಲರ ಅವನತಿಯಿಂದ ತೇರದಾಳ ಪರಿಸರವು ಮರಾಠರ ಅಧೀನಕ್ಕೊಳಗಾಯಿತು. ಕಾಲಕ್ರಮೇಣ ಈ ಭಾಗವು ಕೊಣ್ಣೂರು, ಹನಗಂಡಿ ಮತ್ತು ಪಟವರ್ಧನ ಹಾಗೂ ಬ್ರಿಟಿಷರ

ಅಧೀನಕ್ಕೊಳಗಾಯಿತು. ಭಾರತ ಸ್ವತಂತ್ರ್ಯವಾಗುವವರೆಗಿನ ಕಾಲಘಟ್ಟವನ್ನು ಇಲ್ಲಿ ಆಧುನಿಕ ಕಾಲಘಟ್ಟ ಎಂದು ಪರಿಗಣಿಸಿ ಆ ಕಾಲದ ವರೆಗಿನ ಪ್ರಮುಖ ರಾಜಕೀಯ ವಿದ್ಯಮಾನಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಕೊಣ್ಣೂರ ದೇಸಾಯಿಯರು ಮತ್ತು ಪಟವರ್ಧನ ಸಂಸ್ಥಾನಿಕರು**

ಜಮಖಂಡಿ ಮತ್ತು ಅದರ ಸುತ್ತಲಿನ ತೇರದಾಳ ಪ್ರದೇಶವು ಕೊಣ್ಣೂರ ದೇಸಾಯಿ ಮನೆತನದವರ ಅಧೀನದಲ್ಲಿತ್ತು. ಕ್ರಿ.ಶ.೧೭೯೯ರಲ್ಲಿ ಪರಶುರಾಮಭಾವು ಪಟವರ್ಧನರು, **"ಪಟ್ಟಣಕುಡಿ"**ಯ ಯುದ್ಧದಲ್ಲಿ ಮರಣ ಹೊಂದಿದರು. ನಂತರ ಕ್ರಿ.ಶ.೧೮೧೧ರಲ್ಲಿ ಅವರ ಹಿರಿಯ ಮಗನಾದ ರಾಮಚಂದ್ರಪಂತ ಅಪ್ಪಾಸಾಹೇಬರ ಪಾಲಿಗೆ ಜಮಖಂಡಿ ಜಹಗೀರವು ಬಂದಿತು. ಈತನೇ ಜಮಖಂಡಿಯ (ಪಟವರ್ಧನ) ಸಂಸ್ಥಾನದ ಮೊದಲ ಅಧಿಪತಿಯಾದನು[೮೪]. ಮುಂದೆ ಈ ಪಟವರ್ಧನ ಸಂಸ್ಥಾನಿಕರೇ ಜಮಖಂಡಿಯನ್ನು ಸುಮಾರು ೧೮೦ ವರ್ಷಗಳವರೆಗೆ ಅಂದರೆ ದೇಶ ಸ್ವತಂತ್ರ್ಯವಾಗುವವರೆಗೆ ಒಳ್ಳೆಯ ವೈಭವದಿಂದ ರಾಜ್ಯವಾಳಿದರು. ಹೀಗೆ ಸಹಸ್ರ ವರುಷಗಳ ಭವ್ಯವಾದ ಐತಿಹಾಸಿಕ ಪರಂಪರೆಯನ್ನು ಮೈಗೂಡಿಸಿಕೊಂಡು ಬಂದ ಜಮಖಂಡಿಯನ್ನು ಸುಮಾರು (೧೭೬೩-೬೪ ರಿಂದ ೧೯೪೭ರವರೆಗೆ ವಿಲೀನೀಕರಣದ ವರೆಗೆ) ೧೮೦ ವರುಷಗಳವರೆಗೆ ಅವ್ಯಾಹತವಾಗಿ ಪಟವರ್ಧನ ಜಹಗೀರದಾರರು ಆಳಿದರು. ಇವರ ಕಾಲದಲ್ಲಿ ಜಮಖಂಡಿಯು ಸರ್ವವಿಧದಿಂದಲೂ **"ಸಮೃದ್ಧಿಯನ್ನು ಹೊಂದಿದ ಸಂಸ್ಥಾನವೆಂಬ"** ಖ್ಯಾತಿಯನ್ನು ಪಡೆದಿತ್ತು. ಅಷ್ಟೇ ಅಲ್ಲ ಇಡೀ ದಕ್ಷಿಣ ಸಂಸ್ಥಾನಗಳಲ್ಲಿಯೇ ಇದು ಮಾದರಿಯ ಸಂಸ್ಥಾನವೆಂಬ ಕೀರ್ತಿಯನ್ನು ಪಡೆದಿತ್ತು. ಈ ಸಂಸ್ಥಾನದ ವೈಭವವನ್ನು ಪ್ರತ್ಯಕ್ಷ ಕಂಡ ಬ್ರಿಟಿಷ ಅಧಿಕಾರಿಗಳು (ಮುಂಬೈ ಪ್ರಾಂತದ ಗವ್ಹರ್ನರರು) ಮುಕ್ತ ಕಂಠದಿಂದ ಹೊಗಳಿದ್ದುಂಟು[೮೫].

**೧. ಕೊಣ್ಣೂರ ದೇಸಾಯಿಯಗಳು**

ತೇರದಾಳ ಭಾಗವನ್ನು ಕೆಲ ಕಾಲ ಕೊಣ್ಣುರು (ಜಮಖಂಡಿ) ದೇಸಾಯಿಗಳು ಆಳಿದರು. ಸುಮಾರು ೧೪ನೇ ಶತಮಾನದ ಮಧ್ಯಭಾಗದಲ್ಲಿ ಈ ದೇಸಗತಿ ಮನೆತನದವರು ವಿಜಯನಗರ ಅರಸರ ಕಾಲದಲ್ಲಿ ಆನೆಗುಂದಿಯಲ್ಲಿ ಗಜದಳದ ಸೈನಿಕರಾಗಿ (ಗಾಣಿಗರು) ಸೇವೆ ಸಲ್ಲಿಸುತ್ತಿದ್ದರು. ಈ ಮನೆತನದ ಮೂಲ ಪುರುಷನಾದ ದೊಡ್ಡಪ್ಪನಾಯಕನೆಂಬುವನು ವಿಜಯನಗರ ಅರಸನ ವೈರಿಯ ಜೊತೆಗೆ ಹೋರಾಡಿ ಅವನ ಶಿರಚ್ಛೇದನ ಮಾಡಿ ರುಂಡವನ್ನು ತಂದು ಅರಸನಿಗೆ ತೋರಿಸಿದಾಗ ಅರಸನು ಈ ವೀರನು ಮುಂದೆ ತನಗೆ ವೈರಿಯಾಗಬಹುದೆಂದು ಭಾವಿಸಿ ಅವನ ಬಲಗೈಯನ್ನು ಕತ್ತರಿಸಿದನಂತೆ ಆಗ ದೊಡ್ಡಪ್ಪನಾಯಕನು ಅಂಗಹೀನನಾದ ಕಾರಣ ಅವನ ಉಪಜೀವನಕ್ಕಾಗಿ ವಿಜಯನಗರದ ಅರಸನು ಕೃಷ್ಣಾತೀರದ ಫಲವತ್ತಾದ ಭೂಪ್ರದೇಶವನ್ನು ಇನಾಮ ಕೊಟ್ಟನು. ಈ ಇನಾಮ ಭೂಮಿಯನ್ನು ಪಡೆದುಕೊಂಡವರೆಂದರೆ ಇಂದಿನ ಬಾಗೇವಾಡಿ ತಾಲೂಕಿನ ಕೊಲ್ಹಾರ (ಕೊರ್ತಿ), ಬೀಳಗಿ ತಾಲೂಕಿನ ಗಿರಿಸಾಗರ ಮತ್ತು ಹೊನ್ನಿಹಾಳ ಅಲ್ಲದೆ ಜಮಖಂಡಿ ತಾಲೂಕಿನ ಕೊಣ್ಣೂರ ದೇಸಾಯಿ ಮನೆತನದವರೆಂದು ಹೇಳುತ್ತಾರೆ. ಬೀಳಗಿ ತಾಲೂಕಿನ 'ಗಿರಿಸಾಗರ' ಎಂಬ ಗ್ರಾಮದ ದೇಸಾಯಿಯಾದ ಭೋಜನಾಯಕನೇ ಕೊಲ್ಹಾರದ ದೇಸಾಯಿಯಾಗಿದ್ದನು. ಅವನ ನಂತರ ಕೊಲ್ಹಾರದ ದೇಸಗತಿಯು ಅವನ ವಂಶಜರ ವಶವಾಯಿತು[೮೬].

ಹೀಗೆ ವಿಜಯನಗರದ ದಳಪತಿ (ಗಜ)ಯಿಂದ ಬಂದವರೆ ಈ ದೇಸಗತಿಯ ಮನೆತನದವರೆಂದು ನಂಬಲಾಗಿದೆ. ಇವರಿಗೆ ೩೩ ಹಳ್ಳಿಯ ಇನಾಮದಾರಿಕೆ ಇತ್ತೆಂದು ಹೇಳುತ್ತಾರೆ. ಮೊದಲು ಇವರಿಗೆ ಜಮಖಂಡಿಯ ದೇಸಾಯಿಯರೆಂದು ಕರೆಯುತ್ತಿದ್ದರು. ಇವರು ಸಮಗ್ರ ಜಮಖಂಡಿ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಕ್ರಿ.ಶ.೧೫೬೫ರ ನಂತರ ವಿಜಯನಗರ ಸಾಮ್ರಾಜ್ಯವು ಪತನವಾದ ಮೇಲೆ ಈ ಭಾಗವು (ಪ್ರದೇಶವು) ಸಂಪೂರ್ಣವಾಗಿ ವಿಜಾಪೂರ ಆದಿಲ್‌ಶಾಹಿಗಳ ವಶವಾಯಿತು. ಆಗ ಈ ದೇಸಾಯಿಯರು ಆದಿಲ್‌ಶಾಹಿಗಳಿಗೆ ಅಧೀನರಾಗಿದ್ದುಕೊಂಡು ಅವರಿಗೆ ಸಂಪೂರ್ಣ ಸಹಕಾರ ನೀಡಿದ್ದರಿಂದ ಆದಿಲ್‌ಶಾಹಿಯು ಇವರಿಗೆ ೩೩ ಹಳ್ಳಿಗಳನ್ನು ಇನಾಮ ಹಾಕಿ ಕೊಟ್ಟು ಆ ಪ್ರದೇಶದ ದೇಸಗತಿಯನ್ನು ಇವರಿಗೆ ಒಪ್ಪಿಸಿದನು[೮೭]. ಹೀಗಾಗಿ ಇವರಿಗೆ ಜಮಖಂಡಿ (ಕೊಣ್ಣೂರ) ದೇಸಾಯಿಯವರೆಂಬ ಹೆಸರು ಬಂದಿತು.

ಕೊಣ್ಣೂರು ದೇಸಾಯಿ ಮನೆತನದ ಕುಲಗುರುಗಳು ಕನ್ಹೇರಿ ಮಠದ ಕಾಡಸಿದ್ಧೇಶ್ವರರಾಗಿದ್ದರು. ಇಂದಿನ ಜಮಖಂಡಿ ನಗರದ ಮಧ್ಯ ಭಾಗದಲ್ಲಿ ಕಾಡಸಿದ್ಧೇಶ್ವರನ ಒಂದು ಪ್ರಾಚೀನ ದೇವಾಲಯವಿದೆ. ಇದು ಈ ದೇಸಾಯಿಯವರ ಕುಲದೇವರಾಗಿದ್ದು, ಅವರು ಇಂದಿಗೂ ಸಹ ಪೂಜ್ಯ ಭಾವನೆಯಿಂದ ನಡೆದುಕೊಳ್ಳುತ್ತಾರೆ. ಇವರಿಗೆ ಸೇರಿದ ಕೊಣ್ಣೂರಿನ ಗದಿಗೆಪ್ಪ ದೇಸಾಯಿ ಎಂಬುವರು ಕ್ರಿ.ಶ.೧೭೩೧ರಲ್ಲಿ ಜಮಖಂಡಿಯ ಓಲೆಯ ಮಠದ ಗುರುಸಿದ್ಧ ಸ್ವಾಮಿಗಳಿಗೆ ಸುಮಾರು ೧೯೦ ಎಕರೆ ಭೂಮಿಯನ್ನು ಉಂಬಳಿ ಹಾಕಿಕೊಟ್ಟದ್ದು ಉಲ್ಲೇಖವಿದೆ. ಅದರಂತೆ ಕೊಣ್ಣೂರ ದೇಸಾಯಿ ಲಿಂಗಪ್ಪ ಎಂಬವರು ಶಕೆ ೧೬೮೬ (ಇಶ್ವಿವಿ ೧೭೬೭)ರ ಚೈತ್ರ ಶುದ್ದ ದಶಮಿ ದಿನ ರಾಜಶ್ರೀ ಸದಾನಂದ ಸ್ವಾಮಿಗಳಿಗೆ ಜಮಖಂಡಿಯ ಕಾಶಿಲಿಂಗನ ದೇವಾಲಯ ಬಳಿಯ ಹತ್ತು ಬಿಘಾ ಭೂಮಿಯನ್ನು ದಾನ ಕೊಟ್ಟ ಬಗ್ಗೆ ದಾಖಲೆ ಉಪಲಬ್ದವಿದೆ[೮೮].

ಮೇಲಿನ ವಿವರಗಳಿಂದ ಕೊಣ್ಣೂರ ದೇಸಾಯಿಯವರು ೧೮ನೇ ಶತಮಾನದ ಕೊನೆಯವರೆಗೆ ಜಮಖಂಡಿ ಭಾಗವನ್ನು ಆಳಿದರೆಂದು ಗೊತ್ತಾಗುತ್ತದೆ. ಇವರ ದೇಸಗತಿಯು ಕ್ರಿ.ಶ.೧೭೯೯ರಲ್ಲಿ ಕಾಡಪ್ಪ ದೇಸಾಯಿಯವರ ಮರಣದ ನಂತರ ಪೇಶ್ವೆಯ ಜಹಗೀರದಾರರಾದ ಪಟವರ್ಧನ ಸಂಸ್ಥಾನಿಕರ ವಶವಾಯಿತು. ದಕ್ಷಿಣದಲ್ಲಿ ವಿಜಯನಗರ ಸಾಮ್ರಾಜ್ಯವು ಅಸ್ತಂಗತವಾದ ಮೇಲೆ ಅನೇಕ ಚಿಕ್ಕಪುಟ್ಟ ಮಾಂಡಲಿಕರು, ಪಾಳೆಗಾರರು, ಸಂಸ್ಥಾನಿಕರು, ದೇಸಾಯಿಯವರು ಸ್ವತಂತ್ರವಾಗಿಯೊ ಇಲ್ಲವೆ ಮರಾಠರ ಅಥವಾ ಇಂಗ್ಲೀಷರ ಅಧೀನರಾಗಿಯೆ ಇದ್ದುಕೊಂಡು ತಮ್ಮ ಪ್ರದೇಶಗಳಲ್ಲಿ ರಾಜ್ಯಭಾರ ಮಾಡುತ್ತಿದ್ದರು. ತಮ್ಮ ಪ್ರದೇಶದ ಭೂಕಂದಾಯವನ್ನು ವಸೂಲಿ ಮಾಡುವದು ಮತ್ತು ಶಾಂತಿ–ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳುವದು ಇವರ ಕರ್ತವ್ಯವಾಗಿತ್ತು. ಇಂತವರಲ್ಲಿ ಕೊಣ್ಣೂರ (ಜಮಖಂಡಿ ತಾಲೂಕಿನ) ದೇಸಾಯಿಯವರು ಒಬ್ಬರಾಗಿದ್ದರು.

ಕೊಣ್ಣೂರು ದೇಸಾಯಿಯವರಿಗೆ ಮೊದಲು ಜಮಖಂಡಿಯ ದೇಸಾಯಿಯವರೆಂದೇ ಕರೆಯುತ್ತಿದ್ದರು. ಇವರು ಸಮಗ್ರ ಜಮಖಂಡಿ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಈ ಮನೆತನದಲ್ಲಿ ಕಾಡಪ್ಪ ದೇಸಾಯಿ ಎಂಬುವರು ಒಳ್ಳೆಯ ಪ್ರಭಾವಿತರಾಗಿದ್ದರು. ಇವರ ಅಧಿಕಾರಾವಧಿಯಲ್ಲಿ ಪೇಶ್ವೆಯು ತನ್ನ ಸೇನಾಪತಿಯಾದ ಪರಶುರಾಮ ಬಾಹು ಪಟವರ್ಧನರಿಗೆ ಜಮಖಂಡಿಯ ಜಹಗೀರನ್ನು ಇನಾಮ್ ಕೊಟ್ಟಿದ್ದರಿಂದ ಪರಶುರಾಮ ಭಾಹು ಅವರು

ಜಮಖಂಡಿಗೆ ಬಂದು ತಮ್ಮ ಜಹಗೀರನ್ನು ಬಿಟ್ಟು ಕೊಡಬೇಕೆಂದು ಕೊಣ್ಣೂರಿನ ಕಾಡಪ್ಪ ದೇಸಾಯಿಯವರನ್ನು ಕೇಳಲಾಗಿ ಅವರು ಜಮಖಂಡಿಯ ಮೇಲಿನ ತಮ್ಮ ಅಧಿಕಾರವನ್ನು ಬಿಟ್ಟು ಕೊಡಲು ತಿರಸ್ಕರಿಸಿದರು. ಇದರಿಂದ ರೊಚ್ಚಿಗೆದ್ದ ಪರಶುರಾಮ ಭಾವು ಅವರು ನೇಮಿಸಿದ ಜಮಖಂಡಿ ಆಡಳಿತಾಧಿಕಾರಿಯಾದ ಭಾಸ್ಕರಪಂತ ನಾನಾ ಸುಖದೇವನು ಕಾಡಪ್ಪ ದೇಸಾಯಿಯವರ ಮೇಲೆ ದಾಳಿಯನ್ನಿಟ್ಟನು. ಆಗ ಕಾಡಪ್ಪ ದೇಸಾಯಿಯವರು ಸ್ಥಳೀಯ ಬೇಡ ಜನಾಂಗದವರ ಕೂಟವನ್ನು ರಚಿಸಿ ಕೆಲವು ಪುಂಡಾಟಿಕೆಯ ಕಾರ್ಯದಲ್ಲಿ ತೊಡಗಿದರು. ಆದ್ದರಿಂದ ರಾಜ್ಯದಲ್ಲಿ ಅಶಾಂತಿ ಉಂಟಾಯಿತು. ಆಗ ಕಾಡಪ್ಪ ದೇಸಾಯಿಯವರು ಆ ಜನರ ಪುಂಡಾಟಿಕೆಯನ್ನು ಹತ್ತಿಕ್ಕಿ ರಾಜ್ಯದಲ್ಲಿ ಸುವ್ಯವಸ್ಥೆಯನ್ನು ಕಾಯ್ದುಕೊಳ್ಳಬೇಕೆಂದು ವಿಶೇಷ ಸೂಚನೆಯನ್ನು ಕೊಟ್ಟನು. ಅದೇ ಪ್ರಕಾರ ಭಾಸ್ಕರಪಂತ ನಾನಾ ಸುಖದೇವನು ಕಾಡಪ್ಪ ದೇಸಾಯಿಯವರ ಮೇಲೆ ದಾಳಿ ಮಾಡಿ ಸುಮಾರು ೨೫೦ ಜನ ಬೇಡರನ್ನು ಹತ್ತಿಕ್ಕಿದನು. ಕೆಲವು ಸ್ಥಳೀಯ ಹಿರಿಯರ ಹೇಳಿಕೆಯ ಪ್ರಕಾರ ಕಾಡಪ್ಪ ದೇಸಾಯಿ ಮತ್ತು ಭಾಸ್ಕರಪಂತ ನಾನಾ ಸುಖದೇವ ಇಬ್ಬರಲ್ಲಿ ಒಂದು ಸಣ್ಣ ಕಾಳಗವೇ ನಡೆದು ಅದರಲ್ಲಿ ಸುಖದೇವನು ಜಯಶಾಲಿಯಾಗಿ ಕಾಡಪ್ಪ ದೇಸಾಯಿಯವರ ಸೈನ್ಯದಲ್ಲಿದ್ದ ಸುಮಾರು ೨೫೦ ಜನ ಬೇಡರನ್ನು ಸೋಲಿಸಿ ಸೆರೆಹಿಡಿದು ಮರಣ ದಂಡನೆಗೆ ಗುರಿಪಡಿಸಲಾಯಿತು. ಸೋತ ಕಾಡಪ್ಪ ದೇಸಾಯಿಯು ಜಮಖಂಡಿಯಿಂದ ಪಲಾಯನ ಮಾಡಿ ಮುಧೋಳ ಘೋರ್ಪಡೆ ಅರಸನ ಆಶ್ರಯವನ್ನು ಪಡೆದನು[೪೯].

ಕ್ರಿ.ಶ.೧೭೯೯ರಲ್ಲಿ ಕಾಡಪ್ಪ ದೇಸಾಯಿಯವರು ಮರಣ ಹೊಂದಿದ ನಂತರ ಅವರ ಕಿರಿಯ ಸಹೋದರನಾದ ಗದಿಗೆಪ್ಪ ದೇಸಾಯಿಯು ಪಟವರ್ಧನರ ವಿರುದ್ಧ ಜಮಖಂಡಿಯ ಅಧೀನದಲ್ಲಿದ್ದ ಜಗದಾಳ ಮೊದಲಾದ ಗ್ರಾಮಗಳನ್ನು ವಶಪಡಿಸಿಕೊಂಡನು. ಆಗ ಭಾಸ್ಕರಪಂತ ನಾನಾ ಸುಖದೇವರ ಜಗದಾಳದ ಮೇಲೆ ದಾಳಿ ಮಾಡಿ ಗದಿಗೆಪ್ಪ ದೇಸಾಯಿಯ ಸುಮಾರು ೧೫೦ ಸೈನಿಕರನ್ನು ಹತ್ಯೆಮಾಡಿದರು. ಆಗ ಗದಿಗೆಪ್ಪ ದೇಸಾಯಿಯು ಅಲ್ಲಿಂದ ಪಾರಾಗಿ ಮುಂದೆ ಮೂರು ವರ್ಷಗಳವರೆಗೆ ಸ್ಥಾನಭ್ರಷ್ಟನಾಗಿ ಸಂಚರಿಸುತ್ತ ಕೊನೆಗೆ ಕ್ರಿ.ಶ.೧೮೦೨ ರಲ್ಲಿ ಮರಣ ಹೊಂದಿದನು. ಗದಿಗೆಪ್ಪ ದೇಸಾಯಿಯ ಮರಣದ ನಂತರ ಅವನ ಮಗ ಮತ್ತು ಕುಟುಂಬದ ಸದಸ್ಯರು ಸುಮಾರು ಹತ್ತು ವರುಷಗಳ ಕಾಲ ಮುಧೋಳದಲ್ಲಿಯೇ ವಾಸವಾಗಿದ್ದರು. ಮುಂದೆ ಕ್ರಿ.ಶ.೧೮೧೨ ಜಮಖಂಡಿಯ ಸಂಸ್ಥಾನಿಕರಾದ ರಾಮಚಂದ್ರ ಪಂತ ಅಪ್ಪಾ ಅವರು ದೇಸಾಯಿಯವರಿಗೆ ಜಮಖಂಡಿಗೆ ಬಂದು ನೆಲೆಸಲು ಅನುಮತಿಯನ್ನಿತ್ತರು. ಅಲ್ಲದೆ ಕೊಣ್ಣೂರು ದೇಸಾಯಿಯವರ ವಂಶಸ್ಥರಿಗೆ ಜಮಖಂಡಿಯ ಸಂಸ್ಥಾನದ ದರ್ಬಾರದಲ್ಲಿ ಒಂದು ಗೌರವಾನ್ವಿತವಾದ ಸ್ಥಾನವನ್ನಿರಿಸಲಾಗಿತ್ತು[೫೦].

### ೨. ಪಟವರ್ಧನ ಸಂಸ್ಥಾನಿಕರು

ಸುಮಾರು ೧೭ನೇ ಶತಮಾನದ ಮಧ್ಯದಲ್ಲಿ ಈ ಮನೆತನದ ಮೂಲಪುರುಷನಾದ 'ಹರಭಟ್ಟ' ಎಂಬವರು ರತ್ನಾಗಿರಿ ಜಿಲ್ಲೆಯ ಕೋತವಡೆ ಎಂಬ ಹಳ್ಳಿಯಲ್ಲಿ ವಾಸಿಸುತ್ತಿದ್ದರು. ಇವರು ಅದೇ ಹಳ್ಳಿಯಲ್ಲಿ "ಸಹಸ್ರಬುದ್ಧೆ" ಎಂಬ ಪ್ರತಿಷ್ಠಿತ ಮನೆತನದ ಪುರೋಹಿತರಾಗಿದ್ದರು. ಇವರಿಗೆ ಬಾಳಂಭಟ್ಟ, ಕೃಷ್ಣಭಟ್ಟ ಮತ್ತು ರಘುನಾಥಭಟ್ಟ ಎಂಬ ೩ ಜನ ಮಕ್ಕಳಿದ್ದರು. ಇವರಲ್ಲಿ ಹಿರಿಯವನಾದ ಬಾಳಂಭಟ್ಟರಿಗೆ ೩ ಜನ ಮಕ್ಕಳಿದ್ದರು.

ಬಾಳಂಭಟ್ಟರ ಹಿರಿಯ ಮಗನೇ ೨ನೇ ಹರಭಟ್ಟರು. ಕೇಶವಭಟ್ಟ ಮತ್ತು ವಿಠಲಭಟ್ಟರು ಇವರ ಕಿರಿಯ ಮಕ್ಕಳಾಗಿದ್ದರು. ಈ ಹರಭಟ್ಟರೇ ಸಂಸ್ಥಾನಿಕ ಸರ್ದಾರ ಪಟವರ್ಧನ ಮನೆತನದ ಮೂಲ ಪುರುಷರು. ಕೇಶವಭಟ್ಟರು, ಬಿಲೌಡಿಕರ ಪಟವರ್ಧನ ಮನೆತನದ ಮೂಲಪುರುಷರು. ಅದರಂತೆ ೩ ನೆಯವರಾದ ವಿಠಲಭಟ್ಟರು, ಯಾದವಾಡಕರ ಪಟವರ್ಧನ ಸಂಸ್ಥಾಪಕರಾದರು[೯೧]. ಜಮಖಂಡಿ ಸಂಸ್ಥಾನದ ಪ್ರಖ್ಯಾತ ಅರಸರಾದ ರಾಮಚಂದ್ರರಾವ ಅಪ್ಪಾಸಾಹೇಬರು ಈ ಮನೆತನದ ದತ್ತಕ ಪುತ್ರರು.

### ೧. ೨ನೇಯ ಹರಭಟ್ಟ

ಜೀವನದಲ್ಲಿ ಯಾವದಾದರೊಂದು ಮಹತ್ ಸಾಧನೆಯನ್ನು ಮಾಡಬೇಕೆಂಬ ಛಲದಿಂದ ಅವರು ತಮ್ಮೂರಾದ ಕೋತವಡೆಯನ್ನು ಬಿಟ್ಟು "ಗಣಪತಿ ಪುಳೆ" ಕ್ಷೇತ್ರ (ಪ್ರವಾಳ ಕ್ಷೇತ್ರ)ಕ್ಕೆ ಬಂದು ನೆಲೆಸಿ ಗಣಪತಿಯನ್ನು ಅತ್ಯಂತ ಭಕ್ತಿ ಶ್ರದ್ಧೆಯಿಂದ ಪೂಜಿಸಿದರು. ಪ್ರತಿದಿನ ಇವರು ಆ ಊರಲ್ಲಿ ಭಿಕ್ಷಾನ್ನವನ್ನು ದೊರಕಿಸಿಕೊಂಡು ಬಂದು ಅದರಲ್ಲಿಯೇ ತನ್ನ ಇಷ್ಟ ದೇವರಿಗೆ ಅರ್ಪಿಸಿ ತಾವು ಸ್ವೀಕರಿಸುತ್ತಿದ್ದರು. ಮುಂದೆ ಆಹಾರ ತ್ಯಜಿಸಿ ಧ್ಯಾನದಲ್ಲಿಯೇ ಸುಮಾರು ಹತ್ತು ವರ್ಷಗಳವರೆಗೆ ಅತ್ಯಂತ ಕಠೋರ ವ್ರತವನ್ನಾಚರಿಸಿದರು. ಇವರ ತಪಶ್ಚರ್ಯಕ್ಕೆ ಮೆಚ್ಚಿದ ಗಣಪತಿ ದೇವರು "ಒಂದು ದಿವಸ ಹರಬಡಜಿಯವರ (ಹರಭಟ್ಟನ) ಕನಸಿನಲ್ಲಿ ಬಂದು ಇನ್ನು ಮೇಲೆ ನೀನು ಈ ಜಾಗ್ರತ ಸ್ಥಾನದ (ಗಣಪತಿ ಪುಳೆ) ಪುರಾಣಿಕರಾದ ಶೆಂಡೆಯವರ ಸುಪುತ್ರಿಯನ್ನು ವಿವಾಹವಾಗಿ ಗ್ರಹಸ್ಥಾಶ್ರಮಿಯಾಗಬೇಕೆಂದು ದೇವರಾಜ್ಞೆಯಾಯಿತು". ಅದೇ ಪ್ರಕಾರ ಶೆಂಡೆಯವರ ಕನಸಿನಲ್ಲಿಯೂ ಗಣಪತಿ ದೇವರು ಬಂದು ಹರಭಟ್ಟನೆಂಬ ಭಕ್ತ ಶ್ರೇಷ್ಠನಿಗೆ ನಿನ್ನ ಮಗಳನ್ನು ಕೊಟ್ಟು ವಿವಾಹ ಮಾಡಬೇಕೆಂದು ಹೇಳಿದರು. ಅದರಿಂದ ಸಂತುಷ್ಟನಾದ ಶೆಂಡೆಯವರು ಹರಬಡಜಿಯವರ ಹತ್ತಿರ ಬಂದು ತಮ್ಮ ವೃತ್ತಾಂತವನ್ನು ಹೇಳಿ ತಮ್ಮ ಮಗಳನ್ನು ಸ್ವೀಕರಿಸಬೇಕೆಂದು ಕೇಳಿದರು. ಅದಕ್ಕೆ ಹರಬಡಜಿಯವರು ಒಪ್ಪಿಕೊಂಡರು. ಹೀಗೆ ಇವರ ವಿವಾಹವು ಸುಕ್ಷೇತ್ರ ಗಣಪತಿ ಪುಳೆಯಲ್ಲಿ ನೆರವೇರಿತು. ನಂತರ ಇವರು ತಮ್ಮ ಹುಟ್ಟೂರಾದ ಕೋತವಡೆಗೆ ಹೋಗಿ, ಪ್ರಾಪಂಚಿಕ ಜೀವನವನ್ನು ಪ್ರಾರಂಭಿಸಿದರು. ಕೆಲವು ದಿವಸಗಳ ನಂತರ ಇವರು ತಮ್ಮ ಕುಲದೇವತೆಯಾದ ರತ್ನಾಗಿರಿ ಜಿಲ್ಲೆಯ ಚಿಪಳೂಣದ ಕರಂಜೇಶ್ವರಿ ದೇವಸ್ಥಾನಕ್ಕೆ ಹೋಗಿ ಪೂಜೆಯನ್ನು ಸಲ್ಲಿಸಿದರು. ಇವರ ಭಕ್ತಿಗೆ ಮೆಚ್ಚಿದ ಕುಲದೇವತೆ ಕರಂಜೇಶ್ವರಿಯು ಇವರಿಗೆ ಕೊಂಕಣವನ್ನು (ಕೋತವಡೆ) ಬಿಟ್ಟು ದೇಶ ಸಂಚಾರವನ್ನು ಮಾಡು ಅದರಿಂದ ನಿಮ್ಮ ಭಾಗ್ಯೋದಯವಾಗುತ್ತದೆಂದು ಹೇಳಿ ಹರಸಿದಳಂತೆ. ಆ ಪ್ರಕಾರ ಹರಭಟ್ಟರು ಕೋತವಡೆಯಿಂದ ರತ್ನಾಗಿರಿ, ರಾಜಾಪೂರ, ಸಾವಂತವಾಡಿಯಿಂದ ಕಾಪಸಿಗೆ ಬರುವ ಅರಣ್ಯದ ಮಾರ್ಗದಲ್ಲಿ ಒಂದು ಗಿಡದ ಬುಡದಲ್ಲಿ ಒಬ್ಬ ವಿಧವಾ ಸ್ತ್ರೀ ಮತ್ತು ೭-೮ ವರ್ಷದ ತೇಜಪುಂಜನಾದ ಬಾಲಕನನ್ನು ಕಂಡರು. ಆ ಸ್ತ್ರೀಯು ತನ್ನ ಮಗನ ಉಪನಯವನ್ನು ಮಾಡಲು ಹಣವಿಲ್ಲೆಂದು ಚಿಂತಿಸುತ್ತ ತನ್ನ ಕರುಣದ ಕಥೆಯನ್ನು ಹರಬಡಜಿಯವರಿಗೆ ಹೇಳಿ ಈ ಮಂಗಲ ಕಾರ್ಯಕ್ಕೆ ನೆರವಾಗಬೇಕೆಂದು ಅಂಗಲಾಚಿ ಬೇಡಿಕೊಂಡಳು. ಹರಭಟ್ಟರು ಮೊದಲೇ ತಮ್ಮ ಬಡತನದ ಬೇಗೆಯಿಂದ ಬೆಂದು ಬೆಂಡಾಗಿದ್ದರು. ಈಗ ಆ ಮಹಿಳೆಯ ಕರುಣದ ಕಥೆಯನ್ನು ಕೇಳಿ ಮತ್ತಷ್ಟು ಚಿಂತೆಗೊಳಗಾದರು. ಕೊನೆಗೆ ಧೈರ್ಯ ಮಾಡಿ ಈ ಅನಾಥಳಿಗೆ ಸಹಾಯ ಮಾಡಬೇಕೆಂದು ನಿಶ್ಚಯಿಸಿ "ನೀವು ಈಗ ಕಾಪಸಿಗೆ ಹೋಗಿರಿ ಅಲ್ಲಿ ಸಂತಾಜಿ ಘೋರ್ಪಡೆ

ಎಂಬವರು ಇದ್ದಾರೆ ಅವರ ಆಶ್ರಯವನ್ನು ಪಡೆದು ನಿಮ್ಮ ಕಾರ್ಯವನ್ನು ಸಫಲಗೊಳಿಸಿಕೊಳ್ಳಿರೆಂದು ಹೇಳಿ" ಹೊರಟು ಹೋದರು[೨].

ಸಂತಾಜಿ ಘೋರ್ಪಡೆಯವರಿಗೆ ಗಂಡು ಸಂತಾನವಿರಲಿಲ್ಲ ಅವರು ನಾರಾಯಣರಾವ್ ಜೋಶಿಯ ಉಪನಯನವನ್ನು ಮಾಡಿ ಅವನ ಮುಂದಿನ ಎಲ್ಲ (ಏಳ್ಗೆಗೆ) ಪ್ರಗತಿಗೆ ಕಾರಣೀಭೂತರಾದರು. ನಂತರ ಈ ಬಾಲಕನು ತನ್ನ ಸ್ವ ಸಾಮರ್ಥ್ಯದಿಂದಲೇ ಸಾತಾರಾದ ಛತ್ರಪತಿಯ ಆಳ್ವಿಕೆಯಲ್ಲಿ ಅತ್ಯಂತ ಪ್ರಭಾವಿತನಾದನು[೩]. ಈ ಬಾಲಕನೇ ಮುಂದೆ ಪ್ರಖ್ಯಾತನಾಗಿ ಸಂಚಾರದಲ್ಲಿದ್ದ ಹರಬಡಜಿಯನ್ನು ಈಚಲಕರಂಜಿಗೆ ಬರಮಾಡಿಕೊಂಡು ಅವರು ತನಗೆ ಮಾಡಿದ ಉಪಕಾರವನ್ನು ಸ್ಮರಿಸಿ ನಿಮ್ಮ ಕೃಪೆಯಿಂದಲೇ ನಾನು ಅಧಿಕಾರವಂತನಾಗಿದ್ದೇನೆ. ಆದ್ದರಿಂದ ತಾವು ನನ್ನ ಜೊತೆಗೆ ಇದ್ದುಕೊಂಡು ರಾಜಪುರೋಹಿತರೆಂದು ಕಾರ್ಯವನ್ನು ಮಾಡಬೇಕೆಂದು ವಿನಂತಿಸಿಕೊಂಡರು. ಅದರಿಂದ ಹರಬಡಜಿಯವರು ಈಚಲಕರಂಜಿಯಲ್ಲಿಯೇ ವಾಸಿಸಹತ್ತಿದರು.

ಈಚಲಕರಂಜಿಯ ಸರ್ದಾರನಾದ ನಾರಾಯಣರಾವ್‌ರ ಮಗನಾದ ವೆಂಕಟರಾವ್ (ತಿರುಪತಿಯ ವೆಂಕಟೇಶ್ವರನ ವರಕೃಪೆಯಿಂದ ಜನಿಸಿದ್ದನು) ಇವರು ಬಹು ಪರಾಕ್ರಮಿಗಳಾಗಿದ್ದರು. ಪೇಶ್ವೆ ಮನೆತನದ ಸಂಸ್ಥಾಪಕನಾದ ಬಾಲಾಜಿ ವಿಶ್ವನಾಥ ಭಟ್ಟನು ತನ್ನ ಮಗಳಾದ 'ಅನುಬಾಯಿ'ಯನ್ನು ವೆಂಕಟರಾವ್‌ರಿಗೆ ವಿವಾಹ ಮಾಡಿ ಕೊಟ್ಟಿದ್ದರಿಂದ ಪೇಶ್ವೆಯರೊಂದಿಗೆ ಈ ಹರಬಡಜಿಯವರ ಸಂಪರ್ಕವು ಬೆಳೆದುಬಂದಿತು.
ಪುರೋಹಿತ ಹರಬಡಜಿಯವರಿಗೆ ಏಳು ಜನ ಮಕ್ಕಳಿದ್ದರು. ಕೃಷ್ಣಭಟ್ಟ, ಬಾಳಂಭಟ್ಟ ತ್ರಯಂಬಕ ಭಟ್ಟ, ಗೋವಿಂದ ಭಟ್ಟ, ರಾಮಚಂದ್ರ ಭಟ್ಟ, ಮಹದೇವ ಭಟ್ಟ, ಭಾಸ್ಕರಭಟ್ಟ ಇವರಲ್ಲಿ ಪ್ರಮುಖರೆಂದರೆ ತ್ರಯಂಬಕ ಭಟ್ಟ, ಗೋವಿಂದ ಭಟ್ಟ ಮತ್ತು ರಾಮಚಂದ್ರ ಭಟ್ಟ ಎಂಬುವರಾಗಿದ್ದರು.

ಬಾಳಾಜಿ ವಿಶ್ವನಾಥ ಪೇಶ್ವೆಯ ನಂತರ ಅವರ ಸಮರ್ಥ ಮಗನಾದ ೧ನೇ ಬಾಜಿರಾವ್ ಪೇಶ್ವೆಯು ತಮ್ಮ ಸಹೋದರಿಯಾದ 'ಅನುಬಾಯಿ'ಯ ಊರಾದ ಈಚಲಕರಂಜಿಗೆ ಬರುತ್ತಿದ್ದರು. ಆವಾಗ್ಗೆ ಅನುಬಾಯಿಯು ತಮ್ಮ ರಾಜಪುರೋಹಿತ(ಹರಬಡಜಿ) ಮಕ್ಕಳಿಗೆ (ತ್ರಯಂಬರ ಭಟ್ಟ, ಗೋವಿಂದ ಭಟ್ಟ, ರಾಮಚಂದ್ರ ಭಟ್ಟ) ತಮ್ಮ ಆಸ್ಥಾನದಲ್ಲಿ ಯಾವದಾದರೊಂದು ಹುದ್ದೆಯನ್ನು ಕೊಡಬೇಕೆಂದು ಕೇಳಿಕೊಂಡಳು. ಆಗ ಬಾಜಿರಾವ್ ಪೇಶ್ವೆಯು ತನ್ನ ಕೈಕೆಳಗಿನ ಸರ್ದಾರ್ ಇಂದ್ರೋಜಿ ಕದಮ ಅವರಿಗೆ ತಿಳಿಸಿ ಮೂವರನ್ನು ತಮ್ಮ ಅಶ್ವಶಾಲೆಯ ಮೇಲ್ವಿಚಾರಕರೆಂದು ನಿಯಮಿಸಿಕೊಳ್ಳಬೇಕೆಂದು ಹೇಳಿದರು. ಇಂದ್ರೋಜಿ ಕದಮರಿಗೆ ಸಂತಾನವಿಲ್ಲದುರಿಂದ ಅವರು ತಮ್ಮ ಅಶ್ವಶಾಲೆಯನ್ನೇ ಗೋವಿಂದ ಹರಿಯವರಿಗೆ ಒಪ್ಪಿಸಿದರು ಮತ್ತು ರಾಮಚಂದ್ರ ಹರಿಯವರು ೧ನೇ ಬಾಜಿರಾವ್ ಪೇಶ್ವೆಯ ಸಹೋದರನಾದ ಚಿಮ್ಮಾಜಿ ಅಪ್ಪಾ ಇವರ ಖಾಸಗಿ ಅಶ್ವಪಥದಲ್ಲಿ ಸೇವೆ ಸಲ್ಲಿಸಲು ಪ್ರಾರಂಭಿಸಿದರು. ಇದೇ ಸಮಯದಲ್ಲಿ ಉತ್ತರ ಭಾರತದಲ್ಲಿ ಸವಾಯಿ ಜಯಸಿಂಗನೆಂಬ ವೀರ ರಜಪುತ ಅರಸನು ೧ನೇ ಬಾಜಿರಾಯನೊಂದಿಗೆ ಹೋರಾಟಕ್ಕಿಳಿದನು. ಇದರಲ್ಲಿ ಸವಾಯಿ ಜಯಸಿಂಗನು ಮರಾಠರಿಗೆ ಸೋತು ಒಪ್ಪಂದ ಮಾಡಿಕೊಂಡನು. ಆಗ ಬಾಜಿರಾವ್ ಪೇಶ್ವೆಯ ಮನೋ ಆನಂದಕ್ಕಾಗಿ ಸವಾಯಿ ಜಯಸಿಂಗನು ಆನೆಗಳ ಕಾದಾಟದ ಸ್ಪರ್ಧೆಯನ್ನು ಏರ್ಪಡಿಸಿದ್ದನು. ಸ್ಪರ್ಧೆಗಿಳಿದ ಎರಡು ಆನೆಗಳಲ್ಲಿ ಒಂದು ಆನೆಯು ಮದವೇರಿ ವೀರಾವೇಶದಿಂದ ನೆರೆದ ಜನಸಂದಣಿಯಲ್ಲಿ ಪ್ರವೇಶಿಸಿ ಕೋಲಾಹಲವನ್ನೇ

ಎಬ್ಬಿಸಿತು. ಆ ಪ್ರಸಂಗದಲ್ಲಿ ರಾಮಚಂದ್ರ ಹರಿಯವರು ಶೌರ್ಯದಿಂದ ಮುನ್ನುಗ್ಗಿ ತನ್ನ ಅಶ್ವವನ್ನೇರಿ ಹಸ್ತದಲ್ಲಿದ್ದ ಭರ್ಚಿಯಿಂದ ಆನೆಯ ಮದವನ್ನಿಳಿಸಿ ಹಿಡಿದುತಂದು ಗಜಶಾಲೆಯಲ್ಲಿ ಕಟ್ಟಿದರು. ರಾಮಚಂದ್ರ ಹರಿಯವರ ಈ ಸಾಹಸದ ದೃಶ್ಯವನ್ನು ಕಣ್ಣಾರೆ ಕಂಡ ಬಾಜಿರಾವ್ ಪೇಶ್ವೆಯು ತುಂಬ ಮೆಚ್ಚಿಕೊಂಡರಲ್ಲದೆ ಅವರನ್ನು ೨೫೦೦ ಅಶ್ವದಳದ ಮೇಲ್ವಿಚಾರಕರನ್ನಾಗಿ ನಿಯಮಿಸಿಕೊಂಡರು.

ಕ್ರಿ.ಶ.೧೭೩೫ರಲ್ಲಿ ಚಿಮ್ಮಾಜಿ ಅಪ್ಪಾ ಅವರು ಸಿದ್ಧಿ ಜಂಜಿರಾ ಕೋಟೆಯ ಮೇಲೆ ದಾಳಿ ಮಾಡಿದರು. (ಸಿದ್ಧೀ ಮುಸ್ಲೀಮರು ಆಫ್ರಿಕಾದಿಂದ ಬಂದವರು) ಆವಾಗ್ಗೆ ರಾಮಚಂದ್ರ ಹರಿಯವರು ಅವರಲ್ಲಿ ಪ್ರಮುಖ ಪಾತ್ರವಹಿಸಿ ಸಿದ್ಧಿಯವರನ್ನು ಸೋಲಿಸಿ ರೇವದಂಡಾ ಕೋಟೆಯನ್ನು ಗೆದ್ದುಕೊಂಡರು[೪]. ಕ್ರಿ.ಶ.೧೭೩೨ರಲ್ಲಿ ಪೋರ್ಚುಗೀಸರ 'ವಸತಿ' ಕೋಟೆಯ ಮೇಲೆ ದಾಳಿಮಾಡಿ ಅದನ್ನು ವಶಪಡಿಸಿಕೊಂಡರು. ಇವರೇ (ರಾಮಚಂದ್ರ ಹರಿಯವರೇ) ಮೊತ್ತ ಮೊದಲ 'ವಸಯಿ'ಯ ಕೋಟೆಯ ಮೇಲೆ ಪೇಶ್ವೆಯ ಧ್ವಜವನ್ನು ಹಾರಿಸಿದರು. ಇದರಿಂದ ಸಂತೃಪ್ತನಾದ ಪೇಶ್ವೆಯು ಇವರನ್ನು ೨೪೦ ಅಶ್ವದಳದ ಮೇಲ್ವಿಚಾರಕನನ್ನಾಗಿ ನಿಯಮಿಸಿದರು. ಅಲ್ಲದೆ ಇವರ ಕಕ್ಕನ ಮಕ್ಕಳಾದ ವಾಮನ್ ಗೋವಿಂದ ಪಟವರ್ಧನ ಮತ್ತು ರಘುನಾಥ ನೀಲಕಂಠ ಪಟವರ್ಧನ ಇವರನ್ನು ಸಹ ಸರ್ದಾರರನ್ನಾಗಿ ನಿಯಮಿಸಿದನು. ಆದರೆ ಕ್ರಿ.ಶ.೧೭೪೯ರಲ್ಲಿ ಪೇಶ್ವೆಯು ಉತ್ತರ ಭಾರತದ ಮೇಲೆ ದಾಳಿಮಾಡಿದಾಗ ಅಫಘಾನ ಅರಸನಾದ ಅಹಮ್ಮದ ಷಹಾ ಅಬ್ದಾಲಿಯೊಂದಿಗೂ ಮತ್ತು ಬುಂದೇಲಖಂಡದ ಅರಸ (ಛತ್ರಸಾಲ)ನಿಗೂ ಯುದ್ಧ ಪ್ರಾರಂಭವಾದ ಸಮಯದಲ್ಲಿ ರಾಮಚಂದ್ರ ಹರಿಯವರು ಪೇಶ್ವೆಯ ಜೊತೆಗಿದ್ದರು. ಅಲ್ಲಿಯೇ ಇವರಿಗೆ ಉದರ ಬೇನೆಯುಂಟಾಗಿ ಖಾನಪುರದ ಹತ್ತಿರವಿದ್ದ ಬ್ರಹ್ಮಾವರ್ತ ಕ್ಷೇತ್ರದ ಸಮೀಪ ಶಿವರಾಜಪುರಲ್ಲಿ ಇವರ ಸೈನಿಕ ಠಾಣೆಗೆ ಬಂದು ಕ್ರಿ.ಶ.೧೭೪೯ರಲ್ಲಿ ನಿಧನ ಹೊಂದಿದರು. ಹೀಗೆ ರಾಮಚಂದ್ರ ಹರಿಯವರು ಸುಪ್ರಸಿದ್ಧ ಮರಾಠಾ ಸರ್ದಾರನಾಗಿ ಅನೇಕ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿ ಮಧ್ಯಪ್ರದೇಶ, ಬುಂದೇಲಖಂಡ ಮೊದಲಾದ ಪ್ರದೇಶಗಳನ್ನು ಜಯಿಸಿ ಮರಾಠಾ ರಾಜ್ಯವನ್ನು ವಿಸ್ತರಿಸಿದರು.

### ೨. ೧ನೇ ಪರಶುರಾಮ ಭಾವು ಪಟವರ್ಧನರು (ಕ್ರಿ.ಶ.೧೭೪೦-೧೭೯೯)

ಇವರು ತಮ್ಮ ತಂದೆ ರಾಮಚಂದ್ರ ಹರಿಯವರ ಮರಣದ ಸಮಯದಲ್ಲಿ ಕೇವಲ ೭-೮ ವರುಷದ ಬಾಲಕನಾಗಿದ್ದರು. ಆಗ ಇವರ ದೊಡ್ಡಪ್ಪನಾದ ಕೃಷ್ಣಭಟ್ಟರ ಮಗನಾದ ಪುರುಷೋತ್ತಮ ದಾಜಿಯವರ ಆಶ್ರಯದಲ್ಲಿ ಬೆಳೆದನು. ರಾಮಚಂದ್ರಹರಿಯವರಿಗೆ ಮಕ್ಕಳಾಗದ್ದರಿಂದ ಸೋದರನ ಮಗನಾದ ಪುರುಷೋತ್ತಮ ದಾಜಿಯನ್ನೇ ಅತ್ಯಂತ ಪ್ರೀತಿ ಆದರದಿಂದ ಕಾಣುತ್ತಿದ್ದರು. ಈಗ ರಾಮಚಂದ್ರಹರಿಯವರ ಮಗನಾದ ಪರಶುರಾಮ ಭಾವು ಅವರನ್ನು ಪುರುಷೋತ್ತಮ ದಾಜಿಯು ಅತ್ಯಂತ ಪ್ರೀತಿ-ಅಂತಃಕರಣದಿಂದ ಸಾಕಿ ಸಲುಹಿದರಲ್ಲದೆ ಉಚಿತವಾಗಿ ಶಿಕ್ಷಣ ಮತ್ತು ತರಬೇತಿಯನ್ನು ಕೊಟ್ಟು ಒಳ್ಳೆಯ ಸಮರ್ಥ ವ್ಯಕ್ತಿಯನ್ನಾಗಿ ಮಾಡಿದರು. ರಾಮಚಂದ್ರಹರಿಯವರಿಗೆ ಪೇಶ್ವೆಯು ಕೊಟ್ಟ ೨೫೦೦ ಅಶ್ವದಳವು ಈಗ ಪುರುಷೋತ್ತಮರ ಸ್ವಾಧೀನವಾಯಿತು. ಮುಂದೆ ಪರಶುರಾಮ ಭಾವು ಅವರು ಪ್ರಬುದ್ಧರಾದ ಮೇಲೆ ಅಧಿಕಾರದ ವ್ಯಾಮೋಹವನ್ನು ಬಿಟ್ಟು ಪುರುಷೋತ್ತಮ ದಾಜಿಯು ಅಶ್ವದಳದ ಅಧಿಕಾರವನ್ನು ಪರಶುರಾಮ ಭಾವು ಅವರಿಗೆ ಒಪ್ಪಿಸಿದನು.

ಕ್ರಿ.ಶ.೧೭೬೦ ರಲ್ಲಿ ಪರಶುರಾಮ ಭಾವು ಅವರು ಪೇಶ್ವೆಯ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದರು. ಇದೇ ಸಮಯದಲ್ಲಿ ಹೈದ್ರಾಬಾದ ನಿಜಾಮನಾದ ಅಸಫ್-ಜಹಾನ್-ಉಲ್ಲಾಮುಲ್ಕನು ಕ್ರಿ.ಶ.೧೭೪೮ ರಲ್ಲಿ ಮರಣ ಹೊಂದಿದನು. ಅವನ ಹಿರಿಯ ಮಗ ನಾಸಿರಜಂಗ ಹಾಗೂ ಅವನ ಮಗಳ ಮಗನಾದ (ಮೊಮ್ಮಗ) ಮುಜಾಫರಜಂಗರ ನಡುವೆ ಸಿಂಹಾಸನಕ್ಕಾಗಿ ವ್ಯಾಜ್ಯ ಪ್ರಾರಂಭವಾಗಿತ್ತು. ಆಗ ಮುಜಾಫರಜಂಗನು ಪೇಶ್ವೆಗೆ ಅಪಕಾರ ಮಾಡಿ ಸವಣೂರಿನ ನವಾಬನ ಆಶ್ರಯವನ್ನು ಪಡೆದುಕೊಳ್ಳುತ್ತಾನೆ. ಆಗ ಪೇಶ್ವೆಯು ಮುಜಫರಜಂಗನಿಗೆ ಆಶ್ರಯವನ್ನು ಕೊಡಕೂಡದೆಂದು ಸವಣೂರಿನ ನವಾಬನಿಗೆ ಹೇಳಿದಾಗ್ಯೂ ಲಕ್ಷ್ಯಿಸದೆ ಮುಜಫರಜಗನಿಗೆ ಆಶ್ರಯವನ್ನು ಕೊಡುತ್ತಾನೆ. ಇದರಿಂದ ರೊಚ್ಚಿಗೆದ್ದ ಪೇಶ್ವೆಯು ಕ್ರಿ.ಶ.೧೭೫೪ರಲ್ಲಿ ಸವಣೂರಿನ ಮೇಲೆ ದಾಳಿ ಮಾಡಿದನು. ಆ ಸಮಯದಲ್ಲಿ ಪರಶುರಾಮ ಭಾವು ಯುದ್ಧದ ಕಲೆಯಲ್ಲಿ ಅಷ್ಟೊಂದು ಪಳಗಿದವರಾಗಿದ್ದರಿಂದ ಪೇಶ್ವೆಯು ಆ ದಾಳಿಯಲ್ಲಿ ಭಾಗವಹಿಸಲು ಅವರಿಗೆ ಅನುಮತಿಯನ್ನು ಕೊಡಲು ಹಿಂಜರಿದರು. ಆದರೆ ಪರಶುರಾಮ ಭಾವು ಅತ್ಯಂತ ಹುಮ್ಮಸಿನಿಂದ ಮುಂದೆ ಬಂದು ತಮ್ಮನ್ನು ಈ ಯುದ್ಧಕ್ಕೆ ಕಳಿಸಿಕೊಡಲೇಬೇಕೆಂದು ಹಟ ಹಿಡಿದರು. ಪುರುಷೋತ್ತಮದಾಜಿಯವರ ಮುಖಂಡತ್ವದಲ್ಲಿ ಪೇಶ್ವೆಯ ಸೈನ್ಯವು ಭೀಕರವಾದ ದಾಳಿಯನ್ನಿಟ್ಟಿತು. ಅದರಲ್ಲಿ ಪರಶುರಾಮ ಭಾವು ಅವರು ಬಾಹು ಪರಾಕ್ರಮದಿಂದ ಹೋರಾಡಿದರು. ಈ ಹೋರಾಟವು ಮೂರು ತಿಂಗಳವರೆಗೆ ಅವ್ಯಾಹತವಾಗಿ ನಡೆದು ಕೊನೆಗೆ ನವಾಬನು ಸೋತು ಶರಣಾಗತನಾದನು. ಈ ಕದನದಲ್ಲಿ ಪರಶುರಾಮ ಭಾವು ಅವರು ತೋರಿಸಿದ ಸಾಹಸತನವು ಮೆಚ್ಚುವಂತಹದಿತ್ತು.

ಕ್ರಿ.ಶ.೧೭೬೪ರಲ್ಲಿ ಸಂಭವಿಸಿದ ಮರಾಠಾ-ಮೈಸೂರಿನ ಯುದ್ಧಗಳಲ್ಲಿ ಮರಾಠಾ ಸೈನ್ಯದ ಮುಖಂಡತ್ವವನ್ನು ವಹಿಸಿ ಮೈಸೂರಿನ ಅರಸನಾದ ಹೈದರ ಅಲಿಯನ್ನು ಸೋಲಿಸುವದರಲ್ಲಿ ಪರಶುರಾಮ ಭಾವು ಅವರು ಅತಿ ಪರಾಕ್ರಮವನ್ನು ತೋರಿಸಿದರು. ಇವರ ಕಲಿತನಕ್ಕೆ ಮೆಚ್ಚಿದ ಪೇಶ್ವೆಯು ಪಟವರ್ಧನ ಮನೆತನದ ಸರ್ದಾರರಿಗೆ ೪೦೦೦ ಅಶ್ವಗಳ ಮತ್ತು ಅದರ ಮೇಲ್ವಿಚಾರಣೆಗಾಗಿ ಮಹಾರಾಷ್ಟ್ರದಲ್ಲಿಯ ಕೊರ್ರೈಗಾಂವ, ತಾಸಗಾಂವ, ಜಹಗೀರುಗಳನ್ನು ಊಂಬಳಿಯಾಗಿ ಕೊಟ್ಟರು. ಅಲ್ಲದೆ ಕ್ರಿ.ಶ.೧೭೬೩-೬೪ರಲ್ಲಿ "ನೌಬತ್ ವಾದ್ಯದ" ಸನ್ಮಾನವನ್ನು ದಯಪಾಲಿಸಿದರು[೬೫].

ಕ್ರಿ.ಶ.೧೭೭೨ರಲ್ಲಿ ೧ನೇ ಮಾಧವರಾವ ಪೇಶ್ವೆಯು ಅಕಾಲಿಕ ಮರಣಕ್ಕೆ ತುತ್ತಾದನು. ಆತನಿಗೆ ಸಂತಾನವಿಲ್ಲದ್ದರಿಂದ ಸಹೋದರನಾದ ನಾರಾಯಣರಾವ್‌ನು ಪೇಶ್ವೆಯಾದನು. ಮರು ವರ್ಷವೇ ಬಾಲಾಜಿ ಬಾಜಿರಾವ್ ಪೇಶ್ವೆಯ ತಮ್ಮನಾದ ರಾಘೋಬನ ಅನುಯಾಯಿಗಳು ನಾರಾಯಣರಾವ್‌ನನ್ನು ಕೊಲೆಗೈದರು. ಆಗ ರಮಾಭಾಯಿ ಸತಿಹೋದಳು. ಮುಂದೆ ರಾಘೋಬನು ಪೇಶ್ವೆಯಾದನು[೬೬]. ಇದರಿಂದ ಮರಾಠಾ ರಾಜ್ಯದಲ್ಲಿ ಗೊಂದಲಮಯವಾದ ವಾತಾವರಣವು ನಿರ್ಮಾಣವಾಯಿತು. ರಾಘೋಬನು ಕರ್ನಾಟಕದ ಮೇಲೆ ದಾಳಿ ಮಾಡಲು ಪರಶುರಾಮ ಭಾವು ಅವರ ಸೈನಿಕ ನೆರವನ್ನು ಕೋರಿದನು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಪರಶುರಾಮ ಭಾವು ಅವರು ತಮ್ಮ ಸಹೋದರರಾದ ಗಂಗಾಧರ ಗೋವಿಂದ ಮತ್ತು ಕೊನ್ನೇರಿ ತ್ರಯಂಬಕರನ್ನು ನಾನಾಪಡ್ನವೀಸ್ ಸಹಾಯ ಮಾಡಲು ಕಳುಹಿಸಿ, ತಾನು ಸ್ವತಃ ರಘನಾಥರಾವನಿಗೆ ಸಹಾಯ ಮಾಡಲು ಕರ್ನಾಟಕಕ್ಕೆ ಹೋದನು. ನಿಜವಾಗಿಯೂ ಇದು ಪರಶುರಾಮ ಭಾವು ಅವರ ರಾಜಕೀಯ ಚತುರತೆಯನ್ನು ತೋರಿಸುತ್ತದೆ. ಇತ್ತ ಪೂನಾದಲ್ಲಿ

ನಾರಾಯಣರಾವ್‌ನ ಪತ್ನಿ ಗಂಗಾಬಾಯಿಯು ಗಂಡು ಮಗುವಿಗೆ ಜನ್ಮವನ್ನಿತ್ತಳು. ಆ ಮಗುವಿಗೆ "ಸವಾಯಿ ಮಾಧವರಾವ್" ಎಂದು ಹೆಸರಿಟ್ಟರು. ಆ ಮಗುವಿನ ಹೆಸರಿನಿಂದ ನಾನಾ ಪಡ್ನವೀಸನು ಮರಾಠಾ ರಾಜ್ಯಾಡಳಿತವನ್ನು ನಡೆಸಹತ್ತಿದನು. ಸವಾಯಿ ಮಾಧವರಾವನೇ ನಿಜವಾದ ಪೇಶ್ವೆ ಮತ್ತು ರಾಘೋಬನು ಯಾವ ರೀತಿಯಿಂದಲೂ ಪೇಶ್ವೆಯಾಗಲು ಅರ್ಹನಲ್ಲವೆಂದು ಘೋಷಿಸಿದನು. ಮುಂದೆ ರಾಘೋಬನನ್ನು ಸೆರೆಹಿಡಿಯಲು ನಾನಾಪಡ್ನವಿಸನು ಹರಿಪಂತ ಫಡಕೆ ಮತ್ತು ತ್ರಯಂಬಕರಾವ್ ಪೇಠೆಯವರನ್ನು ಕಳುಹಿಸುತ್ತಾನೆ. ಆಗ ಪರಶುರಾಮ ಭಾವು ಅವರು ಬಹಿರಂಗವಾಗಿ ರಾಘೋಬನ ಪಕ್ಷದಲ್ಲಿಯೇ ಇದ್ದರು. ಆದರೆ ಮುಂದೆ ಕ್ರಿ.ಶ.೧೭೭೩ರಲ್ಲಿ ರಘುನಾಥರಾವನಿಗೂ ಮತ್ತು ನಾನಾಪಡ್ನವಿಸನಿಗೂ ಯುದ್ಧ ಪ್ರಾರಂಭವಾಯಿತು. ಯುದ್ಧ ನಡೆದ ಸಮಯದಲ್ಲಿಯೇ ಪರಶುರಾಮ ಭಾವು ಅವರು ರಾಘೋಬನ ಪಕ್ಷವನ್ನು ಬಿಟ್ಟು ನಾನಾಪಡ್ನವಿಸನ ಪಕ್ಷವನ್ನು ಸೇರಿದರು. ಇದರಿಂದ ಪೇಶ್ವೆಗೆ ಜಯವಾಯಿತು. ಸೋತ ರಾಘೋಬನು ಉತ್ತರಕ್ಕೆ ಪಲಾಯನ ಮಾಡಿದನು. ಆಗ ಪರಶುರಾಮ ಭಾವು ಅವರು ಬೀದರ, ಆಸ್ಸೇಯ, ಬುರಾನಪೂರ, ಕಾನದೇಶ, ಕೊಂಕಣ ಮೊದಲಾದ ಪ್ರದೇಶಗಳನ್ನು ದಾಟಿ, ರಾಘೋಬನನ್ನು ಬೆನ್ನಟ್ಟಿದರು. ಆದರೆ ಕೊನೆಗೆ ರಾಘೋಬನು ಕಲ್ಯಾಣಕ್ಕೆ ಹೋಗಿ, ಅಲ್ಲಿ ಇಂಗ್ಲೀಷರ ಆಶ್ರಯವನ್ನು ಪಡೆದುಕೊಂಡು ಅವರೊಂದಿಗೆ ಒಪ್ಪಂದ ಮಾಡಿಕೊಂಡನು. ತಾನು ಪೇಶ್ವೆಯಾಗಲು ಇಂಗ್ಲೀಷರು ಸಹಾಯ ಮಾಡಿದರೆ ಇಂಗ್ಲೀಷ ಕಂಪನಿಗೆ ದಷ್ಟು ಪ್ರದೇಶಗಳನ್ನು ಕೊಡುತ್ತೇನೆಂದು ಒಪ್ಪಿಕೊಂಡನು. ಅದರಂತೆ ರಾಘೋಬನು ಇಂಗ್ಲೀಷರ ಸೈನ್ಯದ ಸಹಾಯವನ್ನು ಪಡೆದುಕೊಂಡು ಪೂನಾದ ಮೇಲೆ ದಾಳಿಯನ್ನಿಟ್ಟನು. ಪೇಶ್ವೆಯ ಸೈನ್ಯವು ಹರಿಪಂತ ತಾತ್ಯಾ ಫಡಕೆ ಮತ್ತು ಪರಶುರಾಮ ಭಾವು ಅವರ ನೇತೃತ್ವದಲ್ಲಿ ರಾಘೋಬನ ಸೈನ್ಯವನ್ನು ಎದುರಾಗಿ ಪ್ರತಿಭಟಿಸಿತು. ಅವರಿಬ್ಬರಿಗೆ "ಭೋರಘಾಟದ" ಬಲಿಯಲ್ಲಿ ಘನಘೋರವಾದ ಕಾಳಗವೆಸಗಿ ಅದರಲ್ಲಿ ಪೇಶ್ವೆಯು ಜಯಶಾಲಿಯಾದನು. "ಸಾಲ್ವೆ" ಎಂಬ ಒಪ್ಪಂದದಿಂದ ಯುದ್ಧವು ಮುಕ್ತಾಯವಾಯಿತು. ಒಪ್ಪಂದದ ಕರಾರು ಪ್ರಕಾರ ರಾಘೋಬನು ಯಾವುದೇ ಮರಾಠಾ ಆಡಳಿತ ವಿಷಯದಲ್ಲಿ ಕೈಹಾಕುವದಿಲ್ಲವೆಂದು ಒಪ್ಪಿಕೊಂಡನು. ಮುಂದೆ ಕೆಲವು ದಿವಸಗಳ ನಂತರ ಕೋಪರಗಾಂವದಲ್ಲಿ ನಿಧನ ಹೊಂದಿದನು.

ಕ್ರಿ.ಶ.೧೭೮೫ರಲ್ಲಿ ಮೈಸೂರಿನ ದೊರೆ ಟಿಪ್ಪು ಸುಲ್ತಾನನು ಮರಾಠಾ ಪ್ರದೇಶಗಳ ಮೇಲೆ ದಾಳಿಯನ್ನಿಟ್ಟನು. ನಾನಾಪಡ್ನವಿಸನು ನಿಜಾಮನೊಡನೆ ಮೈತ್ರಿಯನ್ನು ಏರ್ಪಡಿಸಿ ಟಿಪ್ಪುನನ್ನು ಸೋಲಿಸಿದನು. ಕ್ರಿ.ಶ. ೧೭೮೭ರಲ್ಲಿ ಟಿಪ್ಪು ಮರಾಠಾರಿಗೆ ನರಗುಂದ, ಕಿತ್ತೂರ ಮತ್ತು ಬಾದಾಮಿ ಪ್ರದೇಶಗಳನ್ನು ಬಿಟ್ಟು ಕೊಟ್ಟನಲ್ಲದೆ ಯುದ್ಧದ ಪರಿಹಾರ ದ್ರವ್ಯವನ್ನು ಕೊಡಲು ಒಪ್ಪಿದನು[೭].

ಕ್ರಿ.ಶ.೧೭೯೦-೯೨ರಲ್ಲಿ ಜರುಗಿದ ಮೂರನೇ ಆಂಗ್ಲೋ-ಮೈಸೂರು ಯುದ್ಧದ ಪ್ರಸಂಗದಲ್ಲಿ ಇಂಗ್ಲೀಷರು ತ್ರಿಪಕ್ಷಕೂಟವನ್ನು ರಚಿಸಿ(ಇಂಗ್ಲೀಷರು, ನಿಜಾಮ ಮತ್ತು ಮರಾಠರು) ಟಿಪ್ಪುವಿನ ಮೇಲೆ ದಾಳಿ ಮಾಡಿದಾಗ ಪರಶುರಾಮ ಭಾವು ಅವರು ಮರಾಠಾ ಸೈನ್ಯದ ಮುಖಂಡತ್ವವನ್ನು ವಹಿಸಿದ್ದರು. ಈ ಯುದ್ಧದಲ್ಲಿ ಪರಶುರಾಮ ಭಾವು ಅವರು ತೋರಿಸಿದ ಸಾಹಸವನ್ನು ಪ್ರತ್ಯಕ್ಷ ಕಂಡ ಇಂಗ್ಲೀಷ್ ಸೇನಾಪತಿಯು ತುಂಬ ಮೆಚ್ಚಿಕೊಂಡನು. ಈ ಯುದ್ಧದಲ್ಲಿ ಸೋತ ಟಿಪ್ಪು ಶ್ರೀರಂಗ ಪಟ್ಟಣದ ಒಪ್ಪಂದ ಮಾಡಿಕೊಂಡನು. ಆ ಒಪ್ಪಂದದ ಪ್ರಕಾರ ಟಿಪ್ಪು ಮರಾಠರಿಗೆ ವರ್ದಾ ಮತ್ತು ಕೃಷ್ಣಾ ನದಿಗಳ ನಡುವಿನ ಪ್ರದೇಶವನ್ನು ಬಿಟ್ಟುಕೊಡಲು ಒಪ್ಪಿಕೊಂಡನು[೮].

**ಕರಡಾವ ಕಾಳಗ-೧೭೯೫**

ಪರಶುರಾಮ ಭಾವು ಪಟವರ್ಧನರು ತಮ್ಮ ಜೀವನದ ಬಹುಭಾಗವನ್ನು ಯುದ್ಧದಲ್ಲಿಯೇ ಕಳೆದರು. ಇವರು ಮಹಾ ಪರಾಕ್ರಮಿಗಳಾಗಿದ್ದು ಅನೇಕ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿ ಪೇಶ್ವೆಯ ಕೀರ್ತಿಯನ್ನು ಹೆಚ್ಚಿಸಿದವರಾಗಿದ್ದರು. ಕ್ರಿ.ಶ.೧೭೯೫ ರಲ್ಲಿ ಹೈದ್ರಾಬಾದ ನಿಜಾಮನೊಂದಿಗೆ ಮರಾಠರು ಕರಾಡಸದ ಬಳಿಯಲ್ಲಿ ಯುದ್ಧವನ್ನು ಹೂಡಿದರು. ಕಾರಣ ನಿಜಾಮನು ಮರಾಠರಿಗೆ ಕೊಡಬೇಕಾದ "ಚೌಥಾಯಿ" ಮತ್ತು "ಸರದೇಶಮುಖಿ" ಬಾಕಿ ಹಣವನ್ನು ಕೊಡದೆ ತಿರಸ್ಕರಿಸುತ್ತ ಬಂದಿದ್ದನು. ಆ ಬಾಕಿ ಹಣವನ್ನು ಕೇಳಲು ಪೇಶ್ವೆಯು ತನ್ನ ರಾಯಭಾರಿಯನ್ನು ನಿಜಾಮನಲ್ಲಿಗೆ ಕಳುಹಿಸಿದನು. ನಿಜಾಮನು ಮರಾಠಾ ರಾಯಭಾರಿಗೆ ಸಮರ್ಪಕವಾದ ಉತ್ತರವನ್ನೀಡದೆ ತಿರಸ್ಕರಿಸಿ ಕಳಿಸಿದನು. ಇದರಿಂದ ರೊಚ್ಚಿಗೆದ್ದ ಎರಡನೇ ಬಾಜೀರಾವ ಪೇಶ್ವೆಯು ನಾನಾಪಡ್ನವಿಸನ ಸಲಹೆಯ ಮೇರೆಗೆ ನಿಜಾಮನೊಂದಿಗೆ ಹೋರಾಡಲು ಇಂದೂರಿನ ತುಕೋಜಿ ಹೋಳಕರ, ಗ್ವಾಲಿಯರ್‌ದ ದೌಲತ್ತರಾವ್ ಸಿಂದಿಯಾ, ಬಿರಾರಿನ ಭೋಸಲೆ ಮೊದಲಾದ ಪ್ರಮುಖ ಮರಾಠಾ ನಾಯಕರನ್ನೊಳಗೊಂಡ ಸಮಗ್ರ ಸೇನಾ ಬಲವನ್ನು ಒಂದುಗೂಡಿಸಿ ಅದರ ಮುಖಂಡತ್ವವನ್ನು ಪರಶುರಾಮ ಭಾವು ಅವರಿಗೆ ವಹಿಸಿಕೊಟ್ಟು ನಿಜಾಮನ ಮೇಲೆ ಕ್ರಿ.ಶ.೧೭೯೫ರಲ್ಲಿ ಕರಡಾದ ಕಾಳಗವನ್ನು ಸಾರಿಸಿದನು. ಈ ಕಾಳಗದಲ್ಲಿ ಮರಾಠಾ ಸೈನ್ಯವು ಕಲಿತನದಿಂದ ಕಾದಾಡಿ ನಿಜಾಮನ ಸೈನ್ಯವನ್ನು ಸಂಪೂರ್ಣ ಸೋಲಿಸಿತು. ಸೋತ ನಿಜಾಮನು ಶರಣಾಗತನಾಗಿ ೫ ಕೋಟಿ ರೂಪಾಯಿಗಳನ್ನು ಮತ್ತು ದೌಲತಾಬಾದವನ್ನೊಳಗೊಂಡ ವಿಶಾಲ ಪ್ರದೇಶವನ್ನು ಮರಾಠರಿಗೆ ಬಿಟ್ಟುಕೊಡಲು ಒಪ್ಪಿಕೊಂಡನು[೯೯].

ನಾನಾಪಡ್ನವಿಸನೇ ತಾಸಗಾಂವ ಮತ್ತು ಜಮಖಂಡಿಯ ಜಹಗೀರದಾರನಾದ ಪರಶುರಾಮ ಭಾವು ಅವರನ್ನೆ ಸಮಸ್ಥ ಮರಾಠಾ ಸೈನ್ಯದ ಮುಖಂಡನಾಗಿ ನೇಮಿಸಿದನು. ಈ ಕಾಳಗದಲ್ಲಿ ಪರಶುರಾಮ ಭಾವು ಅವರು ತೋರಿಸಿದ ಸಹಾಸತನವನ್ನು ಪ್ರತ್ಯಕ್ಷ ಕಂಡ ಬ್ರಿಟಿಷ (ಲೆಪ್ಟಿನಂಟ್) ಸೇನಾಧಿಕಾರಿ ಎಡ್ವರ್ಡ ಮೂರ ಎಂಬವನು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ. ನಾನಾಪಡ್ನವಿಸನು ಮರಾಠಾ ನಾಯಕರನ್ನು ಒಗ್ಗೂಡಿಸಿ ಟಿಪ್ಪು ಮತ್ತು ನಿಜಾಮನನ್ನು ಹತ್ತಿಕ್ಕಿ ಮರಾಠಾ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡದಂತೆ ಆಂಗ್ಲರನ್ನು ದೂರವಿಟ್ಟು ಮರಾಠಾ ರಾಜ್ಯದ ಪ್ರಾಬಲ್ಯವನ್ನು ಹೆಚ್ಚಿಸಿದನು.

**ಪಟ್ಟಣಕುಡಿಯ ಕಾಳಗ-೧೭೯೯**

ಕ್ರಿ.ಶ.೧೭೯೯ರಲ್ಲಿ ಮುನ್ನೊಳ್ಳಿ, ಚಿಕ್ಕೋಡಿ ಮತ್ತು ಸವದತ್ತಿ ಪ್ರದೇಶಗಳ ಭೂ-ಕಂದಾಯವನ್ನು ಪಡೆದುಕೊಳ್ಳುವ ವಿಷಯದಲ್ಲಿ ಕೊಲ್ಲಾಪುರ ಛತ್ರಪತಿ ಹಾಗೂ ೨ನೇ ಬಾಜಿರಾವ್ ಪೇಶ್ವೆಯವರ ನಡುವೆ ರಾಜಕೀಯ ವಿರಸವುಂಟಾಗಿ ಪಟ್ಟಣಕುಡಿಯ ಕಾಳಗಕ್ಕೆ ಕಾರಣವಾಯಿತು. ಕೊಲ್ಲಾಪೂರಕರನನ್ನು ಹತ್ತಿಕ್ಕಲು ಪೇಶ್ವೆಯು ತನ್ನ ಸಮರ್ಥ ದಂಡನಾಯಕನಾದ ಪರಶುರಾಮ ಬಾವು ಅವರ ಮುಖಂಡತ್ವದಲ್ಲಿ ಬಲಿಷ್ಠ ಸೇನೆಯನ್ನು ಕೊಟ್ಟು ಕಳುಹಿಸಿದನು. ಈ ಹೋರಾಟದಲ್ಲಿ ಪರಶುರಾಮ ಭಾವು ಅವರ ಪುತ್ರನಾದ ರಾಮಚಂದ್ರ ಪಂತ ಅಪ್ಪಾ ಮತ್ತು ಅವನ ಸಹೋದರರಾದ ಹರಿಪಂತ ಮಾಧವರಾವ್ ಮತ್ತು ಗಣಪತಿರಾವ್ ಅವರು ಭಾಗವಹಿಸಿದ್ದರು. ಕೊಲ್ಲಾಪೂರಕರನನ್ನು ಹತ್ತಿಕ್ಕಲು ಪಟವರ್ಧನರ ಸೈನ್ಯವು ನಿಪ್ಪಾಣಿಯ ಬಳಿಯಲ್ಲಿದ್ದ "ಪಟ್ಟಣಕುಡಿ"ಯ ಹತ್ತಿರ ಬಂದು ಬೀಡು ಬಿಟ್ಟಿತು. ಅಲ್ಲಿ ಪೇಶ್ವೆಯ ಸೈನ್ಯವನ್ನು

ಮೂರು ಭಾಗಗಳಲ್ಲಿ ಪಿಂಗಡಿಸಿ ಒಂದನ್ನು ರಾಮಚಂದ್ರ ಪಂತ ಅಪ್ಪಾ ಅವರ ಎರಡನೇಯದನ್ನು ಹರಿಪಂಟ ಬಾಬಾ ಹಾಗೂ ಮೂರನೇಯದನ್ನು ಮಹಾದೇವರಾವ ದಾಜಿ ಇವರ ಮುಖಂಡತ್ವದಲ್ಲಿ ರಚಿಸಲಾಯಿತು. ಇದೇ ವೇಳೆಗೆ ಅಂದರೆ ಕ್ರಿ.ಶ.೧೭೯೯ರ ಸಪ್ಟೆಂಬರ ೧೮ ರಂದು ಕೊಲ್ಲಾಪೂರಕರರ ಸೈನ್ಯವು 'ಪಟ್ಟಣಕುಡಿಗೆ' ಬಂದು ತಲುಪಿತು. ಆಗ ಎರಡೂ ವೈರಿ ಸೈನ್ಯಗಳ ನಡುವೆ ತುಮುಲವಾದ ಹೋರಾಟವು ಪ್ರಾರಂಭವಾಯಿತು. ಆರಂಭದಲ್ಲಿ ಪೇಶ್ವೆಯ ಸೈನ್ಯವು ಪರಶುರಾಮ ಬಾವು ಅವರ ಹಿರಿಯ ಮಗನಾದ ರಾಮಚಂದ್ರ ಪಂತ ಅಪ್ಪಾ ಅವರ ಮುಖಂಡತ್ವದಲ್ಲಿ ಕಾಳಗದ ಕಣದಲ್ಲಿ ಧುಮಿಕಿ ರಭಸದ ದಾಳಿಯನ್ನೆಸಗಿ ವೈರಿ ಸೈನ್ಯವನ್ನು ಹಿಮ್ಮೆಟ್ಟಿಸಿತು. ಆದರೆ ಹೋರಾಟದಲ್ಲಿ ವೈರಿಗಳು ಬಿಟ್ಟ ಬಂದೂಕಿನ ಗುಂಡು ರಾಮಚಂದ್ರ ಪಂತ ಅಪ್ಪಾ ಅವರ ಬಲ ಭುಜಕ್ಕೆ ತಾಕಿ ಅವರಿಗೆ ತೀವ್ರ್ರ ಸ್ವರೂಪದ ಗಾಯವನ್ನುಂಟು ಮಾಡಿತು. ಅದರಂತೆ ಪರಶುರಾಮ ಭಾವು ಅವರು ಅಶ್ವಾರೂಢರಾಗಿ ವೈರಿಗಳೊಂದಿಗೆ ವೀರಾವೇಶದಿಂದ ಹೋರಾಡುವ ಕಾಲಕ್ಕೆ ದುರ್ಧೈವದಿಂದ ವೈರಿಗಳು ಜಳಪಿಸಿದ ಖಡ್ಗದಿಂದ ತೀವ್ರಸ್ವರೂಪದ ಗಾಯಗೊಂಡು ನೆಲಕ್ಕುರುಳಿ ಬಿದ್ದು ಪ್ರಾಣಬಿಟ್ಟರು. ಹೀಗೆ ಪರಶುರಾಮ ಬಾವು ಅವರು ಪೇಶ್ವೆಯವರ ಕೀರ್ತಿಗಾಗಿ ತಮ್ಮ ಜೀವನ ಪರ್ಯಂತ ಹೋರಾಡಿ ಕೊನೆಗೆ ರಣರಂಗದಲ್ಲಿಯೇ ಅಸುನೀಗಿ ವೀರ ಸ್ವರ್ಗವನ್ನೇರಿದರು. ಇವರ ಸಾಹಸಮಯವಾದ ಚರಿತ್ರೆಯು ಮರಾಠಾ ಇತಿಹಾಸದಲ್ಲಿ ಅಚ್ಚಳಿಯದೆ ಉಳಿದಿದೆ. ಆದರೆ ಈ ಕಾಳಗದಲ್ಲಿ ತಮ್ಮ ಸಮರ್ಥ ತಂದೆಯನ್ನು ಕಳೆದುಕೊಂಡಿದ್ದರಿಂದ ರಾಮಚಂದ್ರ ಪಂತ ಅಪ್ಪಾ ಅವರಿಗೆ ಅತೀವ ದುಃಖವಾಯಿತು. ಅಲ್ಲದೆ ೨ನೇ ಬಾಜೀರಾವ ಪೇಶ್ವೆಯು ಸಹ ಶೋಕ ಸಾಗರದಲ್ಲಿ ಮುಳುಗಿದನು.

ಡಾ. ಖರೆ ಶಾಸ್ತ್ರೀಗಳ, 'ಪಟ್ಟಣಕುಡಿ', ಕಾಳಗದ (೧೭೯೯) ವರದಿಯಲ್ಲಿ ಹೇಳಿದಂತೆ – ಪಟ್ಟಣಕುಡಿ ಕಾಳಗದಲ್ಲಿ ೨ನೇ ಶಿವಾಜಿಯು (ಛತ್ರಪತಿ) ಜಯಶಾಲಿಯಾದನು. ಪಟವರ್ಧನರು (೧೭೬೨–೧೮೧೩) ಸೋಲನ್ನನುಭವಿಸಿದರು. ಇದರಲ್ಲಿ ಪರಶುರಾಮ ಭಾವು ಅವರು ತೀವ್ರವಾಗಿ ಗಾಯಗೊಂಡು ಮರಣ ಹೊಂದಿದರು. ಅಲ್ಲದೆ ಪರಶುರಾಮ ಭಾವು ಅವರ ಮಗನಾದ ರಾಮಚಂದ್ರ ಪಂತ ಅಪ್ಪಾ ಅವರು ರಣರಂಗದಿಂದ ಪಾರಾಗಿ ಜಮಖಂಡಿಯ ಕಡೆಗೆ ಪಲಾಯನ ಮಾಡಿದರು. ಆಗ ರತ್ನಾಕರ ಪಂತ ಎಂಬ ಅವನು ಇವರನ್ನು ಜಮಖಂಡಿಯವರೆಗೆ ಬೆನ್ನಟ್ಟಿದನು. ಜಯಶಾಲಿಗಳಾದ ಕೊಲ್ಲಾಪೂರದ ಸೈನಿಕರು ತಮ್ಮ ದಾಳಿಯನ್ನು ಮುಂದುವರೆಸಿ ಚಿಕ್ಕೋಡಿ ಮತ್ತು ಮುನ್ನೊಳ್ಳಿ ತಾಲೂಕಿನ ಪ್ರದೇಶಗಳನ್ನು ಮರಳಿ ಪಡೆದುಕೊಂಡರು.

ಪರಶುರಾಮ ಭಾವು ಇವರು ಅಸಾಮಾನ್ಯವಾದ ವ್ಯಕ್ತಿತ್ವವನ್ನು ಹೊಂದಿದ ಮಹಾನ್ ಮರಾಠಾ ಸೇನಾ ನಾಯಕರಾಗಿದ್ದರು. ಇವರು ತಮ್ಮ ಜೀವನದ ಬಹುಭಾಗವನ್ನು ಯುದ್ಧೋತ್ಸಾಹದಲ್ಲಿಯೇ ಕಳೆದರು. ತಮ್ಮ ಸೈನಿಕ ಕಾರ್ಯಾಚರಣೆಯಿಂದ ಮರಾಠಾ ಸಾಮ್ರಾಜ್ಯಕ್ಕೆ ವಿಶಾಲ ಸ್ವರೂಪವನ್ನು ತಂದು ಕೊಟ್ಟರು. ಕ್ರಿ.ಶ.೧೭೬೩–೬೪ರಲ್ಲಿ ತಾಸಗಾಂವ ಜಹಗೀರನ್ನು ಪಡೆದುಕೊಂಡು ಅದನ್ನು ತಮ್ಮ ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡರು. ಆಗ ಜಮಖಂಡಿಯು ಅದರ ಒಂದು ಭಾಗವಾಗಿತ್ತು. ಇವರು ಒಬ್ಬ ಸಾಮಾನ್ಯ ಸೈನಿಕವಾಗಿ ಸೇವೆಯನ್ನು ಪ್ರಾರಂಭಿಸಿ ಮುಂದೆ ಕೇವಲ ತಮ್ಮ ಸ್ವಸಾಮರ್ಥ್ಯದಿಂದಲೇ ಸಮಗ್ರ ಮರಾಠಾ ರಾಜ್ಯದ ಸೇನಾಪತಿ ಹುದ್ದೆಗೇರಿದರು. ಇವರು ಇಡೀ ಪಟವರ್ಧನ ಮನೆತನದ ಜಹಗೀರದಾರರಲ್ಲಿಯೇ ಅಗ್ರಗಣ್ಯನಾಗಿದ್ದರು. ಆದ್ದರಿಂದಲೇ ಇವರಿಗೆ (ಮಹಾಶಯ) **"ಮಹಾನ್ ಪರಶುರಾಮ ಭಾವು"** ಎಂದು ಸಂಭೋದಿಸುತ್ತಿದ್ದರು. (The Great parashuram Bhau)

ದಕ್ಷಿಣ ಭಾರತದಲ್ಲಿ ಮರಾಠಾ ಸಾಮ್ರಾಜ್ಯವನ್ನು ವಿಸ್ತರಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಜಮುಖಂಡಿಯ ಸುತ್ತಲೂ ಒಂದು ವಿಶಾಲ ರಾಜ್ಯವನ್ನು ವಿಸ್ತರಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಜಮಖಂಡಿಯ ಸುತ್ತಲೂ ಒಂದು ವಿಶಾಲವಾದ ಕೋಟೆಯನ್ನು ಇವರೇ ಕಟ್ಟಿಸಿದರು. ಮೈಸೂರಿನ ಅರಸನಾದ ಟಿಪ್ಪು ಸುಲ್ತಾನನ್ನು ಸೋಲಿಸುವಲ್ಲಿ ಪರಶುರಾಮ ಭಾವು ಅವರು ಪ್ರಮುಖ ಪಾತ್ರ ವಹಿಸಿದ್ದರು. ಅಲ್ಲದೆ ಕೊಣ್ಣೂರ ದೇಸಾಯಿಯವರನ್ನು ಸೋಲಿಸಿ ಜಮಖಂಡಿಯನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಇವರು ದೇಸಾಯಿಯವರನ್ನು ಸೋಲಿಸಿ ಜಮಖಿಂಡಿಯನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಇವರು ಜೀವನ ಪರ್ಯಂತ ರಣರಂಗದಲ್ಲಿ ಹೋರಾಡಿದ ಮಹಾನ್ ಮರಾಠಾ ವೀರರು. ಕೊನೆಗೆ ಕ್ರಿ.ಶ.೧೭೯೯ರಲ್ಲಿ "ಪಟ್ಟಣಕುಡಿಯ ಕಾಳಗ"ದಲ್ಲಿ ವೈರಿಗಳನ್ನು ಎದುರಿಸುತ್ತಲೇ ವೀರಸ್ವರ್ಗವನ್ನೇರಿದ ಯೋಧರಿವರು[೧೦೦] ಇವರ ಸಾಹಸಮಯವಾದ ಚರಿತ್ರೆಯು ಮರಾಠಾ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಿದೆ. ಇವರ ವೀರತನವನ್ನು ಸ್ವತಃ ಪೇಶ್ವೆ ಅಷ್ಟೇ ಏಕೆ ಬ್ರಿಟಿಷ ಅಧಿಕಾರಿಗಳು ಸಹ ಮುಕ್ತ ಕಂಠದಿಂದ ಹೊಗಳಿದ್ದಾರೆ.

**ರಾಮಚಂದ್ರ ಪಂತ ಅಪ್ಪಾಸಾಹೇಬರು (ಕ್ರಿ.ಶ.೧೭೬೧–೧೮೧೩)**

ಪರಶುರಾಮ ಬಾವು ಅವರ ಮರಣದ ನಂತರ ಅವರ ಹಿರಿಯ ಮಗನಾದ ರಾಮಚಂದ್ರ ಪಂತ ಅಪ್ಪಾ ಅವರು ತಾಸಗಾಂವ ಜಹಗೀರದಾರನಾಗಿ ಸೇವೆಯನ್ನು ಪ್ರಾರಂಭಿಸಿದರು. ಇವರು ಕ್ರಿ.ಶ.೧೭೬೧ರಲ್ಲಿ ಜನಿಸಿದರು. ಇವರು ಬಾಲ್ಯದಲ್ಲಿಯೇ ಉತ್ತಮವಾದ ಸೈನಿಕ ತರಬೇತಿಯನ್ನು ಪಡೆದುಕೊಂಡಿದ್ದರು. ತಂದೆಯ ನಂತರ ತಾಸಗಾಂವ (ಜಿಲ್ಲೆ)ದ ಜಹಗೀರದಾರನಾಗಿ ಕ್ರಿ.ಶ.೧೮೧೧ರ ವರೆಗೆ ತಮ್ಮ ಆಡಳಿತವನ್ನು ನಡೆಸಿದರು. ಮುಂದೆ ಪೇಶ್ವೆಯು ತಾಸಗಾಂವ ಜಹಗೀರದ ಆಧೀನದಲ್ಲಿದ್ದ ಜಮಖಂಡಿ ಜಹಗೀರನ್ನು ಬೇರ್ಪಡಿಸಿ ರಾಮಚಂದ್ರ ಪಂತ ಅಪ್ಪಾ ಅವರಿಗೆ ಕೊಟ್ಟನು. ಆಗ ಇವರು ಪ್ರತ್ಯೇಕ ಜಮಖಂಡಿ ಸಂಸ್ಥಾನದ ಅಧಿಪತಿಗಳಾದರು. ಹೀಗಾಗಿ ರಾಮಚಂದ್ರ ಪಂತ ಅಪ್ಪಾ ಅವರೇ ಜಮಖಂಡಿ ಸಂಸ್ಥಾನದ ಪ್ರಥಮ ಅರಸರಾದರು. ಅವರು ಕ್ರಿ.ಶ.೧೮೧೧ ರಿಂದ ಕ್ರಿ.ಶ.೧೮೧೩ರ ವರೆಗೆ ಇಲ್ಲಿ ರಾಜ್ಯವಾಳಿದರು. ಇವರು ತಮ್ಮ ತಂದೆಯ ಜೊತೆ ಗೂಡಿ ಅನೇಕ ಕಾಳಗಗಳಲ್ಲಿ ಭಾಗವಹಿಸಿ ತಮ್ಮ ಸಾಮರ್ಥ್ಯವನ್ನು ತೋರಿಸಿದವರಾಗಿದ್ದಾರೆ. ಇವರು ಸ್ವಾಭಿಮಾನಿಗಳು ಮತ್ತು ಛಲಗಾರರು ಆಗಿದ್ದರು. ರಾಮಚಂದ್ರ ಪಂತ ಅಪ್ಪಾ ಅವರು ಕ್ರಿ.ಶ.೧೭೯೯ರಲ್ಲಿ ಪಟ್ಟಣಕುಡಿಯ ಕಾಳಗದಲ್ಲಿ ತಮ್ಮ ತಂದೆ ಪರಶುರಾಮ ಭಾವು ಅವರನ್ನು ಸಂಹರಿಸಿದ ಕೊಲ್ಲಾಪೂರಕರ (ಗಾಯಕವಾಡ) ಮೇಲಿನ ಸೇಡನ್ನು ತೀರಿಸಿಕೊಂಡೇ ತೀರುತ್ತೇನೆಂದು ಬೈಲವಾಡಿಯಲ್ಲಿ ತಮ್ಮ ತಂದೆಯ ಚಿತಾಭಸ್ಮದ ಸಮಯದಲ್ಲಿ ನೆರೆದ ಜನಸಮೂಹದ ಮುಂದೆ ಶಪಥ ಮಾಡಿದರು. ಆದ್ದರಿಂದ ತಮ್ಮ ತಂದೆಯ ಮರಣಕ್ಕೆ ಕಾರಣರಾದವರು ಕೊಲ್ಲಾಪೂರಕರರ ಆಶ್ರಯದಲ್ಲಿರುವರೆಂಬುದನ್ನು ತಿಳಿದು ತಮ್ಮ ಸೇನಾಬಲದೊಂದಿಗೆ ಕ್ರಿ.ಶ.೧೮೦೦ರಲ್ಲಿ ಮಿರಜಕರ ಮತ್ತು ಕುರಂದವಾಡರವರ ಸೈನಿಕ ನೆರವನ್ನು ಪಡೆದುಕೊಂಡು ಕೊಲ್ಲಾಪೂರದ ಮೇಲೆ ದಾಳಿಯನ್ನಿಟ್ಟರು. ಇವರಿಗೆ ಸಹಾಯ ಮಾಡಲು ಪೇಶ್ವೆಯು ಸಹ ತನ್ನ ಅಶ್ವಬಲವನ್ನು ಕಳಿಸಿದನು. ಈ ಎಲ್ಲ ಮರಾಠಾ ಸೇನಾ ಬಲದೊಂದಿಗೆ ರಾಮಚಂದ್ರ ಪಂತ ಅಪ್ಪಾ ಅವರು ಕ್ರಿ.ಶ.೧೮೦೦ರ ಮಾರ್ಚ್ ತಿಂಗಳ ೧೧ರಂದು ಕೊಲ್ಲಾಪೂರ ಕೋಟೆಯ ಮೇಲೆ ಭೀಕರ ದಾಳಿಯನ್ನೆಸಗಿ ಅದನ್ನು ಧ್ವಂಸ ಮಾಡಿದನು. ಆಗ ಕೊಲ್ಲಾಪೂರಕರರಲ್ಲಿ ಸಾಕಷ್ಟು ಸೈನ್ಯವಿಲ್ಲದ್ದರಿಂದ ಭಯಗ್ರಸ್ಥರಾಗಿ ರಾಮಚಂದ್ರ

ಪಂತ ಅಪ್ಪಾ ಅವರು ಇಷ್ಟಕ್ಕೆ ತಮ್ಮ ದಾಳಿಯನ್ನು ನಿಲ್ಲಿಸಿದರೆ ಬುದರ್ಗಡ, ಚಿಕ್ಕೋಡಿ, ಮುನ್ನೊಳ್ಳಿ, ಶಿರೋಳ ಮೊದಲಾದ ಪ್ರದೇಶಗಳನ್ನು ಅವರಿಗೆ ಬಿಟ್ಟು ಕೊಡುತ್ತೇನೆ ಮತ್ತು ಯುದ್ಧದ ಹಾನಿಯನ್ನು ತುಂಬಿಕೊಳ್ಳಲು ಸುಮನ್‌ಗಡ ಕೋಟೆಯನ್ನು ಬಿಟ್ಟುಕೊಡುತ್ತೇನೆಂದು ಹೇಳಿ ಕಳುಹಿಸಿದರು. ಆದರೆ ರಾಮಚಂದ್ರ ಪಂತ ಅಪ್ಪಾ ಅವರು ಅದಕ್ಕೆ ಒಪ್ಪದೆ "ತಮ್ಮ ತಂದೆಯನ್ನು ಕೊಲೆಗೈದ ಪಾತಕಿಗಳನ್ನು ತನಗೆ ಒಪ್ಪಿಸಬೇಕು ಮತ್ತು ಆರು ತಿಂಗಳೊಳಗಾಗಿ ಅವರ ಮೇಲಿನ ಸೇಡು ತೀರಿಸಿಕೊಳ್ಳುವದು ನನ್ನ ಶಪಥವಿದೆ" ಎಂದು ಹೇಳಿ ಕೊಲ್ಲಾಪೂರ ಕೋಟೆಯನ್ನು ಒಳನುಗ್ಗಿ ಅಲ್ಲಿ ಅಡಗಿದ ಕೊಲೆಗಾರರನ್ನು ಹಿಡಿದು ತಂದು ಅವರ ದೇಹವನ್ನು ತುಂಡರಿಸಿ ತಮ್ಮ ಸೇಡನ್ನು ತೀರಿಸಿಕೊಂಡರು. ಮುಂದೆ ರಾಮಚಂದ್ರ ಪಂತ ಅಪ್ಪಾ ಅವರು ಕೊಲ್ಲಾಪೂರಕರರನ್ನು ಸಂಪೂರ್ಣ ಸೋಲಿಸಿ, ಅವರಿಂದ ಅಪಾರ ಸಂಪತ್ತನ್ನು ಕಾಣಿಕೆಯಾಗಿ ಪಡೆದುಕೊಳ್ಳಬೇಕೆಂದು ಯೋಚಿಸಿದರು. ಆದರೆ ಇದೇ ವೇಳೆಗೆ ಅಂದರೆ ಮಾರ್ಚ್ ೧೩, ೧೮೦೦ರಂದು ಹೆಸರಾಂತ ಮರಾಠಾ ಮುಖಂಡನಾದ ನಾನಾಪಡ್ನವಿಸನು ಪುಣೆಯಲ್ಲಿ ಅಸುನೀಗಿದನು. ಇವನ ಅಗಲುವಿಕೆಯಿಂದ ಪೇಶ್ವೆಗೆ ದೊರೆಯಬೇಕಾದ ಉಳಿದ ಮರಾಠಾ ಮುಖಂಡರ ಸೈನಿಕ ನೆರವು ಸಕಾಲದಲ್ಲಿ ದೊರೆಯಲಿಲ್ಲವಾದ್ದರಿಂದ ಕೊಲ್ಲಾಪೂರ ಕೋಟೆಯ ಮೇಲೆ ದಾಳಿಮಾಡುವದನ್ನು ಅಷ್ಟಕ್ಕೆ ನಿಲ್ಲಿಸಿ ಕರ್ನಾಟಕದ ಕೃಷ್ಣಾ, ತುಂಗಭದ್ರಾ ನದಿಗಳ, ನಡುವಿನ ಪ್ರದೇಶದಲ್ಲಿದ್ದ ಮರಾಠಾ ಜಹಗೀರುಗಳ ರಕ್ಷಣೆಯಲ್ಲಿ ತೊಡಗಿದನು[೧೦೧].

**ದಕ್ಷಿಣದಲ್ಲಿ ಮರಾಠರು**

ಮಾಧವರಾವ್ ಪೇಶ್ವೆಯ ಕಾಲದಲ್ಲಿ (೧೭೬೧-೧೭೭೨) ಮರಾಠಾ ಸಾಮ್ರಾಜ್ಯವು ದಕ್ಷಿಣದಲ್ಲಿ ತುಂಗಭದ್ರಾ ನದಿಯ ವರೆಗೆ ವಿಸ್ತರಿಸಿತ್ತು. ಆದ್ದರಿಂದ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಫಲಪ್ರದವಾದ ಪ್ರದೇಶವನ್ನು ಘೋರ್ಪಡೆ, ಭಾವೆ, ಪಟವರ್ಧನರೆಂಬ, ಜಹಗೀರದಾರರಲ್ಲಿ ಹಂಚಿಕೊಡಲಾಗಿತ್ತು. ಇದರಲ್ಲಿ ಭಾವೆ ಮತ್ತು ಪಟವರ್ಧನರು ಚಿತ್ಪಾವನ ಬ್ರಾಹ್ಮಣರಾಗಿದ್ದರು. ಆದರೆ ಘೋರ್ಪಡೆಯವರು ಮರಾಠಾ ಕ್ಷತ್ರಿಯರಾಗಿದ್ದರು. ಗದಗ, ಲಕ್ಷ್ಮೇಶ್ವರ ಶಿರಹಟ್ಟಿ, ಡಂಬಳ, ನವಲಗುಂದ ಗಜೇಂದ್ರಗಡ, ಧಾರವಾಡ, ಹುಬ್ಬಳ್ಳಿ, ಕುಂದಗೋಳ, ಸಂಸಿ, ಯಾದವಾಡ, ದೊಡವಾಡ, ಬಂಕಾಪೂರ, ಜಮಖಂಡಿ, ತೇರದಾಳ, ನರಗುಂದ, ಬಾಗಲಕೋಟೆ, ಬೀಳಗಿ, ಗಲಗಲಿ, ವಿಜಾಪುರ, ಬಾಗೇವಾಡ ಹಿಪ್ಪರಗಿ, ಜತ್ತ ಮೊದಲಾದ ಪ್ರದೇಶಗಳು ಭಾವೆ ಮತ್ತು ಪಟವರ್ಧನ ಜಹಗೀರದಾರರ ಆಡಳಿತಕ್ಕೆ ಒಳಪಟ್ಟದ್ದವು. ಅದರಂತೆ ಸೊಂಡೂರ, ಮುಧೋಳ ಮೊದಲಾದವುಗಳು ಘೋರ್ಪಡೆಯವರ ಅದೀನದಲ್ಲಿದ್ದವು. ಅಲ್ಲದೆ ಕಿತ್ತೂರ, ಬೈಲಹೊಂಗಲ, ಮುರಗೋಡ ಮೊದಲಾದವುಗಳು ಪೇಶ್ವೆಯವರ ವಶದಲ್ಲಿದ್ದ ಪ್ರದೇಶಗಳಾಗಿದ್ದವು. ಅವುಗಳ ಕಂದಾಯವನ್ನು ವಸೂಲಿ ಮಾಡುವ ಮತ್ತು ಶಾಂತಿ-ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗುವ ಅಧಿಕಾರವನ್ನು ದೇಸಾಯಿ ಮನೆತನದವರಿಗೆ ವಹಿಸಿಕೊಡಲಾಗಿತ್ತು. ಹೀಗೆ ದಕ್ಷಿಣದಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶವು ಪೇಶ್ವೆಯರ ಆಳ್ವಿಕೆಗೆ ಒಳಪಟ್ಟಿತು[೧೦೨].

**ದೋಂಡಿವಾಘನ (ಕಾಳಗ) ದಾಳಿ**

ಇದೇ ಪ್ರಸಂಗದಲ್ಲಿ ದೋಂಡಿವಾಘನೆಂಬ ಮರಾಠಾ ವೀರನನ್ನು ಟಿಪ್ಪು ಕಾರಾಗೃಹದಲ್ಲಿರಿಸಿದ್ದನು. ಮುಂದೆ ಟಿಪ್ಪುವಿನ ಮರಣದ ನಂತರ ಇವನು ಕಾರಾಗೃಹದಿಂದ

ಪಾರಾಗಿ ಬಂದು ಸುಮಾರು ೫೦೦ ಅಶ್ವದಳವನ್ನು ಸಂಗ್ರಹಿಸಿ ಶಿವಮೊಗ್ಗ ಜಿಲ್ಲೆಯಲ್ಲಿಯ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡನು. ನಂತರ ಕೊಪ್ಪಳ, ಹರಪನಹಳ್ಳಿ, ಸವಣೂರು, ರಾಣೆಬೆನ್ನೂರ, ಹಾನಗಲ್ಲ ಮತ್ತು ಡಂಬಳಗಳನ್ನು ವಶಪಡಿಸಿಕೊಂಡನು. ತದನಂತರ ಕರ್ನಾಟಕದಲ್ಲಿದ್ದ ಪೇಶ್ವೆಯವರ ಜಹಗೀರುಗಳ ಮೇಲೆ ದಾಳಿಯನ್ನಿಟ್ಟನು. ಆಗ ರಾಮಚಂದ್ರ ಪಂತ ಅಪ್ಪಾ ಅವರು ದೋಂಡಿವಾಘನ ದಾಳಿಯನ್ನು ಹಿಮ್ಮೆಟ್ಟಿಸಿ ಕುಂದಗೋಳ ಮತ್ತು ಜಮಖಂಡಿ ಜಹಗೀರಗಳನ್ನು ರಕ್ಷಿಸಿಕೊಂಡರು. ತದನಂತರ ದೋಂಡಿವಾಘನು ಕರ್ನಾಟಕದ ಇತರ ಪಾಳೆಗಾರರನ್ನು ಮತ್ತು ತಮಿಳುನಾಡಿನ ಕೆಲವು ಪಾಳೆಗಾರರನ್ನು ಕೂಡಿಕೊಂಡು, ಕ್ರಿ.ಶ.೧೮೦೦ರಲ್ಲಿ ಇಂಗ್ಲೀಷರ ವಿರುದ್ಧ ಯುದ್ಧಕ್ಕಿಳಿದನು. ಇಂಗ್ಲೀಷ ಸೈನ್ಯದ ಮುಖಂಡನಾದ ವೆಲ್ಲಸ್ಲಿಯು "ಕಣಗಲ್ಲ" ಬಳಿಯಲ್ಲಿ ನಡೆದ ಹೋರಾಟದಲ್ಲಿ ದೋಂಡಿವಾಘನನ್ನು ಸಂಪೂರ್ಣ ಸೋಲಿಸಿದನು. ಈ ಹೋರಾಟದಲ್ಲಿಯೇ ವಾಘನು ಹತನಾದನು.

ರಾಮಚಂದ್ರ ಪಂತ ಅಪ್ಪಾ ಅವರು ಸಾಹಸಿಗರು ಮತ್ತು ಕರ್ತೃತ್ವ ಶಕ್ತಿಯುಳ್ಳವರಾಗಿದ್ದರು. ದೊಂಡಿವಾಘನ ಮತ್ತು ಕೊಲ್ಲಾಪುರಕರರ ಬಂಡಾಯಗಳನ್ನು ಹತ್ತಿಕ್ಕುವ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದರು. ಕ್ರಿ.ಶ.೧೭೭೫ರ ಸುಮಾರಿಗೆ ಪೇಶ್ವೆ ಸರಕಾರದವರು ಕರ್ನಾಟಕದಲ್ಲಿಯ ಕೆಲವು ಪ್ರದೇಶಗಳನ್ನು ಪಟವರ್ಧನ ಸರ್ದಾರರಿಗೆ ಒಪ್ಪಿಸಿದ್ದರು. ಅದರಲ್ಲಿ ಜಮಖಂಡಿಯ ಜಹಗೀರವನ್ನು ಪ್ರಖ್ಯಾತ ಪೇಶ್ವೆಯ ಸೇನಾಪತಿಯಾದ ಪರಶುರಾಮ ಭಾವು ಅವರ ವಶಕ್ಕೆ ಕೊಡಲಾಯಿತು. ಆಗ ಪರಶುರಾಮ ಭಾವು ಅವರು ಜಮಖಂಡಿಯ ಸುತ್ತಲು ಒಂದು ಚಿಕ್ಕ ಕೋಟೆಯನ್ನು ಕಟ್ಟಿಸಿದರು ಮತ್ತು ಭಾಸ್ಕರ ಪಂತ ನಾನಾ ಸುಖದೇವ ಎಂಬವನನ್ನು ಜಮಖಂಡಿಯ ಅಧಿಕಾರಿಯೆಂದು ನಿಯಮಿಸಿಕೊಂಡರು. ಇದಕ್ಕಿಂತ ಪೂರ್ವದಲ್ಲಿ ಜಮಖಂಡಿಯ ಪ್ರದೇಶವು ಕೊಣ್ಣೂರ ದೇಸಾಯಿಯವರ ವಶದಲ್ಲಿತ್ತು.

**ಜಮಖಂಡಿಯು ಸ್ವತಂತ್ರ ಸಂಸ್ಥಾನವಾದದ್ದು**

ಕ್ರಿ.ಶ.೧೭೬೩-೬೪ ರಲ್ಲಿಯೇ ಜಮಖಂಡಿಯ ಜಹಗೀರವು ಪಟವರ್ಧನರ ಆಳ್ವಿಕೆಗೆ ಒಳಪಟ್ಟಿತ್ತು. ಆದರೆ ತಾಸಗಾಂವ ಪಟ್ಟಣವು ಇದರ ರಾಜಧಾನಿಯಾಗಿತ್ತು. ಮುಂದೆ ಕ್ರಿ.ಶ.೧೮೧೧ ರಲ್ಲಿ ತಾಸಗಾಂವ ಜಹಗೀರವು ಇಭ್ಭಾಗವಾಗಿ ಜಮಖಂಡಿಯು ಪರಶುರಾಮ ಭಾವು ಅವರ ಹಿರಿಯ ಮಗನಾದ ರಾಮಚಂದ್ರ ಪಂತ ಅಪ್ಪಾ ಅವರ ಪಾಲಿಗೆ ಬಂದಿತು. ಹೀಗೆ ಜಮಖಂಡಿಯು ಒಂದು ಸ್ವತಂತ್ರ ಸಂಸ್ಥಾನವಾಗಿ ಕ್ರಿ.ಶ.೧೮೧೧ ರಲ್ಲಿ ರೂಪಗೊಂಡಿತು. ರಾಮಚಂದ್ರ ಪಂತ ಅಪ್ಪಾ ಅವರೇ ಜಮಖಂಡಿ ಸಂಸ್ಥಾನದ ಮೂಲ ಪುರುಷರಾಗಿದ್ದರು. ಇವರೇ ಈ ಸಂಸ್ಥಾನದ ಪ್ರಥಮ ಅರಸರು. ಜಮಖಂಡಿಯ ಸಂಸ್ಥಾನವು ರಾಮಚಂದ್ರ ಪಂತ ಅಪ್ಪಾ ಅವರ ಪಾಲಿಗೆ ಬಂದಿದ್ದರಿಂದ ಅವರು ತಮ್ಮ ಪರಿವಾರದೊಂದಿಗೆ ತಾಸಗಾಂವ ಪಟ್ಟಣವನ್ನು ಬಿಟ್ಟು ಜಮಖಂಡಿಗೆ ಆಗಮಿಸಿದರು. ಭಾಸ್ಕರ ಪಂತ ನಾನಾ ಸುಖದೇವನು ಕ್ರಿ.ಶ.೧೮೦೨ರಲ್ಲಿ ಮರಣ ಹೊಂದಿದ ನಂತರ ಅವನ ಮಗನಾದ ಪಾಂಡುಬಾ ತಾತ್ಯಾ ಸುಖದೇವನು ಜಮಖಂಡಿಯ ಆಡಳಿತಾಧಿಕಾರಿಯಾದನು. ಅವನು ರಾಮಚಂದ್ರ ಪಂತ ಅಪ್ಪಾ ಅವರಿಗೆ ಜಮಖಂಡಿಯ ಆಡಳಿತಾಧಿಕಾರವನ್ನು ಬಿಟ್ಟುಕೊಡಲು ನಿರಾಕರಿಸಿದನು. ಇದರಿಂದ ರೊಚ್ಚಿಗೆದ್ದ ರಾಮಚಂದ್ರ ಪಂತ ಅಪ್ಪಾ ಅವರು ತಮ್ಮ ಸೇನಾ ಬಲದೊಂದಿಗೆ ಜೋಗಿಯ ಮರಡಿಯ ಮೇಲಿಂದ (ಇಂದಿನ ರಮಾನಿವಾಸಕ್ಕೆ ಹೋಗುವ ಎಡಬದಿಗಿದ್ದ ಬೈಲು ಪ್ರದೇಶ) ತೋಪನ್ನು ಹಾರಿಸಿ ಪಾಂಡುಬಾನನ್ನು ಸೋಲಿಸಿ ಜಮಖಂಡಿಯ ಕೋಟೆಯನ್ನು (ಇಂದಿನ

ಉಪವಿಭಾಗಾಧಿಕಾರಿಗಳ ಕಛೇರಿಯ ಆವರಣ) ವಶಪಡಿಸಿಕೊಂಡರು. ಸೋತ ಪಾಂಡುಬಾನನ್ನು ಸೆರೆಹಿಡಿದು ಮರಣ ದಂಡನೆಗೆ ಗುರಿಪಡಿಸಬೇಕೆಂದು ನಿರ್ಧರಿಸಿದ್ದರು. ಆದರೆ ಪಾಂಡುಬಾನು ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಶರಣಾಗತನಾದನು. ಆಗ ಮುಧೋಳ ಸಂಸ್ಥಾನಿಕರಾದ ನಾರಾಯಣ ಘೋರ್ಪಡೆಯವರು ಮಧ್ಯಸ್ಥಿಕೆ ವಹಿಸಿ "ಶರಣಾಗತರನ್ನು ರಕ್ಷಿಸುವದು ರಾಜಧರ್ಮ" ಆದ್ದರಿಂದ ಪಾಂಡುಬಾನಿಗೆ ಜೀವದಾನ ಮಾಡಬೇಕೆಂದು ಕೇಳಿಕೊಂಡಾಗ ರಾಮಚಂದ್ರ ಪಂತ ಅಪ್ಪಾ ಅವರು ಅವನಿಗೆ ಜೀವದಾನ ಮಾಡಿ (ಬ್ರಹ್ಮಹತ್ಯಾ ದೋಷ ತಟ್ಟಬಾರದೆಂದು ಬಗೆದು) ಜಮಖಂಡಿಯಿಂದ ಗಡಿಪಾರು ಮಾಡಿದರು. ನಂತರ ರಾಮಚಂದ್ರ ಪಂತ ಅಪ್ಪಾ ಅವರು ಜಮಖಂಡಿಯ ಕೋಟೆಯನ್ನು ಪ್ರವೇಶಿಸಿ ಅಲ್ಲಿಯೇ ವಾಸಿಸಹತ್ತಿದ್ದರು.

ರಾಮಚಂದ್ರ ಪಂತ ಅಪ್ಪಾ ಅವರು ಪಾಂಡುಬಾ ತಾತ್ಯಾ ಸುಖದೇವನನ್ನು ಸೋಲಿಸಿ ಜಮಖಂಡಿಯ ಕೋಟೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದು ಶ್ರಾವಣ ಸೋಮವಾರ ದಿನಾಂಕ೨೭-೮-೧೮೦೪ರಲ್ಲಿ ಈ ಸಾಧನೆಯ ಸ್ಮರಣಾರ್ಥವಾಗಿ ಮೂರನೇಯ ಶ್ರಾವಣ ಸೋಮವಾರ ದಿವಸ ಅವರು ರಾಮತೀರ್ಥದ ರಾಮೇಶ್ವರ ಮೂರ್ತಿಗೆ ಬುತ್ತಿಪೂಜೆಯನ್ನು ಕಟ್ಟಿಸಿ ತಮ್ಮ ಭಕ್ತಿಯನ್ನು ಸಲ್ಲಿಸಿದರು. ಅಂದಿನಿಂದ ಈ ವರೆಗೆ ಪ್ರತಿ ವರ್ಷ ೩ನೇ ಶ್ರಾವಣ ಸೋಮವಾರದಂದು ಪಟವರ್ಧನ ಸಂಸ್ಥಾನಿಕರ ವಂಶಸ್ಥರು ರಾಮೇಶ್ವರ ಮೂರ್ತಿಗೆ ಬುತ್ತಿಪೂಜೆಯನ್ನು ಕಟ್ಟಿಸುವ ಪರಂಪರೆಯನ್ನು ನಡೆಸಿಕೊಂಡು ಬಂದಿದ್ದಾರೆ[೧೦೩].

ರಾಮಚಂದ್ರ ಪಂತ ಅಪ್ಪಾಸಾಹೇಬರು ಕ್ರಿ.ಶ.೧೮೧೧ರಲ್ಲಿ ಜಮಖಂಡಿ ಸಂಸ್ಥಾನದ ಪ್ರಥಮ ಅಧಿಪತಿಯಾಗಿ ಅಧಿಕಾರ ವಹಿಸಿಕೊಂಡರು. ಇವರು ಕೇವಲ ಎರಡು ವರುಷಗಳವರೆಗೆ (ಕ್ರಿ.ಶ.೧೮೧೧-೧೮೧೩) ರಾಜ್ಯವಾಳಿದರು. ಈ ಅಲ್ಪಾವಧಿಯಲ್ಲಿಯೇ ಇವರು ಸಮಗ್ರ ಜಮಖಂಡಿ ಭಾಗದಲ್ಲಿ ಶಾಂತಿ, ಸುವ್ಯವಸ್ಥೆಯನ್ನು ನೆಲೆಗೊಳಿಸಿದರು.

ಜಮಖಂಡಿ ಸಂಸ್ಥಾನದ ಪ್ರಥಮ ದೊರೆಗಳಾದ ಇವರು ಕ್ರಿ.ಶ.೧೭೬೧ ರಲ್ಲಿ ಜನಿಸಿದರು. ಇವರು ಕೇವಲ ೧೦ ವರ್ಷದವರಿದ್ದಾಗಲೇ ಸೈನಿಕ ಸೇವೆಯನ್ನು ಪ್ರಾರಂಭಿಸಿದರು. ಮುಂದೆ ಸುಮಾರು ೨೫ ವರ್ಷಗಳವರೆಗೆ ಅವ್ಯಾಹತವಾಗಿ ಅನೇಕ ಯುದ್ಧೋತ್ಸವಗಳಲ್ಲಿ ಭಾಗವಹಿಸಿ ಜಯವನ್ನು ಸಂಪಾದಿಸಿದವರಾಗಿದ್ದರು. ಯಾವಾಗ ಮರಾಠಾ ಸಾಮ್ರಾಜ್ಯವು ಕ್ರಮೇಣ ಇಳಿಮುಖವಾಗಿ ಬ್ರಿಟಿಷ ಸಾಮ್ರಾಜ್ಯವು ಉಚ್ಛ್ರಾಯ ಸ್ಥಿತಿಗೇರಹತ್ತಿದಾಗ ಇವರು ತಮ್ಮ ಕರ್ತೃತ್ವ ಶಕ್ತಿಯಿಂದ ಮರಾಠಾ ರಾಜ್ಯದ ಅಸ್ತಿತ್ವವನ್ನು ಉಳಿಸಿಕೊಂಡು ಬಂದರು. ಇಡೀ ಪಟವರ್ಧನರ ಇತಿಹಾಸದಲ್ಲಿಯೇ ಇವರು ಕೊನೆಯ ಮತ್ತು ಶ್ರೇಷ್ಠ ಸೇನಾಪತಿಗಳೆಂದು ಕೀರ್ತಿ ಪಡೆದಿದ್ದಾರೆ. ಇವರ ನಂತರ ಜಮಖಂಡಿಯನ್ನಾಳಿದ ಎಲ್ಲ ಪಟವರ್ಧನ ಅರಸರು ಬ್ರಿಟಿಷ್‌ರೊಂದಿಗೆ ಒಪ್ಪಂದ ಮಾಡಿಕೊಂಡು ಪ್ರತಿ ವರ್ಷ ಈಸ್ಟ್ ಇಂಡಿಯಾ ಕಂಪನಿಗೆ ಕಾಣಿಕೆಯನ್ನು ಕೊಡಲು ಒಪ್ಪಿಕೊಂಡರಲ್ಲದೇ ರಾಜ್ಯದ ಆಡಳಿತದ ಮೇಲ್ವಿಚಾರಣೆಯನ್ನು ಮಾಡಲು ಬ್ರಿಟಿಷ್ ರೆಸಿಡೆಂಟ್‌ನನ್ನು ನೇಮಿಸಿಕೊಂಡರು. ಇವರು ಕ್ರಿ.ಶ.೧೮೧೩ ರಲ್ಲಿ ಜಮಖಂಡಿಯಲ್ಲಿಯೇ ಮರಣ ಹೊಂದಿದರು. ಇವರ ನಂತರ ಇವರ ಏಕೈಕ ಪುತ್ರನಾದ ಗೋಪಾಳರಾವ ರಾಹುಸಾಹೇಬರು ಜಮಖಂಡಿಯ ಸಿಂಹಾಸನಕ್ಕೆ ಬಂದರು.

**೪. ಗೋಪಾಳರಾವ ಪಟವರ್ಧನರು (ಕ್ರಿ.ಶ.೧೮೧೩-೧೮೪೦)**

ಇವರು ಕ್ರಿ.ಶ.೧೭೯೯ರಲ್ಲಿ ಜನ್ಮ ತಾಳಿದರು. ಇವರು ತಂದೆಯ ಮರಣದ ಕಾಲದಲ್ಲಿ ಕೇವಲ ೧೪ ವರುಷದ ಬಾಲಕರಾಗಿದ್ದರು. ಇವರು ಅಲ್ಪವಯಿಯಾಗಿದ್ದರೂ ಸಹ

ಅಸಾಮಾನ್ಯವಾದ ಶಕ್ತಿ ಸಾಮರ್ಥ್ಯವನ್ನು ಹೊಂದಿದವರಾಗಿದ್ದರು. ತಂದೆಯ ಮರಣದ ನಂತರ ರಾಜ್ಯದಲ್ಲಿ ಸಂಭವಿಸಿದ ಗೊಂದಲಮಯವಾದ ವಾತಾವರಣವನ್ನು ತಮ್ಮ ಬುದ್ಧಿಶಕ್ತಿಯಿಂದ ತಿಳಿಗೊಳಿಸಿದರು. ಇವರು ಚತುರಮತಿಗಳು ಹಾಗೂ ಮುಂದಾಲೋಚನೆ ಉಳ್ಳವರು ಆಗಿದ್ದರು.

ಕ್ರಿ.ಶ.೧೮೧೮ರ ಸುಮಾರಿಗೆ ಮರಾಠಾ ಸಾಮ್ರಾಜ್ಯವು ಅವನತಿಯತ್ತ ಸಾಗಿದ್ದರಿಂದ ಎಲ್ಲ ಮರಾಠಾ ಜಹಗೀರದಾರರು ಇಂಗ್ಲೀಷರೊಂದಿಗೆ ಒಪ್ಪಂದ ಮಾಡಿಕೊಂಡು ಅವರ ಆಜ್ಞಾನುಸಾರ ತಮ್ಮ ಆಡಳಿತವನ್ನು ನಡೆಸಹತ್ತಿದರು. ಅದರಂತೆ ಗೋಪಾಳರಾವ ರಾಹುಸಾಹೇಬರು ಸಹ ಅಂದಿನ ಪರಿಸ್ಥಿತಿಯನ್ನು ಅರಿತುಕೊಂಡು ಇಂಗ್ಲೀಷರೊಂದಿಗೆ ಕ್ರಿ.ಶ.೧೮೨೦ರಲ್ಲಿ ಒಪ್ಪಂದ ಮಾಡಿಕೊಂಡರು. ಆ ಒಪ್ಪಂದದ ಪ್ರಕಾರ ಜಮಖಂಡಿ ಸಂಸ್ಥಾನಿಕರಿಗೆ ೩೦೦ ಸೈನಿಕರನ್ನು ಸಂಘಟಿಸುವ ಅನುಮತಿಯನ್ನು ಕೊಟ್ಟರು. ಇವರು ಇಂಗ್ಲೀಷರಿಗೆ ಪ್ರತಿ ವರುಷ ೩೦,೦೦೦ ರೂಪಾಯಿ ಕಪ್ಪ-ಕಾಣಿಕೆಯನ್ನು ಕೊಡಲು ಒಪ್ಪಿಕೊಂಡರು.

ಗೋಪಾಳರಾವ ಪಟವರ್ಧನರು ಒಳ್ಳೆಯ ಆಡಳಿತಗಾರರಾಗಿದ್ದರು. ಇವರ ಆಡಳಿತದ ವಿಧಾನವನ್ನು ಇಂಗ್ಲೀಷ ಸರಕಾರವು ತುಂಬ ಮೆಚ್ಚಿಕೊಂಡಿತ್ತು. ತಾಸಗಾಂವದ ಜಹಗೀರದಾರನಾದ ಭಾವುಸಾಹೇಬರು ಅಲ್ಪವಯಸ್ಸಿನವರಿದ್ದಾಗ ತಾಸಗಾಂವ ಜಹಗೀರದ ಆಡಳಿತದ ಚುಕ್ಕಾಣಿಯನ್ನು ಇವರಿಗೆ ವಹಿಸಿಕೊಟ್ಟಾಗ ಅಲ್ಲಿಯೂ ಸಹ ಇವರು ಒಳ್ಳೆಯ ಆಡಳಿತವನ್ನು ನಡೆಸಿ ಮೆಚ್ಚುಗೆಯನ್ನು ಪಡೆದುಕೊಂಡರು. ಆಡಳಿತದಲ್ಲಿ ಇವರು ಮಿತವ್ಯಯವನ್ನು ಸಾಧಿಸಿದರು. ಇವರಿಗೆ ಸಂತಾನವಿಲ್ಲದ್ದರಿಂದ ಜಮಖಂಡಿ ಸಮೀಪದ ಅಸಂಗಿ ಗ್ರಾಮದ ಅಂತಾಜಿ ಮಾಧವರಾವ್ ಉರ್ಫ್ ತಾತ್ಯಾಸಾಹೇಬ ಯಾದವಾಡಕರ ಇವರ ಪುತ್ರ 'ಗಣಪತಿ' ಎಂಬ ಬಾಲಕನನ್ನು ಇಂಗ್ಲೀಷರ ಅನುಮತಿಯನ್ನು ಪಡೆದುಕೊಂಡು ದತ್ತಕ ತೆಗೆದುಕೊಂಡರು. ದತ್ತಕ ಪುತ್ರನಿಗೆ "ರಾಮಚಂದ್ರರಾವ್ ಅಪ್ಪಾಸಾಹೇಬ" ಎಂಬ ಹೆಸರನ್ನಿಟ್ಟರು. ಆ ಸಮಯದಲ್ಲಿ ದತ್ತಕ ಪುತ್ರನು ಕೇವಲ ೭ ವರ್ಷದ ಬಾಲಕನಾಗಿದ್ದನು. ದುರ್ದೈವದಿಂದ ಗೋಪಾಳರಾವ ಪಟವರ್ಧನರು ಕ್ರಿ.ಶ.ಸ೧೮೪೦ ರಲ್ಲಿ ಜಮಖಂಡಿಯಲ್ಲಿ ಮರಣ ಹೊಂದಿದರು.

ಗೋಪಾಲರಾವ್‌ರ ಮರಣದ ಸಮಯದಲ್ಲಿ ಅವರ ದತ್ತಕ ಪುತ್ರನು ಚಿಕ್ಕವಯಸ್ಸಿನವನಾಗಿದ್ದನು. ಅವನು ಪ್ರಬುದ್ಧನಾಗುವವರೆಗೆ ಸಂಸ್ಥಾನದ ಆಡಳಿತವನ್ನು ರಾಣಿ ಸಾಹೇಬರು ಶ್ರೀ ವಿಠ್ಠಲ ಗೋವಿಂದ ಅಪ್ಪೆ ಮತ್ತು ಕೃಷ್ಣಾಜಿ ಬಾಲಾಜಿಜೋಶಿ ಇವರ ಸಹಾಯದಿಂದ ನಡೆಸಲು ಇಂಗ್ಲೀಷರಿಂದ ಅನುಮತಿ ಪಡೆದುಕೊಂಡರು. ರಾಧಾಬಾಯಿಯವರು ಅತ್ಯಂತ ಸೌಮ್ಯರು ಹಾಗೂ ಧಾರ್ಮಿಕ ಮನೋಭಾವನೆಯುಳ್ಳವರು ಆಗಿದ್ದರು. ಇವರು ಕ್ರಿ.ಶ.೧೮೪೦ ರಿಂದ ೧೮೪೯ರವರೆಗೆ (ಸುಮಾರು ೯ ವರುಷಗಳ ವರೆಗೆ) ಅತ್ಯಂತ ಒಳ್ಳೆಯ ರೀತಿಯಿಂದ ಆಡಳಿತವನ್ನು ನಡೆಸಿದರು. ಖಾಸಗಿ ಕಾರಭಾರಿಗಳು ಅವ್ಯವಹಾರ ಮಾಡಿದ್ದರಿಂದ ರಾಣಿಸಾಹೇಬರು ಅವರನ್ನು ಅಧಿಕಾರದಿಂದ ಕಿತ್ತು ಹಾಕಿದ್ದರಲ್ಲದೇ ಅವರಿಗೆ ೩ ವರ್ಷ ಶಿಕ್ಷೆ ಮತ್ತು ೨೦,೦೦೦ರೂ ದಂಡ ವಿಧಿಸಿದರು. ಆದರೂ ಕೊನೆಗೆ ಅವರ ಮೇಲೆ ದಯೆ ತೋರಿ ನಿರ್ದೋಷಿಗಳೆಂದು ಬಿಡುಗಡೆ ಮಾಡಿದರು. ನಂತರ ಇಂಗ್ಲೀಷ ಸರಕಾರವು ವಿನಾಯಕ ಕೃಷ್ಣ ಪಂಡಿತ ಎಂಬುವರನ್ನು ಆಡಳಿತಗಾರನೆಂದು ನೇಮಿಸಿತು. ಇವರು ದಿನಾಂಕ೨೬-೫-೧೮೪೯ ರಿಂದ ೭-೧-೧೮೫೩ ರವರೆಗೆ ಆಡಳಿತವನ್ನು ನಡೆಸಿದರು. ಮುಂದೆ ರಾಣಿಸಾಹೇಬರ ದತ್ತಕ ಪುತ್ರನಾದ ರಾಮಚಂದ್ರರಾವ್ ಅಪ್ಪಾಸಾಹೇಬರು ಪ್ರಬುದ್ಧರಾಗಿದ್ದರಿಂದ ದಿನಾಂಕ೭-೧-೧೮೫೩ರಂದು ಜಮಖಂಡಿ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು.

**೫. ರಾಮಚಂದ್ರರಾವ ಅಪ್ಪಾಸಾಹೇಬರು (ಕ್ರಿ.ಶ.೧೮೫೩-೧೮೯೭)**

ರಾಮಚಂದ್ರರಾವ್ ಅಪ್ಪಾಸಾಹೇಬರು ಕ್ರಿ.ಶ.೧೮೩೩ ರಲ್ಲಿ ಜನಿಸಿದರು. ಇವರು ಏಳು ವರುಷದ ಬಾಲಕನಾಗಿದ್ದಾಗ ಗೋಪಾಳರಾವ್ ಪಟವರ್ಧನರು ಇವರನ್ನು ದತ್ತಕ ತೆಗೆದುಕೊಂಡರು. (೧೮-೧೧-೧೮೪೦) ಇವರ ದತ್ತಕ ಸಮಾರಂಭವು ಮುಗಿದ ನಂತರವೇ ದಿನಾಂಕ೨೯-೧೧-೧೮೪೦ರಂದು ಗೋಪಾಳರಾವರು ಮರಣ ಹೊಂದಿದರು. ಮುಂದೆ ರಾಮಚಂದ್ರರಾವ್ ಅಪ್ಪಾಸಾಹೇಬರು ಒಂಬತ್ತು ವರ್ಷದ ಬಾಲಕನಾದಾಗ ಇವರ ಉಪನಯನ ಸಮಾರಂಭವು ಜರುಗಿತು. ನಂತರ ಇವರಿಗೆ ಉಚಿತವಾದ ಶಿಕ್ಷಣ ಮತ್ತು ತರಬೇತಿಯನ್ನು ಕೊಡುವ ವ್ಯವಸ್ಥೆಯನ್ನು ಮಾಡಲಾಯಿತು.

ಬಾಲ್ಯದಲ್ಲಿಯೇ ಇವರು ಅತ್ಯಂತ ಚಾಣಾಕ್ಷತನವುಳ್ಳವರಾಗಿದ್ದು, ಮರಾಠಿ, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಓದು ಬರಹವನ್ನು ಕಲಿತರು. ಅಲ್ಲದೆ ಗಣಿತಶಾಸ್ತ್ರವನ್ನು ಅಭ್ಯಸಿಸಿದರು. ರಾಜಕುಮಾರರಿಗೆ ತಕ್ಕುದಾದ ಯುದ್ಧದ ತರಬೇತಿಯನ್ನು ಪಡೆದುಕೊಂಡರು. ಕುದುರೆ ಹತ್ತುವುದು, ಢಾಲು ತಿರುಗಿಸುವದು, ಗುರಿಹೊಡೆಯುವದು, ಕತ್ತಿ ಜಳಪಿಸುವದು ಇವೇ ಮೊದಲಾದ ಯುದ್ಧದ ಕಲೆಯನ್ನು ಕರಗತ ಮಾಡಿಕೊಂಡರು. ಇಂಗ್ಲೀಷರು ಇವರಿಗೆ ಉಚಿತವಾದ ಶಿಕ್ಷಣವನ್ನು ಕೊಡಲು ಹೆಸರಾಂತ ಶಿಕ್ಷಕರಾದ ಪುಣೆಯ ಶ್ರೀ ಕುಶಾಭಾವು ನಾನಾ ಲಿಮೆಯವರನ್ನು ನಿಯಮಿಸಿದರು. ಅವರಿಂದ ರಾಮಚಂದ್ರರಾವ್ ಅಪ್ಪಾಸಾಹೇಬರು ಇಂಗ್ಲೀಷ, ಇತಿಹಾಸ, ಭೂಗೋಳ, ಪ್ರಾಕ್ತನಶಾಸ್ತ್ರ ಅರ್ಥಶಾಸ್ತ್ರ, ಲೆಕ್ಕಶಾಸ್ತ್ರಗಳನ್ನು ಅಭ್ಯಸಿಸಿದರು. ಅಲ್ಲದೆ ಆಡಳಿತ, ಕಾಯ್ದೆ-ಕಾನೂನು, ನ್ಯಾಯದಾನ ಪದ್ಧತಿ ಮೊದಲಾದ ವಿಷಯಗಳ ಬಗೆಗೆ ಸಂಪೂರ್ಣ ತಿಳುವಳಿಕೆಯನ್ನು ಮಾಡಿಕೊಂಡರು. ಹೀಗೆ ಇವರು ಸಿಂಹಾಸನಕ್ಕೆ ಬರುವ ಪೂರ್ವದಲ್ಲಿಯೇ ಎಲ್ಲ ಬಗೆಯ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡರು.

ಇವರಿಗೆ ಸಂಗೀತದಲ್ಲಿ ಹೆಚ್ಚಿನ ಆಸಕ್ತಿಯಿತ್ತು. ಅದಕ್ಕಾಗಿ ಇವರು ತಮ್ಮ ಆಸ್ಥಾನದಲ್ಲಿ ಶ್ರೇಷ್ಠ ಸಂಗೀತ ಶಿಕ್ಷಕರನ್ನು ನಿಯಮಿಸಿಕೊಂಡು ಅವರಿಂದ ವಿವಿಧ ಸಂಗೀತದ ಸಲಕರಣೆಗಳಾದ ವೀಣೆ, ಕೊಳಲು, ಮದ್ದಲೆ, ಪಿಯಾನ ಮೊದಲಾದವುಗಳನ್ನು ನುಡಿಸುವ ಕಲೆಯನ್ನು ಕಲಿತುಕೊಂಡರು. ಹೀಗೆ ಎಲ್ಲ ಬಗೆಯ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡು ಪ್ರಭುದ್ಧರಾದ ಮೇಲೆ ಕ್ರಿ.ಶ.೧೮೫೩ ಜನವರಿ ತಿಂಗಳ ೭ನೇ ತಾರೀಖಿನ ದಿವಸ ರಾಮಚಂದ್ರರಾವ್ ಅಪ್ಪಾಸಾಹೇಬರು ಜಮಖಂಡಿ ಸಂಸ್ಥಾನದ ಆಡಳಿತಾಧಿಕಾರವನ್ನು ವಹಿಸಿಕೊಂಡರು.

**ರಾಮಚಂದ್ರರಾವ್ ಅಪ್ಪಾಸಾಹೇಬರು ಮತ್ತು ೧೮೫೭ರ ಬಂಡಾಯ**

ಇದೇ ಪ್ರಸಂಗದಲ್ಲಿ (೧೮೫೭ರಲ್ಲಿ) ಉತ್ತರ ಭಾರತದ ವಿರುದ್ಧ ನಾನಾಸಾಹೇಬ ಪೇಶ್ವೆ ಝಾನ್ಸಿಯ ರಾಣಿ ಲಕ್ಷ್ಮಿಬಾಯಿ, ಕುನ್ವರಸಿಂಗ, ಬೇಗಂ ಝುಮ್ಮಿನ್ನಿಸಾ ಮೊದಲಾದವರು ಸಿಪಾಯಿಗಳನ್ನು ಸಂಘಟಿಸಿ ತಾತ್ಯಾಟೋಪಿಯ ಸೇನಾಪತ್ಯದಲ್ಲಿ ಯುದ್ಧವನ್ನು ಸಾರಿಸಿದರು. ಇದೇ ಇತಿಹಾಸ ಪ್ರಸಿದ್ಧವಾದ ೧೮೫೭ ರ ಸಿಪಾಯಿಗಳ ಬಂಡಾಯ (ಪ್ರಥಮ ಸ್ವಾತಂತ್ರ ಸಂಗ್ರಾಮ) ಈ ಬಂಡಾಯದ ಝಳವು ದಕ್ಷಿಣ ಭಾರತಕ್ಕೂ ತಾಗಿ ದಕ್ಷಿಣದ ದೇಶಿ ಸಂಸ್ಥಾನಿಕರು ಕೆಲವು ದೇಶಾಭಿಮಾನಿಗಳು ಆಂಗ್ಲರ ಆಳ್ವಿಕೆಯನ್ನು ಕೊನೆಗಾಣಿಸುವದಕ್ಕಾಗಿ ಸೈನಿಕ ಸಂಘಟನೆ ಮತ್ತು ಶಸ್ತ್ರಾಸ್ತ್ರಗಳ ಸಂಗ್ರಹಣೆಯ ಕಾರ್ಯದಲ್ಲಿ ನಿರತರಾಗಿದ್ದರು. ಅವರಲ್ಲಿ ಪ್ರಮುಖರೆಂದರೆ ನರಗುಂದದ ಬಾಬಾ ಸಾಹೇಬ, ಮುಂಡರಗಿ ಭೀಮರಾಯ, ಹಲಗಲಿಯ ಬೇಡರು,

ಜಮಖಂಡಿಯ (ರಾಮಚಂದ್ರರಾವ್ ಅಪ್ಪಾಸಾಹೇಬರ ಸೇನಾಪತಿ) ಭೋಟೂಸಿಂಗ, ಮಹಿಪಾಲಸಿಂಗ ಮೊದಲಾದವರು. ಜಮಖಂಡಿಯ ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರೂ ಸಹ ಬ್ರಿಟಿಷರ ವಿರುದ್ಧ ಬಂಡಾಯ ಹೂಡಲು ಅಗತ್ಯವಾದ ಶಸ್ತ್ರಾಸ್ತ್ರಗಳನ್ನು, ಮದ್ದುಗುಂಡುಗಳನ್ನು ಸಂಗ್ರಹಿಸುವ ಹಾಗೂ ಸೈನಿಕರಿಗೆ ಉಚಿತವಾದ ತರಬೇತಿಯನ್ನು ಕೊಡುವ ಕಾರ್ಯವನ್ನು ತಮ್ಮ ಸಮರ್ಥ ವೀರರಜಪುತ ಸೇನಾಪತಿಯಾದ ಭೋಯಾಸಿಂಗನಿಗೆ ವಹಿಸಿಕೊಟ್ಟಿದ್ದರು.

ಭೋಟಾಸಿಂಗನು ಸಂಘಟನಾ ಸಾಮರ್ಥ್ಯಯುಳ್ಳವನಾಗಿದ್ದು, ಜಮಖಂಡಿಯ ಸಂಸ್ಥಾನದ ರಕ್ಷಣೆಗಾಗಿ ಆಂಗ್ಲರ ವಿರುದ್ಧ ಬಂಡೆಬ್ಬಿಸಲು ಸುಸಜ್ಜಿತವಾದ ಸೇನಾಬಲವನ್ನು ಸಂಗ್ರಹಿಸಿದ್ದನಲ್ಲದೇ ಮದ್ದು ಗುಂಡು ಶಸ್ತ್ರಾಸ್ತ್ರಗಳನ್ನು ಕಲೆಹಾಕಿದನು[೧೦೪]. ಅದರಂತೆ ಮಹಿಪಾಲಸಿಂಗನೆಂಬ ಇನ್ನೋರ್ವ ರಜಪುತ ವೀರನು ಜಮಖಂಡಿಯಲ್ಲಯೇ ಸೈನಿಕ ತರಬೇತಿಯನ್ನು ಪಡೆದುಕೊಂಡು ಮುಂದೆ ಬೆಳಗಾವಿಯಲ್ಲಿದ್ದ ೨೯ನೇ ಬ್ರಿಟಿಷ್ ಸೈನ್ಯದ ತುಕಡಿಯಲ್ಲಿ ಸೈನಿಕನಾಗಿ ಸೇರಿಕೊಂಡು ಅಲ್ಲದ್ದ ರಜಪುತ ಸೈನಿಕರಿಗೆ ಬ್ರಿಟೀಷ್ ಪ್ರಭುತ್ವದ ಉಚ್ಚಾಟನೆಗೆ ಬಂಡು ಹೂಡುವಂತೆ ಪ್ರಚೋದಿಸಿದನು. ಇಂಗ್ಲೀಷರಿಗೆ ವಿಧೇಯಕರಾದ ಸಿಪಾಯಿಗಳನ್ನು ಹುರಿದುಂಬಿಸಿ ಅವರ ವಿರುದ್ಧ ಹೋರಾಡಲು ಸಂಚುಹೂಡಿದನು.

ಇದೇ ವೇಳೆಯಲ್ಲಿ ಜಮಖಂಡಿಯ ಸಮೀಪದ ಮುಧೋಳ ತಾಲೂಕಿನ ಹಲಗಲಿ ಗ್ರಾಮದ ಬೇಡರು ಇಂಗ್ಲೀಷರ ವಿರುದ್ಧ ದಂಗೆಯನ್ನೆಬ್ಬಿಸಿದರು. ಅದರಂತೆ ನರಗುಂದದ ಬಾಬಾ ಸಾಹೇಬನೂ ಸಹ ಆಂಗ್ಲರ ವಿರುದ್ಧ ಬಂಡಾಯ ಹೂಡಲು ಸರ್ವಸಿದ್ಧತೆಯನ್ನು ನಡೆಸಿದ್ದನು. ಇತ್ತ ಮಹಿಪಾಲಸಿಂಗನು ಜಮಖಂಡಿಯ ಸೇನಾಪತಿಯಾದ ಭೋಟಾಸಿಂಗನ ಜೊತೆಗೆ ಆಂಗ್ಲರ ವಿರುದ್ಧ ಬಂಡೆಬ್ಬಿಸುವದಕ್ಕಾಗಿ ಗುಪ್ತ ಸಮಾಲೋಚನೆಯನ್ನು ಮಾಡುತ್ತಿದ್ದನು. ಈರ್ವರು ಇಂಗ್ಲೀಷರ ವಿರುದ್ಧ ಹೋರಾಡಲು ಸೈನಿಕ ಸಂಘಟನೆಯನ್ನು ಮಾಡಿದ್ದರಲ್ಲದೇ ಮಾರಕವಾದ ಶಸ್ತ್ರಾಸ್ತ್ರಗಳನ್ನು ಗುಪ್ತವಾಗಿ ಸಂಗ್ರಹಿಸಿಟ್ಟಿದ್ದರು. ಈ ಎಲ್ಲ ಸಿದ್ಧತೆಯನ್ನು ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರಿಗೆ ತಿಳಿಸದೇ ಮಾಡಿದ್ದರು.

ಬೆಳಗಾವಿಯ ೨೯ನೇ ಇಂಗ್ಲೀಷ ತುಕಡಿಯಲ್ಲಿದ್ದ ಎಲ್ಲ ರಜಪೂತ ಸೈನಿಕರು ಮಹಿಪಾಲಸಿಂಗನ ಮುಖಂಡತ್ವದಲ್ಲಿ ಆಂಗ್ಲರ ವಿರುದ್ಧ ಬಂಡಾಯ ಹೂಡುವವರೆಂಬ ಸುದ್ದಿ ಇಂಗ್ಲೀಷ ಸೇನಾಧಿಕಾರಿಗಳಿಗೆ ಗೊತ್ತಾಯಿತು. ಕೂಡಲೇ ಅವರು ಮಹಿಪಾಲಸಿಂಗನನ್ನು ಬಂಧಿಸಿ ಸೈನಿಕ ನ್ಯಾಯಾಲಯದ ಮುಂದೆ ನಿಲ್ಲಿಸಿ ತೋಪಿನ ಬಾಯಿಗೆ ಕೊಡುವಂತೆ ಶಿಕ್ಷೆ ವಿಧಿಸಿದರು. ಹೀಗೆ ಮಹಿಪಾಲಸಿಂಗನು ಇಂಗ್ಲೀಷರ ತೋಪಿನ ಬಾಯಿಗೆ ಸಿಕ್ಕು ಹತನಾದನು.

ಮಹಿಪಾಲಸಿಂಗನ ಬಂಧನ ಜಮಖಂಡಿಯ ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರು ಬ್ರಿಟಿಷರ ವಿರುದ್ಧ ಬಂಡಾಯ ಹೂಡುವ ಒಳಸಂಚನ್ನು ನಡೆಸಿದ್ದಾರೆಂಬ ಸುಳುವು ಇಂಗ್ಲೀಷರಿಗೆ ಹತ್ತಿತು. ಕೂಡಲೇ ಈ ವಿಷಯದ ಬಗೆಗೆ ತನಿಖೆ ಮಾಡಲು ಬ್ರಿಟಿಷ ಪೊಲಿಟಿಕಲ್ ಏಜೆಂಟನಾದ ಮಿಷ್ಟರ್ ಸಿ.ಜೆ. ಮ್ಯಾನ್‌ಸನ್ನನು ಸೇನಾ ಸಮೇತನಾಗಿ ಜಮಖಂಡಿಗೆ ಬಂದನು. ಈ ಸುದ್ಧಿ ಜಮಖಂಡಿಯ ಸೇನಾಪತಿಯಾದ ಭೋಟಾಸಿಂಗನಿಗೆ ತಿಳಿಯಿತು. ಕೂಡಲೇ ಅವನು ರಾಜರನ್ನು ಭೇಟಿಯಾಗಿ "ನಮ್ಮ ರಾಜ್ಯದಲ್ಲಿ ನಡೆದ ಆಂಗ್ಲ ವಿರೋಧಿ ಚಟುವಟಿಕೆಗಳನ್ನು ತನಿಖೆ ಮಾಡಲು ಇಂಗ್ಲೀಷರ ಅಧಿಕಾರಿಯಾದ ಮ್ಯಾನ್‌ಸನ್ನನು ಬಂದು ತಮ್ಮನ್ನು ಕೇಳಿದರೆ ನನಗೇನೂ ಗೊತ್ತಿಲ್ಲವೆಂದು ಸ್ಪಷ್ಟವಾಗಿ ಹೇಳಬೇಕು ಮತ್ತು ಆ ವಿಷಯದ

ಬಗೆಗೆ ಮಾಹಿತಿ ಬೇಕಾದರೆ ಸೇನಾಪತಿಯನ್ನು ಕೇಳಿರಿ" ಎಂದು ಹೇಳಬೇಕೆಂದು ವಿನಂತಿಸಿಕೊಂಡನು. ಈ ಕಾರ್ಯದ ಹೊಣೆಗಾರಿಕೆಯನ್ನು ಸೇನಾಪತಿಯ (ನಿನ್ನ) ಮೇಲೆ ಹೊರಿಸುವದು ರಾಜಧರ್ಮವಲ್ಲವೆಂದು ಬಗೆದು ರಾಜರು ಅವನ ಮಾತಿಗೆ ಒಪ್ಪಲಿಲ್ಲ. ಆದರೂ ಭೋಟೊಸಿಂಗನು ಪಟ್ಟು ಹಿಡಿದು ರಾಜ್ಯದ ಉಳಿವಿಗಾಗಿ ಮತ್ತು ಪ್ರಜೆಗಳ ಹಿತಕ್ಕಾಗಿ ಈ ಸಂದರ್ಭದಲ್ಲಿ ತಾವು ನನ್ನ ಮಾತಿಗೆ ಒಪ್ಪಿಕೊಳ್ಳಲೇಬೇಕೆಂದು ಹಟ ಹಿಡಿದನು. ಆಗ ರಾಜರು ಅನಿವಾರ್ಯವಾಗಿ ಒಪ್ಪಿಕೊಂಡರು.

ರಾಜರ ಒಪ್ಪಿಗೆಯನ್ನು ಪಡೆದುಕೊಂಡು ಬಂದ ಕೂಡಲೇ ಭೋಟಾಸಿಂಗನು ತಾನು ಮಾಡಿದ ಯುದ್ಧದ ಸಿದ್ಧತೆಯ ಸುಳಿವು ಮ್ಯಾನ್‌ಸನ್ನನಿಗೆ ತಿಳಿಯದಂತೆ ಸಂಗ್ರಹಿಸಿದ ಎಲ್ಲ ಮುದ್ದುಗುಂಡುಗಳನ್ನು ಮತ್ತು ಶಸ್ತ್ರಾಸ್ತ್ರಗಳನ್ನು ಸಮೀಪದಲ್ಲಿದ್ದ ಉಮಾರಾಮೇಶ್ವರ ಬಾವಿಯಲ್ಲಿ ಮತ್ತು ರಾಟಲ್ ಬಾವಿಯಲ್ಲಿ ಎಸೆದು ಮುಚ್ಚಿಹಾಕಿದನು. ಅಲ್ಲದೆ ಸೈನಿಕರ ಶಿಬಿರಗಳನ್ನು ನಿರ್ಜನಗೊಳಿಸಿದನು. ಮುಂದೆ ಮ್ಯಾನ್‌ಸನ್ನ ಸಾಹೇಬನ ಸೈನಿಕರು ಬಂದು ತಪಾಸಣೆ ಮಾಡಲಾರಂಭಿಸಿದಾಗ ಊರಲ್ಲಿ ಸ್ಮಶಾನ ಮೌನವು ಆವರಿಸಿತ್ತು. ಅಲ್ಲದೆ ಭೋಟೋಸಿಂಗನ ಸೈನಿಕರ ಬಿಡಾರಗಳು ಬರಿದಾಗಿದ್ದವು. ತನಗೆ ಬಂದ ಗುಪ್ತ ವರದಿಯ ಪ್ರಕಾರ ಜಮಖಂಡಿಯಲ್ಲಿ ಬ್ರಿಟಿಷ ವಿರೋಧಿ ವಾತಾವರಣವು ಇಲ್ಲದ್ದನ್ನು ಕಂಡು ಮ್ಯಾನ್‌ಸನ್ ಸಾಹೇಬನಿಗೆ ಆಶ್ಚರ್ಯವಾಯಿತು. ಇದರ ಬಗ್ಗೆ ರಾಮಚಂದ್ರರಾವ್ ಅಪ್ಪಾಸಾಹೇಬರನ್ನು ಕೇಳಿದಾಗ ಅವರು ಆಶ್ಚರ್ಯಚಕಿತರಾಗಿ ತಮಗೇನೂ ಗೊತ್ತಿಲ್ಲವೆಂದು ಹೇಳಿದರು. ಆದರೂ ಮ್ಯಾನ್‌ಸನ್ನ ಸಾಹೇಬನು ಇದೊಂದು ರಾಜಕೀಯ ಕುತಂತ್ರವೆಂದು ಬಗೆದು ಭೋಟೋಸಿಂಗನನ್ನು ಮತ್ತು ಅಬಾ ದೇವಧರನನ್ನು ಬಂಧಿಸಿದರಲ್ಲದೆ ಸಂಸ್ಥಾನಾಧಿಪತಿಯಾದ ರಾಮಚಂದ್ರರಾವ್ ಅಪ್ಪಾಸಾಹೇಬರನ್ನು ಬಂಧಿಸಿ ಬೆಳಗಾವಿಯ ಜೇಲಿನಲ್ಲಿ ವಿಚಾರಣೆಗಾಗಿ ಇರಿಸಲಾಯಿತು[೧೦೫].

ಜಮಖಂಡಿಯಿಂದ ಬೆಳಗಾವಿಗೆ ಮಹಾರಾಜರನ್ನು ಬಂಧಿಸಿ ಪೊಲೀಸ್ ಕಾವಲಿನಲ್ಲಿ ಕರೆದೊಯ್ಯುವಾಗ ಅವರ ಜೊತೆಗೆ ಐದು ಜನ ಖಾಸಗಿ ವ್ಯಕ್ತಿಗಳಿರಲು ಮ್ಯಾನ್‌ಸನ್ನನು ಅನುಮತಿಯನ್ನಿತ್ತನು. ಆ ವ್ಯಕ್ತಿಗಳೆಂದರೆ ನಾನಾ ಸಿಂತ್ರೆ, ಮಹಾದೇವ ಗೋಖಲೆ, ನಾನಾ ಜವಳೆಕರ, ಗೋಪಾಲ ಗುಳೆ, ತುಳಜಾ ಜಾಸೋದ ಇವರು ಮಹಾರಾಜರ ಜೊತೆಗೆ ೨೨-೦೩-೧೮೫೮ರಲ್ಲಿ ಬೆಳಗಾವಿಯ ಜೇಲಿನಲ್ಲಿದ್ದರು.

ರಾಮಚಂದ್ರರಾವ್ ಅಪ್ಪಾಸಾಹೇಬರನ್ನು ದಸ್ತಗಿರಿ ಮಾಡಿಕೊಂಡು ಹೋದ ಮೇಲೆ ಮ್ಯಾನ್‌ಸನ್ನ ಮತ್ತು ಕೆಲವು ಆಂಗ್ಲ ಸೈನಿಕ ಅಧಿಕಾರಿಗಳು ಜಮಖಂಡಿಯಲ್ಲಿ ನಿಂತು ಭೋಟೊಸಿಂಗ ಮತ್ತು ಅಬಾ ದೇವಧರ ಮತ್ತು ಕೆಲವು ಸಂಶಯಾಸ್ಪದ ವ್ಯಕ್ತಿಗಳ ಚಟುವಟಿಕೆಗಳನ್ನು ಶೋಧಿಸುವ ಕಾರ್ಯದಲ್ಲಿ ತೊಡಗಿದರು. ಇವರು ಜಮಖಂಡಿಯ ಕೋಟೆಯಲ್ಲಿದ್ದ ಬೆಲೆಯುಳ್ಳ ಬೆಳ್ಳಿ, ಬಂಗಾರ ಮತ್ತು ರತ್ನ, ವಜ್ರ, ವೈಢೂರ್ಯಗಳನ್ನಲ್ಲದೆ ಕೆಲವು ಕೂಡಿಟ್ಟ ಹಣವನ್ನು ಸಹ ದೋಚಿಕೊಂಡು ಭದ್ರವಾದ ಪೊಲೀಸ್ ಕಾವಲಿನಿಂದ ಬೆಳಗಾವಿಗೆ ರವಾನಿಸಿದರು ಮತ್ತು ಕೋಟೆಯಲ್ಲಿದ್ದ ತೋಪುಗಳನ್ನು ಮತ್ತು ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡರು.

ಭೋಟೋಸಿಂಗನನ್ನು ರಾಜದ್ರೋಹದ ಆರೋಪದ ಮೇಲೆ ವಿಚಾರಣೆಗೆ ಗುರಿಪಡಿಸಿದಾಗ ಅವನು ಜಮಖಂಡಿಯಲ್ಲಿ ನಡೆದ ಬ್ರಿಟಿಷ ವಿರೋಧ ಚಟುವಟಿಕೆಗಳನ್ನು ತಾನೆ ತನ್ನ ಹೊಣೆಗಾರಿಕೆಯಿಂದ ನಡೆಸಿದ್ದಾಗಿ ಹೇಳಿದನು. ಇದರಲ್ಲಿ ನಮ್ಮ ರಾಜರಾದ

ರಾಮಚಂದ್ರರಾವ್ ಅಪ್ಪಾಸಾಹೇಬರ ಪಾತ್ರವೇನೂ ಇಲ್ಲವೆಂದು ಗಟ್ಟಿಯಾಗಿ ಹೇಳಿದನು. ಇದರಿಂದ ರೊಚ್ಚಿಗೆದ್ದ ಮಿಲಿಟರಿ ಅಧಿಕಾರಿಯು ಭೋಟೋಸಿಂಗನಿಗೆ ಫಾಸಿ ಶಿಕ್ಷೆಯನ್ನು ವಿಧಿಸಿದನು. ನಂತರ ಭೋಟೋಸಿಂಗ್‌ನನ್ನು ತಂದು ಜಮಖಂಡಿ–ಜಂಬಗಿ ರಸ್ತೆಯ ಬಲ ಬದಿಗಿದ್ದ ಬೇವಿನ ಮರಕ್ಕೆ ಗಲ್ಲಿಗೇರಿಸಲಾಯಿತು. ಆ ಸ್ಥಳದಲ್ಲಿ ಅವನ ಸ್ಮಾರಕವಾಗಿ ಒಂದು ಕಟ್ಟಡವನ್ನು ಕಟ್ಟಿಸಲಾಗಿದೆ. ಹೀಗೆ ಧೀರನಾದ ಭಟ್ಟೋಸಿಂಗನು ಸಂಸ್ಥಾನದ ಉಳಿವಿಗಾಗಿ ಮತ್ತು ಒಡೆಯನ ರಕ್ಷಣೆಗಾಗಿ ತನ್ನ ಪ್ರಾಣವನ್ನೇ ಬಲಿದಾನಗೈದು ಹುತಾತ್ಮನಾದನು.

ಭೋಟಾಸಿಂಗನ ಜೊತೆಗಿದ್ದ ಇನ್ನೊರ್ವ ಸೈನಿಕ ಅಬಾ ದೇವಧರ ಎಂಬವನ ಬಗೆಗೆ ವಿಚಾರಣೆಯಾಗಿ ಅವನ ತಪ್ಪಿಗಾಗಿ ಅವನನ್ನು ಹದ್ದುಪಾರು ಮಾಡಲಾಯಿತಲ್ಲದೆ ಪುನಃ ಜಮಖಂಡಿಗೆ ಮರಳಿ ಬರಕೂಡದೆಂದು ಅಜ್ಞಾಪಿಸಲಾಯಿತು.

ರಾಮಚಂದ್ರರಾವ್ ಅಪ್ಪಾಸಾಹೇಬರನ್ನು ಕೆಲವು ದಿವಸಗಳವರೆಗೆ ಬೆಳಗಾವಿಯ ಕೋಟೆಯಲ್ಲಿರಿಸಲಾಗಿತ್ತು. ಮುಂದೆ ಅಲ್ಲಿಂದ ವೆಂಗುರ್ಲಾಕ್ಕೆ ವರ್ಗಾಯಿಸಲಾಯಿತು. ಇದೇ ವೇಳೆಗೆ ನರಗುಂದದ ಬಾಬಾ ಸಾಹೇಬನು ಆಂಗ್ಲರ ವಿರುದ್ಧ ಬಂಡೆಬ್ಬಿಸಿದ್ದನು. ಇದೇ ಕಾರಣದಿಂದ ಅಸಿಸ್ಟೆಂಟ್ ಪೊಲಿಟಿಕಲ್ ಎಜೆಂಟನಾದ ಮ್ಯಾನ್‌ಸನ್ನನನ್ನು ಸುರೇಬಾನದಲ್ಲಿ ಕೊಲೆಮಾಡಲಾಯಿತು. ನಂತರ ಹೋರಾಟದಲ್ಲಿ ತೊಡಗಿದ ಬಾಬಾ ಸಾಹೇಬನನ್ನು ಆಂಗ್ಲರು ಸೆರೆಹಿಡಿದು ಬೆಳಗಾವಿಯ ಜೈಲಿನಲ್ಲಿರಿಸಿ ವಿಚಾರಣೆಗೆ ಗುರಿಪಡಿಸಿ ಅವನಿಗೆ ಗಲ್ಲು ಶಿಕ್ಷೆಯನ್ನು ವಿಧಿಸಿದರು.

ಈ ಸಂದರ್ಭದಲ್ಲಿ ರಾಮಚಂದ್ರರಾವ್ ಅಪ್ಪಾಸಾಹೇಬರ ಮೇಲಿನ ಆರೋಪದ ವಿಚಾರಣೆಯನ್ನು ಮುಂದುಡಲಾಯಿತು. ಕಾರಣ ಕ್ರಿ.ಶ.೧೮೫೭ರ ಬಂಡಾಯದ ಪರಿಣಾಮವಾಗಿ ಭಾರತದಲ್ಲಿ ಬ್ರಿಟೀಷ್–ಈಸ್ಟ್–ಇಂಡಿಯಾ ಕಂಪನಿಯ ಆಳ್ವಿಕೆಯು ಕೊನೆಗೊಂಡು ದೇಶದ ಸಮಗ್ರ ಆಡಳಿತಾಧಿಕಾರವು ಇಂಗ್ಲೀಷರ (ಸಾರ್ವಭೌಮತ್ವದ) ಸೊತ್ತಾಯಿತು. ಕ್ರಿ.ಶ.೧೮೫೮ರಲ್ಲಿ ಇಂಗ್ಲೆಂಡದ ವಿಕ್ಟೋರಿಯಾ ಮಹಾರಾಣಿಯವರು ಭಾರತಕ್ಕೆ ಆಗಮಿಸಿ ಒಂದು ಘೋಷಣಾ ಪತ್ರವನ್ನು ಹೊರಡಿಸಿ ಇನ್ನು ಮೇಲೆ ಬ್ರಿಟಿಷ ಸರಕಾರವು ಭಾರತದ ಎಲ್ಲ ದೇಶಿ ಸಂಸ್ಥಾನಿಕರ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವದಲ್ಲದೆ ಅವರ ಒಳ ಆಡಳಿತದಲ್ಲಿ ಕೈಹಾಕುವದಿಲ್ಲವೆಂದು ಪ್ರಕಟಿಸಿದರು. ಅಲ್ಲದೆ ದೇಶಿ ಸಂಸ್ಥಾನಿಕರಿಗೆ ಯೋಗ್ಯವಾದ ನ್ಯಾಯ ಮತ್ತು ರಕ್ಷಣೆಯನ್ನು ಒದಗಿಸಲು ಭರವಸೆಯನ್ನಿತ್ತರು. ಈ ಘೋಷಣೆಯು ರಾಮಚಂದ್ರರಾವ್ ಅಪ್ಪಾಸಾಹೇಬರಿಗೆ ಒಂದು ವರವಾಗಿ ಪರಿಣಮಿಸಿತು.

ಇದೇ ಸಂದರ್ಭದಲ್ಲಿ ರಾಮಚಂದ್ರರಾವ್ ಅಪ್ಪಾಸಾಹೇಬರ ಮೇಲಿನ ಆರೋಪದ ವಿಚಾರಣೆಯು ನಡೆದು ಯಾವುದೇ ಅಧಿಕೃತ ಸಾಕ್ಷಿ ಪುರಾವೆಗಳಿಲ್ಲದ್ದರಿಂದ ಕ್ರಿ.ಶ.೧೮೫೯ರ ಜನೆವರಿ ೭ನೇ ತಾರೀಖಿನ ದಿವಸ ಅವರನ್ನು ನಿರ್ದೋಷಿಗಳೆಂದು ಬಿಡುಗಡೆ ಮಾಡಲಾಯಿತು. ಬ್ರಿಟಿಷ ಬಂಧನದಿಂದ ಬಿಡುಗಡೆಯಾಗಿ ಬಂದ ಮಹಾರಾಜರನ್ನು ಜಮಖಂಡಿಯ ಜನ ಬಹಳ ಸಂತೋಷದಿಂದ ಬರಮಾಡಿಕೊಂಡರು. ಇವರು ಕಾರಾಗೃಹದಲ್ಲಿದ್ದಾಗ ರಾಜ್ಯದ ಆಡಳಿತವನ್ನು ಶ್ರೀಮೋರೆಪಂತ ಮತ್ತು ಅಣ್ಣಾಸಾಹೇಬ ಅಂಬೇಕರ ಎಂಬವರು ನೋಡಿಕೊಳ್ಳುತ್ತಿದ್ದರು. ಅಂದು ಇಂಗ್ಲೀಷ ಅಧಿಕಾರಿ ಮ್ಯಾನ್‌ಸನ್ನನು ಜಮಖಂಡಿಯ ಕೋಟೆಯಲ್ಲಿದ್ದ ಸಂಪತ್ತನ್ನು ದೋಚಿಕೊಂಡು ಒಯ್ದುದ್ದನ್ನು ಅಪ್ಪಾಸಾಹೇಬರ ಬಿಡುಗಡೆಯೊಂದಿಗೆ ಪುನಃ ಅವರಿಗೆ ಮರಳಿ ಒಪ್ಪಿಸಿದರು. ಮುಂದೆ ಕ್ರಿ.ಶ.೧೮೫೯ ಏಪ್ರಿಲ್ ೧೭ರಂದು ಒಳ್ಳೆಯ ಶುಭ ದಿನವಿದ್ದರಿಂದ ಅಂದು

ರಾಮಚಂದ್ರರಾವ್ ಅಪ್ಪಾಸಾಹೇಬರು ಜಮಖಂಡಿಯ ಆಡಳಿತಾಧಿಕಾರವನ್ನು ಪುನಃ ವಹಿಸಿಕೊಂಡರು. ಅಂದು ಅವರು ಅನೇಕ ದಾನಧರ್ಮದ ಕಾರ್ಯಗಳನ್ನು ಮಾಡಿದರಲ್ಲದೆ ಅನೇಕ ಖೈದಿಗಳನ್ನು ಬಿಡುಗಡೆ ಮಾಡಿದರು.

ರಾಮಚಂದ್ರರಾವ್ ಅಪ್ಪಸಾಹೇಬರು ಬ್ರಿಟೀಷರ ಬಂಧನದಿಂದ ಬಿಡುಗಡೆಯಾಗಿ (ಕ್ರಿ.ಶ.೧೮೪೫ರಲ್ಲಿ) ಬಂದ ನಂತರ ಜಮಖಂಡಿಯಲ್ಲಿದ್ದ ತಮ್ಮ ಮೊದಲಿನ ಅರಮನೆಯನ್ನು (ಈಗಿನ ಉಪವಿಭಾಗಾಧಿಕಾರಿಗಳ ಕಚೇರಿ) ಬಿಟ್ಟು ಜಮಖಂಡಿಯ ಪಶ್ಚಿಮ ದಿಕ್ಕಿನಲ್ಲಿ ೧ ಮೈಲು ಅಂತರದ ಮೇಲಿರುವ "ರಾಮತೀರ್ಥ" ಎಂಬ ಪ್ರಾಚೀನ ದೇವಸ್ಥಾನದ ಹತ್ತಿರ ವಾಸಿಸಲು ನಿಶ್ಚಯಿಸಿ ಅಲ್ಲಿ ಒಂದು ಸುಂದರವಾದ ಅರಮನೆಯನ್ನು ಕಟ್ಟಿಸಿದರು. ಅದಕ್ಕಾಗಿ ಅಪಾರವಾದ ಹಣವನ್ನು ವ್ಯಯಮಾಡಿ ಅಲ್ಲಿಯ ಸಮಗ್ರ ಗುಡ್ಡವನ್ನೇ ಸಮಮಾಡಿ ಹಲವಾರು ಸುಂದರವಾದ ಕಟ್ಟಡಗಳನ್ನು ಕಟ್ಟಿಸಿದರು. ಇವರು ಅಂದು ಸುಮಾರು ೩೨ ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ರಾಮತೀರ್ಥದಲ್ಲಿ ಮ್ಯಾನ್‌ಸನ್ ಹಾಲ್, ದಿಲ್-ಖುಷ್-ಹಾಲ್, ವ್ಹಿಲ್ವರನೆಸ್ ಹಾಲ್ ಎಂಬ ಸುಂದರವಾದ ಕಟ್ಟಡಗಳನ್ನು ನಿರ್ಮಿಸಿದರು. ಅಲ್ಲದೆ ಪಾಕಶಾಲೆ, ಕಮಿಷನರೇಟ ಪಾಗಾ, ಗಜಶಾಲೆ, ಬಾವಿ, ಕೆರೆಗಳನ್ನು ಸಹ ಕಟ್ಟಿಸಿದರು. ತ್ರಿಪುರ ಸುಂದರಿ, ಹರಿಹರೇಶ್ವರ, ರಾಮೇಶ್ವರ, ಸರ್ವೇಶ್ವರ, ಮಾರುತಿ ಹಾಗೂ (ದುರ್ಗಾ ಭಾಗದಲ್ಲಿ) ದತ್ತಾತ್ರೇಯ ಮೊದಲಾದ ದೇವಾಲಯಗಳನ್ನು ಕಟ್ಟಿಸಿ ತಮ್ಮ ಹೊಸ ಅರಮನೆಯ ಸೌಂದರ್ಯವನ್ನು ಹೆಚ್ಚಿಸಿದರು[೧೦೬].

**ಆಡಳಿತದ ಸುಧಾರಣೆಗಳು**

ರಾಮಚಂದ್ರರಾವ್ ಅಪ್ಪಾಸಾಹೇಬರು ಒಳ್ಳೆಯ ಆಡಳಿತಗಾರರಾಗಿದ್ದರು. ಇವರು ಅಧಿಕಾರಕ್ಕೆ ಬಂದೊಡನೆ ಸಂಸ್ಥಾನದ ಹಳೆಯ ಪದ್ಧತಿಯ ಆಡಳಿತವನ್ನು ಬದಲಾಯಿಸಿ ಇಂಗ್ಲೀಷ್ ಮಾದರಿಯ ಹೊಸ ಆಡಳಿತವನ್ನು ಪ್ರಾರಂಭಿಸಿದರು. ಆರಂಭದಲ್ಲಿ ಜಮುಖಂಡಿ ಸಂಸ್ಥಾನದಲ್ಲಿ ಆರು ತಾಲೂಕುಗಳಿದ್ದವು. ಅವು (೧)ಜಮುಖಂಡಿ (೨)ಕುಲ್ಲಹಳ್ಳಿ (೩)ಬಿದರಿ (೪)ಹುಲಗಬಾಳಿ (೫)ಕುಂದಗೋಳ (೬)ಸಂಸಿ ಪ್ರತಿಯೊಂದು ತಾಲೂಕಿನಲ್ಲಿ 'ಮಾದುಲೇದಾರ'ನೆಂಬ ಕಂದಾಯದ ಅಧಿಕಾರಿ ಇರುತ್ತಿದ್ದನು. ಅಲ್ಲದೆ ಪೊಲೀಸ ಅಧಿಕಾರಿ ಮತ್ತು ಅವನ ಸಿಬ್ಬಂದಿ ಇರುತ್ತಿತ್ತು. ಕ್ರಮೇಣ ಆಡಳಿತದ ವೆಚ್ಚವು ಹೆಚ್ಚಾಗಿ ಕಾರ್ಯಭಾರವು ಕಡಿಮೆಯಾಗ ಹತ್ತಿದ್ದರಿಂದ ರಾಮಚಂದ್ರರಾವ್ ಅಪ್ಪಾಸಾಹೇಬರು ಇಡೀ ಸಂಸ್ಥಾನವನ್ನು ಮೂರು ತಾಲೂಕುಗಳಲ್ಲಿ ವಿಭಾಗಿಸಿದರು. ಅವು (೧)ಜಮುಖಂಡಿ (೨)ಬಿದರಿ (೩)ಕುಂದಗೋಳ.

ಪ್ರತಿ ತಾಲೂಕಿನಿಂದ ಬರುವ ಆದಾಯ ಮತ್ತು ವೆಚ್ಚದ ವಿವರಣೆಯ ವರದಿಯನ್ನು ಸರಕಾರಕ್ಕೆ ಒಪ್ಪಿಸುವ ವಿಧಾನವನ್ನು ಜಾರಿಯಲ್ಲಿ ತಂದರು. ಆಯಾ ತಾಲೂಕಿನ ಆಡಳಿತದ ಬಗೆಗೆ ಮೇಲಿಂದ ಮೇಲೆ ವರದಿಯನ್ನು ಸಲ್ಲಿಸುವ ಬ್ರಿಟೀಷ ಮಾದರಿಯ ಪದ್ಧತಿಯನ್ನು ಜಾರಿಯಲ್ಲಿ ತಂದರು. ಕಂದಾಯ ಆಡಳಿತದಲ್ಲಾಗುವ ರಾಜ್ಯದ ಆದಾಯವು ಹೆಚ್ಚಿತ್ತು. ಆದ್ದರಿಂದ ನಿಸರ್ಗ ವಿಕೋಪ ಪರಿಹಾರ ಧನವನ್ನು ಸಂಗ್ರಹಿಸಿ ರಾಜ್ಯದಲ್ಲಿ ಮಹಾಪೂರ, ಬರಗಾಲದಂತಹ ವಿಕೋಪಗಳು ಸಂಭವಿಸಿದಾಗ ಪ್ರಜೆಗಳಿಗೆ ಧನ ಸಹಾಯ ಮಾಡುತ್ತಿದ್ದರು. ಇವರೇ ಮೊಟ್ಟಮೊದಲಿಗೆ ಜಮಖಂಡಿ ಸಂಸ್ಥಾನದಲ್ಲಿ ಬ್ರಿಟೀಷ ಮಾದರಿಯ ಆಡಳಿತವನ್ನು ಪ್ರಾರಂಭಿಸಿದರು. ಅಲ್ಲದೆ ಬ್ರಿಟೀಷ ಕ್ರಿಮಿನಲ್ ಕೋಡ್ ಮತ್ತು ಸಿವಿಲ್ ಕೋಡ್‌ಗಳೆಂಬ ಎರಡು ಬಗೆಯ ಕಾನೂನುಗಳನ್ನು ಜಾರಿಯಲ್ಲಿ ತಂದರು. ಇವರ ಕಾಲದಲ್ಲಿದ್ದ ಆಡಳಿತದ

ಅಚ್ಚುಕಟ್ಟುತನವನ್ನು ಪ್ರತ್ಯಕ್ಷ ಕಂಡ ಬ್ರಿಟೀಷ ಅಧಿಕಾರಿಗಳು (ಪೊಲಟಿಕಲ್ ಏಜೆಂಟರು) ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಬಾಂಬೆ ಹೆಜೆಟಿಯರ ಮತ್ತು "ಟಾಯಿಮ್ಸ ಆಫ್ ಇಂಡಿಯಾ" ಪತ್ರಿಕೆಗಳು ಸಹ ವರ್ಣಿಸಿದ್ದುಂಟು.

ರಾಮಚಂದ್ರರಾವ್ ಅಪ್ಪಾಸಾಹೇಬರು ಬಹುಕಾಲ ರಾಜ್ಯವಾಳಿದರು. ಇವರ ಆಳ್ವಿಕೆಯು ಜನಪ್ರಿಯವಾಗಿತ್ತು. ಇವರು ನಿಜವಾಗಿಯೂ ಪ್ರಜೆಗಳ ತಂದೆಯಾಗಿದ್ದರು. ಎಲ್ಲ ಪ್ರಜೆಗಳನ್ನು ಸರಿ–ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು. 'ಕಾರ್ಲಾಯಿಲ್'ನು ವರ್ಣಿಸಿದ ಪ್ರೊಫೆಟ್ ಕಿಂಗನಂತಿದ್ದರು. ಜಮಖಂಡಿ ಸಂಸ್ಥಾನದ ಸರ್ವತೋಮುಖ ಏಳ್ಗೆಯನ್ನು ಸಾಧಿಸಿದ ಶ್ರೇಯಸ್ಸು ಇವರದು. ಬ್ರಿಟೀಷ ಆಡಳಿತದಲ್ಲಿಯ ಇಲಾಖೆಗಳನ್ನು ತಮ್ಮ ರಾಜ್ಯದಲ್ಲಿ ಸ್ಥಾಪಿಸಿ ಅವುಗಳು ಕಾರ್ಯನಿರ್ವಹಿಸುವಂತೆ ಮಾಡಿದ್ದರು. ಇವರು ಶಿಕ್ಷಣ ಪ್ರೇಮಿಗಳಾಗಿದ್ದು ತಮ್ಮ ಪ್ರಜೆಗಳಿಗೆ ಇಂಗ್ಲೀಷ ಶಿಕ್ಷಣವನ್ನು ಕೊಡುವ ಉದ್ದೇಶದಿಂದ ತಮ್ಮ ಮುತ್ತಜ್ಜರ ಹೆಸರಿನಿಂದ ಕ್ರಿ.ಶ.೧೮೮೮ರಲ್ಲಿ ಜಮಖಂಡಿಯಲ್ಲಿ ಪಿ.ಬಿ. ಹೈಸ್ಕೂಲನ್ನು ಸ್ಥಾಪಿಸಿದರು. ಇದೇ ಪಿ.ಬಿ.ಹೈಸ್ಕೂಲ ಇಂದು ಶತಸಂವತ್ಸರವನ್ನು ಕಂಡ ಶಿಕ್ಷಣ ಸಂಸ್ಥೆಯಾಗಿ ತಲೆ ಎತ್ತಿ ನಿಂತಿದೆ. ಇವರು ತಮ್ಮ ಕಾಲದಲ್ಲಿ ಎಲ್ಲ ವಿದ್ಯಾರ್ಥಿಗಳಿಗೆ ಉಚಿತವಾದ ಶಿಕ್ಷಣವನ್ನು ನೀಡುವ ವ್ಯವಸ್ಥೆಯನ್ನು ಮಾಡಿದ್ದರಲ್ಲದೆ ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿಯ ವ್ಯವಸ್ಥೆಯನ್ನು ಮಾಡಿದ್ದರು. ಈ ಬಗೆಯ ಶಿಕ್ಷಣ, ಶೈಕ್ಷಣಿಕ ಸೌಲಭ್ಯವು ಆ ಕಾಲದಲ್ಲಿ ಯಾವ ದಕ್ಷಿಣದ ಸಂಸ್ಥಾನಗಳಲ್ಲಾಗಲೀ ಅಥವಾ ಬ್ರಿಟೀಷ ಪ್ರದೇಶಗಳಲ್ಲಾಗಲಿ ದೊರೆಯುತ್ತಿರಲಿಲ್ಲ. ಆದ್ದರಿಂದ ಜಮಖಂಡಿಯ ನೆರೆಯ ಸಂಸ್ಥಾನಗಳಿಂದ ಅನೇಕ ವಿದ್ಯಾರ್ಥಿಗಳು ಇಲ್ಲಿಗೆ ಆಗಮಿಸಿ ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದರು.

ರಾಮಚಂದ್ರರಾವ್ ಅಪ್ಪಾಸಾಹೇಬರು ತಮ್ಮ ಪ್ರಜೆಗಳಿಗಾಗಿ ಅಲೋಪಥಿಕ್ ಮತ್ತು ಮೈಲಿ ಬೇನೆಯ ನಿವಾರಣೆಗಾಗಿ ಕ್ರಿ.ಶ.೧೮೯೧ರಲ್ಲಿ ಒಂದು ಆಸ್ಪತ್ರೆಯನ್ನು ಸ್ಥಾಪಿಸಿ ಎಲ್ಲ ಬಗೆಯ ಔಷಧೋಪಚಾರದ ವ್ಯವಸ್ಥೆಯನ್ನು ಮಾಡಿದರು. ವಿವಿಧ ಬಗೆಯ ರೋಗ–ರುಜಿಗಳನ್ನು ಪರೀಕ್ಷಿಸಿ ಉಪಚರಿಸಲು ಯೋಗ್ಯರಾದ ವೈದ್ಯಾಧಿಕಾರಿಗಳನ್ನು ನೇಮಿಸಿದರು. ಹೀಗೆ ಸುಸಜ್ಜಿತವಾಗಿ ಸ್ಥಾಪಿಸಲ್ಪಟ್ಟ ಆಸ್ಪತ್ರೆಗೆ **"ಪ್ರಿನ್ಸ್ ಆಫ್ ವೆಲ್ಸ ಆಸ್ಪತ್ರೆ"** ಎಂದು ಕರೆಯುತ್ತಿದ್ದರು. ಇದೇ ಜಮಖಂಡಿಯಲ್ಲಿದ್ದ ಇಂದಿನ ಸರಕಾರಿ ಆಸ್ಪತ್ರೆ.

ರಾಮಚಂದ್ರರಾವ್ ಅಪ್ಪಾಸಾಹೇಬರು ತಮ್ಮ ಆಳಿಕೆಯಲ್ಲಿ ಅನೇಕ ಲೋಕೋಪಯೋಗಿ ಕಟ್ಟಡಗಳನ್ನು ಕಟ್ಟಿಸಿದರು. ಸಾರ್ವಜನಿಕರಿಗೆ ನೀರಿನ ಸೌಕರ್ಯವನ್ನು ಒದಗಿಸಿಕೊಟ್ಟರು. ಕ್ರಿ.ಶ.೧೮೭೪ರಲ್ಲಿ **"ಕಟ್ಟಿಕೆರೆ"** (ಮುಧೋಳ ರಸ್ತೆ ಹತ್ತಿರ) ಮತ್ತು **"ಲಕ್ಕಮ"** ಕೆರೆಗಳು ಎಂಬ ಎರಡು ಕೆರೆಗಳನ್ನು ಕಟ್ಟಿಸಿದರು. ಅಲ್ಲದೆ ಸಕಲ ಸೌಲಭ್ಯಗಳನ್ನೊಳಗೊಂಡ ಸುಂದರವಾದ ಅತಿಥಿಗೃಹವನ್ನು ಕಟ್ಟಿಸಿದರು. (ಇದೇ ಇಂದಿನ ರಮಾನಿವಾಸ) ಇಂದಿನ ಪಿ.ಬಿ. ಹೈಸ್ಕೂಲಿನ ಭವ್ಯವಾದ ಕಟ್ಟಡವನ್ನು ಇವರೇ ಕಟ್ಟಿಸಿದರು. ಇವರು ರಾಮತೀರ್ಥದಲ್ಲಿ ಒಂದು ಗ್ರಂಥಾಲಯವನ್ನು ಸ್ಥಾಪಿಸಿದರು. ವಿವಿಧ ವಿಷಯಗಳನ್ನೊಳಗೊಂಡ ಅನೇಕ ಮಹತ್ವದ ಗ್ರಂಥಗಳನ್ನು ಅಚ್ಚು ಹಾಕಿಸುವದಕ್ಕಾಗಿ ಶಿಲೆಯ ಮತ್ತು ಕಬ್ಬಿಣದ ಲಿಪಿಯ ಮೊಳೆಗಳನ್ನು ಉಪಯೋಗಿಸುವ ಕಾರ್ಯವನ್ನು ಪ್ರಾರಂಭಿಸಿದರು. ಇವರು **"ಪರಶು"** ಎಂಬ ವಾರ ಪತ್ರಿಕೆಯನ್ನು ಹೊರಡಿಸುತ್ತಿದ್ದರು. ಇವರ ಕಾಲದಲ್ಲಿಯೇ ಕ್ರಿ.ಶ.೧೮೭೬ರಲ್ಲಿ ಜಮಖಂಡಿಯ ನಗರಪಾಲಿಕೆಯು ಸ್ಥಾಪನೆಯಾಯಿತು. ಅದರಂತೆ ಕುಂದಗೋಳ, ಬನಹಟ್ಟಿ ಸಂಸಿಯಲ್ಲಿ ನಗರ ಪಾಲಿಕೆಗಳನ್ನು ಸ್ಥಾಪಿಸಿದರು. (ಕ್ರಿ.ಶ.೧೮೭೬–೭೭ರಲ್ಲಿ).

ಕ್ರಿ.ಶ.೧೮೮೨ರಲ್ಲಿ ಜಮಖಂಡಿಯಲ್ಲಿ **"ಅಮರಾಯಿ"** ದನಗಳ ಜಾತ್ರೆಯನ್ನು ರಾಮಚಂದ್ರರಾವ್ ಅಪ್ಪಾಸಾಹೇಬರೇ ಪ್ರಾರಂಭಿಸಿದರು. ಜಾತ್ರೆಯಲ್ಲಿ ವಿವಿಧ ಜಾತಿಯ ಉತ್ತಮ ದನಗಳ ಪ್ರದರ್ಶನವು ನಡೆಯುತ್ತಿತ್ತು. ಅದರಲ್ಲಿ ಉತ್ತಮ ತಳಿಯ ದನಗಳಿಗೆ ಯೋಗ್ಯವಾದ ಬಹುಮಾನ ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಈ ಜಾತ್ರೆಯಲ್ಲಿ ಬಲಿಷ್ಠ (ಹೋರಿ) ಎತ್ತುಗಳಿಂದ ಉಸುಕಿನ ಚೀಲಗಳನ್ನು ಜಗ್ಗಿಸುವದು, ನೇಗಿಲ ಹೊಡೆಯುವದು ಮತ್ತು ಎತ್ತಿನ ಗಾಡಿಗಳನ್ನು ಓಡಿಸುವ ಸ್ಪರ್ಧೆಗಳು ನಡೆಯುತ್ತಿದ್ದವು. ವಿಜೇತರಾದವರಿಗೆ ಮಹಾರಾಜರು ಯೋಗ್ಯವಾದ ಬಹುಮಾನ ಕೊಟ್ಟು ಗೌರವಿಸುತ್ತಿದ್ದರು. ಅಂದು ಪ್ರಾರಂಭವಾದ ಜಮಖಂಡಿಯ ಅಮರಾಯಿ ದನಗಳ ಜಾತ್ರೆಯು ಇಂದಿಗೂ ನಡೆಯುತ್ತದೆ.

ರಾಮಚಂದ್ರರಾವ್ ಅಪ್ಪಾಸಾಹೇಬರು ಕಲಾಪ್ರೇಮಿಗಳಾಗಿದ್ದು ತಮ್ಮ ಕಾಲದಲ್ಲಿ ರಾಮತೀರ್ಥದಲ್ಲಿ ಒಂದು ಸುಂದರವಾದ ವಸ್ತು ಸಂಗ್ರಾಲಯವನ್ನು ಕಟ್ಟಿಸಿ ಅಲ್ಲಿ ಅನೇಕ ಪ್ರಕಾರದ ಕಲಾತ್ಮಕವಾದ ವಿಗ್ರಹಗಳನ್ನು ಪ್ರಾಚ್ಯವಸ್ತುಗಳನ್ನು ಸಂಗ್ರಹಿಸಿದ್ದರು. ಅಲ್ಲದೆ ಪ್ರಾಚೀನ ಗ್ರಂಥಗಳನ್ನು ಮತ್ತು ನಾಣ್ಯಗಳನ್ನು ಕೂಡಹಾಕಿದ್ದರು.

ಹೀಗೆ ಇವರ ಕಾಲದಲ್ಲಿ ಜಮಖಂಡಿ ಸಂಸ್ಥಾನವು ಸರ್ವತೋಮುಖವಾದ ಅಭಿವೃದ್ಧಿಯನ್ನು ಹೊಂದಿತ್ತು. ಸಂಸ್ಥಾನದ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿತ್ತು. ಆದ್ದರಿಂದ ಇವರು ಉದಾರ ಮನಸ್ಸಿನಿಂದ ಅನೇಕ ಧಾರ್ಮಿಕ ಸಾಮಾಜಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳಿಗೆ ದತ್ತಿ-ದಾನಗಳನ್ನು ಕೊಟ್ಟಿದ್ದುಂಟು. ಹೀಗಾಗಿ ಇವರು ಇಡೀ ದಕ್ಷಿಣ ಭಾರತದ ಸಂಸ್ಥಾನಿಕರಲ್ಲಿಯೇ ಅತ್ಯಂತ ಜನಪ್ರಿಯ ಆಡಳಿತಗಾರರು ಪ್ರಜಾರಂಜಕರು ಎಂದು ಖ್ಯಾತಿವೆತ್ತಿದ್ದರು.

ರಾಮಚಂದ್ರರಾವ್ ಅಪ್ಪಾಸಾಹೇಬರಿಗೆ ಸಂತಾನವಿಲ್ಲದ್ದರಿಂದ ತಾಸಗಾಂವ ಮನೆತನದ ಪುತ್ರನನ್ನು ೧೫-೧೨-೧೮೯೬ರಂದು ದತ್ತಕ ತೆಗೆದುಕೊಂಡು ಅವನಿಗೆ **"ಪರಶುರಾಮ ಭಾವು ಸಾಹೇಬ"** ಎಂದು ನಾಮಕರಣ ಮಾಡಿದರು. ರಾಮಚಂದ್ರರಾವ್ ಅಪ್ಪಾಸಾಹೇಬರು ಕ್ರಿ.ಶ.೧೮೯೭ ರಲ್ಲಿ ನಿಧನ ಹೊಂದಿದರು. ಆಗ ಅವರ ದತ್ತಕ ಪುತ್ರನಾದ ಪರಶುರಾಮಭಾವು ಅವರು ಅಲ್ಪವಯಿ ಆಗಿದ್ದರಿಂದ ಸಂಸ್ಥಾನದ ಆಡಳಿತವನ್ನು ಇಂಗ್ಲೀಷರ ವತಿಯಿಂದ ಶ್ರೀಬಾಲಕೃಷ್ಣ ನಾರಾಯಣ ವೈದ್ಯ ಎಂಬುವರು ನೋಡಿಕೊಳ್ಳುತ್ತಿದ್ದರು. ಪರಶುರಾಮ ಭಾವು ಅವರು ತಮ್ಮ ಶಿಕ್ಷಣವನ್ನು ಕೊಲ್ಲಾಪುರದಲ್ಲಿ ಮುಗಿಸಿ ಕ್ರಿ.ಶ.೧೮೫೪-೧೯೦೩ (೧೯೦೩)ರಲ್ಲಿ ಅಧಿಕಾರಕ್ಕೆ ಬಂದರು. ಅಲ್ಲದೆ ಇವರು ೪೪ ವರುಷಗಳವರೆಗೆ ಜಮಖಂಡಿ ಸಂಸ್ಥಾನವನ್ನು ಸುವ್ಯವಸ್ಥಿತವಾಗಿ ಆಳಿದರು. ಇವರು ಕಾಲದಲ್ಲಿ ರಾಜ್ಯದ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿತ್ತು. ಪ್ರಜೆಗಳು ಸೌಖ್ಯದಿಂದ ಇದ್ದರು. ಇವರು ಜನರ ಕಲ್ಯಾಣಕ್ಕಾಗಿ ಅನೇಕ ಪ್ರಗತಿಪರವಾದ ಸುಧಾರಣೆಗಳನ್ನು ಕೈಕೊಂಡರು. ಜಮಖಂಡಿ ನಗರ ನಿರ್ಮಾಣದ ನೀಲ ನಕ್ಷೆಯನ್ನು ತಯಾರಿಸಿ ಅದರಂತೆ ನಗರವನ್ನು ನಿರ್ಮಿಸಿದರು. ಇವರೇ ಆಧುನಿಕ ಜಮಖಂಡಿಯ ಪ್ರಗತಿಗೆ ಅಸ್ತಿಭಾರವನ್ನು ಹಾಕಿದರು.

ಇವರು ಒಳ್ಳೆಯ ಆಡಳಿತಗಾರರಾಗಿದ್ದರು. ಪ್ರಪ್ರಥಮವಾಗಿ ಆಂಗ್ಲ ಮಾದರಿಯ ಆಡಳಿತವನ್ನು ತಮ್ಮ ಸಂಸ್ಥಾನದಲ್ಲಿ ಅನುಸರಿಸಿದರು. ಇವರು ಶಿಕ್ಷಣ ಪ್ರೇಮಿಗಳಾಗಿದ್ದರು. ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಬಡ ಹಾಗೂ ಹಿಂದುಳಿದ ವಿದ್ಯಾರ್ಥಿಗಳಿಗಾಗಿ ಪುಕ್ಕಟೆಯಾದ ಶಿಕ್ಷಣವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದರು. ಅಲ್ಲದೆ ವಯಸ್ಕರಿಗಾಗಿ ರಾತ್ರಿ ಶಾಲೆಯನ್ನು ಸ್ಥಾಪಿಸಿದ್ದರು.

ಇವರು ಕಲಾ ಪೋಷಕರು, ಸಾಹಿತ್ಯಾಭಿರುಚಿಯುಳ್ಳವರೂ ಆಗಿದ್ದು, ಅನೇಕ ಕಲಾತ್ಮಕವಾದ ಕಟ್ಟಡಗಳನ್ನು ಕಟ್ಟಿಸಿದ್ದರಲ್ಲದೆ, ವಿವಿಧ ವಿಷಯಗಳನ್ನೊಳಗೊಂಡ ಅಮೂಲ್ಯವಾದ ಗ್ರಂಥಾಲಯವನ್ನು ಸ್ಥಾಪಿಸಿದರು. ಪ್ರಜೆಗಳ ಅನುಕೂಲಕ್ಕಾಗಿ ಅನೇಕ ಕೆರೆ-ಬಾವಿಗಳನ್ನು ಕಟ್ಟಿಸಿದರು. ಅಂದು ಇವರು ನಿರ್ಮಿಸಿದ ಕೆರೆ-ಬಾವಿಗಳು ಇಂದಿಗೂ ಜಮಖಂಡಿಯ ನಾಗರಿಕರಿಗೆ ಉಪಯುಕ್ತವಾಗಿವೆ.

ಇವರು ಧಾರ್ಮಿಕ ಮನೋಭಾವನೆಯುಳ್ಳವರಾಗಿದ್ದು ದಿನ-ನಿತ್ಯ ದೇವರ ನಾಮಸ್ಮರಣೆಯನ್ನು ತಪ್ಪದೇ ಮಾಡುತ್ತಿದ್ದರು. ಅವರಿಗೆ ದೈವೀ ಕೃಪೆಯಿತ್ತು. ಕ್ರಿ.ಶ.೧೮೫೭ರ ಬಂಡಾಯದ (ಅಪಾದನೆಯಿಂದ) ಆರೋಪದಿಂದ ಮುಕ್ತರಾಗಿ ಬಂದ ಮೇಲೆ ಇವರು ತಮ್ಮ ಮೊದಲಿನ ಅರಮನೆಯನ್ನು ಬಿಟ್ಟು ರಾಮತೀರ್ಥದಲ್ಲಿದ್ದ ರಾಮೇಶ್ವರನ ಸನ್ನಿಧಾನದಲ್ಲಿ ತಮ್ಮ ಅರಮನೆಯನ್ನು ಕಟ್ಟಿಸಿದರು. ಅಲ್ಲಿ ಇವರು ನಿತ್ಯ ರಾಮೇಶ್ವರನನ್ನು ಅತ್ಯಂತ ಭಕ್ತಿಯಿಂದ ಆರಾಧಿಸುತ್ತಿದ್ದರಿಂದ ಇವರಿಗೆ ರಾಮೇಶ್ವರನ ಕೃಪಾಶೀರ್ವಾದವಿತ್ತು. ಅಂತೆಯೇ ಇವರು ಕೊಟ್ಟ ತೀರ್ಥಪ್ರಸಾದದಿಂದ ಅನೇಕ ತಾಯಂದಿರು ಪ್ರಸೂತಿ ವೇದನೆಯಿಂದ ಮುಕ್ತರಾಗಿ, ಸುಸೂತ್ರವಾಗಿ ಮಕ್ಕಳಿಗೆ ಜನ್ಮ ನೀಡುತ್ತಿದ್ದರು. ಅದರಂತೆ ಶ್ರೇಷ್ಠ ತತ್ವಜ್ಞಾನಿಗಳಾದ ಗುರುದೇವ ರಾಮಭಾವು ರಾನಡೆಯವರ ತಾಯಿ ಪಾರ್ವತಮ್ಮನವರು ಇವರ (ರಾಮನ) ಪ್ರಸೂತಿಯ ಸಮಯದಲ್ಲಿ ತುಂಬ ಬೇನೆ ತಿಂದಳು. ಆದರೂ ಬೇಗನೆ ಹೆರಿಗೆಯಾಗಲಿಲ್ಲ. ಮನೆತವರೆಲ್ಲರೂ ಚಿಂತಾಕ್ರಾಂತರಾದರು ಆಗ ರಾನಡೆಯವರ ಮನೆಯಲ್ಲಿದ್ದ ವೃದ್ಧ ಸೇವಕನಾದ ಕೃಷ್ಣಪ್ಪನವರು ರಾಮತೀರ್ಥಕ್ಕೆ ಹೋಗಿ ರಾಮಚಂದ್ರರಾವ್ ಅಪ್ಪಾಸಾಹೇಬರು ಕೊಟ್ಟ ರಾಮೇಶ್ವರ ಪೂಜಾ ತೀರ್ಥವನ್ನು ತಂದು ಪಾರ್ವತಮ್ಮನವರಿಗೆ ಕೊಡಲಾಗಿ ಸುಖದಿಂದ ಹೆರಿಗೆಯಾಯಿತು. ಹೀಗೆ ಕ್ರಿ.ಶ.೧೮೮೬ರ ಜುಲೈ ೩ ರಂದು ಬಾಲ ರಾಮನು ಜನಿಸಿದನು. ಶ್ರೀ ರಾಮೇಶ್ವರನ ಕೃಪಾಶೀರ್ವಾದದಿಂದ ಜನಿಸಿದ ಬಾಲಕನಿಗೆ ರಾಮಚಂದ್ರರಾವ್ ಅಪ್ಪಾಸಾಹೇಬರ ಸೂಚನೆಯ ಮೇರೆಗೆ **"ರಾಮಚಂದ್ರ"** ಎಂಬ ಹೆಸರನ್ನಿಡಲಾಯಿತು. ಮುಂದೆ ಇದೇ ರಾಮಚಂದ್ರನೇ ಜಗತ್ಪ್ರಸಿದ್ಧ ತತ್ವಜ್ಞಾನಿ ಗುರುದೇವ ಆರ್.ಡಿ. ರಾನಡೆ ಎಂದು ಕೀರ್ತಿ ಭಾಜನಾದನು.

ರಾಮಚಂದ್ರರಾವ್ ಅಪ್ಪಾಸಾಹೇಬರಿಗೆ ದೇವರಲ್ಲಿ ಅಪಾರವಾದ ನಂಬಿಕೆಯಿತ್ತು. ಕ್ರಿ.ಶ.೧೮೫೭ ರ ಬಂಡಾಯದ ಅಪಾದನೆಯ ಮೇರೆಗೆ ಇವರನ್ನು ಸೆರೆಹಿಡಿದುಕೊಂಡು ಬೆಳಗಾವಿಗೆ ಕರೆದೊಯ್ಯುವಾಗ ಜಮಖಂಡಿ ತಾಲೂಕಿನ ನಾವಲಗಿ ಗ್ರಾಮದ ಮೇಲೆ ಹಾಯ್ದು ಹೊರಟರು. ಆ ಊರ ಸಮೀಪಕ್ಕೆ ಹೋದ ಕೂಡಲೇ ಅಲ್ಲಿಯ ಮಾರುತಿ ದೇವರ ದರ್ಶನ ಪಡೆದುಕೊಂಡು ಬರುತ್ತೇನೆಂದು ಹೇಳಿ ದೇವಸ್ಥಾನದಲ್ಲಿ ಪ್ರವೇಶಿಸಿ ಮಾರುತಿಯ ಮುಂದೆ ಕೈಜೋಡಿಸಿ ನಿಂತು ದೇವಾ **"ಈ ಸಂಕಟದಿಂದ ನನ್ನನ್ನು ಪಾರುಮಾಡು ನಾ ನಿನ್ನ ದೇವಾಲಯದಲ್ಲಿ ಸದಾ ನಂದಾದೀಪವು ಬೆಳಗುವ ವ್ಯವಸ್ಥೆಯನ್ನು ಮಾಡುತ್ತೇನೆಂದು ಮೊರೆಯಿಟ್ಟು ಬೇಡಿಕೊಂಡರಂತೆ"**. ಮುಂದೆ ಇವರ ಸಂಕಲ್ಪದಂತೆ ಮಾರುತಿಯ ಅನುಗ್ರಹದಿಂದ ಕ್ರಿ.ಶ.೧೮೫೯ರಂದು ನಿರ್ದೋಷಿಯೆಂದು ಬಿಡುಗಡೆ ಹೊಂದಿ ಜಮಖಂಡಿಗೆ ಬಂದು ಅಧಿಕಾರವನ್ನು ವಹಿಸಿಕೊಂಡರು. ಅಂದಿನಿಂದ ನಾವಲಗಿ ಗ್ರಾಮದ ಮಾರುತಿ ದೇವಸ್ಥಾನದಲ್ಲಿ ಬೆಳಗುವ ನಂದಾದೀಪಕ್ಕೆ ತಗಲುವ ತೈಲದ ವೆಚ್ಚವನ್ನು ಭರಿಸಹತ್ತಿದ್ದರು. ಅಲ್ಲದೆ ಪ್ರತಿ ವರುಷ ಜರುಗುವ ಮಾರುತಿಯ ಕಾರ್ತೀಕೋತ್ಸವದ ದಿನ ಬ್ರಾಹ್ಮಣರಿಗೆ ಸಮಾರಾಧನೆಯನ್ನು ಇವರೇ

ಏರ್ಪಡಿಸುತ್ತಿದ್ದರು. ಅಂದು ತಾವು ಸಹ ಪರಿವಾರದೊಂದಿಗೆ ಬಂದು ಈ ಮಾರುತಿಗೆ ವಿಶೇಷ ಪೂಜೆ ಸಲ್ಲಿಸುತ್ತಿದ್ದರು.

**೬. ಕ್ಯಾಪ್ಟನ್ ಸರ್ (೨ನೇ) ಪರಶುರಾಮ ಭಾವು ಪಟವರ್ಧನರು (ಕ್ರಿ.ಶ.೧೯೦೪-೧೯೨೪)**

ರಾಮಚಂದ್ರರಾವ್ ಅಪ್ಪಾಸಾಹೇಬರಿಗೆ ಗಂಡು ಸಂತಾನವಿಲ್ಲದ್ದರಿಂದ ಕ್ರಿ.ಶ.೧೮೯೬ರಲ್ಲಿ ರಾಣಿಸಾಹೇಬರಾದ ಶ್ರೀಮತಿ ಸೀತಾಬಾಯಿಯವರ ಸದಿಚ್ಛೆಯ ಮೇರೆಗೆ ಇವರ ಸಂಬಂಧಿಕರಾದ (ಚಿಂಚಣಿಕರ ಪಟವರ್ಧನ ಮನೆತನದ) ಕೃಷ್ಣರಾವ ಮತ್ತು ಗೋಧುಬಾಯಿ ದಂಪತಿಗಳ ಉದರದಲ್ಲಿ ಕ್ರಿ.ಶ.೧೮೮೩ರ ಮೇ ತಿಂಗಳ ೧೧ರಂದು ಜನಿಸಿದ ಮಹಾದೇವ ಉರ್ಫ್ ಮಾಧವ ಉರ್ಫ್ ದಾಜಿಸಾಹೇಬ ಎಂಬ ಪುತ್ರನನ್ನು ದತ್ತಕ ತೆಗೆದುಕೊಂಡು ಅವನಿಗೆ **"ಪರಶುರಾಮ ಭಾವು"** ಎಂದು ಮರುನಾಮಕರಣ ಮಾಡಿದರು. ಆಗ ಪರಶುರಾಮ ಭಾವು ಕೇವಲ ೧೪ ವರ್ಷದ ಬಾಲಕನಾಗಿದ್ದನು. ಸಂಪ್ರದಾಯದಂತೆ ಯುವರಾಜನಿಗೆ ಉಚಿತವಾದ ಶಿಕ್ಷಣ ಮತ್ತು ಆಡಳಿತ ತರಬೇತಿಯನ್ನು ಕೊಡಿಸಲಾಯಿತು. ಕ್ರಿ.ಶ.೧೯೦೨ರಲ್ಲಿ ಇವರು ಪ್ರವಾಸ ಕೈಕೊಂಡು ಭಾರತದಲ್ಲಿಯ ಪ್ರಸಿದ್ಧ ಐತಿಹಾಸಿಕ ಹಾಗೂ ಧಾರ್ಮಿಕ ಸ್ಥಳಗಳಿಗೆ ಭೇಟಿ ನೀಡಿದರು ಅಲ್ಲದೆ ದೇಶದ ನಾನಾ ಭಾಗಗಳಿಗೆ ಸಂಚರಿಸಿ ಅಲ್ಲಿಯ ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಿತಿಗತಿಗಳನ್ನು ಅರಿತುಕೊಂಡರು. ಹೀಗೆ ಇವರು ಸಿಂಹಾಸನಕ್ಕೆ ಬರುವ ಪೂರ್ವದಲ್ಲಿಯೇ ಅವಶ್ಯಕವಾದ ಶಿಕ್ಷಣ ಹಾಗೂ ತರಬೇತಿಯನ್ನು ಪಡೆದುಕೊಂಡವರಾಗಿದ್ದರು.

ರಾಮಚಂದ್ರರಾವ್ ಅಪ್ಪಾಸಾಹೇಬರು ಕ್ರಿ.ಶ.೧೮೯೬ರಲ್ಲಿ ಮರಣ ಹೊಂದಿದರು. ಆಗ ಅವರ ದತ್ತಕ ಪುತ್ರರಾದ ಪರಶುರಾಮ ಭಾವು ಅವರು ಅಲ್ಪವಯಿ ಆಗಿದ್ದರಿಂದ ಸಂಸ್ಥಾನದ ಆಡಳಿತವನ್ನು ಇಂಗ್ಲೀಷರ ವತಿಯಿಂದ ಶ್ರೀಬಾಲಕೃಷ್ಣ ನಾರಾಯಣ ವೈದ್ಯ ಎಂಬುವರು ನೋಡಿಕೊಳ್ಳುತ್ತಿದ್ದರು. ಮುಂದೆ ಪರಶುರಾಮ ಭಾವು ಅವರು ಪ್ರಭುದ್ಧರಾದ ಮೇಲೆ ಕ್ರಿ.ಶ.೪-೬-೧೯೦೪ರಂದು ಬ್ರಿಟಿಷ ಸರಕಾರವು ಇವರಿಗೆ ಜಮಖಂಡಿ ಸಂಸ್ಥಾನದ ಆಡಳಿತಾಧಿಕಾರವನ್ನು ಒಪ್ಪಿಸಿತು.

ಪರಶುರಾಮ ಭಾವು ಅವರು ಕ್ರಿ.ಶ.೧೯೦೦ರಲ್ಲಿ ಕೊಲ್ಲಾಪುರದಲ್ಲಿ ಆಡಳಿತ ತರಬೇತಿಯನ್ನು ಪಡೆದುಕೊಳ್ಳುವ ಸಮಯದಲ್ಲಿ ತಾಳಿಕೋಟೆಯ ಸರ್ದಾರ ಶ್ರೀ ಬಾಳಾಸಾಹೇಬ ರಾಸ್ತೆ ಎಂಬುವರ ಮಗಳನ್ನು ಇವರಿಗೆ ವಿವಾಹ ಮಾಡಲು ನಿಶ್ಚಯಿಸಿದರು. ವಧುವಿಗೆ ರಮಾಬಾಯಿ ಸಾಹೇಬ ಎಂದು ಹೆಸರಿಸಿದರು. ಇವರ ವಿವಾಹದ ಸಮಾರಂಭವು ಜಮಖಂಡಿಯಲ್ಲಿ ಅತ್ಯಂತ ವೈಭವದಿಂದ ನೆರವೇರಿತು. ಮುಂದೆ ಕ್ರಿ.ಶ.೧೯೦೬ ರ ನವ್ಹೆಂಬರ ೫ರಂದು ಶ್ರೀಮತಿ ರಮಾಬಾಯಿ ಸಾಹೇಬರಿಗೆ ಗಂಡು ಮಗು ಜನಿಸಿತು. ಮಗುವಿಗೆ **"ಶಂಕರರಾವ್ ಅಪ್ಪಾಸಾಹೇಬ"** ಎಂದು ನಾಮಕರಣ ಮಾಡಲಾಯಿತು. ಮಗುವಿನ ಜನ್ಮದಿನೋತ್ಸವದ ಸ್ಮರಣಾರ್ಥವಾಗಿ ರಾಜರು ತಮ್ಮ ಸಂಸ್ಥಾನದಲ್ಲಿ ಎಲ್ಲ ಜನರಿಗೆ ಪ್ರಾಥಮಿಕ ಶಿಕ್ಷಣವನ್ನು ಪುಕ್ಕಟ್ಟೆಯಾಗಿ ಕೊಡುವದಾಗಿ ಪ್ರಕಟಿಸಿದರು. ಅಲ್ಲದೆ ಧಾರ್ಮಿಕ ಸಂಸ್ಥೆಗಳಿಗೆ ದತ್ತಿ-ದಾನಗಳನ್ನು ಕೊಟ್ಟರು. ಹೀಗೆ ಮಗನ ಜನ್ಮದ ಆನಂದದ ಭರದಲ್ಲಿ ಕಾಲಹರಣ ಮಾಡುವ ಸಮಯದಲ್ಲಿಯೇ ದುರ್ದೈವದಿಂದ ಇವರ ಮಹಾರಾಣಿ ರಮಾಬಾಯಿ ಸಾಹೇಬರು ಕ್ರಿ.ಶ.೧೯೦೭ರಲ್ಲಿ ಮರಣ ಹೊಂದಿದ್ದು, ಇವರಿಗೆ ಎಲ್ಲಿಲ್ಲದ ದುಃಖವನ್ನುಂಟುಮಾಡಿತು. ಶ್ರೀಮತಿ ರಮಾಬಾಯಿ ಸಾಹೇಬರು ಸುಶೀಕ್ಷಿತರು, ಉದಾರಿಗಳು ಹಾಗೂ ವಿವಿಧ ಗ್ರಂಥಗಳನ್ನು ಓದುವ

ಹವ್ಯಾಸವುಳ್ಳವರು ಆಗಿದ್ದರು. ಆದ್ದರಿಂದ ಅವರ ಸ್ಮರಣಾರ್ಥವಾಗಿ ಪಿ.ಬಿ. ಹೈಸ್ಕೂಲಿನ ಎದುರಿಗೆ ಕ್ರಿ.ಶ.೧೯೦೮ರಲ್ಲಿ ಅತ್ಯಂತ ಸುಂದರವಾದ ಗ್ರಂಥಾಲಯದ ಕಟ್ಟಡವನ್ನು ಕಟ್ಟಿಸಿ, ಅದಕ್ಕೆ **"ಶ್ರೀಮತಿ ರಾಮಾಬಾಯಿ ವಾಚನಾಲಯ"** ಎಂದು ಹೆಸರಿಡಲಾಯಿತು. ಇದೆ ನಗರದಲ್ಲಿದ್ದ ಇಂದಿನ ಸಾರ್ವಜನಿಕ ವಾಚನಾಲಯ.

**"ಪ್ರವಾಸವು ಜ್ಞಾನಾಭಿವೃದ್ಧಿಗೆ ಪೂರಕ"** ಎಂಬುದನ್ನು ಅರಿತ ಪರಶುರಾಮ ಭಾವು ಸಾಹೇಬರು ಕ್ರಿ.ಶ. ೧೯೦೯ರಲ್ಲಿ ಜಗತ್ತಿನ ನಾನಾ ದೇಶಗಳನ್ನು ನೋಡಲು ಪ್ರವಾಸವನ್ನು ಕೈಕೊಂಡರು. ಇವರು ಇಂಗ್ಲೆಂಡ, ಫ್ರಾನ್ಸ್, ಇಟಲಿ ಮೊದಲಾದ ದೇಶಗಳನ್ನು ಸಂದರ್ಶಿಸಿ ಅಲ್ಲಿಯ ಕಲೆ, ವಾಸ್ತು ಶಿಲ್ಪ, ಶಿಕ್ಷಣ, ಕೃಷಿ, ಮತ್ತಿತರ ಪ್ರಗತಿಪರವಾದ ಸುಧಾರಣೆಗಳಿಂದ ಪ್ರಭಾವವಿತರಾಗಿ ಅವುಗಳನ್ನು ತಮ್ಮ ರಾಜ್ಯದಲ್ಲಿ ಅನುಷ್ಠಾನಗೊಳಿಸಿದರು. ಇವರು ತಮ್ಮ ರಾಜಧಾನಿಯಲ್ಲಿ ಯುರೋಪಿಯನ್ ಮಾದರಿಯ ಅನೇಕ ಕಟ್ಟಡಗಳನ್ನು ನಿರ್ಮಿಸಿದ್ದು, ಅವು ಇಂದಿಗೂ ಸುಸ್ಥಿತಿಯಲ್ಲಿವೆ[೧೦೭].

ಇವರು ತಮ್ಮ ಪ್ರಥಮ ಮಹಾರಾಣಿಯವರಾದ ರಮಾಬಾಯಿ ಸಾಹೇಬರು ತೀರಿಕೊಂಡ ನಂತರ ರಾಜ್ಯದಾಡಳಿತದ ಕಾರ್ಯದಲ್ಲಿಯೇ ಕಾಲಹರಣ ಮಾಡಿದರು. ಮುಂದೆ ಕ್ರಿ.ಶ.೧೯೧೨ರಲ್ಲಿ ಇವರ ಬಂಧು ಬಾಂಧವರ ಹಾಗೂ ಹಿರಿಯ ಹಿತೈಷಿಗಳ ಸದಿಚ್ಛೆಯ ಮೇರೆಗೆ ಪರಶುರಾಮ ಭಾವು ಅವರು ಪುಣೆಯ ಶ್ರೀ ಗೋಪಾಳರಾವ್ ದಾಮಣೆಯವರ ಮಗಳನ್ನು ವಿವಾಹವಾದರು. ಇವರ ದ್ವಿತೀಯ ರಾಣಿಯವರನ್ನು ಸಹ ರಮಾಬಾಯಿ ಸಾಹೇಬ ಎಂಬ ಹೆಸರನ್ನಿಟ್ಟು ಕರೆಯಲಾಯಿತು. ದ್ವಿತೀಯ ರಾಣಿಯವರಿಗೆ ಕ್ರಿ.ಶ.೧೯೧೪ರಲ್ಲಿ ಒಂದು ಹೆಣ್ಣುಮಗು ಜನಿಸಿತು. ಆ ಮಗುವಿಗೆ ಶಕುಂತಲಾ ರಾಜೆ ಉರ್ಫ್ ಅಕ್ಕಾತಾಯಿ ಎಂದು ಹೆಸರಿಟ್ಟರು. ಮುಂದೆ ೮ ಆಗಸ್ಟ್ ೧೯೧೫ರಂದು ಈ ರಾಣಿಸಾಹೇಬರಿಗೆ ಗಂಡು ಮಗು ಹುಟ್ಟಿತು. ಆದರೆ ಮಗು ಮುಂದೆ ಕೇವಲ ಆರು ತಿಂಗಳಲ್ಲಿ ಅಸುನೀಗಿತು. ಕೊನೆಗೆ ಇವರ ಪ್ರಥಮ ಮಹಾರಾಣಿವರಾದ ಶ್ರೀಮತಿ ರಮಾಬಾಯಿ ಸಾಹೇಬರ ಮಗನಾದ ಶ್ರೀಮಂತ ಶಂಕರರಾವ್ ಅಪ್ಪಾಸಾಹೇಬರೇ ಇವರ ಉತ್ತರಾಧಿಕಾರಿಗಳಾದರು.

ಪರಶುರಾಮ ಭಾವು ಸಾಹೇಬರು ಒಳ್ಳೆಯ ಆಡಳಿತಗಾರರಿದ್ದಂತೆ ಕ್ರೀಡಾ ಪ್ರೇಮಿಗಳು ಆಗಿದ್ದರು. ವಿವಿಧ ದೇಶಿ ಹಾಗೂ ವಿದೇಶಿ ಆಟಗಳನ್ನಾಡುವುದರಲ್ಲಿ ಆಸಕ್ತಿಯುಳ್ಳವರಾಗಿದ್ದರು. ಇವರು ಸ್ವತಃ ಕ್ರೀಡಾಪಟುಗಳಾಗಿದ್ದು, ದಿನ ನಿತ್ಯ ಅಂಗಸಾಧನೆಯನ್ನು ಮಾಡುತ್ತಿದ್ದರಲ್ಲದೇ ಕುಸ್ತಿ ಆಡುವದು, ಈಜುವದು, ಡೋಣಿ ನಡೆಸುವದು, ಪೋಲೊ ಆಟವಾಡುವದು ಇವೇ ಮೊದಲಾದ ಆಟಗಳನ್ನು ಆಡುತ್ತಿದ್ದರು. ಅಲ್ಲದೆ ಕ್ರೀಡಾಪಟುಗಳಿಗೆ ಪ್ರೋತ್ಸಾಹವನ್ನು (ರಾಜಾಶ್ರಯ-ರಾಜಮನ್ನಣೆ) ಕೊಡುತ್ತಿದ್ದರು. ಇವರ ಪ್ರೋತ್ಸಾಹದಿಂದ ಜಮಖಂಡಿ ಭಾಗದ ಅನೇಕ ಕುಸ್ತಿ ಪಟುಗಳು, ಸೈಕಲ್ ರೇಸುದಾರರು, ಓಟಗಾರರು ಅನೇಕ ಸ್ಪರ್ಧೆಗಳಲ್ಲಿ ಭಾಗವಹಿಸಿ ಜಯಶಾಲಿಗಳಾಗಿ ಸಂಸ್ಥಾನದ ಕೀರ್ತಿಯನ್ನು ಹೆಚ್ಚಿಸಿದ ಉದಾಹರಣೆಗಳುಂಟು. ಇವರ ಕಾಲದಲ್ಲಿ ಕಡಪಟ್ಟಿಯ ಜಗದೀಶ್ವರ ಮಠದ ಸ್ವಾಮಿಗಳಾದ ಶ್ರೀರಾಚೋಟೇಶ್ವರ ಸ್ವಾಮಿಗಳು ದಿನಾಂಕ೨೫-೨-೧೯೧೭ರಲ್ಲಿ ಪುಣೆಯ ಡೆಕ್ಕನ್ ಜಮಖಾನಾ ಸ್ಪೋರ್ಟ್ಸ್ ಕ್ಲಬ್‌ದ ವತಿಯಿಂದ ಏರ್ಪಡಿಸಿದ್ದ ೨೭ ಮೈಲು ಮ್ಯಾರಥಾನ್ ಓಟದ ಸ್ಪರ್ಧೆಯಲ್ಲಿ ಜಮಖಂಡಿಯ ಸ್ಟೂಡಂಟ್ಸ್ ಅಸೋಸಿಯೇಷನ್‌ವತಿಯಿಂದ ಭಾಗವಹಿಸಿ ೨ ತಾಸು ೫೭ ನಿಮಿಷ ೨೯ ೧/೨ ಸೆಕೆಂಡುಗಳಲ್ಲಿ ಓಡಿ ಪ್ರಥಮ ಸ್ಥಾನವನ್ನು ಪಡೆದು, ಸುವರ್ಣ ಪದಕವನ್ನು ಗೆದ್ದುಕೊಂಡದ್ದು ಸ್ಮರಣೀಯ. ಇವರ

ವೇಗದ ಓಟವನ್ನು ಪ್ರತ್ಯಕ್ಷ ಕಂಡ ಸಂಸ್ಥಾನಿಕರು ತುಂಬ ಮೆಚ್ಚಿಕೊಂಡರಲ್ಲದೇ ಇವರಿಗೆ ರಾಜಮನ್ನಣೆಯನ್ನಿತ್ತು ಗೌರವಿಸಿದರು. ಅಷ್ಟೇ ಅಲ್ಲ ಅವರಿಗೆ **"ಗಾಳಿಯ ಗಂಡ"**ನೆಂಬ ಅಭಿದಾನವನ್ನಿತ್ತು ಮನ್ನಿಸಿದರು. ಅಂದು ಇವರು ಗೆದ್ದುಕೊಂಡ ಸುವರ್ಣ ಪದಕವು ಇಂದಿಗೂ ಲಭ್ಯವಿದ್ದು, ಅದರ ಫೋಟೊ ಪ್ರತಿಯನ್ನು ಇಲ್ಲಿ (ಪುಟ ೩೧೨ ರಲ್ಲಿ) ಕಾಣಬಹುದು. ಅಂದು ಸ್ವಾಮಿಗಳು ಕ್ರಮಿಸಿದ ದಾರಿ ಮತ್ತು ತೆಗೆದುಕೊಂಡಿದ್ದ ವೇಳೆಯನ್ನು ಇಂದು ನಾವು ಹೋಲಿಸಿ ನೋಡಿದರೆ ಅವರು ಅಂದಿನ ಓಲಂಪಿಕ್ ಓಟದಲ್ಲಿ ಭಾಗವಹಿಸಿದ್ದರೆ ಜಯಗಳಿಸಬಹುದಿತ್ತು ಮತ್ತು ಭಾರತದ ಕ್ರೀಡಾ ಕೇತನವನ್ನು ವಿಶ್ವಮಟ್ಟದಲ್ಲಿ ಹಾರಿಸಬಹುದಿತ್ತೆನ್ನಿಸುತ್ತದೆ. ಆದರೆ ಅದು ಗತಿಸಿ ಹೋದ ಮಾತು.

ಪರಶುರಾಮ ಭಾವು ಸಾಹೇಬರು ಜಮಖಂಡಿ ನಗರದಲ್ಲಿ ತಮ್ಮ ತಂದೆಯವರ ಹೆಸರಿನಲ್ಲಿ ನಿರ್ಮಿಸಿದ ಎಸ್.ಆರ್.ಎ. ಕ್ಲಬ್ (ಶ್ರೀಮಂತ ರಾಮಚಂದ್ರರಾವ್ ಅಪ್ಪಾಸಾಹೇಬ ಕ್ಲಬ್)ನಲ್ಲಿ ಟೇಬಲ್ ಟೆನಿಸ್ಸ್, ಬ್ಯಾಡಮಿನೆಟನ್ ಮತ್ತು ಬಿಲಿಯರ್ಡ್ಸ ಆಟಗಳನ್ನಾಡುವ ಸೌಲಭ್ಯವಿತ್ತು. (ಇಂದಿಗೂ ಇದೆ) ಅಲ್ಲದೆ ಬ್ಯಾಡಮಿನೆಟನ್ ಕೋರ್ಟ್, ಟೆನಿಸ್ ಕೋರ್ಟುಗಳನ್ನು ನಿರ್ಮಿಸಿದರು. ಕುಸ್ತಿ ಆಡಲು ಮತ್ತು ಅಂಗಸಾಧನೆಯನ್ನು ಮಾಡಲು ನಗರದಲ್ಲಿ ಒಂದು ಗರಡಿಮನೆಯನ್ನು ಕಟ್ಟಿಸಿದರು. ಅದರಂತೆ ಪೋಲೊ ಆಟವಾಡಲು ಒಂದು ವಿಶಾಲವಾದ ಮೈದಾನವನ್ನು ನಿರ್ಮಿಸಿದರು. ಹೀಗೆ ಇವರು ವಿವಿಧ ಬಗೆಯ ಕ್ರೀಡೆಗಳ ಅಭಿವೃದ್ಧಿಗಾಗಿ ಎಲ್ಲಿಲ್ಲದ ಪ್ರೋತ್ಸಾಹ ನೀಡಿದರು.

ಇವರು ಶಿಕ್ಷಣ ಪ್ರೇಮಿಗಳಾಗಿದ್ದು, ತಮ್ಮ ಆಳಿಕೆಯಲ್ಲಿ ಜಮಖಂಡಿಯಲ್ಲಿ ಶಿಕ್ಷಣ ಪ್ರಸಾರಕ್ಕಾಗಿ ಶಿಕ್ಷಣ ತಜ್ಞರ ಸಮಿತಿಯನ್ನು ರಚಿಸಿದರು. (ಸಮಿತಿಯ ಸದಸ್ಯರೆಂದರೆ– ಪ್ರೊ.ಆರ್.ಡಿ.ರಾನಡೆ, ಅ.ವ್ಹಿ. ಪಟವರ್ಧನ, ಗೋಪಳರಾವ್ ಹುಲ್ಯಾಳಕರ, ಕೈ.ಭಿ.ಆನಿಖಿಂಡಿ, ಕೆ.ನಾ.ಜೋಶಿ, ಬಾ.ಬಿ.ಮಹಾಬಳ ಮೊದಲಾದವರು) ಈ ಸಮಿತಿಯು ಸಲ್ಲಿಸಿದ ವರದಿಯ ಪ್ರಕಾರ ಅನೇಕ ಶೈಕ್ಷಣಿಕ ಸುಧಾರಣೆಗಳನ್ನು ಕೈಕೊಂಡು ಅದರಂತೆ ಸ್ತ್ರೀಯರಿಗೆ ಪ್ರತ್ಯೇಕ ಶಿಕ್ಷಣ ಕೊಡಲು ಒಂದು **"ಮಹಿಳಾ ಮಂಡಳವನ್ನು"** ಸ್ಥಾಪಿಸಿದರು.

ಇವರ ಕಾಲದಲ್ಲಿ ರಾಜ್ಯಕ್ಕೆ ಉನ್ನತ ಬ್ರಿಟೀಷ ಅಧಿಕಾರಿಗಳು ಭೇಟಿಯಿತ್ತಾಗ ಅವರ ವಾಸ್ತವ್ಯಕ್ಕಾಗಿ ಸಕಲ ಸೌಲಭ್ಯಗಳಿಂದ ಕೂಡಿದ ಭವ್ಯ ಮತ್ತು ಸುಂದರವಾದ ಕಟ್ಟಡವನ್ನು ಕ್ರಿ.ಶ.೧೯೦೬ರಲ್ಲಿ ಕಟ್ಟಿಸಿದರು. ಇದಕ್ಕೆ **"ವರ್ಧನರ್ಸ್ ಬಂಗ್ಲೊ ಅಥವಾ ಪೋಲೊ ಫ್ಯಾಲೇಸ್"** ಎಂದು ಕರೆಯುತ್ತಾರೆ. ಇದೇ ಕಟ್ಟಡದಲ್ಲಿ ಇಂದು ಬಿ.ಎಲ್.ಡಿ.ಇ. ಸಂಸ್ಥೆಯ ಕಾಲೇಜು ನಡೆಯುತ್ತಿದೆ. ಇವರು ಜಮಖಂಡಿ ನಗರದಲ್ಲಿ ಮೊಟ್ಟಮೊದಲಿಗೆ ಪಾವರ್ ಹೌಸ್ ನಿರ್ಮಿಸಿ ದೀಪದ ವ್ಯವಸ್ಥೆಯನ್ನು ಮಾಡಿದರು.

**ಪ್ರಥಮ ಜಾಗತಿಕ ಮಹಾಯುದ್ಧದಲ್ಲಿ ಇವರ ಪಾತ್ರ**

ಕ್ರಿ.ಶ.೧೮೭೦ ರಿಂದ ಜಮಖಂಡಿಯ ಸಂಸ್ಥಾನವನ್ನಾಳಿದ ಎಲ್ಲ ಪಟವರ್ಧನ ಅರಸರು ಇಂಗ್ಲೀಷರಿಗೆ ವಿಧೇಯರಾಗಿಯೇ ನಡೆದುಕೊಳ್ಳುತ್ತ ಬಂದಿದ್ದರು. ಅದರಂತೆ ಆಂಗ್ಲ ಸರಕಾರವು ಸಹ ಇವರನ್ನು ಅತ್ಯಂತ ಮರ್ಯಾದೆಯಿಂದ ಕಾಣುತ್ತಿತ್ತು. ಮುಂದೆ ೧೯೧೪ರಲ್ಲಿ ಜಾಗತಿಕ ಒಂದನೇ ಮಹಾಯುದ್ಧವು ಪ್ರಾರಂಭವಾಯಿತು. ಆಗ ಸಂಸ್ಥಾನಿಕರಾದ ಪರಶುರಾಮ ಭಾವು ಸಾಹೇಬರು ಇಂಗ್ಲೀಷರಿಗೆ ಸರ್ವರೀತಿಯಿಂದ ಸಹಾಯ ಸಲ್ಲಿಸಿದ್ದರಲ್ಲದೇ ಸ್ವತಃ ಇವರು

ಯುದ್ಧಭೂಮಿ ಪ್ರವೇಶಿಸಿ ಸಪ್ಟೆಂಬರ ೧೯೧೫ ರಿಂದ ಡಿಸೆಂಬರ ೧೯೧೫ರವರೆಗೆ ಆಂಗ್ಲರ ಪರವಾಗಿ ಹೋರಾಡಿದರು. ಅಂದು ಇವರು ಯುದ್ಧದಲ್ಲಿ ತೋರಿಸಿದ ಸಾಹಸವನ್ನು ಪ್ರತ್ಯಕ್ಷ ಕಂಡ ಆಂಗ್ಲ ಅಧಿಕಾರಿಗಳು ತುಂಬ ಮೆಚ್ಚಿಕೊಂಡರು.

ಈ ಯುದ್ಧವು ೧೯೧೮ರ ಜನೆವರಿ ತಿಂಗಳವರೆಗೆ ಮುಂದುವರೆದಿದ್ದರಿಂದ ಪರಶುರಾಮ ಭಾವು ಅವರು ಫ್ಲಾನ್ ದೇಶಕ್ಕೆ ಹೋಗಿ ಅಲ್ಲಿ ಪ್ರಥಮೋಪಚಾರದ ಕಾರ್ಯದಲ್ಲಿ (First Aid) ಭಾಗವಹಿಸಿ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದರು. ಅಲ್ಲದೆ ಮೆಸೊಪೋಟೆಮಿಯಾ, ಬಸರಾ, ಬಗದಾದ ಮೊದಲಾದ ಸ್ಥಳಗಳಲ್ಲಿ ರಕ್ತದಾನ ಸಮಿತಿಯು (Red Cross Commission)ಕೈಕೊಂಡ ಕಾರ್ಯದಲ್ಲಿ ನೆರವಾದರು. ಯುದ್ಧದ ಸಹಾಯಾರ್ಥವಾಗಿ ಆಂಗ್ಲರಿಗೆ ಅಪಾರ ಧನ ಸಹಾಯ ಮಾಡಿದರು. ಅದರಂತೆ ಇವರ ಮಹಾರಾಣಿಯವರಾದ ಶ್ರೀಮತಿ ರಮಾಬಾಯಿ ಸಾಹೇಬರು ಸಹ ಮಹಿಳಾ ವಿಭಾಗದವತಿಯಿಂದ ಯುದ್ಧದ ಸಹಾಯ ನಿಧಿಯನ್ನು ಸಂಗ್ರಹಿಸಿ ಕೊಟ್ಟರು. ಅಲ್ಲದೆ ಜಮಖಂಡಿ ಸಂಸ್ಥಾನದ ಅನೇಕ ಮಹಿಳೆಯರೂ ಸಹ ನಿಧಿ ಸಂಗ್ರಹಿಸಿಕೊಟ್ಟರು.

ಜಾಗತೀಕ ೧ನೇ ಮಹಾಯುದ್ಧದಲ್ಲಿ ಪರಶುರಾಮ ಭಾವು ಸಾಹೇಬರು ಇಂಗ್ಲೀಷರ ಪರವಾಗಿ ಹೋರಾಡಿದ್ದರಿಂದ ಇವರಿಗೆ 'Honorary Captain' ಎಂಬ ಬಿರುದನ್ನು ಮತ್ತು ಒಂಬತ್ತು ತೋಪಿನ ಸಲಾಮಿ ಸನ್ಮಾನವನ್ನು ಬ್ರಿಟೀಷ ಸರಕಾರವು ಕೊಟ್ಟು ಗೌರವಿಸಿತು. ಅಲ್ಲದೆ ಇವರಿಗೆ K.C.I.E.[೧೦೮]. ಮತ್ತು A.D.C[೧೦೯]. ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿತು. ಹೀಗೆ ಪರಶುರಾಮ ಭಾವು ಸಾಹೇಬ ಬ್ರಿಟೀಷ ಸರಕಾರದಿಂದ ಗೌರವಿಸಲ್ಪಟ್ಟವರಾಗಿದ್ದರು. ಇವರಿಗೆ ಕ್ಯಾಪ್ಟನ್ ಸರ್ ಪರಶುರಾಮ ಭಾವು ಪಟವರ್ಧನರೆಂದು ಕರೆಯುತ್ತಿದ್ದರು. ಇವರು ಒಳ್ಳೆಯ ಆಡಳಿತಗಾರರಾಗಿದ್ದರಿಂದ ನೆರೆಯ ರಾಜ್ಯಗಳಾದ ಮಿರಜ ಮತ್ತು ರಾಮದುರ್ಗ ಸಂಸ್ಥಾನದ ಯುವರಾಜರಿಗೆ ಮಾರ್ಗದರ್ಶಕರಾಗಿದ್ದರು. ಉದ್ದಿಮೆಯ ಬೆಳವಣಿಗೆಗಾಗಿ ತಮ್ಮ ಸಂಸ್ಥಾನದಲ್ಲಿ **"ಮಹಾರಾಜಾ ಕಾಟನ್ ಜನಿಂಗ ಮತ್ತು ಪ್ರೆಸ್ಸಿಂಗ್"** ಕಾರ್ಖಾನೆಯನ್ನು ೧೯೨೦ರಲ್ಲಿ ಪ್ರಾರಂಭಿಸಿದರು. ಅಲ್ಲದೆ ಖಾಸಗಿ ವ್ಯಕ್ತಿಗಳು ಸಹ ಕಾರ್ಖಾನೆಯನ್ನು ಸ್ಥಾಪಿಸಲು ಅನುಮತಿಸಿದರು.

ಕ್ಯಾಪ್ಟನ್ ಪರಶುರಾಮ ಭಾವು ಅವರು ಪ್ರಜೆಗಳ ಹಿತಕ್ಕಾಗಿ ರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ಕೈಕೊಂಡರು. ಇವರು ಯಾವಾಗಲೂ ಪ್ರಜಾಭಿಪ್ರಾಯಕ್ಕೆ ಮನ್ನಣೆಯನ್ನು ಕೊಡುತ್ತಿದ್ದರು. **"ಪ್ರಜಾ ಸುಖೇ, ಸುಖಂ ರಾಜ್ಯಃ"** ಎಂಬಂತೆ ಪ್ರಜೆಗಳ ಸುಖವೇ ತಮ್ಮ ಸುಖವೆಂದು ಬಗೆದು ಇವರು ತಮ್ಮ ರಾಜ್ಯದಾಡಳಿತದಲ್ಲಿ ಪ್ರಜೆಗಳು ಸಕ್ರಿಯವಾಗಿ ಭಾಗವಹಿಸಿ ತಮ್ಮ ಆಶೋತ್ತರಗಳನ್ನು ರಾಜನಿಂದ ಜನಪ್ರತಿನಿಧಿಗಳ ಮುಖಾಂತರ ಈಡೇರಿಸಿಕೊಳ್ಳಲು ಕ್ರಿ.ಶ.೧೯೧೭ರಲ್ಲಿ ಇಲ್ಲಿ ಲೋಕಸಭೆಯನ್ನು ಪ್ರಥಮ ಬಾರಿಗೆ ಸ್ಥಾಪಿಸಿದರು. ರಾಜ ಮತ್ತು ಪ್ರಜೆಗಳ ನಡುವೆ ಮಧುರ ಬಾಂಧವ್ಯವನ್ನು ನೆಲೆಗೊಳಿಸುವದೇ ಈ ಸಭೆಯ ಉದ್ದೇಶವಾಗಿತ್ತು. ಜನಸಮಾನ್ಯರ ಸಮಸ್ಯೆಗಳನ್ನು ಈ ಸಭೆಯು ಯೋಗ್ಯ ರೀತಿಯಿಂದ ಪರಿಹರಿಸುತ್ತಿತ್ತು. ರಾಜರು ಸಭೆಯ ನಿರ್ಣಯಕ್ಕೆ ಮನ್ನಣೆಯನ್ನು ಕೊಡುತ್ತಿದ್ದರು.

ಜಾಗತಿಕ ಒಂದನೇ ಮಹಾಯುದ್ಧದ ಯುದ್ಧಭೂಮಿಯಿಂದ ಸುರಕ್ಷಿತವಾಗಿ ಮರಳಿ ಬಂದರೆ ಕಲ್ಲಳ್ಳಿ ವೆಂಕಟೇಶ್ವರ ದೇವಸ್ಥಾನದ ಪ್ರವೇಶ ದ್ವಾರದ ಗೋಪುರವನ್ನು ಕಟ್ಟಿಸುತ್ತೇನೆಂದು ಅವರ ಮಹಾರಾಣಿಯವರಾದ ರಮಾಬಾಯಿ ಸಾಹೇಬರು ಬೇಡಿಕೊಂಡಿದ್ದರಂತೆ. ಅದೇ ಪ್ರಕಾರ ಮಹಾರಾಜರು ಯುದ್ಧದಿಂದ ಸುಸೂತ್ರವಾಗಿ ಮರಳಿ ಬಂದರು. ಕೂಡಲೇ ರಮಾಬಾಯಿ

ಸಾಹೇಬರು ತಮ್ಮ ವೈಯಕ್ತಿಕ (ಖಾಸಗಿ) ಹಣವನ್ನು ವ್ಯಯಮಾಡಿ ವೆಂಕಟೇಶ್ವರ ದೇವಸ್ಥಾನದ ಪ್ರವೇಶ ದ್ವಾರದ ಗೋಪುರವನ್ನು ಕಟ್ಟಿಸಿ ತಮ್ಮ ಹರಕೆಯನ್ನು ತೀರಿಸಿದರು.

ಪರಶುರಾಮ ಭಾವುಸಾಹೇಬರ ಆಳ್ವಿಕೆಯಲ್ಲಿ ಮುಂಬೈ ಪ್ರಾಂತದ ಗವ್ಹರ್ನರರಾದ ಲಾರ್ಡ್ ವಿಲಿಂಗ್ಡನ್ನರು ಕ್ರಿ.ಶ.೧೯೧೭ರಲ್ಲಿ ಈ ಸಂಸ್ಥಾನಕ್ಕೆ ಭೇಟಿ ನೀಡಿದ್ದರು. ಅದರಂತೆ ಕ್ರಿ.ಶ.೧೯೨೨ರಲ್ಲಿ ಲಾರ್ಡ್ ಲಾಯಿಡ್ ಎಂಬ ಗವ್ಹರ್ನರರು ಜಮಖಂಡಿ ಸಂಸ್ಥಾನಕ್ಕೆ ಭೇಟಿ ನೀಡಿದರು. ಪರಶುರಾಮ ಭಾವು ಸಾಹೇಬರ ವ್ಯವಸ್ಥಿತವಾದ ಆಡಳಿತವನ್ನು ಪ್ರತ್ಯಕ್ಷಕಂಡು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಪುಣೆಯ ಕರ್ವೆ ವಿಶ್ವವಿದ್ಯಾಲಯದ ಸಂಸ್ಥಾಪಕರಾದ ಭಾರತರತ್ನ ಪ್ರಶಸ್ತಿ ವಿಜೇತರು (ಸ್ತ್ರೀ ಶಿಕ್ಷಣದ ಏಳ್ಗೆಗಾಗಿ ಶ್ರಮಿಸಿದ್ದಕ್ಕಾಗಿ ಭಾರತರತ್ನ ಪ್ರಶಸ್ತಿಯನ್ನು ಪಡೆದವರು) ಆದ ಮಹರ್ಷಿ ಅಣ್ಣಾಸಾಹೇಬ ಕರ್ವೆಯವರು ಪರಶುರಾಮ ಭಾವು ಸಾಹೇಬರ ಕಾಲದಲ್ಲಿ ಜಮಖಂಡಿಗೆ ಆಗಮಿಸಿದ್ದರು. ಇಲ್ಲಿಯ ಸಾಮಾಜಿಕ, ಶೈಕ್ಷಣಿಕ, ರಾಜಕೀಯ ರಂಗದಲ್ಲಾದ ಪ್ರಗತಿಯನ್ನು ಕಂಡು ತುಂಬ ಮೆಚ್ಚಿಕೊಂಡರಲ್ಲದೆ ಪಟವರ್ಧನ ಅರಸರು ಸ್ತ್ರೀ ಶಿಕ್ಷಣದ ಪ್ರಗತಿಗಾಗಿ ಕೈಕೊಂಡ ಸುಧಾರಣೆಗಳನ್ನು ಪ್ರಶಂಸಿಸಿದರು.

ಪರಶುರಾಮ ಭಾವು ಅವರು ಕ್ರೀಡಾಭಿಮಾನಿಗಳಿದ್ದಂತೆ, ಕಲಾಪ್ರಿಯರು ಆಗಿದ್ದರು. ಇವರು ರಂಗಕಲಾಭಿವೃದ್ಧಿಗೆ **"ಅಭಿನವ ನಾಟ್ಯ ಸಮಾಜ"** ಎಂಬ ಕಲಾ ಸಂಘವನ್ನು ಕ್ರಿ.ಶ.೧೯೨೧ರಲ್ಲಿ ಸ್ಥಾಪಿಸಿದರು. ಇವರು ಸ್ವತಃ ನಟರಾಗಿದ್ದು, ಅನೇಕ ಮರಾಠಿ ಮತ್ತು ಕನ್ನಡ ನಾಟಕಗಳಲ್ಲಿ ಪಾತ್ರ ಮಾಡಿ, ಜನಮೆಚ್ಚುಗೆಯನ್ನು ಪಡೆದವರಾಗಿದ್ದರು. ರಾಮತೀರ್ಥದಲ್ಲಿದ್ದ ಇವರ ಅರಮನೆಯ ಬದಿಗೆ **"ಮೋಹಿನಿ ಹಾಲ್"** ಎಂಬ ಸುಂದರವಾದ ನಾಟ್ಯ ಮಂದಿರವನ್ನು ಕಟ್ಟಿಸಿದರು. ಇಲ್ಲಿ ಅನೇಕ ಮರಾಠಿ ಮತ್ತು ಕನ್ನಡದ ನಾಟಕಗಳನ್ನು ಪ್ರದರ್ಶಿಸಲಾಗುತ್ತಿತ್ತು. ಇಲ್ಲಿ ಅತ್ಯುತ್ತಮ ರೀತಿಯಿಂದ ನಾಟಕವನ್ನು ಪ್ರದರ್ಶಿಸಿದ ನಟ-ನಟಿಯರಿಗೆ ಮಹಾರಾಜರು ಯೋಗ್ಯವಾದ ಬಹುಮಾನವನ್ನಿತ್ತು ಗೌರವಿಸುತ್ತಿದ್ದರು.

ಕ್ರಿ.ಶ.೧೯೨೩ರಲ್ಲಿ ಇವರು ತಮ್ಮ ಮಕ್ಕಳಾದ ಯುವರಾಜ ಶಂಕರಾವ್ ಅಪ್ಪಾಸಾಹೇಬ ಹಾಗೂ ಯುವರಾಣಿ ಶಕುಂತಲಾ ರಾಜೆ ಇವರ ವಿವಾಹ ಸಮಾರಂಭವನ್ನು ಅತ್ಯಂತ ವೈಭವದಿಂದ ಆಚರಿಸಬೇಕೆಂದು ಆಲೋಚಿಸಿ ಆ ದಿಶೆಯಲ್ಲಿ ಎಲ್ಲ ಪೂರ್ವ ಸಿದ್ಧತೆಯನ್ನು ಮಾಡಿದ್ದರು. ಆದರೆ ದುರ್ದೈವದಿಂದ ಕ್ರಿ.ಶ.೧೯೨೪ರ ಫೆಬ್ರವರಿ ೨೫ ರಂದು ಇವರ ನೆಚ್ಚಿನ ಆನೆಯು ರೋಷದ ಭರದಲ್ಲಿ ಇವರನ್ನು ಇರಿದು ಕೊಂದಿತು. ಸರ್ದಾರ ಮಾರುತರಾವನ ಮೇಲೆ ರೋಷವಿದ್ದ ಆನೆಯು ಸ್ವತಃ ಅರಸನೇ ಹೋದಾಗ ಮಾರುತರಾವನಿರಬಹುದೆಂದು ತಿಳಿದು ಕೊಲೆಗೈದ ಆನೆಯು ಪಶ್ಚಾತ್ತಾಪದಿಂದ ಮುಂದೆ ಒಂದು ತಿಂಗಳಲ್ಲಿ ಕೊರಗಿ ಮರಣ ಹೊಂದಿತು.

ರಾಮಚಂದ್ರರಾವ್ ಅಪ್ಪಾಸಾಹೇಬರ ದತ್ತಕ ಪುತ್ರರಾದ ಕ್ಯಾಪ್ಟನ್ ಸರ್ ಪರಶುರಾಮ ಭಾವು ಸಾಹೇಬರು ಕ್ರಿ.ಶ.೧೮೮೩ರ ಮೇ ತಿಂಗಳ ೧೦ನೇ ತಾರೀಖಿನ ದಿವಸ ಜನ್ಮತಾಳಿದರು. ಇವರು ಕ್ರಿ.ಶ.೧೯೦೩ ಜೂನ್ ತಿಂಗಳ ೪ನೇ ತಾರೀಖಿನಂದು ಜಮಖಂಡಿ ಸಂಸ್ಥಾನದ ಅಧಿಪತಿಯಾಗಿ ಮುಂದೆ ಕ್ರಿ.ಶ.೧೯೨೪ ಫೆಬ್ರವರಿ ೨೫ರವರೆಗೆ ರಾಜ್ಯವಾಳಿದರು. ಇವರು ಪ್ರತ್ಯೇಕ ಜಮಖಂಡಿ ಸಂಸ್ಥಾನವನ್ನಾಳಿದ ಐದನೆಯ ಅರಸರಾಗಿದ್ದರು. ಇವರು ಸುಮಾರು ೨೧ ವರ್ಷಗಳ ವರೆಗೆ ಜಮಖಂಡಿ ಸಂಸ್ಥಾನವನ್ನು ಅತ್ಯಂತ ವೈಭವದಿಂದ ಆಳಿದರು. ಆಡಳಿತದ ವಿವಿಧ ಇಲಾಖೆಗಳಿಗೆ ನಿಷ್ಠಾವಂತ ಮತ್ತು ಪ್ರಾಮಾಣಿಕ ಅಧಿಕಾರಿಗಳನ್ನು ನೇಮಿಸಿದ್ದರಿಂದ

ಅವರು ಸದಾ ರಾಜ್ಯದ ಏಳ್ಗೆಗಾಗಿ ಶ್ರಮಿಸುತ್ತಿದ್ದರು. ಅರಮನೆಯ ವೆಚ್ಚವನ್ನು ಕಡಿಮೆ ಮಾಡಿದ್ದರಲ್ಲದೇ ಆಡಳಿತದಲ್ಲಾಗುವ ಅನವಶ್ಯಕ ವೆಚ್ಚವನ್ನು ಕಡಿತಗೊಳಿಸಿದರು. ರಾಜ್ಯದ ಕೃಷಿ, ವಾಣಿಜ್ಯ ಉದ್ದಿಮೆಗಳ ಬೆಳವಣಿಗೆಗೆ ಹೆಚ್ಚಿನ ಆದ್ಯತೆಯನ್ನು ಕೊಟ್ಟು ಆರ್ಥಿಕ ಭದ್ರತೆಯನ್ನು ಕಾಯ್ದುಕೊಂಡರು.

ಇವರು ಶಿಕ್ಷಣ ತಜ್ಞರ ಸಮಿತಿಯನ್ನು ನೇಮಿಸಿ ಶಿಕ್ಷಣ ರಂಗದಲ್ಲಿ ಮಹತ್ತರವಾದ ಸುಧಾರಣೆಗಳನ್ನು ಮಾಡಿದರು. ಸ್ತ್ರೀ ಶಿಕ್ಷಣದ ಬೆಳವಣಿಗೆಗಾಗಿ ಶ್ರಮಿಸಿದರು. ಇವರು ಇಂಗ್ಲೆಂಡ, ಫ್ರಾನ್ಸ್, ಇಟಲಿ ಮೊದಲಾದ ದೇಶಗಳಿಗೆ ಹೋಗಿ ಅಲ್ಲಿಯ ಪ್ರಗತಿಪರವಾದ ಸುಧಾರಣೆಗಳಿಂದ ಪ್ರಭಾವಿತರಾಗಿ ಅವುಗಳನ್ನು ತಮ್ಮ ರಾಜ್ಯದಲ್ಲಿ ಅನುಷ್ಠಾನಕ್ಕೆ ತಂದರು.

ಇವರು ಸ್ವತಃ ಕ್ರೀಡಾಪಟುಗಳಾಗಿದ್ದು, ಅನೇಕ ಕ್ರೀಡಾಪಟುಗಳಿಗೆ ಪ್ರೋತ್ಸಾಹವನ್ನಿತ್ತರು. ಅನೇಕ ದೇಶಿ ಹಾಗೂ ವಿದೇಶಿ ಆಟಗಳನ್ನಾಡುವುದರಲ್ಲಿ ಪಳಗಿದವರಾಗಿದ್ದರು. ಇವರು ಪೋಲೊ ಆಟವಾಡುವದು, ಕುದುರೆ ಹತ್ತುವದು, ಡೋಣಿ ನಡೆಸುವದು ಇವೇ ಮೊದಲಾದ ಆಟಗಳನ್ನು ಆಡುತ್ತಿದ್ದರು. ನಗರದಲ್ಲಿ ವಿಶಾಲವಾದ ಪೋಲೊ ಮೈದಾನವನ್ನು ನಿರ್ಮಿಸಿದನು. ಅಲ್ಲದೇ ಕ್ರಿ.ಶ.೧೯೦೬ರಲ್ಲಿ ಅತ್ಯಂತ ಸುಂದರ ಮತ್ತು ಭವ್ಯವಾದ ಪೋಲೊ ಪ್ಯಾಲೇಸನ್ನು ಕಟ್ಟಿಸಿದರು. ಇವರು ಜಾಗತೀಕ ಒಂದನೇ ಮಹಾಯುದ್ಧದಲ್ಲಿ ಪ್ರವೇಶಿಸಿ ಅತ್ಯಮೂಲ್ಯವಾದ ಸೈನಿಕ ಸೇವೆಯನ್ನು ಸಲ್ಲಿಸಿದರು. ಇವರನ್ನು ರೆಡ್‌ಕ್ರಾಸ್ ಸಂಸ್ಥೆಯ ಸದಸ್ಯರನ್ನಾಗಿ ನಿಯಮಿಸಿದ್ದರಿಂದ ಕ್ರಿ.ಶ.೧೯೧೮ರ ಜನವರಿ ೨೫ರಂದು ಅರೇಬಿಯನ್ ದೇಶಗಳಿಗೆ ಹೋಗಿ ಅಲ್ಲಿ ಸೇವಾನಿರತರಾದರು. ೧ನೇ ಮಹಾಯುದ್ಧವು ಕೊನೆಗೊಂಡ ನಂತರ ಮುಂಬೈ ಪ್ರಾಂತದ ಗವ್ಹರ್ನರರು ಸಂಸ್ಥಾನಕ್ಕೆ ಭೇಟಿ ನೀಡಿ ಇವರಿಗೆ ಕ್ಯಾಪ್ಟನ್ ಎಂಬ ಪದವಿಯನ್ನಿತ್ತರಲ್ಲದೆ K.C.I.E ಮತ್ತು A.D.C. ಎಂಬ ಬಿರುದುಗಳನ್ನು ಪ್ರದಾನ ಮಾಡಿ ಗೌರವಿಸಿದರು.

ಇವರು ಆಡಳಿತದಲ್ಲಿ ನಿಷ್ಠಾವಂತರಾಗಿದ್ದರಿಂದ ಮಿರಜ ಮತ್ತು ರಾಮದುರ್ಗ ಸಂಸ್ಥಾನಗಳ ಯುವರಾಜರು ಇವರಲ್ಲಿ ಆಡಳಿತ ತರಬೇತಿಯನ್ನು ಪಡೆದುಕೊಳ್ಳಲು ಆಗಮಿಸಿದ್ದರು. ಇವರ ಆಳ್ವಿಕೆಯಲ್ಲಿ ಜಮಖಂಡಿ ಸಂಸ್ಥಾನವು ಸರ್ವವಿಧದಿಂದ ಪ್ರಗತಿಯನ್ನು ಸಾಧಿಸಿತ್ತು. ಅಲ್ಲದೆ ಇಡೀ ಡೆಕ್ಕನ್ ಸಂಸ್ಥಾನಗಳಲ್ಲಿಯೇ ಇದೊಂದು ಮಾದರಿಯ ಸಂಸ್ಥಾನವೆಂದು ಹೆಸರುಗಳಿಸಿತ್ತು. ಆದರೆ ದುರ್ದೈವದಿಂದ ಕ್ರಿ.ಶ.೧೯೨೪ರ ಫೆಬ್ರವರಿ ೨೫ರಂದು ಜಮಖಂಡಿ ಸಂಸ್ಥಾನವು ಒಬ್ಬ ಶ್ರೇಷ್ಠ ದೊರೆಯನ್ನು ಕಳೆದುಕೊಂಡತಾಯಿತು.

**೭. ಶಂಕರರಾವ್ ಅಪ್ಪಾಸಾಹೇಬ ಪಟವರ್ಧನ (೧೯೨೪-೧೯೪೭)**

ಪರಶುರಾಮ ಭಾವು ಸಾಹೇಬರ ಏಕಮೇವ ಪುತ್ರರಾದ ಶಂಕರರಾವ್ ಅಪ್ಪಾಸಾಹೇಬರು ಕ್ರಿ.ಶ.೧೯೦೬ರ ನವ್ಹೆಂಬರ ೫ರಂದು ಜನ್ಮತಾಳಿದರು. ಇವರ ಜನ್ಮದಿನಾಚರಣೆಯನ್ನು ಇಡೀ ಜಮಖಂಡಿ ಸಂಸ್ಥಾನದಲ್ಲಿ ಅತ್ಯಂತ ಸಡಗರದಿಂದ ಆಚರಿಸಲಾಯಿತು. ಕಾರಣ ಇವರ ಪೂರ್ವಜರಾದ ರಾಮಚಂದ್ರ ಪಂತ ಅಪ್ಪಾಸಾಹೇಬರಿಗೆ ಮತ್ತು ಗೋಪಾಳರಾವ್ ಬಾವು ಸಾಹೇಬರಿಗೆ ಗಂಡು ಸಂತಾನವಿಲ್ಲದೆ ಕೇವಲ ದತ್ತಕ ಪುತ್ರರಿಂದಲೇ ಸಂಸ್ಥಾನದ ಆಡಳಿತವನ್ನು ನಡೆಸುತ್ತಾ ಬಂದಿದ್ದರು. ಆದರೆ ಇವರು ರಾಜವಂಶದ ಪುತ್ರರಾಗಿ ಹುಟ್ಟಿದ್ದು, ರಾಜಮನೆತನದವರೆಲ್ಲರಿಗೂ ಮತ್ತು ಪ್ರಜೆಗಳಿಗೂ ಎಲ್ಲಿಲ್ಲದ ಸಂತೋಷವನ್ನುಂಟು ಮಾಡಿತ್ತು. ಅದಕ್ಕಾಗಿ ಪರಶುರಾಮ ಭಾವು ಅವರು ಮಗನ (ಶಂಕರರಾವ ಅಪ್ಪಾಸಾಹೇಬರ) ಜನ್ಮಜಿನದ

ಸ್ಮರಣಾರ್ಥವಾಗಿ ರಾಜ್ಯದಲ್ಲಿ ಅನೇಕ ಕಲ್ಯಾಣಕಾರಕ ಕಾರ್ಯಗಳನ್ನು ಹಮ್ಮಿಕೊಳ್ಳಲು ಆಜ್ಞಾಪಿಸಿದರಲ್ಲದೆ ಪ್ರಜೆಗಳಿಗೆ ಮತ್ತು ಆಡಳಿತದ ಸಿಬ್ಬಂದಿಗಳಿಗೆ ಕೆಲವು ಸೌಲಭ್ಯಗಳನ್ನು ಪ್ರಕಟಿಸಿದರು.

ಶಂಕರರಾವ್ ಅಪ್ಪಾಸಾಹೇಬರು ತಂದೆಯ ಮರಣದ ಕಾಲದಲ್ಲಿ ಕೇವಲ ೧೭ ವರುಷದವರಾಗಿದ್ದರು. ರಾಜ್ಯದ ಅಧಿಕಾರವನ್ನು ವಹಿಸಿಕೊಳ್ಳಲು ಅರ್ಹರಾಗಿರಲಿಲ್ಲ. ಅದಕ್ಕಾಗಿ ಇವರು ಪ್ರಬುದ್ಧರಾಗುವವರೆಗೆ ರಾಜ್ಯದ ಅಧಿಕಾರವನ್ನು ಇಂಗ್ಲೀಷರಿಗೆ ಒಪ್ಪಿಸದೆ ಮಹಾರಾಣಿಯವರಾದ ರಮಾಬಾಯಿ ಸಾಹೇಬರೇ ನಡೆಸಬೇಕೆಂದು ಜನರು ಆಪೇಕ್ಷಿಸಿ ಇಂಗ್ಲೀಷ ಸರಕಾರಕ್ಕೆ ಮನವಿ ಅರ್ಪಿಸಿದರು. ಅದರ ಪ್ರಕಾರ ಇಂಗ್ಲೀಷ ಸರಕಾರವು ಒಪ್ಪಿಗೆಯನ್ನಿತ್ತಿತು. ಇದರಿಂದ ಜನಾಭಿಪ್ರಾಯಕ್ಕೆ ಮನ್ನಣೆ ದೊರೆತಂತಾಗಿ ಜಮಖಂಡಿ ಜನತೆ ಸಂತೃಪ್ತರಾದರು. ಮುಂದೆ ಎರಡು ವರ್ಷಗಳವರೆಗೆ ಕೌನ್ಸಿಲಿನ ಮುಖಾಂತರ **"ರಾಜ ಪ್ರತಿನಿಧಿ ಮಂಡಳ ಸ್ಥಾಪನೆ (೧೯೨೪)"** ಸಂಸ್ಥಾನದ ಆಡಳಿತವನ್ನು ನಡೆಸಿದ್ದು ಜನರಿಗೆ ಸಂತೋಷವನ್ನುಂಟು ಮಾಡಿತು.

ಶಂಕರರಾವ ಅಪ್ಪಾಸಾಹೇಬರು ಸಿಂಹಾಸನಕ್ಕೆ ಬರುವ ಪೂರ್ವದಲ್ಲಿಯೇ ಉಚಿತವಾದ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡರು. ಅಲ್ಲದೆ ಕೆಲವು ಅವಶ್ಯಕ ವಿಷಯಗಳಾದ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ, ಕಾನೂನು ಮೊದಲಾದವುಗಳನ್ನು ಅಭ್ಯಸಿಸಿದರು. ದೇಶಿ ಸಂಸ್ಥಾನಗಳ ಉತ್ತರಾಧಿಕಾರಿಗಳಿಗೆ ಅವಶ್ಯಕ ಶಿಕ್ಷಣ ಮತ್ತು ತರಬೇತಿಯನ್ನು ಕೊಡಲು ಆಂಗ್ಲ ಸರಕಾರವು ನಿಯಮಿಸಿದ ಅಧಿಕಾರಿಯಾದ ಮೇಜರ W.E.D. ಕ್ಯಾಂಬೆಲ್ಲನ ಮಾರ್ಗದರ್ಶನದಲ್ಲಿ ಶಂಕರಾವ ಅಪ್ಪಾಸಾಹೇಬರು ರೆವ್ಹಿನ್ಯೂ ಆ್ಯಕ್ಟ ವತನದಾರಿ ಕಾನೂನು (ಪದ್ಧತಿ) ತಾಲೂಕು ಮತ್ತು ಗ್ರಾಮದ ಲೆಕ್ಕಪತ್ರಗಳ ಬಗೆಗೆ ಸಂಪೂರ್ಣ ತಿಳುವಳಿಕೆಯನ್ನು ಮಾಡಿಕೊಂಡರು. ಅದರಂತೆ ಸರ್ ನ್ಯಾಯಾಧೀಶರಾದ ಮೆಸರ್ಸ ಎಸ್.ವ್ಹಿ. ಫಡಕೆ ಹಾಗೂ ರಾಜಪ್ರತಿನಿಧಿ ಮಂಡಳದ ಕಾನೂನು ಸಲಹೆಗಾರ ಮತ್ತು ನ್ಯಾಯಾಧೀಶರಾದ ಶ್ರೀ ಎ.ವ್ಹಿ. ಧಾರೇಶ್ವರ ಇವರ ಮಾರ್ಗದರ್ಶನದಲ್ಲಿ ಮುಲ್ಕಿ ಮತ್ತು ಪೌಜುದಾರಿ ನ್ಯಾಯಾಡಳಿತವನ್ನು ಅಭ್ಯಸಿಸಿದರು. ಇವರು ತಮ್ಮ ಉನ್ನತ ಶಿಕ್ಷಣವನ್ನು ಕೊಲ್ಹಾಪೂರದಲ್ಲಿ ಕ್ರಿ.ಶ.೧೯೨೫ರಲ್ಲಿ ಪಡೆದುಕೊಂಡು ಇವರು ಕಾನೂನು ವಿಷಯವನ್ನು ಅಫಿಲಿಯೇಟಿಂಗ್ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಮೇಜರ್ **'ಲಾಂಗ'** ಎಂಬುವರಲ್ಲಿ ಮತ್ತು ಮುಲ್ಕಿ ಮತ್ತು ಫೌಜುದಾರಿ ಕಲಿತುಕೊಂಡರು[೧೧೦]. ಹೀಗೆ ಶಂಕರರಾದ ಅಪ್ಪಾಸಾಹೇಬರು ಅಧಿಕಾರಕ್ಕೆ ಬರುವ ಪೂರ್ವದಲ್ಲಿಯೇ ಅವಶ್ಯಕವಾದ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡರು.

ಶಂಕರರಾವ ಅಪ್ಪಾಸಾಹೇಬರು ಉಚಿತವಾದ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡು ಪ್ರಬುದ್ಧರಾದ ಮೇಲೆ ಬ್ರಿಟಿಷ ಸರಕಾರವು ಇವರಿಗೆ ಜಮಖಂಡಿ ಸಂಸ್ಥಾನವನ್ನಾಳುವ ಪೂರ್ಣ ಅಧಿಕಾರವನ್ನು ಕೊಟ್ಟಿತು. ಹಿಂದೂ ಸಂಪ್ರದಾಯದಂತೆ ಕ್ರಿ.ಶ.೧೯೨೬ರ ಮೇ ತಿಂಗಳ ೨೮ರಂದು ಇವರ ಸಿಂಹಾಸನರೋಹಣ ಸಮಾರಂಭವು ಅತ್ಯಂತ ವೈಭವದಿಂದ ಜರುಗಿತು. ಅಂದು ಇವರು ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು.

ಇವರ ತಂದೆಯವರು ನಿಶ್ಚಿಯಿಸಿದಂತೆ **'ಬಾವುಡಾ'**ದ ಅಮಾತ್ಯರಾದ ಮಾಧವರಾದ ಪಂತರ ಮಗಳಾದ ಸೌಭಾಗ್ಯವತಿ ಲೀಲಾವತಿ ರಾಣಿಸಾಹೇಬರನ್ನು ಶಂಕರರಾವ ಅಪ್ಪಾಸಾಹೇಬರು ಮಾರ್ಚ್ ೧೯೨೪ ರಲ್ಲಿ ವಿವಾಹವಾದರು. ಮುಂದೆ ಕ್ರಿ.ಶ.೧೯೨೫ರ ಎಪ್ರಿಲ್ ೨೫ರಂದು ಲೀಲಾವತಿ ರಾಣಿಸಾಹೇಬರು ಗಂಡು ಮಗುವಿಗೆ ಜನ್ಮವಿತ್ತರು. ಬಾಲ

ಯುವರಾಜನಿಗೆ ಶ್ರೀಮಂತ **"ಪರಶುರಾಮ ಭಾವು ಸಾಹೇಬ"** ಎಂದು ಇವರ ಅಜ್ಜನ ಹೆಸರನ್ನಿಟ್ಟರು. ಇವರೇ ಮುಂದೆ ಪಿ.ಪಟವರ್ಧನ ಎಂದು ಹೆಸರುವಾಸಿಯಾದರು. ಶಂಕರರಾದ ಅಪ್ಪಾಸಾಹೇಬರಿಗೆ ಮುಂದೆ ಎರಡು ವರುಷಗಳ ನಂತರ ಅಂದರೆ ಕ್ರಿ.ಶ.೧೯೨೬ರಲ್ಲಿ ಇಂದಿರಾ ರಾಜೆ ಉರ್ಫ್ ತಾಯಿಸಾಹೇಬ ಎಂಬ ಹೆಣ್ಣು ಮಗಳು ಜನಿಸಿದಳು. ಈ ಇಂದಿರಾ ರಾಜೆಯವರು ತಮ್ಮ ಇಡೀ ಜೀವನವನ್ನೇ ಸಮಾಜ ಸುಧಾರಣೆಗಾಗಿ ಸವೆಸಿದರು. ಪುಣೆಯಲ್ಲಿ ಇವರು **"ಆನಂದ ಗ್ರಾಮ ಸೊಸಾಯಿಟಿ"** ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಕುಷ್ಠರೋಗ ನಿವಾರಣೆಗಾಗಿ ಶ್ರಮಿಸಿದರು. ಆ ಸಂಸ್ಥೆಯ ಅಧ್ಯಕ್ಷರಾಗಿ ಎಷ್ಟೋ ವರುಷಗಳವರೆಗೆ ಕಾರ್ಯಮಾಡಿದರು.

ಶ್ರೀಮಂತ ಶಂಕರರಾದ ಅಪ್ಪಾಸಾಹೇಬರು ತಮ್ಮ ಪೂರ್ವಜರಂತೆ ಶಿಕ್ಷಣ ಪ್ರೇಮಿಗಳಾಗಿದ್ದು, ಪ್ರಜೆಗಳಿಗೆ ಉನ್ನತಶಿಕ್ಷಣವನ್ನು ಕೊಡಿಸುವದಕ್ಕಾಗಿ ಪುಣೆಯಲ್ಲಿ ಕ್ರಿ.ಶ.೧೯೨೮ರಲ್ಲಿ ತಮ್ಮ ತಂದೆಯವರ ಸ್ಮರಣಾರ್ಥ **"ಡೆಕ್ಕನ್ ಶಿಕ್ಷಣ ಪ್ರಸಾರ ಮಂಡಳಕ್ಕೆ"** ಎರಡು ಲಕ್ಷ (೨,೦೦,೦೦೦ ರೂ.) ರೂಪಾಯಿಗಳನ್ನು ಉದಾರ ದೇಣಿಗೆಯಾಗಿ ಕೊಟ್ಟು ಆ ಮಂಡಳದ **"New poona College"** ಕ್ಕೆ **"ಸರ್ ಪರಶುರಾಮ ಭಾವು ಕಾಲೇಜ"** ಎಂದು ಹೆಸರನ್ನಿಡಿಸಿದರು. ಮತ್ತು ಆ ಕಾಲೇಜಿಗೆ ಹೆಚ್ಚಿನ ವ್ಯಾಸಂಗಕ್ಕಾಗಿ ಹೋದ ಜಮಖಂಡಿಯ ೫೦ ಜನ ವಿದ್ಯಾರ್ಥಿಗಳಿಗೆ ಪ್ರತಿ ವರ್ಷ ಪುಕ್ಕಟ್ಟೆಯಾದ ಶಿಕ್ಷಣವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದರು. ಈ ಪರಂಪರೆಯು (ಪದ್ಧತಿಯು) ಇಂದಿಗೂ ಜಾರಿಯಲ್ಲಿದ್ದು, ಪ್ರತಿ ವರುಷ ಜಮಖಂಡಿಯಿಂದ ಅನೇಕ ವಿದ್ಯಾರ್ಥಿಗಳು ಪುಣೆಯ ಎಸ್.ಪಿ. ಕಾಲೇಜಿಗೆ ಹೋಗಿ ಈ ಸೌಲಭ್ಯವನ್ನು ಪಡೆದುಕೊಳ್ಳುತ್ತಾರೆ. ಇವರು ಸ್ಥಾಪಿಸಿದ ಎಸ್.ಪಿ. ಕಾಲೇಜು ಇಂದು ಒಂದು ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯೆಂದು ಖ್ಯಾತಿವೆತ್ತಿದೆ.

ಮೊದಲ ರಾಮಚಂದ್ರರಾವ್ ಅಪ್ಪಾಸಾಹೇಬರ ಕಾಲದಲ್ಲಿ ಜಮಖಂಡಿ ನಗರಕ್ಕೆ ಕೆರೆಯಿಂದ ಕುಡಿಯುವ ನೀರನ್ನು ಪೂರೈಸಲಾಗುತ್ತಿತ್ತು. ಆದರೆ ಮುಂದೆ ನಗರದ ಜನವಸತಿಯು ಬೆಳೆಯಹತ್ತಿದ್ದರಿಂದ ಆ ಕೆರೆಯ ನೀರು ಸಾಲದಂತಾಗಲು ಕ್ರಿ.ಶ.೧೯೨೮ರಲ್ಲಿ ಶಂಕರರಾವ ಅಪ್ಪಾಸಾಹೇಬರು ಜಮಖಂಡಿ ನಗರಕ್ಕೆ ನಿರಂತರ ಕುಡಿಯುವ ನೀರಿನ ವ್ಯವಸ್ಥೆಗಾಗಿ ಕೃಷ್ಣಾ ನದಿಯ ತಟಾಕದಲ್ಲಿದ್ದ ಸನಾಳ ಗ್ರಾಮದಲ್ಲಿ ಒಂದು ನೀರಿನ ಟ್ಯಾಂಕನ್ನು ಕಟ್ಟಿಸಿ ಅಲ್ಲಿಂದ ಪೈಪುಗಳ ಮೂಲಕ ನೀರನ್ನು ಪೂರೈಸುವ ವ್ಯವಸ್ಥೆಯನ್ನು ಮಾಡಿದರು. ಈ ಯೋಜನೆಗೆ ಅಂದು ಸುಮಾರು ರೂ. ೭ ಲಕ್ಷ ವೆಚ್ಚ ಮಾಡಿದರು. ಇಂದಿಗೂ ಸಹ ಜಮಖಂಡಿ ನಗರಕ್ಕೆ ಸನಾಳ ಟ್ಯಾಂಕ್‌ನಿಂದಲೇ ನೀರನ್ನು ಪೂರೈಸಲಾಗುತ್ತಿದೆ. ಅದರಂತೆ ಕ್ರಿ.ಶ.೧೯೩೧ರಲ್ಲಿ ಜಮಖಂಡಿ ರಾಮತೀರ್ಥಕ್ಕೆ ವಿದ್ಯುತ್ತನ್ನು ಪೂರೈಸಲು (Electric power House) ವಿದ್ಯುತ್ ಆಗರವನ್ನು ಸ್ಥಾಪಿಸಿದರು. ಇವರು ಸರಕಾರಿ ಆಸ್ಪತ್ರೆಯಲ್ಲಿ ಪ್ರಸೂತಿ ವಿಭಾಗವನ್ನು ಪ್ರಾರಂಭಿಸಿದರು. ಅಲ್ಲದೆ ಪಶುಚಿಕಿತ್ಸಾಲಯವನ್ನು ಸ್ಥಾಪಿಸಿ ಪುಕ್ಕಟೆಯಾಗಿ ಔಷಧಗಳನ್ನು ಒದಗಿಸುವ ವ್ಯವಸ್ಥೆಯನ್ನು ಮಾಡಿದರು.

ಶಂಕರರಾವ ಅಪ್ಪಾಸಾಹೇಬರು ಮುಂಬೈ ಪ್ರಾಂತದ ಮುಖ್ಯ ಅಭಿಯಂತರರ ಸಲಹೆಯ ಮೇರೆಗೆ ಜಮಖಂಡಿ ನಗರ ವಿಸ್ತೀರ್ಣ ಯೋಜನೆಯನ್ನು ರೂಪಿಸಿದರು. ನಗರದಲ್ಲಿ ಎಲ್ಲ ಸೌಲಭ್ಯಗಳಿಂದ ಕೂಡಿದ ಆಧುನಿಕ ಮಾದರಿಯ ಬಡಾವಣೆಗಳನ್ನು ನಿರ್ಮಿಸುವದೇ ಈ ಯೋಜನೆಯ ಗುರಿಯಾಗಿತ್ತು. ಪೂರ್ವ-ಪಶ್ಚಿಮ ಹಾಗೂ ದಕ್ಷಿಣೋತ್ತರವಾಗಿ ಹರಡಿದ

ವಿಶಾಲವಾದ ಬೀದಿಗಳು, ಸಾಕಷ್ಟು ನೀರಿನ ಪೂರೈಕೆ, ವಿದ್ಯುತ್ ದೀಪದ ವ್ಯವಸ್ಥೆ, ಚರಂಡಿಗಳ ನಿರ್ಮಾಣ ಇವೇ ಮೊದಲಾದವುಗಳು ಈ ನಗರ ಯೋಜನೆಯ ವೈಶಿಷ್ಟ್ಯಗಳಾಗಿದ್ದವು. ಹೀಗೆ ಇವರ ಕಾಲದಲ್ಲಿ ಜಮಖಂಡಿಯು ಒಂದು ಸುಂದರ ಹಾಗೂ ಯೋಜನಾ ಬದ್ಧವಾಗಿ ಕಟ್ಟಲ್ಪಟ್ಟ ನಗರವಾಗಿತ್ತು. ಈ ನಗರವು ಅನೇಕ ಸುಂದರವಾದ ಮನೆಗಳಿಂದ, ಗುಡಿಗೋಪುರಗಳಿಂದ, ವಾಣಿಜ್ಯ ಮಳಿಗೆಗಳಿಂದ (ಪಗಡಿ ಬಝಾರ) ಸದಾ ಶೋಭಿಸುತ್ತಿತ್ತು. ಆದ್ದರಿಂದ ಈ ಭಾಗದ ಕೆಲವು ಗ್ರಾಮೀಣ ಹಿರಿಯರು (ಜಮಖಂಡಿ ಬಗೆಗೆ) ಹೇಳುತ್ತಿರುವದೇನೆಂದರೆ **"ಜಮಖಂಡಿಯಂತಹ ನಗರವಿಲ್ಲ, ಜಂಬುಲಿಂಗಪ್ಪನಂತಹ ಗುಡಿಯಿಲ್ಲ"**. ಅಷ್ಟೇ ಅಲ್ಲ ಜಮಖಂಡಿ ನಗರವನ್ನು ನೋಡಿದರೆ ಜಗತ್ತಿನಲ್ಲಿಯ ಎಲ್ಲ ಸುಂದರ ನಗರಗಳನ್ನು ನೋಡಿದಂತೆಯೇ ಸರಿ. ಅಂದರೆ ಜಮಖಂಡಿ ನಗರವನ್ನು ಅಷ್ಟು ಜಂಬುಲಿಂಗಪ್ಪನ ಗುಡಿಯೆಂದರೆ ಜಂಬುಕೇಶ್ವರ ದೇವಾಲಯವು ಇದನ್ನು ನೋಡಿದರೆ ಇಡೀ ದಕ್ಷಿಣ ಭಾರತದಲ್ಲಿಯ ಎಲ್ಲ ಕಲಾತ್ಮಕ ದೇವಾಲಯಗಳನ್ನು ನೋಡಿದಂತೆ ಸರಿ.

ಜಮಖಂಡಿಯ ಸಂಸ್ಥಾನಿಕರಾದ ಪಟವರ್ಧನ ಅರಸರು ಇಂದು ನಾವು ಕಾಣುವ ರಾಮತೀರ್ಥದಲ್ಲಿದ್ದ ಸುಂದರವಾದ ಅರಮನೆಯಲ್ಲಿಯೇ ವಾಸಿಸುತ್ತಿದ್ದರು. ಕ್ರಿ.ಶ.೧೮೬೫ರಲ್ಲಿ ಮೊಟ್ಟ ಮೊದಲಿಗೆ ರಾಮಚಂದ್ರರಾವ್ ಅಪ್ಪಾಸಾಹೇಬರು ಈ ಅರಮನೆಯನ್ನು ಕಟ್ಟಡದ ಕಾರ್ಯವನ್ನು ಪ್ರಾರಂಭಿಸಿದರು. ಮುಂದೆ ಶಂಕರರಾವ್ ಅಪ್ಪಾಸಾಹೇಬರು ವಿಸ್ತರಿಸಿದರಲ್ಲದೆ ಅದರ ಆವರಣದಲ್ಲಿ ಅನೇಕ ಕಟ್ಟಡಗಳನ್ನು ಕಟ್ಟಿಸಿ ಅರಮನೆಯ ಸೌಂದರ್ಯವನ್ನು ಹೆಚ್ಚಿಸಿದರು. ಇವರು ತಮ್ಮ ಅಜ್ಜನವರಾದ ರಾಮಚಂದ್ರರಾವ್ ಅಪ್ಪಾಸಾಹೇಬರವರ ಸ್ಮರಣಾರ್ಥ ಈ ಅರಮನೆಗೆ **"ರಾಮಚಂದ್ರ ಪ್ರಸಾದ"** ಎಂದು ಹೆಸರಿಟ್ಟರು. ಕರ್ನಾಟಕದಲ್ಲಿ ಅತ್ಯಂತ ಸುಂದರ ಹಾಗೂ ಭವ್ಯತೆಯಲ್ಲಿ ಮೈಸೂರ ಅರಮನೆಯು ಪ್ರಥಮ ಸ್ಥಾನದಲ್ಲಿದ್ದರೆ ಜಮಖಂಡಿಯ ಸಂಸ್ಥಾನಿಕರ ಅರಮನೆಯು ದ್ವಿತೀಯ ಸ್ಥಾನದಲ್ಲಿದೆ.

ಶಂಕರರಾವ್ ಅಪ್ಪಾಸಾಹೇಬರು ಉದಾರ ಮನಸ್ಸಿನವರಾಗಿದ್ದರು. ಭೂಕಂಪ ಪೀಡಿತ ಜನರಿಗಾಗಿ **"ಬಿಹಾರ ಪರಿಹಾರ ನಿಧಿ"** ಮತ್ತು **"ಕ್ವೆಟ್ಟಾ"** ಪರಿಹಾರ ನಿಧಿಗೆ ಧನ ಸಹಾಯವನ್ನು ಮಾಡಿದರು. ಅಲ್ಲದೆ ಟಿ.ಬಿ. ರೋಗ ನಿವಾರಣೆಗಾಗಿ ಸಾಕಷ್ಟು ನೆರವನ್ನು ನೀಡಿದರು. ಅದರಂತೆ ಐದನೇ ಜಾರ್ಜರ ರಜತ ಮಹೋತ್ಸವ ನಿಧಿಗೆ ಧನ ಸಂದಾಯ ಮಾಡಿದರು. ಅನೇಕ ಧಾರ್ಮಿಕ ಮತ್ತು ಶೈಕ್ಷಣಿಕ ಸಂಸ್ಥೆಗಳಿಗೆ ಉದಾರ ದತ್ತಿ-ದಾನಗಳನ್ನು ಕೊಟ್ಟರು. ೧೯ ಮತ್ತು ೨೦ನೇ ಶತಮಾನದಲ್ಲಿ ಭಾರತದಲ್ಲಿ ರಾಜಾರಾಮ ಮೋಹನರಾಯ, ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ ಮೊದಲಾದವರಿಂದ ಪ್ರಾರಂಭವಾದ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯ ಪ್ರಭಾವಕ್ಕೊಳಗಾದ ಇವರು (ಶಂಕರರಾವ್ ಅಪ್ಪಾಸಾಹೇಬರು) ತಮ್ಮ ಸಂಸ್ಥಾನದಲ್ಲಿ **"ಗೋಹತ್ಯೆಯ ನಿಷೇಧ"** ಕಾಯ್ದೆಯನ್ನು ಜಾರಿಗೊಳಿಸಿದರು ಮತ್ತು ರಾಜ್ಯದಲ್ಲಿ ಯಾವುದೇ ಹಿಂಸಾಕೃತ್ಯಕ್ಕೆ ಅವಕಾಶವಿರಲಿಲ್ಲ. ಇವರ ಆಳ್ವಿಕೆಯಲ್ಲಿ ಗಣೇಶ ಚತುರ್ಥಿ, ನವರಾತ್ರಿ ಹಾಗೂ ಶಿವರಾತ್ರಿ ಹಬ್ಬಗಳನ್ನು ಅತ್ಯಂತ ಅದ್ದೂರಿಯಿಂದ ಆಚರಿಸಲಾಗುತ್ತಿತ್ತು. ಆ ಸಂದರ್ಭದಲ್ಲಿ ವಿವಿಧ ಕಲಾಕಾರರನ್ನು ಗೌರವಿಸುತ್ತಿದ್ದರು.

ಇವರು ಕ್ರಿ.ಶ.೧೯೩೫ರಲ್ಲಿ ಜರುಗಿದ ಇಂಗ್ಲೆಂಡದ ದೊರೆ ಐದನೇ ಜಾರ್ಜರ (Gorge the V) ಸಿಂಹಾಸನಾರೋಹಣದ ರಜತ ಮಹೋತ್ಸವದ ಸಮಾರಂಭಕ್ಕೆ ಇಂಗ್ಲೆಂಡಿಗೆ ಹೋಗಿದ್ದರು. ಆಗ ಸಾಮ್ರಾಟ ಐದನೇ ಜಾರ್ಜರು ಇವರಿಗೆ **"ಢರಾಜ"** ಎಂಬ ಬಿರುದನ್ನು

ಕೊಟ್ಟು ಗೌರವಿಸಿದರು. ಅದರಂತೆ ಆರನೆಯ ಜಾರ್ಜ ದೊರೆಯ ಪಟ್ಟಾಭಿಷೇಕ ಸಮಾರಂಭಕ್ಕೆ ಇಂಗ್ಲೆಂಡಿಗೆ ಹೋಗಿದ್ದರು. ಆಗ ಇವರು ಉಳಿದ ಯುರೋಪಿಯನ್ ರಾಷ್ಟ್ರಗಳನ್ನು ಸಂದರ್ಶಿಸಿ ಅಲ್ಲಿಯ ಆಡಳಿತದ ವಿಧಾನವನ್ನು ಸಾಮಾಜಿಕ ಹಾಗೂ ಆರ್ಥಿಕ ಸುಧಾರಣೆಗಳನ್ನು ಪ್ರತ್ಯಕ್ಷ ಕಂಡು ಅವುಗಳನ್ನು ತಮ್ಮ ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಪ್ರಯತ್ನಿಸಿದರು. ಅಲ್ಲದೆ ಭಾರತದ ನೆರೆಯ ರಾಷ್ಟ್ರಗಳಾದ ಸಿಲೋನ, ಸಿಂಗಾಪುರ, ವೆಸ್ಟ್-ಇಂಡೀಜ ನಡುಗಡ್ಡೆಗಳಿಗೆ ಬೆಟ್ಟಿಯಿತ್ತಿದ್ದರು. ಹೀಗೆ ಇವರು ದೇಶ-ವಿದೇಶಗಳ ಪ್ರವಾಸವನ್ನು ಕೈಕೊಂಡು ಅಂತರಾಷ್ಟ್ರೀಯ ಅನುಭವವನ್ನು ಪಡೆದುಕೊಂಡವರಾಗಿದ್ದರು.

ಶಂಕರರಾವ್ ಅಪ್ಪಾಸಾಹೇಬರು ತಮ್ಮ ಕಾಲದಲ್ಲಿ ಅನೇಕ ಶೈಕ್ಷಣಿಕ ಸುಧಾರಣೆಗಳನ್ನು ಕೈಕೊಂಡರು. ಕುಂದಗೋಳದಲ್ಲಿದ್ದ ಆಂಗ್ಲೋ-ವ್ಹರ್ನ್ಯಾಕ್ಯುಲರ ಶಾಲೆಯನ್ನು ಹೈಸ್ಕೂಲನ್ನಾಗಿ ಪರಿವರ್ತಿಸಿ ಅದಕ್ಕೆ ಪಟವರ್ಧನ ಮನೆತನದ ಮೂಲ ಪುರುಷರಾದ ಹರಭಟ್ಟರ ಹೆಸರನ್ನಿಟ್ಟರು. ಇಂದಿಗೂ ಸಹ ಆ ಶಾಲೆಗೆ ಹರಭಟ್ಟ ಹೈಸ್ಕೂಲ್ ಎಂದೇ ಕರೆಯುತ್ತಾರೆ. ಅದರಂತೆ ಬನಹಟ್ಟಿಯಲ್ಲಿ ಆಂಗ್ಲೋ-ವ್ಹರ್ನಾಕ್ಯುಲರ ಶಾಲೆಯನ್ನು ಸ್ಥಾಪಿಸಿದರು. ಮುಂದೆ ಇದೇ ಶಾಲೆಯನ್ನು ಮಾಧ್ಯಮಿಕ ಶಾಲೆಯನ್ನಾಗಿ ರೂಪಿಸಿದರು. ಅದಕ್ಕೆ ಸಂಸ್ಥಾನಿಕರು ತಮ್ಮ ಸರಕಾರದಿಂದ ಧನ ಸಹಾಯವನ್ನು ಮಾಡುತ್ತಿದ್ದರು. ತದನಂತರ ಇದನ್ನು ಸ್ಥಳೀಯ ಜನತಾ ಶಿಕ್ಷಣ ಸಮಿತಿಗೆ ಒಪ್ಪಿಸಿದರು. ಇಂದು ಈ ಹೈಸ್ಕೂಲಿಗೆ ಎಸ್.ಆರ್.ಎ. (S.R.A.) ಹೈಸ್ಕೂಲ್ ಬನಹಟ್ಟಿ ಎಂದು ಕರೆಯುತ್ತಾರೆ. ಹೀಗೆ ಇವರು ಅಂದು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳು ಇಂದು ಪ್ರಗತಿಪಥದಲ್ಲಿದ್ದು ಅನೇಕ ಗ್ರಾಮೀಣ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನೀಯುತ್ತಿರುವದು ಶ್ಲಾಘನೀಯ.

ಜಾಗತೀಕ ಎರಡನೇಯ ಮಹಾಯುದ್ಧವು ಕ್ರಿ.ಶ.೧೯೩೯ರಲ್ಲಿ ಪ್ರಾರಂಭವಾಗಿ ಕ್ರಿ.ಶ.೧೯೪೫ರವರೆಗೆ ನಡೆದು ಜಗತ್ತಿನ ಬಹುರಾಷ್ಟ್ರಗಳ ಮೇಲೆ ವಿಪರೀತ ಪರಿಣಾಮವನ್ನುಂಟು ಮಾಡಿತು. ಆಗ ಇಂಗ್ಲೆಂಡಿನಲ್ಲಿ ಆರ್ಥಿಕ ಮುಗ್ಗಟ್ಟು ತಲೆದೊರಿತ್ತು. ಆದ್ದರಿಂದ ಭಾರತದ ವೈಸ್‌ರಾಯ್ ಮತ್ತು ಗವ್ಹರ್ನರ್ ಜನರಲ್‌ರ ಆಪೇಕ್ಷೆಯ ಮೇರೆಗೆ ದೇಶದಲ್ಲಿದ್ದ ಎಲ್ಲ ಸಂಸ್ಥಾನಿಕರು, ರಾಜ-ಮಹಾರಾಜರೂ, ದೇಸಾಯಿ, ದೇಶಮುಖರೆಲ್ಲರೂ ಅಪಾರ ಹಣವನ್ನು ಸಂಗ್ರಹಿಸಿ ಆಂಗ್ಲರಿಗೆ ಯುದ್ಧದ ಸಹಾಯಧನವೆಂದು ಕೊಟ್ಟರು. ಅದರಂತೆ ಶಂಕರರಾವ್ ಅಪ್ಪಾಸಾಹೇಬರು ಸಹ ಕ್ರಿ.ಶ.೧೯೪೩-೪೪ರಲ್ಲಿ ತಮ್ಮ ಸಂಸ್ಥಾನದ ವತಿಯಿಂದ ೬೦,೦೦೦ ರೂ.ಗಳನ್ನು ಕೊಟ್ಟರು ಮತ್ತು ಸೌಭಾಗ್ಯವತಿ ರಾಣಿಸಾಹೇಬರೂ ಸಹ ತಮ್ಮ ಸ್ವಂತ ನಿಧಿಯಿಂದ ೬೦೦೦ ರೂ ಯುದ್ಧದ ಸಹಾಯಾರ್ಥವಾಗಿ ಕೊಟ್ಟರು. ಹೀಗೆ ಇವರು ಆಂಗ್ಲರಿಗೆ ಈ ಯುದ್ಧದ ಸಮಯದಲ್ಲಿ ಅನೇಕ ರೀತಿಯಿಂದ ಸಹಾಯ ಸಲ್ಲಿಸಿದ್ದರಿಂದ ಆಂಗ್ಲ ಸರಕಾರವು ಇವರನ್ನು ಅಭಿನಂದಿಸಿತು.

ಇವರು ಪ್ರಜೆಗಳನ್ನು ಬರಗಾಲದ ಬವಣೆಯಿಂದ ರಕ್ಷಿಸುವದಕ್ಕಾಗಿ ಕ್ರಿ.ಶ.೧೯೪೦ರಲ್ಲಿ "Famine Reserve Fund" **(ಕ್ಷಾಮ ಪರಿಹಾರ ನಿಧಿ ಸಂಗ್ರಹ) "ಬರಗಾಲವನ್ನು ಎದುರಿಸಲು ಕಾಯ್ದಿಟ್ಟ ನಿಧಿ"** ಎಂದು ಪ್ರತ್ಯೇಕ ವಿಭಾಗವನ್ನು ಸ್ಥಾಪಿಸಿ ಅದಕ್ಕೆ ಅಪಾರ ಹಣವನ್ನು ಕಾಯ್ದಿರಿಸಿದ್ದರು. ರಾಜ್ಯದಲ್ಲಿ ಒಂದು ವೇಳೆ ಬರಗಾಲವು ಸಂಭವಿಸಿದರೆ ಈ ಕಾಯ್ದಿಟ್ಟ ಹಣವನ್ನು ಉಪಯೋಗಿಸುತ್ತಿದ್ದರು. ಕ್ರಿ.ಶ.೧೯೪೧-೪೨ರಲ್ಲಿ ರಾಜ್ಯದಲ್ಲಿ ಸಂಭವಿಸಿದ ಭೀಕರ ಬರಗಾಲದ ಪ್ರಸಂಗದಲ್ಲಿ ಇವರು ಕೃಷಿಕರಿಗೆ ಧನ-ಧಾನ್ಯರೂಪದಿಂದ ನೆರವನ್ನು ನೀಡಿದರು. ಸಂಗ್ರಹಿಸಿಟ್ಟ ೭೦೦೦ ರೂ.ಗಳನ್ನು ಬರಗಾಲ ಪರಿಹಾರಕ್ಕಾಗಿ ವ್ಯಯ ಮಾಡಿದರು.

ರಾಜ್ಯದ ಕೃಷಿ ಹಾಗೂ ವಾಣಿಜ್ಯದ ಬೆಳವಣಿಗೆಗಾಗಿ ಆರ್ಥಿಕ ನೆರವು ನೀಡಲು ಕ್ರಿ.ಶ.೧೯೪೦ರಲ್ಲಿ ಶಂರರಾವ್ ಅಪ್ಪಾಸಾಹೇಬರು ರಾಜ್ಯದಲ್ಲಿ **'ಜಮಖಂಡಿ ಸ್ಟೇಟ್, ಸೆಂಟ್ರಲ್ ಕೋ-ಆಪ್‌ರೇಟಿವ್ವ ಬ್ಯಾಂಕ್'** ಸ್ಥಾಪಿಸಿದರು. ಇದಲ್ಲದೆ ಗ್ರಾಮೀಣ ಕೃಷಿಕರಿಗೆ ಸಾಲ ವಿತರಣೆ ಮಾಡಲು ಅನೇಕ ಸಹಕಾರಿ ಸಂಘಗಳು ರಾಜ್ಯದಲ್ಲಿ ಕಾರ್ಯಮಾಡುತ್ತಿದ್ದವು[೧೧೧].

ಕ್ರಿ.ಶ.೧೯೨೧ರ ಫೆಬ್ರವರಿ ೮ರಂದು ನರೇಂದ್ರ ಮಂಡಳವು (ಆಂಗ್ಲರಿಂದ) ಸ್ಥಾಪಿಸಲ್ಪಟ್ಟಿತು. ಇದು ದಕ್ಷಿಣ ಸಂಸ್ಥಾನಿಕರ ಪ್ರತಿನಿಧಿಗಳ ಸಭೆಯಾಗಿದ್ದು, ಪ್ರತಿಯೊಂದು ರಾಜ್ಯದ ಆಡಳಿತದ ಧ್ಯೇಯ ಧೋರಣೆಗಳನ್ನು ರೂಪಿಸಲು, ರಾಜ್ಯದ ಪ್ರತಿನಿಧಿಗಳ ಸಲಹೆ-ಸೂಚನೆಗಳನ್ನು ಆಲಿಸುತ್ತಿತ್ತು. ಶಂಕರರಾವ್ ಅಪ್ಪಾಸಾಹೇಬರು ನರೇಂದ್ರ ಮಂಡಳದ ಸದಸ್ಯರಾಗಿದ್ದರು. 'ರಾಜ' ಎಂಬ ಬಿರುದನ್ನು ಬ್ರಿಟೀಷ ಸರಕಾರವು ಈ ಸಂಸ್ಥಾನದ ಅರಸರಿಗೆ ಕೊಡುವದನ್ನು ಇವರಿಂದಲೇ ಪ್ರಾರಂಭಿಸಿತು. ಇವರ ಆಳ್ವಿಕೆಯಲ್ಲಿಯೇ ಡೆಕ್ಕನ್ ಸ್ಟೆಟುಗಳಲ್ಲಿ ಅರಸರ ವಿರುದ್ಧ ಪ್ರಜೆಗಳ ಚಳುವಳಿಯು ಪ್ರಾರಂಭವಾಯಿತು. ಡೆಕ್ಕನ್ ಸ್ಟೆಟುಗಳು(ಸಂಸ್ಥಾನಗಳು) ಸಾಂಗಲಿ, ಕೊಲ್ಲಾಪುರ, ಮಿರಜ, ಜಮಖಂಡಿ, ರಾಮದುರ್ಗ, ಸೊಂಡೂರ, ಕುರಂದವಾಡ, ಬುದಗಾಂವ, ಸಾವಂತವಾಡಿ, ಔಂದ, ಬೋರ, ಪಲ್ಟನ್, ಜತ್ತ, ಮುಧೋಳ, ಜಿಂಜಿರಾ, ಈಚಲಕರಂಜಿ, ಅಕ್ಕಲಕೋಟೆ, ಬಾವುಡ ಆಗ ಇವರು ತಮ್ಮ ಪ್ರಜೆಗಳ ಆಸೆ-ಆಕ್ಷಾಂಕ್ಷೆಗಳನ್ನು ಲಕ್ಷಿಸಿ ಕ್ರಿ.ಶ.೧೯೩೩ರಲ್ಲಿ ಜಮಖಂಡಿಯ ಪ್ರಾತಿನಿಧಿಕ ಕಾಯ್ದೆ ಮಂಡಳವನ್ನು ಸ್ಥಾಪಿಸಿ ಕ್ರಮೇಣ ಅದಕ್ಕೆ ಅಧಿಕಾರವನ್ನು ಒಪ್ಪಿಸುವ ನಿರ್ಣಯಕ್ಕೆ ಬಂದರು. ಲೋಕಾಯುಕ್ತ ಮಂತ್ರಿಗಳ ನಿಯುಕ್ತಿಯು ಇವರ ಕಾಲದಲ್ಲಿಯೇ ಪ್ರಾರಂಭವಾಯಿತು. ಶಂಕರರಾವ್ ಅಪ್ಪಾಸಾಹೇಬರು ತಮ್ಮ ೨೨ನೇ ವಯಸ್ಸಿನಲ್ಲಿಯೇ ನರೇಂದ್ರ ಮಂಡಳದ **(Chamber of Indian Prices)** ಸದಸ್ಯರಾಗಿ ಆಯ್ಕೆಯಾದರು. ಇವರು ಈ ಮಂಡಳದ ಸಭೆಯ ಎಲ್ಲ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಿದ್ದರು. ಜಮಖಂಡಿ ಸಂಸ್ಥಾನದ ೧೯೪೧-೪೨ರ ಆಡಳಿತದ ವರದಿಯ ಪ್ರಕಾರ ಇವರು ಕ್ರಿ.ಶ.೧೯೪೨ರ ಮಾರ್ಚ್ ತಿಂಗಳ ೬ನೇ ತಾರೀಕಿನಂದು **'ದೆಹಲಿ'**ಯಲ್ಲಿ ನಡೆದ ನರೇಂದ್ರ ಮಂಡಳದ ಸಭೆಗೆ ಹೋಗಿದ್ದರು. ಇವರು ಈ ಮಂಡಳದ ಶಾಶ್ವತ ಸದಸ್ಯತ್ವವನ್ನು ಹೊಂದಿದವರಾಗಿದ್ದರು.

ಕ್ರಿ.ಶ.೧೯೨೭ರಲ್ಲಿ ಜಮಖಂಡಿಯಲ್ಲಿ **"ಪ್ರಜಾ ಪ್ರತಿನಿಧಿ ಸಭೆಯು"** ಸ್ಥಾಪಿಸಲ್ಪಟ್ಟಿತು. ಮೊದಲು ಇದಕ್ಕೆ **"ಲೋಕ ಸಭೆ"** ಎಂದು ಕರೆಯಲಾಗುತ್ತಿತ್ತು. ಅನೇಕ ವಿಚಾರವಾದಿಗಳ (ಬುದ್ಧಿಜೀವಿಗಳ) ಹೋರಾಟದ ಫಲವಾಗಿ ಈ ಸಭೆಯು ಅಸ್ತಿತ್ವದಲ್ಲಿ ಬಂದಿತು. ಜಮಖಂಡಿಯ ದಾಮು ಅಣ್ಣಾ ಹುಲ್ಯಾಳಕರ, ಎ.ವ್ಹಿ. ಸಾಬಡೆ ಮೊದಲಾದವರು ಈ ಸಭೆಯ ಪ್ರಮುಖ ಸದಸ್ಯರಾಗಿದ್ದರು. ಸ್ವತಃ ಸಾಬಡೆಯವರು ರಚಿಸಿದ **"ಸಾಬಡೆ ಸಮಿತಿಯ ವರದಿ"**ಯು ಪ್ರಕಟವಾದ ನಂತರ ಅವರು ಮತ್ತಿಷ್ಟು ಜನಾನುರಾಗಿಗಳಾದರು. ಇದೇ ಸಮಯದಲ್ಲಿ ಅಂದರೆ ಕ್ರಿ.ಶ.೧೯೪೨ರ ಆಗಸ್ಟ್ ೮ರಂದು ದೇಶದಲ್ಲಿ ಮಹಾತ್ಮಾ ಗಾಂಧೀಜಿಯವರು ಇತಿಹಾಸ ಪ್ರಸಿದ್ಧವಾದ ಚಲೇಜಾವ್ ಚಳುವಳಿ **"ಬ್ರಿಟಿಷರೇ ಭಾರತದಿಂದ ತೊಲಗಿರಿ"** ಎಂಬ ಆಂದೋಲನ)ಯನ್ನು ಪ್ರಾರಂಭಿಸಿದರು. ಗಾಂಧೀಜಿಯವರ ಕರೆಗೆ ಓಗೊಟ್ಟು ಇಡೀ ದೇಶದ ಜನತೆ ಆಂಗ್ಲರ ವಿರುದ್ಧ ಉಗ್ರ ಚಳುವಳಿಯನ್ನು ಪ್ರಾರಂಬಿಸಿದರು. ಈ ಚಳವಳಿಯ ಪ್ರಭಾವ ಜಮಖಂಡಿಯ ಮೇಲೆ ಬೀರದೇ ಇರಲಿಲ್ಲ. ಆಗ ಎ.ವ್ಹಿ. ಸಾಬಡೇಯವರು **"ಸಂಸ್ಥಾನಿ ಸ್ವರಾಜ್ಯ"** ಎಂಬ ವಾರ ಪತ್ರಿಕೆಯನ್ನು ಹೊರಡಿಸಿ ಸಂಸ್ಥಾನಿಕರಿಂದ ಪ್ರಜೆಗಳಿಗಾಗುತ್ತಿದ್ದ ಅನ್ಯಾಯದ ವಿರುದ್ಧ

ಉಗ್ರ ಲೇಖನಗಳನ್ನು ಬರೆದು ಪ್ರಕಟಸಹತ್ತಿದ್ದರು ಹಾಗೂ ಜನ ಸಾಮಾನ್ಯರ ಹಕ್ಕು ಬಾಧ್ಯತೆಗಳಿಗೆ ಹೋರಾಟವನ್ನು ನಡೆಸಿದರು. ಅಲ್ಲದೆ ಶ್ರೇಷ್ಠ ಸ್ವಾತಂತ್ರ್ಯ ಹೋರಾಟಗಾರರಾದ ರತ್ನಪ್ಪಾ ಕುಂಬಾರ, ಬಾಳಾಸಾಹೇಬ ಖೇರ ಮೊದಲಾದವರೊಂದಿಗೆ ಹಾಗೂ ದಕ್ಷಿಣ ಮರಾಠಾ ರಾಜ್ಯದ ಸ್ವಾತಂತ್ರ್ಯ ಹೋರಾಟಗಾರರಾದ ವಾಮರಾವ್ ದೇಸಾಯಿ (ಬಿದರಿ), ಅಣ್ಣುಗುರೂಜಿ, ಶ್ರೀರಂಗ ಕಾಮತ, ಚನ್ನಪ್ಪ ವಾಲಿ, ಅಂದೇನಪ್ಪಾ ದೊಡ್ಡಮೇಟಿ ಮೊದಲಾದವರೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಂಡು ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ಇವರು ಸುಪ್ರಸಿದ್ಧ ನ್ಯಾಯಾವಾದಿಗಳಾಗಿದ್ದು ಜಮಖಂಡಿಯ **"ಪ್ರಜಾಪ್ರತಿನಿಧಿ"** ಸಭೆಯ ಕಾನೂನು ಸಲಹೆಗಾರರಾಗಿದ್ದರು. ದಕ್ಷ ಹಾಗೂ ಪ್ರಾಮಾಣಿಕ ಕಾರ್ಯಕರ್ತರಾಗಿದ್ದು, ಅನ್ಯಾಯದ ವಿರುದ್ಧ ಯಾವಾಗಲೂ ಹೆಡೆ ಎತ್ತಿ ನಿಲ್ಲುವ ದಿಟ್ಟತನ ಇವರಲ್ಲಿತ್ತು. ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಜೆಗಳ ಹಕ್ಕು-ಬಾಧ್ಯತೆಗಾಗಿ ನಿರಂತರ ಹೋರಾಟ ಮಾಡುವ ಛಲ ಇವರಲ್ಲಿತ್ತು. ಹೀಗಾಗಿ ಇವರು ಜಮಖಂಡಿ ಸಂಸ್ಥಾನದಲ್ಲಿ ಅಷ್ಟೇ ಏಕೆ ಇಡೀ ದಕ್ಷಿಣದ ಸಂಸ್ಥಾನಗಳಲ್ಲಿಯೇ ಒಬ್ಬ ಜನಪ್ರಿಯ ನೇತಾರರೆಂದು ಹೆಸರಾಗಿದ್ದರು. ಆದರೆ ದುರ್ದೈವದಿಂದ ಇವರ ಜನಪ್ರಿಯತೆಯನ್ನು ಸಹಿಸದ ಕೆಲವು ದುಷ್ಟಶಕ್ತಿಗಳ ಕೈವಾಡದಿಂದ ಕ್ರಿ.ಶ.೧೯೪೭ರ ಮೇ ತಿಂಗಳ ೨೫ ರಂದು ಇವರು ಹಂತಕರಿಂದ ಕೊಲೆಗೈಯ್ಯಲ್ಪಟ್ಟರು. ಇವರ ಅಗಲುವಿಕೆಯಿಂದ ಜಮಖಂಡಿ ಸಂಸ್ಥಾನವು ಒಬ್ಬ ಶ್ರೇಷ್ಠ ದೇಶಾಭಿಮಾನಿಯನ್ನು ಕಳೆದುಕೊಂಡಂತಾಯಿತು. ಹುತಾತ್ಮರಾದ ಶ್ರೀ.ಎ.ವ್ಹಿ.ಸಾಬಡೆಯವರ ಸ್ಮಾರಕವನ್ನು ಹೊಕ್ಕಳ ಬಾವಿಯ ಮೈದಾನದಲ್ಲಿ ಸ್ಥಾಪಿಸಿದ್ದನ್ನು ಕಾಣಬಹುದು.

ಕ್ರಿ.ಶ.೧೯೪೭ರಲ್ಲಿ ಇವರು ಅನಾರೋಗ್ಯದಿಂದ ಬಳಲುತ್ತಿದ್ದರಿಂದ ಆರೋಗ್ಯ ತಪಾಸಣೆಗಾಗಿ ಇವರನ್ನು ಮುಂಬೈ ಆಸ್ಪತ್ರೆಗೆ ಕರೆದೊಯ್ಯಲಾಯಿತು. ಇದೇ ಸಮಯದಲ್ಲಿ ಭಾರತೀಯರ ನಿರಂತರ ಹೋರಾಟದ ಫಲವಾಗಿ ದೇಶವು ಆಗಸ್ಟ್ ೧೫, ೧೯೪೭ರಂದು ಸ್ವತಂತ್ರವಾಯಿತು. ಆದರೆ ದುರ್ದೈವದಿಂದ ಶಂಕರರಾವ್ ಅಪ್ಪಾಸಾಹೇಬರು ಬೇನೆಯಿಂದ ಗುಣಮುಕವಾಗದೆ ಅದೇ ತಿಂಗಳ ಅಂದರೆ ಆಗಸ್ಟ್ ೨೨, ೧೯೪೭ರಂದು ಮುಂಬೈಯಲ್ಲಿ ಮರಣ ಹೊಂದಿದರು. ಇವರ ಪಾರ್ಥೀವ ಶರೀರವನ್ನು ಜಮಖಂಡಿಗೆ ತಂದು ಮುಂದೆ ಕಂಕಣವಾಡಿ ಗ್ರಾಮದ ಹತ್ತಿರ ಕೃಷ್ಣಾ ನದಿಯ ದಡದಲ್ಲಿ ಅಗ್ನಿ ಸ್ಪರ್ಶ ಮಾಡಲಾಯಿತು. ಇವರ ಅಗಲುವಿಕೆಯಿಂದ ಜಮಖಂಡಿ ಸಂಸ್ಥಾನದ ಸುವರ್ಣಯುಗವು ಅಂತ್ಯಗೊಂಡಂತಾಯಿತು.

ಜಮಖಂಡಿ ಸಂಸ್ಥಾನವನ್ನಾಳಿದ ಪಟವರ್ಧನ ಅರಸರಲ್ಲಿ ಇವರೊಬ್ಬ ಅಪರೂಪದ ವ್ಯಕ್ತಿಯಾಗಿದ್ದರು. ಇವರು ಕ್ರಿ.ಶ.೧೯೨೬ರಲ್ಲಿ ಅಧಿಕಾರಕ್ಕೆ ಬಂದು ಕ್ರಿ.ಶ.೧೯೪೭ರವರೆಗೆ ಅಂದರೆ ೨೧ ವರುಷಗಳ ವರೆಗೆ ರಾಜ್ಯವಾಳಿದರು. ಇವರು ಒಳ್ಳೆಯ ಆಡಳಿತಗಾರರೂ, ಸಮಯ ಪ್ರಜ್ಞೆಯುಳ್ಳವರೂ, ಪ್ರಜಾಹಿತರಂಜಕರೂ ಆಗಿದ್ದರು. ಇವರ ಆಳ್ವಿಕೆಯಲ್ಲಿ ದೇಶದಲ್ಲಿ ಸ್ವಾತಂತ್ರ್ಯ ಚಳುವಳಿಯು ಪ್ರಾರಂಭವಾಗಿತ್ತು. (ಅದರ ಪ್ರಭಾವವು ಜಮಖಂಡಿ ಸಂಸ್ಥಾನದ ಮೇಲೆ ಆಗದೆ ಇರಲಿಲ್ಲ.) ಆಗ ಇವರು ಜನರ ಮನೋರಂಗವನ್ನರಿತು ರಾಜ್ಯ ಆಡಳಿತದಲ್ಲಿ ಪ್ರಜಾಪ್ರತಿನಿಧಿಗಳು ಭಾಗವಹಿಸುವಂತೆ ಅವಕಾಶ ಮಾಡಿಕೊಟ್ಟರು.

ಶಂಕರರಾವ್ ಅಪ್ಪಾಸಾಹೇಬರು ಶಿಕ್ಷಣ ಪ್ರೇಮಿಗಳಾಗಿದ್ದು, ಪ್ರಜೆಗಳಿಗೆ ಒಳ್ಳೆಯ ಶಿಕ್ಷಣವನ್ನು ಕೊಡುವದಕ್ಕಾಗಿ ಕುಂದಗೋಳ ಮತ್ತು ಬನಹಟ್ಟಿಯಲ್ಲಿ ಮಾಧ್ಯಮಿಕ ಶಾಲೆಗಳನ್ನು ಸ್ಥಾಪಿಸಿದರು. ಅಲ್ಲದೆ ಪುಣೆಯಲ್ಲಿ ಕಾಲೇಜನ್ನು (S.P.College) ಸ್ಥಾಪಿಸಲು ೨ ಲಕ್ಷ ರೂಪಾಯಿಗಳನ್ನು ಡೆಕ್ಕನ್ ಶಿಕ್ಷಣ ಸಂಸ್ಥೆಗೆ ದೇಣಿಗೆಯಾಗಿ ಕೊಟ್ಟದ್ದು ಸ್ಮರಣೀಯ.

ಇವರು ಜಮಖಂಡಿಯಲ್ಲಿ ಪಶು ಚಿಕಿತ್ಸಾಲಯವನ್ನು ಸ್ಥಾಪಿಸಿದರು. ಅಲ್ಲದೆ ಸರಕಾರಿ ಆಸ್ಪತ್ರೆಯಲ್ಲಿ ಪ್ರಸೂತಿ ವಿಭಾಗವನ್ನು ಪ್ರಾರಂಭಿಸಿದರು. ಇವರು ಇಂಗ್ಲೆಂಡ, ಫ್ರಾನ್ಸ್, ಇಟಲಿ ಮೊದಲಾದ ಯುರೋಪಿಯನ್ ರಾಷ್ಟ್ರಗಳಿಗೆ ಸಂದರ್ಶನವನ್ನಿತ್ತಿದ್ದರು. ಕ್ರಿ.ಶ.೧೯೪೭ ಆಗಸ್ಟ ೧೫ರಂದು ದೇಶವು ಬ್ರಿಟಿಷರ ಆಳ್ವಿಕೆಯಿಂದ ಮುಕ್ತವಾಗಿ ಸ್ವಾತಂತ್ರ್ಯವನ್ನು ಪಡೆದುಕೊಂಡದ್ದು ಇವರಿಗೆ ಎಲ್ಲಿಲ್ಲದ ನೆಮ್ಮದಿಯನ್ನು ತಂದು ಕೊಟ್ಟಿತು. ಆದರೆ ದುರ್ದೈವದಿಂದ ಅದೇ ತಿಂಗಳು ಅಂದರೆ ಆಗಸ್ಟ ೨೨, ೧೯೪೭ರಂದು ವಿಪರೀತ ಬೇನೆಗೆ ತುತ್ತಾಗಿ ಮುಂಬೈಯಲ್ಲಿ ಮರಣ ಹೊಂದಿದರು. ಇವರು ನಂತರ ಇವರ ಮಗನಾದ ಪರಶುರಾಮ ಶಂಕರರಾವ್ ಪಟವರ್ಧನ (ಪಿ.ಪಟವರ್ಧನರು)ರು ಜಮಖಂಡಿಯ ಅರಸರಾದರು. ಆಗ ದೇಶವು ಸ್ವಾತಂತ್ರವಾಗಿತ್ತು.

**೮. ೩ನೇ ಪರಶುರಾಮ ಶಂಕರರಾವ್ ಪಟವರ್ಧನ**

ಪಿ. ಪಟವರ್ಧನರು ಜಮಖಂಡಿಯ ಸಂಸ್ಥಾನವನ್ನಾಳಿದ ಪಟವರ್ಧನ ಅರಸರಲ್ಲಿ ಆರನೆಯ ಮತ್ತು ಕೊನೆಯ ಅರಸರಾಗಿದ್ದು, ಕ್ರಿ.ಶ.೧೯೨೫, ಏಪ್ರಿಲ್ ೨೨ರಂದು ಪುಣೆಯಲ್ಲಿ ಜನ್ಮತಾಳಿದರು. ಇವರು ಪ್ರತಿಭಾವಂತ ಶಿಕ್ಷಕರ ಮಾರ್ಗದರ್ಶನದಲ್ಲಿ ಸಾಹಿತ್ಯ, ಇತಿಹಾಸ ಮತ್ತು ಆಧುನಿಕ ವಿಜ್ಞಾನ ಮೊದಲಾದ ವಿಷಯಗಳನ್ನು ಕಲಿತುಕೊಂಡರು. ಪ್ರಾಥಮಿಕ ಶಿಕ್ಷಣವನ್ನು ಖಾಸಗಿ ಶಿಕ್ಷಕರಿಂದ ಕಲಿತುಕೊಂಡರು. ಮಾಧ್ಯಮಿಕ ಶಿಕ್ಷಣವನ್ನು ಪಿ.ಬಿ. ಹೈಸ್ಕೂಲಿನಲ್ಲಿ ಪಡೆದುಕೊಂಡರು. ಇವರು ಮ್ಯಾಟ್ರಿಕ್ ಪರೀಕ್ಷೆಯ ಅಭ್ಯಾಸವನ್ನು ಪ್ರತಿಭಾನ್ವಿತ ಶಿಕ್ಷಕರಾದ ಶ್ರೀ ಎ.ವ್ಹಿ. ಧಾರೇಶ್ವರರ ಮಾರ್ಗದರ್ಶನದಲ್ಲಿ ಮಾಡಿ, ಕ್ರಿ.ಶ.೧೯೪೩-೪೪ರಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾದರು. ನಂತರ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅಭ್ಯಸಿಸಿ ಮುಂದೆ ಕೊಲ್ಲಾಪುರ ರಾಜಾರಾಮ ಕಾಲೇಜಿನಲ್ಲಿ ತಮ್ಮ ಶಿಕ್ಷಣವನ್ನು ಪಡೆದುಕೊಂಡರು.

ಪಿ.ಪಟವರ್ಧನರು ತಮ್ಮ ತಂದೆಯ ಮರಣದ ನಂತರ ೧೯೪೭ರಲ್ಲಿ ಪಟ್ಟಕ್ಕೆ ಬಂದರು. ಆವಾಗ್ಗೆ ದಕ್ಷಿಣ ಸಂಸ್ಥಾನಗಳ ಒಕ್ಕೂಟವನ್ನು ರಚಿಸಬೇಕೊ ಅಥವಾ ಅಖಿಲ ಭಾರತದ ಒಕ್ಕೂಟದಲ್ಲಿ ವಿಲಿನಗೊಳ್ಳಬೇಕೊ ಎಂಬ ವಿಚಾರವು ದಕ್ಷಿಣದ ಸಂಸ್ಥಾನಗಳಲ್ಲಿ ಉದ್ಭವಿಸಿತು. ಆಗ ಇವರು ಜಮಖಂಡಿ ಸಂಸ್ಥಾನವನ್ನು ಅಖಿಲ ಭಾರತದ ಒಕ್ಕೂಟದಲ್ಲಿಯೇ ವಿಲೀನಗೊಳಿಸಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದರು. ಅದಕ್ಕಾಗಿ ಡಿಸೆಂಬರ ೧೯೪೭ರಲ್ಲಿ ಇವರು ತಮ್ಮ ಖಾಸಗಿ ಕಾರಭಾರಿಗಳಾದ ಶ್ರೀಜಿ.ಪಿ. ವಾಟವೆಯವರೊಂದಿಗೆ ದಿಲ್ಲಿಗೆ ಹೋಗಿ ಸ್ವಾತಂತ್ರ್ಯ ಭಾರತದ ಗೃಹಮಂತ್ರಿಗಳಾದ ಸರ್ದಾರ್ ವಲ್ಲಭಾಯಿ ಪಟೇಲರನ್ನು ಭೇಟಿಯಾಗಿ ತಮ್ಮ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡರು. ಆಗ ಸ್ವಾತಂತ್ರ್ಯ ಭಾರತದ ಸರಕಾರವು ದೇಶಿ ಸಂಸ್ಥಾನಗಳ ಭವಿಷ್ಯತ್ತಿನ ಬಗ್ಗೆ ಯಾವ ನಿರ್ಧಾರವನ್ನು ಕೈಕೊಂಡಿಲ್ಲವಾದ್ದರಿಂದ ಸರ್ದಾರ್ ವಲ್ಲಭಾಯಿ ಪಟೇಲರಿಗೆ ಜಮಖಂಡಿ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ಸೇರಿಸಿಕೊಳ್ಳುವುದು ಒಂದು ಸಮಸ್ಯೆಯಾಯಿತು. ಆಗ ಅವರು ಜಮಖಂಡಿ ಸಂಸ್ಥಾನದ ಪ್ರಜೆಗಳ ಅಭಿಪ್ರಾಯವನ್ನು ಪಡೆದುಕೊಂಡು ಬರಬೇಕೆಂದು ರಾಜಾಸಾಹೇಬರಿಗೆ ತಿಳಿಸಿದರು. ಅದರಂತೆ ಪಿ. ಪಟವರ್ಧನರು ತಮ್ಮ ಪ್ರಜೆಗಳ ಅಭಿಪ್ರಾಯವನ್ನು ಕೇಳುವುದಕ್ಕಾಗಿ **"ಪ್ರಜಾಪ್ರತಿನಿಧಿಯ"** ಸಭೆಯನ್ನು ಜಮಖಂಡಿ ಸಂಸ್ಥಾನದಲ್ಲಿದ್ದ ಕುಂದಗೋಳ ತಾಲೂಕಿನಲ್ಲಿ ಡಿಸೆಂಬರ ೧೯೪೭ ಕರೆದಿದ್ದರು. ಈ ಸಭೆಗೆ ಎಸ್.ನಿಜನಿಂಗಪ್ಪನವರು ಮತ್ತು ದೊಡ್ಡಮೇಟಿ ಅಂದಾನೆಪ್ಪನವರು ಆಗಮಿಸಿದ್ದರು. ಆಗ ರಾಜಾಸಾಹೇಬರು (ಪಿ.ಪಟವರ್ಧನರು)

ಜಮಖಂಡಿ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸುವ ತಮ್ಮ ಅಭಿಪ್ರಾಯವನ್ನು ಸಭೆಯ ಮುಂದಿರಿಸಲಾಗಿ ಎಲ್ಲ ಪ್ರಜೆಗಳು (ಕುಂದಗೋಳದ) ಸ್ವಸಂತೋಷದಿಂದ ಒಪ್ಪಿಗೆಯನ್ನಿತ್ತರು.

ಅದರಂತೆ ಬನಹಟ್ಟಿಯಲ್ಲಿ ೧೨ನೇ ಹಾಗೂ ಕೊನೆಯ ಪ್ರಜಾಪ್ರತಿನಿಧಿಯ ಸಭೆಯನ್ನು ಕರೆಯಲಾಗಿತ್ತು. ಅದರ ಅಧ್ಯಕ್ಷತೆಯನ್ನು ದೊಡ್ಡಮೇಟಿ ಅಂದಾನೆಪ್ಪನವರು ವಹಿಸಿದ್ದರು. ಅಲ್ಲದೆ ಶ್ರೀ ದಾಮು ಅಣ್ಣಾ ಹುಲ್ಯಾಳಕರ, ಶ್ರೀ ಶ್ರೀಶೈಲಪ್ಪಣ್ಣ ಅಥಣಿ ಶ್ರೀ.ಬಿ.ಡಿ. ಜತ್ತಿ, ಶ್ರೀ ಗಂಗಾಧರ, ಶ್ರೀ ಹೋರ್ತಿ, ಶ್ರೀ ಕಾಂಬಳೆ, ಕುಲಕರ್ಣಿ ಮಾಸ್ತರ, ಶ್ರೀ ಮಾಲಾಪೂರ ಮೊದಲಾದ ಗಣ್ಯರು ಭಾಗವಹಿಸಿದ್ದರು. ಆಗ ಪು. ಪಟವರ್ಧನರು ಸಭೆಯನ್ನುದ್ದೇಶಿಸಿ ಮಾತನಾಡುವ ಜಮಖಂಡಿ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸುವ ತಮ್ಮ ನಿರ್ಧಾರವನ್ನು ವ್ಯಕ್ತಪಡಿಸಿದರು. ಅಲ್ಲಿ ನೆರೆದ ಜನ ಸಮೂಹವು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸಬೇಕೆಂಬ ಒಮ್ಮತದ ಠರಾವನ್ನು ಪಾಸು ಮಾಡಿತು. ಇದು ಜಮಖಂಡಿ ಸಂಸ್ಥಾನದಲ್ಲಾದ ಐತಿಹಾಸಿಕ ನಿರ್ಣಯವೆಂದು ಹೇಳಬಹುದು. ಈ ಠರಾವನ್ನು **'ಸಂಸ್ಥಾನಿ ಸ್ವರಾಜ್ಯ'** (ಮರಾಠಿ ಪತ್ರಿಕೆ) ಮತ್ತು **"ನವ ಹಿಂದ"** ಎಂಬ ಕನ್ನಡ ಪತ್ರಿಕೆಗಳು ಪ್ರಕಟಿಸಿದವು.

ಸಂಸ್ಥಾನಿಕರಾದ ಪಿ.ಪಟವರ್ಧನರು ಜನಾಭಿಪ್ರಾಯವನ್ನು ಪಡೆದುಕೊಂಡು ಪಾಸುಮಾಡಿದ ಠರಾವಿನ ನಕಲನ್ನು ತೆಗೆದುಕೊಂಡು ಶ್ರೀ ಜಿ.ಪಿ.ವಾಟವೆ, ಶ್ರೀ ಬಿ.ಡಿ.ಜತ್ತಿ ಮತ್ತಿತರ ಪ್ರಮುಖ ವ್ಯಕ್ತಿಗಳೊಂದಿಗೆ ದಿಲ್ಲಿಗೆ ಹೋಗಿ ಸರ್ದಾರ್ ಪಟೇಲರನ್ನು ಭೇಟಿಯಾಗಿ ತಮ್ಮ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸುವ ವಿಷಯವನ್ನು ಪ್ರಸ್ತಾಪಿಸಲಾಗಿ, ಸರ್ದಾರ ಪಟೇಲರು ಜಮಖಂಡಿಯ ರಾಜರ ಇಚ್ಛಾನುಸಾರವಾಗಿ ಮತ್ತು ಜನತೆಯ ಅಭಿಪ್ರಾಯದಂತೆ ಜಮಖಂಡಿ ಸಂಸ್ಥಾನವನ್ನು ಮಾರ್ಚ್ ೮, ೧೯೪೮ರಲ್ಲಿ ಅಖಿಲ ಭಾರತದ ಒಕ್ಕೂಟದಲ್ಲಿ ಸೇರಿಸಿಕೊಂಡರು. ಈ ನಿರ್ಣಯಕ್ಕೆ ರಾಜರು (ಪಿ. ಪಟವರ್ಧನರು) ಅಂಕಿತವನ್ನು ಹಾಕಿದರು. ಹೀಗೆ ಭಾರತದಲ್ಲಿದ್ದ ದೇಶಿಯ ಸಂಸ್ಥಾನಗಳಲ್ಲಿಯೇ ಜಮಖಂಡಿ ಸಂಸ್ಥಾನವು ಮೊಟ್ಟಮೊದಲಿಗೆ ಅಖಿಲ ಭಾರತದ ಒಕ್ಕೂಟದಲ್ಲಿ ಸೇರಿ ಉಳಿದ ರಾಜ್ಯಗಳಿಗೆ ಒಂದು ಸತ್-ಸಂಪ್ರದಾಯವನ್ನು ಹಾಕಿತು[೧೧].

ತಮ್ಮ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸಿದ ನಂತರ ಪಿ. ಪಟವರ್ಧನರು ಜಮಖಂಡಿಯಲ್ಲಿದ್ದ ತಮ್ಮ ಅರಮನೆಯನ್ನು ಬಿಟ್ಟು ಕುಟುಂಬ ಸಮೇತವಾಗಿ ಪುಣೆಗೆ ಹೋದರು. ಅಲ್ಲಿ ಇವರು ನಗರಪಾಲಿಕೆಯ ಸಾರಿಗೆಯ ನಿಗಮದ ಡೆಪ್ಯೂಟಿ ಟ್ರಾಫಿಕ್ ಮ್ಯಾನೇಜರರೆಂದು ಕಾರ್ಯ ಮಾಡಿದರು. ಇವರು ತಮ್ಮ ಮೊದಲಿದ್ದ ಎಲ್ಲ ರಾಜವೈಭವವನ್ನು ತ್ಯಜಿಸಿ ಸ್ವಾತಂತ್ರ್ಯ ಭಾರತದ ಒಬ್ಬ ಸಾಮಾನ್ಯ ನಾಗರಿಕರಂತೆ ಜೀವನವನ್ನು ಸಾಗಿಸಿದರು. ಮುಂದೆ ಕ್ರಿ.ಶ.೧೯೫೩ರ ಡಿಸೆಂಬರ್ ೮ರಂದು ಪುಣೆಯಲ್ಲಿ ಅಸುನೀಗಿದರು. ಇವರ ಮಕ್ಕಳಾದ ಶ್ರೀ ಪ್ರಣಯಕುಮಾರ ಮತ್ತು ಶ್ರೀ ಪ್ರತೀಕಕುಮಾರ ಇವರು ಒಳ್ಳೆಯ ಶಿಕ್ಷಣವನ್ನು ಪಡೆದುಕೊಂಡು ಸ್ವಾತಂತ್ರ್ಯ ಭಾರತದ ಪ್ರತಿಷ್ಠಿತ ನಾಗರಿಕರಾಗಿ ಪುಣೆಯಲ್ಲಿ ಗೌರವಾನ್ವಿತ ಜೀವನವನ್ನು ಸಾಗಿಸುತ್ತಿದ್ದಾರೆ. ಇವರು ಜಮಖಂಡಿಗೆ ಮೇಲಿಂದ ಮೇಲೆ ಆಗಮಿಸುತ್ತಿರುತ್ತಾರೆ. ಇವರನ್ನು ಜಮಖಂಡಿಯ ಜನ ಇಂದಿಗೂ ಸಹ ಯುವರಾಜರೆಂದು ಬಗೆದು ಅತ್ಯಂತ ಮರ್ಯಾದೆಯಿಂದ ಕಾಣುತ್ತಾರೆ.

**ತೇರದಾಳ ನಾಡಗೌಡ ಮನೆತನ**

ಜಮಖಂಡಿ, ಹನಗಂಡಿ ದೇಶಗತಿಗಳಂತೆ ತೇರದಾಳ ನಾಡಗೌಡ ಮನೆತನವು ಸಹ ತೇರದಾಳ ಪ್ರದೇಶವನ್ನು ತನ್ನ ಅಧೀನಕ್ಕೊಳಪಡಿಸಿಕೊಂಡಿತ್ತು. ಇದು ಹನಗಂಡಿ ದೇಸಗತಿ ಸಂಸ್ಥಾನದ ಉಪ ಶಾಖೆಯಾಗಿತ್ತು. ತೇರದಾಳ ದೇಸಗತಿಗೆ ಸಂಬಂಧಿಸಿದ ಕ್ರಿ.ಶ.೧೭೪೮ರ ಕಾಲದ ತೇರದಾಳ ಶಾಸನವೊಂದು ನೇಮಿಜಿನೇಂದ್ರ ವಿಗ್ರಹದ ಪಾದ ಪೀಠದಲ್ಲಿ ಬರೆಯಲ್ಪಟ್ಟಿದ್ದು. ಅದು ಇಂತಿದೆ.

> **ಶ್ರೀ ಮನ್ನೇಮಿಜಿನೇಂದ್ರನ ಪ್ರತಿಮೆಯಂ ಸಮ್ಯಕ್ತ್ವ ಚೂಡಾಮಣಿಗಳಾದಂ**
> **ಥಾ ಶ್ರೀಮತ್ತೇರಿದಳದ ದೇಶಾಯಿ ಸತ್ಯೌವ್ವ ತತ್ಪುತ್ರ ಜಕ್ಕಪ್ಪ ಸಹವಾಗಿ**
> **ಮಾಡಿಸಿ ಶ್ರೀ ಗೊಂಕಜಿನಾಲಯದಲ್ಲಿ ಪ್ರತಿಷ್ಠೆಯನ್ನು ಮಾಡಿದ ಶ**
> **ಕವರ್ಷ ೧೬೭೦ ವಿಭವನಾಮ ಸಂವತ್ಸರ ಮಾರ್ಗ್ಗಶಿರದ**
> **ಶುಕ್ಲ ದಶಮಿ ಶುಕ್ರವಾರದಲ್ಲಿ ಭದ್ರಂ ಭೂಯಾತ್ ಶ್ರೀ ಶ್ರೀ ಶ್ರೀ.**

ಶಾಸನದಲ್ಲಿ ಕಾಲವನ್ನು ಶಕವರ್ಷ ೧೬೭೦, ವಿಭಜ, ಮಾರ್ಗಶಿರ, ಶು ದಶಮಿ ಎಂದಿದ್ದು ಇದು ಕ್ರಿ.ಶ.೧೮-೧೧-೧೭೪೮ಕ್ಕೆ ಸರಿಹೊಂದುತ್ತದೆ. ತೇರದಾಳದ ದೇಸಾಯಿ ಸತ್ಯೌವ್ವ ಮತ್ತು ಆಕೆಯ ಮಗನಾದ ಜಕ್ಕಪ್ಪ ಸೇರಿ ಗೊಂಕಜಿನಾಲಯದಲ್ಲಿ ನೇಮಿನಾಥ ಸ್ವಾಮಿ ತೀರ್ಥಂಕರನ ಮೂರ್ತಿ ಪ್ರತಿಷ್ಠಾಪನೆ ಮಾಡಿಸಿದುದನ್ನು ತಿಳಿಸುತ್ತದೆ[೧೧೩]. ಇತ್ತಿಚಿಗೆ **"ವಿಜಯ, ಪ್ರವೀಣ ನಾಡಗೌಡ"** ಸಹೋದರ ತಮ್ಮ ವೃತ್ತಿ ಕಾರ್ಯ ಜೊತೆಗೆ ತಮ್ಮನ್ನು ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಇವರು ೨೦೦೧ರಲ್ಲಿ ತೇರದಾಳ ಪುರಸಭೆ ಅಧ್ಯಕ್ಷರಾಗಿ, ೨೦೧೧ರಲ್ಲಿ ಜಮಖಂಡಿ ಎಪಿಎಂಸಿ ನಿರ್ದೇಶಕರಾಗಿ, ೨೦೧೬ರಲ್ಲಿ ಬೆಂಗಳೂರಿನ ಕರ್ನಾಟಕ ಸರ್ಕಾರದ ಕೆ.ಎಚ್.ಡಿ.ಸಿಯಲ್ಲಿ ನಾಮನಿರ್ದೇಶಿತ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. **ಪ್ರವೀಣ ನಾಡಗೌಡ** ಇವರು ರಾಜಕೀಯದಲ್ಲಿ ಗುರುತಿಸಿಕೊಂಡು ಸಾರ್ವಜನಿಕರಿಗೆ ನಿರಂತರ ಸಹಾಯ ಸಲ್ಲಿಸುವುದರಿಂದ ಚಿಕ್ಕವರಾಗಲಿ ಅಥವಾ ದೊಡ್ಡವರಾಗಲಿ ಇವರನ್ನು ಪ್ರತಿಯೊಬ್ಬರು ಅಣ್ಣಾ ಎಂದು ಕರೆಯುತ್ತಾರೆ.

**ಹನಗಂಡಿಯ ದೇಶಗತಿ ಮನೆತನ**

ತೇರದಾಳ ಪ್ರದೇಶವನ್ನು ತಮ್ಮ ಅಧಿನಕ್ಕೋಳಪಡಿಸಿಕೊಂಡು ಆಳ್ವಿಕೆ ಮಾಡಿದ ದೇಶಿಯ ಸಂಸ್ಥಾನಗಳಲ್ಲಿ ಹನಗಂಡಿಯೂ ಒಂದಾಗಿದೆ. ಇದು ಸುಮಾರು ೧೧ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದಿತ್ತು. ಈ ಮನೆತನದಲ್ಲಿ ಕೃಷ್ಣಾ ದೇಸಾಯಿಗಳು ಪ್ರಮುಖರಾಗಿದ್ದರು. ಇವರು ಬಿಜಾಪುರ ಆದಿಲ್ ಶಾಹಿಗಳಿಂದ ದೇಣಗಿಯಾಗಿ ಪಡೆದು ಪರಗಣಿಯ ವತನದಾರರಾದರು. ಈ ದೇಸಾಯಿ ಮನೆತನ ೩೩ ಹಳ್ಳಿಗಳ ಪರಗಣದಾರರಾಗಿದ್ದರು. ೬೦೦ ವರ್ಷಗಳ ಹಿಂದೆಯೇ ಬಿಜಾಪುರ ಆದಿಲ್ ಶಾಹಿಯ ಕಾಲದಲ್ಲಿ ದೇಸಾಯಿಯ ಮನೆತನಕ್ಕೆ ೩೩ ಹಳ್ಳಿಗಳ ಪರಗಣದಾರರನ್ನಾಗಿ ಮಾಡಿದ್ದರು. ಇದು ದೇಸಾಯಿ ಪರಗಣ ತೇರದಾಳ ಠಾಣೆಯಯ ಅಧೀನದಲ್ಲಿತ್ತು. ಮೊದಲು ಷಾಹಜಾನನು ಒಂದು ಹುಚ್ಚ ಕುದರೆಯನ್ನು ಬಿಟ್ಟು ಮೂಲ ದೇಸಾಯಿಯನ್ನು ಕೊಲ್ಲಲು ಕಳುಹಿಸಿದ್ದನು. ಬಿಜಾಪುರದಿಂದ ಎಲ್ಲಡೆ ಸುತ್ತಿ ಆ ಕುದರೆಯನ್ನು ಸೋಲಿಸಿ ಹನಗಂಡಿಗೆ ಬಂದನು. ಇದರಿಂದ ತೃಪ್ತಿಗೊಂಡು ಬಿಜಾಪುರ ಷಾಹಿ ಮನೆತನದವರು ಹನಂಗಡಿಯ

ದೇಸಾಯಿಯನ್ನು ೩೩ ಹಳ್ಳಿಗಳ ವತನದಾರರನ್ನಾಗಿ ಮಾಡಿದರು. ೫೮೦ ಇನಾಮಿ ಭೂಮಿಗಳು (ಕಾಲಸಾ) ಇವೆಲ್ಲ ಬ್ರಿಟಷರ ಕಾಲದಲ್ಲಿ ಇತ್ತು. ನಂತರ ಅಲ್ಲಿ ವಸ್ತುಗಳು ಸ್ವಾತಂತ್ರ್ಯ ಹೊಂದಿದ ನಂತರ ಕೆಲವೊಂದು ವರ್ಷಗಳ ಬಳಿಕ ಭಾರತ ಸರಕಾರ ತನ್ನ ವಶಕ್ಕೆ ಸೇರಿಸಿಕೊಂಡಿತು.

ಈ ದೇಸಾಯಿ ಮನೆತನದವರು ಪ್ರಭು ದೇವರ ಭಕ್ತಗಾಗಿದ್ದರು. ಮುಂದಿನ ೭ ತಲೆಮಾರಿನ ತನಕ ಮಕ್ಕಳಿಲ್ಲದ ಕಾರಣ ಸ್ವಾಮಿಗಳು ಅವರಿಗೆ ತೇರದಾಳ ಪ್ರಭು ಸ್ವಾಮಿಗೆ ಹೋಗಲು ಹೇಳಿದರು. ಅದರಂತೆ ಪಲ್ಲಕ್ಕಿಯಲ್ಲಿ ಕುಳಿತು ದೇಸಾಯಿ ಮನೆತನದ ಸ್ತ್ರೀಯರು ಪ್ರಭು ಸ್ವಾಮಿಗೆ ಹೋಗುತ್ತಿದ್ದರು. ಅದರಂತೆ ಮುಂದೆ ವಂಶಪರಂಪರೆ ಮುಂದುವರೆಯಿತು. ಬ್ರಿಟಿಷರ ಕಾಲದಲ್ಲಿ ಅಪ್ಪಾಸಾಹೇಬ ಎಂಬ ಬ್ರಿಟಿಷ ಹೋರಟಗಾರನಾಗಿದ್ದ ಈತನಿಗೆ ಇಬ್ಬರು ಪತ್ನಿಯರು ಒಬ್ಬಳು ತಾಯಿಸಾಹೇಬ ಮತ್ತೊಬ್ಬಳು ಅಕ್ಕಾಸಾಹೇಬ ಇವರಿಗೂ ಮಕ್ಕಳಿರಲಿಲ್ಲ. ಇವರು ಕೂಡ ಪಲ್ಲಕ್ಕಿಯಲ್ಲಿ ಕುಳಿತು ಪ್ರಭುದೇವರಿಗೆ ದಿಗಂಬರೇಶ್ವರಿಗೆ ಹಾಗೂ ಬೀರದೇವರಿಗೆ ಹೋಗುತ್ತಿದ್ದರು. ವೆಂಕೋಬಾನ ಮಗ ನಾರಾಯಣನನ್ನು ೧೯೪೮ರಲ್ಲಿ ದತ್ತು ತೆಗೆದುಕೊಂಡರು[೧೧೪]. ಪ್ರಾಚೀನ ಐತಿಹಾಸಿಕ ಜಂಬೂದ್ವೀಪದ ಭರತಕ್ಷೇತ್ರದ ಕುಂತಳ (ತುಂಗಭದ್ರೆಯ ಮೇಲಿನ ಭಾಗ ಬಹುತೇಕ ಈಗಿನ ಉತ್ತರ ಕರ್ನಾಟಕ ಪ್ರದೇಶವನ್ನು ಶಾಸನಗಳಲ್ಲಿ ಕುಂತಳವೆಂದು ಕರೆಯಲಾಗಿದೆ). ದೇಶದಲ್ಲಿ ಕೂಂಡಿನಾಡು ೩೦೦೦ ನಾಡಿನಲ್ಲಿ ಬರುವ ತೇರದಾಳ ೧೨ರ ಕಂಪಣದ ರಾಜಧಾನಿಯಾಗಿದ್ದ ಇದು ಅಂದು ಪ್ರಮುಖ ಪಟ್ಟಣ ಮತ್ತು ವ್ಯಾಪಾರ ಕೇಂದ್ರವಾಗಿ ಚರಿತ್ರೆಯಲ್ಲಿ ತೇರದಾಳ ತನ್ನನ್ನು ಗುರುತಿಸಿಕೊಂಡಿದೆ. ಕ್ರಿ.ಶ.೧೯೪೭ರ ಅಗಷ್ಟ ೧೫ರಂದು ದೇಶವು ಸ್ವಾತಂತ್ರ್ಯವಾದ ನಂತರ ಕ್ರಿ.ಶ.೧೮೪೭ ಮಾರ್ಚ ತಿಂಗಳ ೮ನೇ ತಾರೀಖಿನಂದು ಜಮಖಂಡಿ ಸಂಸ್ಥಾನ ಮತ್ತು ತೇರದಾಳ ಹಾಗೂ ಹನಗಂಡಿ ದೇಸಗತಿಗಳು ಕ್ರಮೇಣ ಅಖಿಲ ಭಾರತದ ಒಕ್ಕೂಟದಲ್ಲಿ ವಿಲೀನವಾಗಿ ಮುಂಬೈ ಪ್ರಾಂತದಲ್ಲಿ ಸೇರಿಕೊಂಡವು. ಆಗ ಜಮಖಂಡಿಯು ಒಂದು ತಾಲೂಕಾಗಿ ರಚನೆಯಾದಾಗ ತೇರದಾಳವು ಅದರ ಹೋಬಳಿ ಕೇಂದ್ರವೆಂದು ಘೋಷಿಸಲ್ಪಟ್ಟಿತು. ಆಗ ಇದು ಬಿಜಾಪುರ ಜಿಲ್ಲೆಯಲ್ಲಿ ಸೇರಿತು. ಕರ್ನಾಟಕ ಸರ್ಕಾರ ೧೯೯೭ರಲ್ಲಿ ರಾಜ್ಯದ ಜಿಲ್ಲೆಗಳನ್ನು ಪುರ್ನರ್ ವಿಂಗಡಿಸಿ ಹೊಸ ಜಿಲ್ಲೆಗಳನ್ನು ರಚಿಸಿದಾಗ ಈಗೀನ ಬಾಗಲಕೋಟಿ ಜಿಲ್ಲೆ ರಚನೆಯಾಯಿತು. ಆಗ ತೇರದಾಳ ಪಟ್ಟಣವು ಈ ಜಿಲ್ಲೆಯ ಒಂದು ಪುರಸಭೆಯ ಕೇಂದ್ರ ಮತ್ತು ಹೋಬಳಿ ಕೇಂದ್ರವಾಗಿ ಸೇರ್ಪಡೆಯಾಯಿತು. ಇದು ಜಮಖಂಡಿಯಿಂದ ಪಶ್ಚಿಮಕ್ಕೆ ೨೯ ಕಿ.ಮೀ. ಮತ್ತು ರಾಯಬಾಗ ತಾಲೂಕಿನ ಕುಡಚಿಯಿಂದ ಸು.೧೭ ಕಿ.ಮೀ ದೂರದಲ್ಲಿದೆ. ಅದರ ಒಟ್ಟು ವಿಸ್ತೀರ್ಣ ೭.೭೦.೦೦೦ ಹೆಕ್ಟೇರ್ ಆಗಿದೆ. ಕರ್ನಾಟಕದ ಪೀಠಭೂಮಿಯ ಕೇಂದ್ರ ಎನಿಸಿರುವ ಇದು ಸಮುದ್ರ ಮಟ್ಟಕ್ಕಿಂತ ಸರಾಸರಿ ೨೮೦೦ಅಡಿ (೬೦೨.೬ಮೀ.) ಎತ್ತರದಲ್ಲಿದೆ. ೨೦೧೧ರ ಪ್ರಕಾರ ೨೬,೧೫೩ ರಷ್ಟು ಜನಸಂಖ್ಯೆಯನ್ನು ಹೊಂದಿದೆ[೧೧೫]. ತೇರದಾಳದಲ್ಲಿ ಒಂದು ನಾಡ ಕಚೇರಿ ಮತ್ತು ಒಂದು ಹೋಬಳಿ ಹಾಗೂ ೧೧ ಗ್ರಾಮ ಪಂಚಾಯಿತಿಗಳಿದ್ದು ಸುಮಾರು ೨೨ ಗ್ರಾಮಗಳು ಹಾಗು ೨೦೦ ಜನವಸತಿಯ ಕೇಂದ್ರಗಳಿವೆ. ಈ ಎಲ್ಲಾ ತಾಲೂಕು ಮತ್ತು ಗ್ರಾಮಗಳನ್ನೊಳಗೊಂಡಂತೆ ತೇರದಾಳದ ಒಟ್ಟು ವ್ಯಾಪ್ತಿ ಸುಮಾರು ೫೨೫ ಚ.ಕಿ.ಮೀ.ಇದೆ. ಇದು ರಾಜಕೀಯವಾಗಿ ಪ್ರಸಕ್ತ ವಿಧಾನಸಭಾ ಕ್ಷೇತ್ರವಾಗಿದ್ದು ಬಾಗಲಕೋಟ ಲೋಕಸಭೆ ಕ್ಷೇತ್ರದ ವ್ಯಾಪ್ತಿಗೊಳಪಟ್ಟಿದೆ[೧೧೬].

**ಕೊನೆ ಟಿಪ್ಪಣಿಗಳು**

೧. ಸದಾಶಿವ ಕೆ., ೨೦೦೫, ಸಮಗ್ರ ಭಾರತದ ಇತಿಹಾಸ, ಪು. ಸಂ. ೨

೨. ಅಂಜಿನಪ್ಪ ಬಿ., ೨೦೧೩, ಹಡಗಲಿ ತಾಲೂಕಿನ ಪ್ರವಾಸೋದ್ಯಮ, ಅಪ್ರಕಟಿತ ಎಂ.ಎ. ಸಂಶೋಧನಾ ಪ್ರಬಂಧ. ಪು. ಸಂ. ೧

೩. ಅದೇ., & ಕುಂಬಾರ ರಮೇಶ ದುಂಡಪ್ಪ., ೨೦೧೨, ತೇರದಾಳ ಒಂದು ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್.ಪ್ರಬಂಧ. ಪು. ಸಂ. ೧೩

೪. ಮುನಿಸ್ವಾಮಿ ಆರ್., ೧೯೯೮, ಕರ್ನಾಟಕ ರಾಜ್ಯ ಗೆಜೆಟೀರಿಯನ್ನ (ವಿಜಾಪುರ ಜಿಲ್ಲೆ ಬಾಗಲಕೋಟೆ ಜಿಲ್ಲೆಯೂ ಸೇರಿದಂತೆ) –ಪು. ಸಂ. ೨೧

೫. ಅದೇ.,

೬. ಬಾಗಲಕೋಟೆ ಜಿಲ್ಲಾ ಗೆಜೆಟೀರಿಯನ್ನ, ಪು. ಸಂ. ೧೦–೧೧ ಮತ್ತು ಆರ್.ಡಿ.ಪಿ.ಆರ್, ಪು. ಸಂ. ೧೨

೭. ಅದೇ., ೧೯೯೮, ಪು. ಸಂ ೮–೧೨ ಮತ್ತು ತೇರದಾಳ ಪುರಸಭೆಯ ದಾಖಲೆ.

೮. ಅದೇ.,

೯. ಬಾಗಲಕೋಟೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ಹೊರಡಿಸಿರುವ ತೇರದಾಳ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೫–೧೬. ಪು. ಸಂ. ೧–೩ & ಬಾಗಲಕೋಟೆ ಜಿಲ್ಲೆಯ ಜಿಲ್ಲಾ ವೆಬ್ ಮಾಹಿತಿ

೧೦. ಕೆ.ಇನ್ಸ. ಸಂಪುಟ ೫, ಪು. ಸಂ. ೧–೨೧ ತೇರದಾಳ ಜಮಖಂಡಿ ಕ್ರಿ.ಶ. ೧೧೨೩ ರ ಶಾಸನ ಮತ್ತು ಕಟ್ಟಿ ವೆಂಕಟರಂಗೂ ಅನು : ಮುಂಬಯಿ ಇಲಾಖೆಗೆ ಸೇರಿದ ಗೆಜೆಟೀರಿಯನ್ನ, ಪು. ಸಂ–೬೩೩. & ದೇವರಕೊಂಡಾ ರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೯ ಬಾಗಲಕೋಟ ಜಿಲ್ಲೆ ಪು. ಸಂ.–೮೪, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಸಂಗಮೇಶ ಕಲ್ಯಾಣಿ., ತೇರಿದಾಳ–೧೨, ೨೦೧೭, ಪು. ಸಂ. ೧೨–೧೩

೧೨. "Census of India 2011: Data from the 20011 Census, including cities, villages and towns (Provisional)". Census Commission of India. Archive,

೧೩. ಬಾಗಲಕೋಟೆ ಜಿಲ್ಲಾ ಗೆಜೆಟೀರಿಯನ್ನ, ಪೂರ್ವೋಕ್ತ., ಪು. ಸಂ. ೧೯

೧೪. ಅದೆ., ಪು. ಸಂ. ೨೦

೧೫. ಬಾಗಲಕೋಟೆ ಜಿಲ್ಲೆಯ ಜಿಲ್ಲಾ ವೆಬ್‌ಸೈಟ್

೧೬. ಅದೇ.,

೧೭. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ಹೊರಡಿಸಿರುವ ಬಾಗಲಕೋಟೆ ಜಿಲ್ಲಾ ಅಂಕಿ ಅಂಶಗಳ ನೋಟ. ೨೦೧೫–೧೬. ಪೂರ್ವೋಕ್ತ

೧೮. ಕುಂಬಾರ ರಮೇಶ ದುಂಡಪ್ಪ., ೨೦೧೨. ಪೂರ್ವೋಕ್ತ., ಪು. ಸಂ. ೨೦

೧೯. ಬಾಗಲಕೋಟೆ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೫–೧೬. ಪೂರ್ವೋಕ್ತ., ಪು. ಸಂ. ೨೩

೨೦. ಕರ್ನಾಟಕದ ಭೌಗೋಳಿಕ ಪ್ರದೇಶಗಳನ್ನು ಕಾಲಾನುಕ್ರಮದಲ್ಲಿ ವಿಂಗಡಿಸಿರುವ ಭಾಗ, ಇದನ್ನು ಭೂಗರ್ಭ ಇತಿಹಾಸದ ಪ್ರಥಮ ಯುಗ ಎನ್ನುತಾರೆ. ನೋಡಿ-ಕರ್ನಾಟಕ ಚರಿತ್ರೆ, ೧೯೯೭, ಸಂಪುಟ-೧ ಪು. ಸಂ. ೩೪

೨೧. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ಹೊರಡಿಸಿರುವ ಬಾಗಲಕೋಟೆ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೫-೧೬. ಪೂರ್ವೋಕ್ತ., ಪು. ಸಂ. ೨೪

೨೨. ಹೆಚ್ಚಿನ ವಿವರಗಳಿಗಾಗಿ ನೋಡಿ - ಇಂಡಿಯನ್ ಆರ್ಕಿಯಲಾಜಿಕಲ್ ರಿವೀವ್‌ನ ವಿವಿಧ ಸಂಪುಟಗಳು., ಹಾಗೂ ಶಿವತಾರಕ್ ಕೆ.ಬಿ., ಅವರ ಕರ್ನಾಟಕ ಪುರಾತತ್ವ ನಲೆಗಳು

೨೩. ಷೇಕ್ ಆಲಿ, ಬಿ., ಸುಂದರ ಅ., (ಸಂ), ೧೯೯೭, ಕರ್ನಾಟಕ ಚರಿತ್ರೆ ಸಂಪುಟ., ೧, ಡಾ.ಪಪ್ಪು, ಆರ್.ಎಸ್, ಪ್ರಾಚೀನತಮ ಮಾನವ ಸಂಸ್ಕೃತಿಗಳು, ವಿಕಸನದ ಹಂತಗಳು., ಪು. ಸಂ.೯೫

೨೪. ಅದೇ., ಪು. ಸಂ. ೯೫

೨೫. ಅದೇ., ಪು. ಸಂ. ೯೫

೨೬. ಅದೇ., ಪು. ಸಂ. ೯೫

೨೭. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು., ಪು.ಸಂ. ೨೭-೫೯ ಮತ್ತು ಕುಂಬಾರ ರಮೇಶ., ತೇರದಾಳ ಪರಿಸರದ ಒಂದು ಚಾರಿತ್ರಿಕ ಅಧ್ಯಯನ., (ಅಪ್ರಕಟಿತ ಎಂ.ಫಿಲ್.ಪ್ರಬಂಧ) ಪು. ಸಂ. ೨೫-೨೮

೨೮. ಪಪ್ಪು ಆರ್.ಎಸ್., ಪೂರ್ವೋಕ್ತ. ಪು. ಸಂ. ೯೫-೯೬

೨೯. ಅದೇ., ಪು. ಸಂ. ೯೫-೯೬

೩೦. ಅದೇ, ಪು. ಸಂ. ೯೫-೯೬

೩೧. ಶಿವತಾರಕ್ ಕೆ.ಬಿ., ಪೂರ್ವೋಕ್ತ. ಪು.ಸಂ. ೨೭-೫೯

೩೨. ಪಪ್ಪು ಆರ್.ಎಸ್., ಪೂರ್ವೋಕ್ತ. ಪು.ಸಂ. ೯೬

೩೩. ಅದೆ, ಪು. ಸಂ. ೯೬

೩೪. ಶಿವತಾರಕ್ ಕೆ.ಬಿ., ಪೂರ್ವೋಕ್ತ. ಬೀಜಾಪುರ ಜಿಲ್ಲೆ

೩೫. ಅದೇ, ಪು. ಸಂ. ೬೦

೩೬. ಶಿವತಾರಕ್ ಕೆ.ಬಿ., ಪೂರ್ವೋಕ್ತ. ಪು.ಸಂ. ೬೧

೩೭. ಅದೇ, ಪು. ಸಂ. ೬೧

೩೮. ಶಿವತಾರಕ್ ಕೆ.ಬಿ., ಪೂರ್ವೋಕ್ತ

೩೯. ಕುಂಬಾರ ರಮೇಶ., ೨೦೧೨, ಪೂರ್ವೋಕ್ತ., ಪು. ಸಂ. ೧೧-೧೯

೪೦. ಪಾಟೀಲ ಎ.ಯು., ೧೯೯೭, ತೇರದಾಳ ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಸಂಪ್ರಬಂಧ. ಪು. ಸಂ. ೨೯

೪೧. ಕುಂಬಾರ ರಮೇಶ., ೨೦೧೨, ಪೂರ್ವೋಕ್ತ. ಪು. ಸಂ. ೮೭

೪೨. ಸುಂದರ ಅ.,ದ ಅರ್ಲಿ ಚೇಂಬರ್ ಟೊಂಬ್ಸ್ ಆಫ್ ಸೌಥ್ ಇಂಡಿಯಾ ಪು. ಸಂ. ೩

೪೩. ಅದೇ., ಪು. ಸಂ. ೦೩

೪೪. ಅದೇ., ಪು. ಸಂ. ೨೮

೪೫. ಅದೇ., ಪು. ಸಂ. ೨೯
೪೬. ಅದೇ., ಪು. ಸಂ. ೨೯
೪೭. ಕರ್ನಾಟಕ ಪರಂಪರೆ ಭಾಗ-೧.,(ಚಾರಿತ್ರಿಕ ಯುಗ), ಪು. ಸಂ. ೧೧೭
೪೮. ಪಿಳ್ಳೆ ಕೆ.ಕೆ., ದಕ್ಷಿಣ ಭಾರತದ ಇತಿಹಾಸ., ಪು. ಸಂ. ೪೭ ಮತ್ತು ಎ.ನಾಗವೇಣಿ, ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನ., ಪು. ಸಂ. ೧೯ & ಶಾಸನ ಸಂಪುಟ., ಬಳ್ಳಾರಿ ಜಿಲ್ಲೆ., ಪು. ಸಂ. ೩೭೪
೪೯. ದಿವಾಕರ್ ಆರ್.ಆರ್., ಕರ್ನಾಟಕ ಥ್ರೂ ದ ಏಜೆಸ್., ಪು. ಸಂ. ೧೯೮
೫೦. ಅದೇ, ಪು. ಸಂ. ೧೯೮.
೫೧. ಷೇಕ್ ಆಲಿ.ಬಿ., ಸುಂದರ ಅ., (ಸಂ), ಕರ್ನಾಟಕ ಚರಿತ್ರೆ, ಸಂ,- ೧, ೧೯೯೭, ಪು. ಸಂ. ೪೩೭
೫೨. ಸುರೇಂದ್ರರಾವ್ ಬಿ., ರಾಷ್ಟ್ರಕೂಟರ ರಾಜಕೀಯ ಚರಿತ್ರೆ., ಷೇಕ್ ಆಲಿ ಮತ್ತು ಸುಂದರ,ಅ(ಸಂ) ಕರ್ನಾಟಕ ಚರಿತ್ರೆ, ಸಂ. – ೧೯೯೭, ಪು. ಸಂ. ೩೫
೫೩. ಚನ್ನಬಸಪ್ಪ ಕೆ., ೨೦೧೧, ಜಮಖಂಡಿ ತಾಲೂಕಿನ ಶಾಸನಗಳ ಅಧ್ಯಯನ, ಪು. ಸಂ. ೪೫, ಮತ್ತು Princely state of Jamkhandi, page 13
೫೪. ಗೋವಿಂದರಾಜು ಸಿ.ಆರ್., ಇತಿಹಾಸ, ಪು. ಸಂ. ೨೪೩
೫೫. ಚನ್ನಬಸಪ್ಪ ಕೆ., ೨೦೧೧, ಪೂರ್ವೋಕ್ತ, ಪು. ಸಂ. ೪೫
೫೬. ಸದಾಶಿವ ಕೆ., ೧೯೯೮, ಪ್ರಾಚೀನ ಭಾರತದ ಇತಿಹಾಸ, ಪು. ಸಂ. ೩೮೨
೫೭. SII.XV-೬(೫)–೧೧೮೫, SII. XV-೭೧–೧೧೮೮ ಮತ್ತು SII. XV–೫೪೨–೧೧೪೯–೫೦
೫೮. ಕುಂಬಾರ ರಮೇಶ., ೨೦೧೨, ತೇರದಾಳ ಒಂದು ಚಾರಿತ್ರಿಕ ಅಧ್ಯಯನ ಅಪ್ರಕಟಿತ ಎಂ.ಫಿಲ್ ಪ್ರಬಂಧ, ಪು. ಸಂ. ೩೨–೩೭.
೫೯. K.R.I.Dharwar & SII. XX - ಪು. ಸಂ. ೧೫೭
೬೦. ನರಸಿಂಹಮೂರ್ತಿ ಎ.ವಿ., ಸೇವುಣರ ಇತಿಹಾಸ, ಪು. ಸಂ. ೬–೭ ಮತ್ತು ಕರ್ನಾಟಕದಲ್ಲಿ ಸೇವುಣರ ಇತಿಹಾಸದಲ್ಲಿ ನರಸಿಂಹಮೂರ್ತಿ ಎ.ವಿ.,ಯವರು ಸ್ಥಳೀಯ ಪರಿಸರದಲ್ಲಿ ಅವರ ಸಾಮ್ರಾಜ್ಯ ವಿಸ್ತರಣೆಯ ಕುರಿತು ವಿವರಿಸಿದ್ದಾರೆ
೬೧. ಕರ್ನಾಟಕ ಚರಿತ್ರೆ ಸಂ.೩, ೧೯೯೭, ಪು. ಸಂ. ೬೫
೬೨. ಷೇಖ ಅಲಿ.ಬಿ., ೧೯೯೮, ದಕ್ಷಿಣ ಭಾರತದ ಇತಿಹಾಸ, ಪು. ಸಂ. ೨೮
೬೩. SII XX & ೨೧೧, ೧೨೧ & ೧೩
೬೪. S II XX – ೨೬೬
೬೫. S II XX – ೨೭೦
೬೬. ಕುಂಬಾರ ರಮೇಶ, ೨೦೧೨, ಪೂರ್ವೋಕ್ತ, ಪು. ಸಂ. ೩೨–೩೭
೬೭. ರಾಬರ್ಟ್ ಸಿವಿಲ್(ಮೂಲ), ಸದಾನಂದ ಕನವಳ್ಳಿ (ಅನು), ೨೦೦೬, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ. ಪು. ಸಂ. ೨೭–೩೨

೬೮. ಸೂರ್ಯನಾರಾಯಣರಾವ್ (ಮೂಲ), ಬಾಲಸುಬ್ರಮಣ್ಯ (ಅನು), ೨೦೦೦, ಮರೆಯಲಾಗದ ಮಹಾ ಸಾಮ್ರಾಜ್ಯ, ಪು. ಸಂ. ೧

೬೯ ಅದೇ., ಪು. ಸಂ. ೨೫

೭೦. ತಿಪ್ಪೇರುದ್ರಸ್ವಾಮಿ., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ಸಂ. ೧೩೮

೭೧. ಕರ್ನಾಟಕ ಚರಿತ್ರೆ, ೧೯೯೨, ಸಂಪುಟ-೨, ಪು. ಸಂ. ೮೯

೭೨. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., ೧೯೭೦, ಕರ್ನಾಟಕ ಇತಿಹಾಸ ದರ್ಶನ ಪು. ಸಂ. ೩೬೧

೭೩. ಕರ್ನಾಟಕ ಪರಂಪರೆ., ಮಧ್ಯಕಾಲ ಮತ್ತು ಆಧುನಿಕ ಕಾಲ, ೧೯೯೨ ಸಂಪುಟ-೨, ಪು. ಸಂ. ೨೨, ೨೩ ಮೈಸೂರು ರಾಜ್ಯ ಸರ್ಕಾರ

೭೪. ತಿಪ್ಪೇರುದ್ರಸ್ವಾಮಿ., ಪೂರ್ವೋಕ್ತ, ಪು. ಸಂ. ೧೪೦-೧೪೨

೭೫. ಕರ್ನಾಟಕ ಪರಂಪರೆ., ಮಧ್ಯಕಾಲ ಮತ್ತು ಆಧುನಿಕ ಕಾಲ, ೧೯೯೨, ಸಂಪುಟ-೨, ಪು. ಸಂ. ೩೬

೭೬. ಶ್ರೀಕಂಠಯ್ಯ ಕೆ., ೧೯೮೩. ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪು. ಸಂ. ೧೯-೨೭

೭೭. Venkata Ramayya.N, ೧೯೯೦. Vijayanagara origin of the city and Empire, ೩೨

೭೮. Gopal.M.H, ೧೯೭೮. The history of the Vijayanagara Empire, ಪು. ಸಂ. ೧೯-೨೭

೭೯. ಕೆ.ಇನ್ಸ್ ಸಂಪುಟ ೫. ಪು. ಸಂ. ೧-೨೧, ತೇರದಾಳ ತಾ॥ ಜಮಖಂಡಿ ಕ್ರಿ.ಶ. ೧೧೨೩ ರ ಶಾಸನ ಮತ್ತು ಕಟ್ಟಿ ವೆಂಕಟರಂಗೂ (ಅನು) ಮುಂಬಯಿ ಇಲಾಖೆಗೆ ಸೇರಿದ ಗ್ಯಾಝೆಟಿಯರ್, ಪು. ಸಂ. - ೬.೩೩

೮೦. ಮುನಿಸ್ವಾಮಿ ಆರ್., ಪೂರ್ವೋಕ್ತ, ೧೦೯೧. ಪು. ಸಂ. ೧೨೩

೮೧. ಮುಧೋಳ ಸಂಸ್ಥಾನದ ಘೋರ್ಪಡೆ ಮನೆತನದ (ಘರಾಣೆ), ಇತಿಹಾಸ ಪ್ರಸ್ತಾವನೆ, ಪು. ಸಂ. ೪೨

೮೨. ದೇವರಕೊಂಡರೆಡ್ಡಿ.,ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೯ ಬಾಗಲಕೋಟ ಜಿಲ್ಲೆ ಪು. ಸಂ. ೯೧

೮೩. ಕೆ.ಇನ್ಸ, ಸಂ.೫, ಪು. ಸಂ - ೯೮. ತೇರದಾಳ (ತಾ) ಜಮಖಂಡಿ ಕ್ರಿ.ಶ. ೧೧೮೧ರ ಶಾಸನ

೮೪. ಜಮಖಂಡಿ ಸಂಸ್ಥಾನದ ವಾರ್ಷಿಕ ಆದಾಯ ಅಂದು ೪,೫೪,೦೦೦ ರೂಪಾಯಿ ಇತ್ತು. ಮತ್ತು ೧೨೦೦ ಅಶ್ವ ಬಲವಿತ್ತು. ಪು. ಸಂ. ೧೫

೮೫ ಮಟೋಳಿ ಎಸ್.ಬಿ., ೨೦೦೧, ದಕ್ಷಿಣ ಸಂಸ್ಥಾನಗಳ ಇತಿಹಾಸ ದರ್ಶನ. ಪು. ಸಂ. ೧೫

೮೬. ಮಟೋಳಿ ಎಸ್.ಬಿ., ೧೯೮೭, ಜಮಖಂಡಿ ದರ್ಶನ, ಪು. ಸಂ. ೧೯

೮೭. ಬೆಳಗಲಿ ದು.ನಿಂ., ೨೦೦೦, ಜಮಖಂಡಿ ತಾಲೂಕಾ ದರ್ಶನ, ಪು. ಸಂ. ೨೬

೮೮. ಸ್ವಾಮಿ., ಸದಾನಂದರ ಚರಿತ್ರೆ, ಪು. ಸಂ. ೨೬

೮೯. ಮಟೋಳಿ ಎಸ್.ಜಿ., ೨೦೦೧, ದಕ್ಷಿಣ ಸಂಸ್ಥಾನಗಳ ಇತಿಹಾಸ ದರ್ಶನ, ಪು. ಸಂ. ೨೩

೯೦. ಬೆಳಗಲಿ ದು.ನಿಂ., ೨೦೦೦, ಪೂರ್ವೋಕ್ತ, ಪು. ಸಂ. ೧೬

೯೧. ಅದೇ., ಪು. ಸಂ. ೧೭–೨೮

೯೨. ಅದೇ., ಪು. ಸಂ. ೧೭–೨೮

೯೩. ಮುಂದೆ ಇವನೇ ಈಚಲಕರಂಜಿ ಸಂಸ್ಥಾನದ ಮೂಲ ಪುರುಷನಾದನು.

೯೪. ಮಟೋಳಿ ಎಸ್.ಬಿ., ಪೂರ್ವೋಕ್ತ, ಪು. ಸಂ. ೧೩೨

೯೫. ಅದೇ., ಪು. ಸಂ. ೩೭

೯೬. ಬೆಳಗಲಿ ದು.ನಿಂ., ೨೦೦೦, ಪೂರ್ವೋಕ್ತ, ಪು. ಸಂ. ೧೬

೯೭. ಅದೇ., ಪು. ಸಂ. ೧೭–೩೭

೯೮. A.C. Banerjee., History of India p-೫೮೬.

೯೯. ಜೋಶಿ ಡಿ.ಟಿ., ಮತ್ತು ಆಧುನಿಕ ಭಾರತದ ಇತಿಹಾಸ A.C. Banerjee, p-586-P.II

೧೦೦. ಅದೇ., p-೫೮೬-P.II

೧೦೧. ಅದೇ., p-೫೮೬–P.II

೧೦೨. ಶ್ರೀನಿವಾಸ ಮೂರ್ತಿ., ಕರ್ನಾಟಕ ಇತಿಹಾಸ ಪು. ಸಂ. ೮೯–೯೦. ಮತ್ತು ಸಂಗಮೇಶ ಕಲ್ಯಾಣಿ ಮೋಡಿ ಆಕರಗಳು ಸಂಶೋಧನಾ ಮಾರ್ಗ

೧೦೩. ಖರೆ ಶಾಸ್ತ್ರೀಯವರ., ಐತಿಹಾಸಿಕ ಲೇಖನಗಳ ಪತ್ರ ನಂ. ೬೯

೧೦೪. ಬೆಳಗಲಿ ದು.ನಿಂ., ೨೦೦೦, ಪೂರ್ವೋಕ್ತ, ಪು. ಸಂ. ೨೯

೧೦೫. ಅದೇ., ಪು. ಸಂ. ೩೨

೧೦೬. ಅಣ್ಣಿಗೇರಿ ಎ.ಎಂ., ೧೯೮೦, ಬಿಜಾಪೂರ ಶಿಲ್ಪಕಲಾ ವೈಭವ, ಪು. ಸಂ ೮೭ ಮತ್ತು ಕೊಪ್ಪಾ ಎಸ್.ಕೆ ೧೯೯೦, ತರ್ದವಾಡಿ ನಾಡು

೧೦೭. ಅದೇ.,

೧೦೮. Kinght of Indian Empire

೧೦೯. Aid. de. Camp

೧೧೦. ಬೆಳಗಲಿ ದು.ನಿಂ., ೨೦೦೦, ಪೂರ್ವೋಕ್ತ, ಪು. ಸಂ. ೨೯–೪೫

೧೧೧. ಅದೇ.,

೧೧೨. ಅದೇ.,

೧೧೩. ಮಟೋಳಿ ಎಸ್.ಬಿ., ಪೂರ್ವೋಕ್ತ, ಪು. ಸಂ. ೧೪೫–೧೯೨. ದೇವರಕೊಂಡಾ ಪೂರ್ವೋಕ್ತ, ಪು. ಸಂ. ೮೪ ಮತ್ತು ಕೆ.ಇನ್ಸ. ಸಂಪುಟ ೫. ಪು. ಸಂ. ೨೧ ತೇರದಾಳ (ತಾ) ಜಮಖಂಡಿ ಕ್ರಿ.ಶ. ೧೧೨೩ ಕಾಲದ ಶಾಸನ

೧೧೪. ಬೆಳಗಲಿ ದು.ನಿಂ., ೨೦೦೦, ಪೂರ್ವೋಕ್ತ, ಪು. ಸಂ. ೨೯–೭೫

೧೧೫. ಬಾಗಲಕೋಟೆ ಜಿಲ್ಲೆಯ ವೆಬ್ ಸೈಟ್

೧೧೬. ಅದೇ.,

# ಅಧ್ಯಾಯ–೩

# ಸಾಮಾಜಿಕ ಜನಜೀವನ

**ಅಧ್ಯಾಯ ೩ : ಸಾಮಾಜಿಕ ಜನಜೀವನ**

೩.೧. ಮಾನವ ಸಂಸ್ಕೃತಿಯ ಅರ್ಥ–ವೈಶಿಷ್ಟ್ಯತೆ ಮತ್ತು ಮಹತ್ವ

೩.೨. ವಿವಿಧ ಸಮುದಾಯಗಳು ಮತ್ತು ಶ್ರೇಣಿಕರಣ ವ್ಯವಸ್ಥೆ

೩.೩. ನಂಬಿಕೆ,ಸಂಪ್ರದಾಯ ಮತ್ತು ಆಚರಣೆಗಳು

೩.೩.೧. ಹಬ್ಬಗಳು

೩.೩.೨. ಜಾತ್ರೆ ಉತ್ಸವಗಳು, ಇತರೆ ಆಚರಣೆಗಳು

೩.೪. ಕಲಾ ಪರಂಪರೆ ಮತ್ತು ವಿಶಿಷ್ಟ ಕಲಾವಿದರು

೩.೫. ಶೈಕ್ಷಣಿಕ ವ್ಯವಸ್ಥೆ

## ಅಧ್ಯಾಯ-೩ ಸಾಮಾಜಿಕ ಜನಜೀವನ

ಮಾನವ ಸಮಾಜದ ಶಿಶು ಅಷ್ಟೇ ಅಲ್ಲದೇ ಅವನು ಸಂಘ ಜೀವಿಯು ಹೌದು. ಯಾವುದೇ ಸಮಾಜದಲ್ಲಿ ಮಾನವನ ಪಾತ್ರ ಹಿರಿದಾದುದು. ಯಾವುದೇ **'ಸಮಾಜದ'** ಬೆಳವಣಿಗೆ ಅಲ್ಲಿನ ಜನ ಜನಜೀವನದ ಮೇಲೆ ಅವಲಂಬಿಸಿರುತ್ತದೆ. ಎಲ್ಲಿ ಉತ್ತಮ ಸಾಮಾಜಿಕ ವಾತಾವರಣ, ಜನಜೀವನಕ್ಕೆ ಬೇಕಾದ ಅನುಕೂಲಗಳು ಇರುತ್ತವೆಯೋ ಅಲ್ಲಿ ಮಾತ್ರ ಉತ್ತಮ ಸಮಾಜ ನಿರ್ಮಾಣ ಸಾಧ್ಯ. ಅದರಂತೆ ತೇರದಾಳ ಪರಿಸರದಲ್ಲಿನ ಸಾಮಾಜಿಕ ಜನ ಜೀವನ ಮಾನವ ಸಂಸ್ಕೃತಿಯ ಏಳ್ಗೆ, ಬೆಳವಣಿಗೆಯಲ್ಲಿ ಯಾವ ರೀತಿ ಪಾತ್ರ ನಿರ್ವಹಿಸಿದೆ ಎನ್ನುವುದನ್ನು ಗುರುತಿಸುವ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಈ ಭಾಗದ ಸಾಮಾಜಿಕ ಜನ ಜೀವನವನ್ನು ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

### ೩.೧. ಮಾನವ ಸಂಸ್ಕೃತಿಯ ಅರ್ಥ-ವೈಶಿಷ್ಟ್ಯತೆ ಮತ್ತು ಮಹತ್ವ

ಸಮಾಜ ಮತ್ತು ಸಂಸ್ಕೃತಿಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. **'ಸಂಸ್ಕೃತಿ'**ಯು ಮಾನವ ಸಮಾಜದ ಉಸಿರು. ಇದು ಒಂದು ಸಮೂಹದ ಅಭಿವ್ಯಕ್ತಿಯಾಗಿರುತ್ತದೆ. ಇದು ಮಾನವ ಜನಾಂಗದ ನಾಗರೀಕತೆಯನ್ನು ರೂಪಿಸುವ ಮಾತೃಕೆಯಾಗಿದೆ. 'ಸಂಸ್ಕೃತಿ'ಯುನ್ನು ಆಂಗ್ಲ ಭಾಷೆಯಲ್ಲಿ Culture ಎನ್ನಲಾಗುತ್ತದೆ. ಹಾಗೆಂದರೆ ಶುದ್ಧಿಕರಿಸುವಿಕೆ, ಸಾಣೆ ಹಿಡಿಯುವಿಕೆ, ಪರೀಕ್ಷಿಸುವಿಕೆ, ಕಾಡುತನವನ್ನು ತೆಗೆದುಹಾಕುವಿಕೆ ಎನ್ನುವ ಅರ್ಥಗಳಿವೆ. ಸಂಸ್ಕಾರದಿಂದ ಸಂಸ್ಕೃತಿ ಬಂದಿದೆ. ಮಾನವನ ಸಮಾಜಕ್ಕೆ ಸಂಸ್ಕಾರ ನೀಡುವುದನ್ನು ನಾವು ಸರಳವಾಗಿ ಸಂಸ್ಕೃತಿ ಎನ್ನಬಹುದು. ಇದರ ಎಲ್ಲೆಯೊಳಗಡೆ ನಮ್ಮ ನಾಗರೀಕತೆ, ಪರಂಪರೆ, ಭಾಷೆ, ಆಚಾರ-ವಿಚಾರ, ಸಂಪ್ರದಾಯ, ಆಚರಣೆ, ನಡೆ-ನುಡಿ, ಆಹಾರ, ವೇಷಭೂಷಣ ಎಲ್ಲಾವು ಅಂತರಗತವಾಗಿರುತ್ತವೆ[೧]. ಅನೇಕ ವಿದ್ವಾಂಸರು ತಮ್ಮದೇ ಆದ ದೃಷ್ಟಿಕೋನದಲ್ಲಿ ಸಂಸ್ಕೃತಿಯ ಮಹತ್ವವನ್ನು ಅರ್ಥಸಲು ಪ್ರಯತ್ನಿಸಿದ್ದಾರೆ. ಅವರಲ್ಲಿ ಮೇಕೈವರ ಮತ್ತು ಪೇಜ್‌ರವರು 'ಸಂಸ್ಕೃತಿಯು ಜೀವನ ಮೌಲ್ಯಗಳ ಭಾವನಾತ್ಮಕ ಬಂಧಗಳ ಹಾಗೂ ಸಾಧನೆಗಳ ಪ್ರಪಂಚವೇ ಆಗಿದೆ' ಎಂದು ಸಂಸ್ಕೃತಿಯನ್ನು ಅರ್ಥೈಸುತ್ತಾರೆ. ಅದೇ ರೀತಿ ಗ್ರಾಹಂ ವ್ಯಾಲಸೆ ಎನ್ನುವ ವಿದ್ವಾಂಸರು ಸಂಸ್ಕೃತಿಯು ಸಂಪ್ರದಾಯಿಕವಾಗಿ ಬಂದ ಪದ್ಧತಿಗಳ ಜೀವನ ಮೌಲ್ಯಗಳ ಮತ್ತು ಆದರ್ಶಗಳ ಸಂಗ್ರಹವಾಗಿದ್ದು, ಈ ಸಾಮಾಜಿಕ ಪರಂಪರೆಯನ್ನು ನಾವು ಹಿಂದಿನ ತಲೆಮಾರುಗಳಿಂದ ಹಾಗೂ ಜ್ಞಾನಾರ್ಜನೆಯಿಂದ ಹೊಂದಿರುತ್ತವೆ ಎನ್ನುತ್ತಾರೆ. ಅಲ್ಲದೇ ರವೀಂದ್ರನಾಥ ಠಾಗೋರ್‌ರವರು ಮನುಷ್ಯನಲ್ಲಿರುವ ಪಶುತ್ವವನ್ನು ಹೋಗಲಾಡಿಸಿ ನಿಜವಾದ ಮಾನವೀಯತೆಯನ್ನು ತಿಳಿಸುವುದೇ ಸಂಸ್ಕೃತಿ ಎನ್ನುತ್ತಾರೆ. ಹಾಗೂ ಕ್ಲೊಕಹಾಸ ಎನ್ನುವ ವಿದ್ವಾಂಸರು ಸಂಸ್ಕೃತಿಯು ಜೀವನವನ್ನು ನಡೆಸಲು ಕಾಲಾನುಕ್ರಮವಾಗಿ ರೂಪುಗೊಂಡ ಒಂದು ಜೀವನ ವಿನ್ಯಾಸ ಎಂದಿದ್ದಾರೆ. ಅಂತೆಯೇ ಮಹಾತ್ಮ ಗಾಂಧೀಜಿಯವರು ಒಂದು ದೇಶದ ಸಂಸ್ಕೃತಿ ಆ ದೇಶದ ಜನರ ಹೃದಯ ಮತ್ತು ಆತ್ಮಗಳಲ್ಲಿ ನೆಲೆಸಿರುತ್ತದೆ ಎನ್ನುತ್ತಾರೆ. ಅಲ್ಲದೇ ಜವಾಹರಲಾಲ್ ನೆಹರೂ ಸಂಸ್ಕೃತಿಯು ಒಂದು ದೇಶದ ಜನರ ಗುಣ ಮೌಲ್ಯಗಳನ್ನು ಅಳೆಯುವ ಅಳತೆಗೋಲಾಗಿದೆ ಎನ್ನುತ್ತಾರೆ[೨].

ಈ ಮೇಲಿನ ವ್ಯಾಖ್ಯಾನಗಳಿಂದ ನಮಗೆ ಸಂಸ್ಕೃತಿಯ ಸ್ವರೂಪ ಮತ್ತು ವ್ಯಾಪ್ತಿ ಅರ್ಥವಾಗುತ್ತದೆ. ಈ ಹಿನ್ನೆಲೆಯಲ್ಲಿ ಅದರ ಲಕ್ಷಣಗಳನ್ನು ಸಹ ನಾವು ಅರಿಯಬಹುದಾಗಿದೆ. ಮಾನವ ಸಂಸ್ಕೃತಿಯು ಯಾವಾಗಲೂ ಸಾಮಾಜಿಕವಾಗಿದ್ದು, ಇದು ಅವನಿಗೆ ಕಲಿಕೆಯಿಂದ ಬಂದದುದಾಗಿರುತ್ತದೆ. ಇದು ಇತರರೊಂದಿಗೆ ಹಂಚಿಕೊಳ್ಳಲ್ಪಡುವ ಲಕ್ಷಣವುಳ್ಳದಾಗಿದ್ದು, ಸಂಚಾರಣಾತ್ಮಕ ಗುಣವುಳ್ಳದ್ದಾಗಿರುತ್ತದೆ. ಇದರ ಮತ್ತೊಂದು ಪ್ರಮುಖ ಲಕ್ಷಣ ಎಂದರೆ ಅದು ಯಾವಾಗಲೂ ನಿರಂತರವಾಗಿದ್ದು, ಸಂಗ್ರಹವಾದದು ಆಗಿರುತ್ತದೆ. ಇದು ಯಾವಾಗಲೂ ಏಕರೂಪ ಮತ್ತು ಸಮಗ್ರವಾಗಿರುತ್ತದೆ. ಇದು ಸಮಾಜದಿಂದ ಸಮಾಜಕ್ಕೆ ಭಿನ್ನ ಲಕ್ಷಣ ಮತ್ತು ಸ್ವರೂಪವನ್ನು ಹೊಂದಿದ್ದು, ಅದು ಯಾವಾಗಲೂ ಇತರರಿಗೆ ಆದರ್ಶ ಸೂಚಕವಾಗಿರುತ್ತದೆ. ಮಾನವನ ವಿಶಿಷ್ಟ ಆಸ್ತಿಯಾಗಿರುವ ಇದು ವಿಶಾಲ ಅರ್ಥವನ್ನೊಂದಿದ್ದು, ಯಾವಾಗಲೂ ತೃಪ್ತಿದಾಯಕ ಲಕ್ಷಣ ಹೊಂದಿರುತ್ತದೆ. ಅಲ್ಲದೆ ಗತಶೀಲವಾಗಿದ್ದು, ಸರ್ವ ಕಾಲಗಳಲ್ಲೂ ಹೊಂದಾಣಿಕೆಗೆ ಅನುಕೂಲಕರವಾಗಿರತ್ತದೆ[೩].

ಭಾರತ ದೇಶ ಇತರೆಲ್ಲಾ ದೇಶಗಳಿಗಿಂತಲೂ ಉನ್ನತವಾದ ಮಾನವ ಸಂಸ್ಕೃತಿ, ಪರಂಪರೆ ಭವ್ಯ ಇತಿಹಾಸವನ್ನು ಹೊಂದಿದೆ. ಆದರೂ ಬ್ರಿಟಿಷ್ ವಸಾಹತುಶಾಹಿ ಇತಿಹಾಸಕಾರನಾದ ಜೇಮ್ಸ್ ಮಿಲ್, ಭಾರತೀಯ ಇತಿಹಾಸವನ್ನು ನಿರ್ವಚಿಸುವಾಗ "ಭಾರತೀಯರಿಗೆ ಉನ್ನತವಾದ ಸಂಸ್ಕೃತಿ, ನಾಗರೀಕತೆ ಇಲ್ಲ ಹಾಗೂ Time Punchality ಇಲ್ಲ, ಅವರು ಮೂಢ ವಸ್ತುಗಳನ್ನು (ಮೂರ್ತಿ, ಶಿಶ್ನಗಳನ್ನು) ಪೂಜಿಸುತ್ತಾರೆ. ಅವರನ್ನು ಉದ್ಧರಿಸಲು ದೇವರು ಕ್ರೈಸ್ಥರಾದ ನಮ್ಮನ್ನು ಕಳುಹಿಸಿಕೊಟ್ಟಿದ್ದಾನೆ" ಎನ್ನುವ ಅವಹೇಳನಕಾರಿ ಮಾತುಗಳನ್ನು ಹೇಳುತ್ತಿದ್ದನು. ಇದೇ ಸಾಲಿನಲ್ಲಿ ವಿ. ಎ. ಸ್ಮಿಥ್ ಮೊದಲಾದ ಇತಿಹಾಸಕಾರರು ಭಾರತೀಯ ಇತಿಹಾಸವನ್ನು ಸಾಧ್ಯವಾದಷ್ಟು ಕಡೆಗಣಿಸಿ ನಿರ್ವಹಿಸಿದ್ದಾರೆ[೪]. ಇದಕ್ಕೆ ವ್ಯತಿರಿಕ್ತವಾಗಿ ಉದಾರವಾದಿ ಬ್ರಿಟೀಷ್ ಇತಿಹಾಸಕಾರರಾದ ಸರ್ ವಿಲಿಯಂ. ಜೋನ್ಸ್, ಜಾನ್. ಮಾರ್ಷಲ್, ಕನ್ನಿಂಗ್. ಹ್ಯಾಮ್, ಆರ್.ಡಿ.ಬ್ಯಾನರ್ಜಿ ಮೊದಲಾದ ವಿದ್ವಾಂಸರ ಪರಿಶ್ರಮದಿಂದ ಭಾರತ ದೇಶ ಒಂದು ಉನ್ನತ ಸಂಸ್ಕೃತಿ ನಾಗರೀಕತೆಯನ್ನು ಹೊಂದಿದೆ. ಅದು ಕ್ರಿ.ಪೂ.೩೦೦೦ ವರ್ಷಗಳ ಹಿಂದೆಯೇ ಇತರೆ ಎಲ್ಲಾ ರಾಷ್ಟ್ರಗಳಿಗಿಂತಲೂ ಉನ್ನತವಾದ ನಾಗರೀಕತೆಯನ್ನು ಹೊಂದಿತ್ತು ಎಂದು ವಿಶ್ಲೇಷಿಸುತ್ತಾರೆ. ಪಿ.ವಿ.ಕಾಣೆಯವರು, (ಹಿಸ್ಟರಿ ಆಫ್ ಧರ್ಮಶಾಸ್ತ್ರ) ಪಿ.ಎನ್.ಓಕ್ ಮೊದಲಾದ ವಿದ್ವಾಂಸರು ಸಹ ಇದೇ ದಾಟಿಯಲ್ಲಿ ಭಾರತದ ವೈಭವವನ್ನು ಆಧಾರ ಸಮೇತವಾಗಿ ಪರಿಚಯಿಸಿದರು. ಜಾನ್ ಮಾರ್ಷಲ್‌ರವರು ೧೯೦೧ರಲ್ಲಿ ಭಾರತದ ಸ್ಮಾರಕಗಳ ಸಂರಕ್ಷಣೆಗಾಗಿ **'ಆರ್ಕಿಲಾಜಿಕಲ್ ಸರ್ವೇ ಆಫ್ ಇಂಡಿಯಾ'** ಎನ್ನುವ ಒಂದು ವಿಶೇಷ ಇಲಾಖೆಯನ್ನು ಸ್ಥಾಪಿಸುತ್ತಾರೆ. ನಂತರ ೧೯೨೨-೨೩ರ ಸಂದರ್ಭದಲ್ಲಿ ಆರ್.ಡಿ.ಬ್ಯಾನರ್ಜಿ, ದಯಾರಾಮ ಸಹನಿಯವರು ಭಾರತದ ಪ್ರಥಮ ನಾಗರೀಕತೆಯಾದ ಸಿಂಧೂ ಬಯಲಿನ ನಾಗರೀಕತೆಗೆ ಸಂಬಂಧಿಸಿದ ಹರಪ್ಪಾ ಮತ್ತು ಮಹೆಂಜೋದಾರೋಗಳಲ್ಲಿ ಹಲವು ಕುರುಹಗಳನ್ನು ಪ್ರಥಮವಾಗಿ ಪತ್ತೆಹಚ್ಚಿ ಈ ಜಗತ್ತಿಗೆ ತೋರಿಸಿಕೊಟ್ಟರು. ಜಾನ್ ಮಾರ್ಷಲ್‌ರವರು ೧೯೨೪, ಡಿಸೆಂಬರ್ ೨೩ರ "Iulstrated Weekely" ಪತ್ರಿಕೆಯಲ್ಲಿ ಇಡೀ ವಿಶ್ವದಲ್ಲಿಯೇ ಭಾರತ ದೇಶ ಮೊಟ್ಟ ಮೊದಲ ಬಾರಿಗೆ ಅತ್ಯಂತ ಉನ್ನತವಾದ ನಾಗರೀಕತೆಯನ್ನು ಹೊಂದಿತ್ತು. ಅದುವೇ ಸಿಂಧೂ ಬಯಲಿನ ನಾಗರೀಕತೆಯಾಗಿತ್ತು ಎಂದು ಪ್ರತಿ ಪಾದಿಸಿದರು[೫]. ಇದರಿಂದ ಜಗತ್ತು ನಿಬ್ಬೆರಗಾಯಿತು. ಇದೆ

ವಿದ್ವಾಂಸರು ಭಾರತದ ಹಲವಾರು ನಿವೇಶನಗಳಲ್ಲಿ ಉತ್ಖನನ ಮಾಡಿ ಭೂಮಿಯೊಳಗೆ ಹುದುಗಿ ಹೋಗಿದ್ದ ಹಲವಾರು ಸ್ಮಾರಕಗಳನ್ನು ಬೆಳಕಿಗೆ ತರುವುದರ ಮುಖಾಂತರ ಭಾರತೀಯ ಮಾನವ ಸಂಸ್ಕೃತಿಯ ಪ್ರಾಚೀನತೆಯನ್ನು ಗುರುತಿಸಿದರು.

ಸಂಸ್ಕೃತಿಯಷ್ಟೇ ಪ್ರಾಮುಖ್ಯತೆಯನ್ನು ಪರಂಪರೆಯು ಹೊಂದಿದೆ. ಪರಂಪರೆ ಮತ್ತು ಸಂಸ್ಕೃತಿ ಒಂದು ದೇಶದ ಕಣ್ಣುಗಳಿದ್ದಂತೆ. ಅವು ಎರಡೂ ಸಹ ದೇಶವೊಂದರ ನಾಗರೀಕತೆಯನ್ನು ರೂಪಿಸುವ ಮತ್ತು ನಿರ್ಧಾರಕ ಅಂಶಗಳಾಗಿವೆ. ನಮ್ಮ ಹಿರಿಯರಿಂದ ನಮಗೆ ಬಳುಬಳಿಯಾಗಿ ಬಂದ ಸಂಪ್ರದಾಯ, ಆಚರಣೆ, ಹಬ್ಬ, ಜಾತ್ರೆ, ಕಲಾ ಪದ್ಧತಿ ಹಾಗೂ ಉಳಿದು ಬಂದಿರುವ ದೇವಾಲಯಗಳು, ಸ್ಮಾರಕಗಳನ್ನು ಮತ್ತು ವಸ್ತುಗಳನ್ನು ನಮ್ಮ ಪರಂಪರೆ ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ. ಪರಂಪರೆಯನ್ನು **ಮೂರ್ತ/ಸ್ಥಿರ** ಪರಂಪರೆ (Tengable Heritage), **ಅಮೂರ್ತ/ಅಸ್ಥಿರ** ಪರಂಪರೆ (Intengable Heritage), **ನೈಸರ್ಗಿಕ ಪರಂಪರೆ**[೬] (Natural Heritage) ಎನ್ನುವ ಮೂರು ವಿಭಾಗಗಳಾಗಿ ಮಾಡಲಾಗಿದೆ. ಸ್ಥಿರ ಪರಂಪರೆಯಲ್ಲಿ ಸ್ಥಿರವಾದ ಕಟ್ಟಡಗಳು, ಅರಮನೆಗಳು, ಕೋಟೆಗಳು ಇತ್ಯಾದಿಗಳು ಬರುತ್ತವೆ. ಅದೇ ರೀತಿ ಅಸ್ಥಿರ ಪರಂಪರೆ ಎಂದರೆ ಕಲೆ, ಹಾಡುಗಾರಿಕೆ, ಸಂಪ್ರದಾಯ, ಹಬ್ಬ-ಜಾತ್ರೆ, ಲೋಹಗಾರಿಕೆ, ಕರಕುಶಲ ಕಲೆ, ವೈದ್ಯ ಪದ್ಧತಿ ದಿನ ನಿತ್ಯದ ಆಚರಣೆಗಳು ಇತ್ಯಾದಿಗಳು ಇದರಲ್ಲಿ ಬರುತ್ತವೆ. ನೈಸರ್ಗಿಕ ಪರಂಪರೆಯಲ್ಲಿ ವಿಶೇಷವಾಗಿರುವ ನಿಸರ್ಗದತ್ತ ಬೆಟ್ಟ ಗುಡ್ಡಗಳು, ಸರೋವರ, ಗುಹೆ, ಅರಣ್ಯ, ಸಸ್ಯ ಹಾಗು ಜೀವ ಸಂಕುಲಗಳು ಬರುತ್ತವೆ. ಪ್ರತಿಯೊಂದು ದೇಶಕ್ಕೂ ತನ್ನದೆ ಆದ ಪರಂಪರೆ ಮತ್ತು ಸಂಸ್ಕೃತಿ ಇರುತ್ತದೆ. ಆದ್ದರಿಂದ ಈ ಮೇಲಿನ ಎಲ್ಲಾ ಅಂಶಗಳನ್ನು ಸಂಸ್ಕೃತಿಯ ಒಡಲೊಳಗೆ ಅರ್ಥೈಸಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ತೇರದಾಳ ಪರಿಸರದಲ್ಲಿ ಪ್ರಸಕ್ತವಾಸವಾಗಿರುವ ವಿವಿಧ ಸಮುದಾಯ ಮತ್ತು ಸಂಸ್ಕೃತಿಗಳ ವಿಶೇಷತೆಯನ್ನು ಮುಂದಿನ ಉಪ ಶೀರ್ಷಿಕೆಗಳಡಿಯಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

### ೩.೨. ವಿವಿಧ ಸಮುದಾಯಗಳು ಮತ್ತು ಶ್ರೇಣೀಕರಣ ವ್ಯವಸ್ಥೆ

ಭಾರತ ಹಲವು ಧರ್ಮ ಮತ್ತು ಸಮುದಾಯಗಳ ತವರೂರು. ಇಲ್ಲಿ ನೂರಾರು ಜಾತಿಗಳಿದ್ದು, ಅವು ತಮ್ಮದೇ ಆದ ಪ್ರತ್ಯೇಕತೆಯನ್ನು ಹೊಂದಿರುತ್ತವೆ. **ಸಮುದಾಯ** ಎಂದರೆ ಸಮುದಾಯಿಕ ಭಾವನೆ, ಏಕತೆ, ಸಹಕಾರ ಇರಬೇಕಾದದು ಅವಶ್ಯಕ. ನಾವು ನಮ್ಮವರು ಅನ್ನುವ ನಂಬಿಕೆ, ಭಾವನೆಗಳು ಸಮುದಾಯವೊಂದರ ಮೂಲಾಂಶಗಳಾಗಿವೆ. ಅಷ್ಟೇ ಅಲ್ಲದೆ ಪ್ರತಿ ಸಮುದಾಯ ತನ್ನದೆ ಆದ ಸಾಮಾಜಿಕ, ಧಾರ್ಮಿಕ ಅಚರಣೆ ಮತ್ತು ತನ್ನದೇ ಆದ ಕಟ್ಟುಪಾಡುಗಳು ಹಾಗೂ ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತವೆ. ಅದರಂತೆ ನಮ್ಮ ದೇಶದಲ್ಲಿನ ಪ್ರತಿ ಸಮುದಾಯಗಳು ತಮ್ಮ ಧರ್ಮ, ದೇವರು, ವ್ಯಕ್ತಿ, ಘಟನೆ, ಪ್ರದೇಶಗಳನ್ನು ಪುರಾಣೀಕರಿಸಿ ಅವುಗಳೇ ಶ್ರೇಷ್ಠ ಮತ್ತು ಪವಿತ್ರ ಎಂದು ಬಿಂಬಿಸುತ್ತಿವೆ. ಇದಕ್ಕೆ ಕಾರಣ ನಮ್ಮ ಸಮಾಜದಲ್ಲಿ ರೂಪುಗೊಂಡಿರುವ ಸನಾತನ ವ್ಯವಸ್ಥೆ. ಇದರಿಂದಾಗಿ ಪ್ರತಿ ಜಾತಿಗಳ ಮಧ್ಯೆ ಅಗಾಧವಾದ ಅಂತರ ಏರ್ಪಟ್ಟು, ಶ್ರೇಷ್ಠ, ಕನಿಷ್ಠ ಎನ್ನುವ ಇಲ್ಲವೇ ಸ್ಪರ್ಶ, ಅಸ್ಪರ್ಶ ಎನ್ನುವ ಶ್ರೇಣೀಕರಣ ವ್ಯವಸ್ಥೆ ಏರ್ಪಟ್ಟಿದೆ. ಈ ಜಾತಿ ಅಸಮಾನತೆಗೆ ಮುಖ್ಯ ಕಾರಣ ಮನುಷ್ಯನ ಹುಟ್ಟು ಆಗಿರುತ್ತದೆ. ಇದರಿಂದಾಗಿ ಉನ್ನತ ವರ್ಗಗಳು ಎಲ್ಲಾ ರೀತಿಯ ಸವಲತ್ತುಗಳನ್ನು ಪಡೆದುಕೊಂಡರು. ಆದರೆ

ಕೆಳ ವರ್ಗಗಳಲ್ಲಿ ಹುಟ್ಟಿದವರು ಹಲವು ಸವಲತ್ತುಗಳಿಂದ ಶತಶತಮಾನಗಳಿಂದ ವಂಚಿತರಾಗಿ ಅಸಮಾನತೆಯಿಂದ ಬಾಳಿ ಸಾಮಾಜಿಕ ಅನ್ಯಾಯಕ್ಕೆ ಒಳಗಾದರು. ಇದಕ್ಕೆ ಕಾರಣ ನಮ್ಮಲ್ಲಿ ಮನುಷ್ಯನ ಹುಟ್ಟಿನ ಬಗ್ಗೆ ಇರುವ ನಂಬಿಕೆಗಳು. ಭಾರತದ ಧರ್ಮಶಾಸ್ತ್ರಜ್ಞನಾದ ಮನು ಜಾತಿಯ ಹುಟ್ಟಿನ ಬಗ್ಗೆ ಈ ರೀತಿ ಹೇಳುತ್ತಾನೆ. "ಬ್ರಾಹ್ಮಣ ಬ್ರಹ್ಮನ ಹಣೆಯಿಂದ, ಕ್ಷತ್ರೀಯ ಬ್ರಹ್ಮನ ಭುಜದಿಂದ, ವೈಶ್ಯ ಅವನ ತೊಡೆಯಿಂದ, ಶೂದ್ರ ಅವನ ಪಾದಗಳಿಂದ ಹುಟ್ಟಿದ್ದಾನೆ." ಮುಂದುವರೆದ ಆತ ಬ್ರಾಹ್ಮಣ ವೇದಶಾಸ್ತ್ರಗಳ ಅಭ್ಯಾಸದಲ್ಲಿ ನಿರತನಾದರೆ, ಕ್ಷತ್ರೀಯ ರಾಜ್ಯ ಪರಿಪಾಲನೆ ಮಾಡುವುದರಲ್ಲಿಯೂ, ವೈಶ್ಯ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಲ್ಲಿಯೂ, ಶೂದ್ರನು ಈ ಮೇಲಿನ ಮೂರು ವರ್ಗಗಳ ಸೇವೆಯನ್ನು ಸದಾ ಮಾಡಿಕೊಂಡಿರಬೇಕೆಂದು ಆತ ನಿರ್ದೇಶಿಸಿದ್ದಾನೆ. ಇದೇ ರೀತಿ ಪುರುಷ ಸೂಕ್ತ ಮತ್ತು ಇತರೆ ಸ್ಮೃತಿ, ಪುರಾಣಗಳಲ್ಲಿ ಜಾತಿ ಏಣಿ ಶ್ರೇಣಿಕರಣಕ್ಕೆ ಸಂಬಂಧಿಸಿದಂತೆ ಕೆಲ ನಿಯಮಗಳು ಉತ್ತರ ವೇದಗಳ ಕಾಲದಿಂದ ರಚನೆಯಾಗಿ ಭಾರತದಲ್ಲಿ ಜಾತಿ ವ್ಯವಸ್ಥೆಯನ್ನು ಅಂದಿನಿಂದಲೂ ಪೋಷಿಸಿಕೊಂಡು ಬಂದಿವೆ[೭]. ಇದರ ಪರಿಣಾಮವಾಗಿ ಭಾರತ ಸಮಾಜದಲ್ಲಿ ಎರಡು ಅಂಶಗಳು ಸಂಪೂರ್ಣವಾಗಿ ಇಲ್ಲವಾಗಿವೆ ಎಂಬುದನ್ನು ಡಾ.ಬಿ.ಆರ್.ಅಂಬೇಡ್ಕರ್ ಮೊದಲಬಾರಿಗೆ ಗುರುತಿಸುತ್ತಾರೆ. ಅವುಗಳಲ್ಲೊಂದು ಸಮಾನತೆ. ಸಾಮಾಜಿಕವಾಗಿ ಶ್ರೇಣೀಕೃತ ಅಸಮಾನತೆಯ ತತ್ವದ ಮೇಲೆ ನಿಂತಿರುವ ಭಾರತವಿದೆ, ಅಂದರೆ ಅದರಲ್ಲಿ ಕೆಲವರಿಗೆ ಉನ್ನತ ಸ್ಥಾನ, ಇತರರಿಗೆ ಹೀನ ಸ್ಥಿತಿ. ಆರ್ಥಿಕ ಸ್ತರದಲ್ಲಿ, ಅಗಾಧ ಸಂಪತ್ತಿರುವ ಕೆಲವರು, ಕಡು ದಾರಿದ್ರ್ಯದಲ್ಲಿ ಬದುಕು ನೂಕುತ್ತಿರುವ ಇತರರು ಇರುವಂಥ ಸಮಾಜ ನಮ್ಮದು.

ಶೂದ್ರರಲ್ಲಿನ ಪಂಚಮರು ಊರಿನಿಂದ ಹೊರಗಿದ್ದು, ಮಲ ಹೂರುವುದು, ಕಸ ತೆಗೆಯುವುದು, ಹೆಣ ಮತ್ತು ಸತ್ತ ಪ್ರಾಣಿಗಳನ್ನು ಹೊರ ಸಾಗಿಸುವುದು, ಗ್ರಾಮ ಮತ್ತು ನಗರಗಳನ್ನು ಸ್ವಚ್ಛಗೊಳಿಸುವುದು, ಸತ್ತ ಪ್ರಾಣಿಗಳ ಚರ್ಮ ಸುಲಿಯುವ ಇತ್ಯಾದಿ ಕಾಯಕಗಳನ್ನು ಮಾಡುತ್ತಿದ್ದರು. ಇಂತಹ ಸಾಮಾಜಿಕ ಕಾರ್ಯಕರ್ತರನ್ನು ಅಸ್ಪೃಶ್ಯರೆಂಬ ಹಣೆ ಪಟ್ಟಿ ಕಟ್ಟಿ ಅವರನ್ನು ಪರಂಪರಾಗತವಾಗಿ ಶೋಷಣೆಗೊಳಪಡಿಸಲಾಗಿತ್ತು. ಅವರನ್ನು ಊರಿನಿಂದ ಹೊರಗಿಟ್ಟು, ಅವರಿಗೆ ಆಸ್ತಿ, ಶಿಕ್ಷಣ ಸಿಗದಂತೆ ಕ್ರಿ.ಪೂ.೩೦೦ ರಿಂದ ನಿಷೇಧ ಹೇರಲಾಗಿತ್ತು. ಸಮಾನತೆ, ಸ್ವಾತಂತ್ರ್ಯ, ಸಾಮಾಜಿಕ ನ್ಯಾಯಗಳಿಂದ ವಂಚಿತರಾದ ಈ ಜನರಿಗೆ ಸಾರ್ವಜನಿಕರ ಸಂಪರ್ಕವಾಗಲಿ, ದೇವಾಲಯ ಕೆರೆ, ಬಾವಿಗಳಿಗೆ ಪ್ರವೇಶವಾಗಲಿ ಇರಲಿಲ್ಲ. ಸವರ್ಣೀಯರು ಬರುವಾಗ ತಮ್ಮ ನೆರಳು ಅವರ ಮೇಲೆ ಬೀಳದಂತೆ ಪಂಚಮರು ಎಚ್ಚರಿಕೆ ವಹಿಸುವುದು ಖಡ್ಡಾಯವಾಗಿತ್ತು. ಇವರು ಅಂದು ಆಸ್ತಿ, ಪಾಸ್ತಿ, ಶಿಕ್ಷಣ, ಉದ್ಯೋಗ, ರಾಜಕೀಯ, ಧರ್ಮಧಿಕಾರ ಇತ್ಯಾದಿಗಳಿಂದ ವಂಚಿತರಾಗಿದ್ದರು. ಅಸ್ಪೃಶ್ಯತೆಯ ಈ ಕರಾಳ ವ್ಯವಸ್ಥೆಯ ರೂವಾರಿ ಮನು[೮]. ಈತನ ಧರ್ಮಶಾಸ್ತ್ರ ಹಿಂದೂಧರ್ಮದ ಮಾಗ್ನಕಾರ್ಟ್ ಆಗಿತ್ತು. ಅದು ಅಸ್ಪೃಶ್ಯರ ಜೀವನಕ್ರಮವನ್ನು ಹೀಗೆ ಹೇಳುತ್ತದೆ,

೧. ಶೂದ್ರರು ಊರ ಹೊರಗೆ ಜೋಪಡಿಗಳಲ್ಲಿ ವಾಸಿಸಬೇಕು. ಅವರು ಹೊಸ ಬಟ್ಟೆ ಉಡಬಾರದು, ಅವರು ಸವರ್ಣೀಯರು ಬಿಟ್ಟ ಹಳೆ ಬಟ್ಟೆಗಳನ್ನು ಮಾತ್ರ ಉಡಬೇಕು.
೨. ಅವರು ಮೇಲ್ವರ್ಗದವರು ಕೊಟ್ಟ ಕಾಳುಕಡಿ ಬಳಸಬೇಕು ಮತ್ತು ಸವರ್ಣೀಯರ ಹೊಲ, ಮನೆ ಕೆಲಸ ನಿರ್ವಹಿಸಬೇಕು. ಅಲ್ಲದೆ ಅವರ ಜೀವನದುದ್ದಕ್ಕೂ ತಲಾ

ತಲಾಂತರದಿಂದ ಬ್ರಾಹ್ಮಣರ ಸೇವೆ ಮಾಡಿಕೊಂಡಿರಬೇಕು. ಅವರ ದುಡಿಮೆ, ಸಂಪತ್ತನ್ನೆಲ್ಲಾ ಬ್ರಾಹ್ಮಣರು ವಶಪಡಿಸಿಕೊಳ್ಳಬೇಕು, ಏಕೆಂದರೆ ಅಸ್ಪೃಶ್ಯರಿಗೆ ಸ್ವಂತ ಆಸ್ತಿ ಹೊಂದುವ ಹಕ್ಕಿಲ್ಲ, ಅವರು ಭೂಮಿ ಹೊಂದುವಂತಿಲ್ಲ.

೩. ಅವರು ವಿದ್ಯೆಗೆ ಅರ್ಹರಲ್ಲ. ಒಂದು ವೇಳೆ ವೇದ ಮಂತ್ರಗಳ ಪಠನೆಯನ್ನು ಅವರು ಕದ್ದು ಕೇಳಿಸಿಕೊಂಡರೆ ಅವರ ಕಿವಿಗೆ ಕಾದ ಸೀಸ ಸುರಿಯಬೇಕು.

೪. ಬ್ರಾಹ್ಮಣರಿಂದ ನೀಚ ಕುಲದ ಸ್ತ್ರೀ ಮಕ್ಕಳನ್ನು ಹೆತ್ತರೆ ಅವಳನ್ನು ಕೊಂದು ಹಾಕಬೇಕು. ಅಲ್ಲದೆ ಉತ್ತಮನಿಂದ ಅಸ್ಪೃಶ್ಯ ಮಹಿಳೆ ಮಕ್ಕಳನ್ನು ಪಡೆದಿದ್ದರೆ ಅವಳು ಮುಂದಿನ ಜನ್ಮದಲ್ಲಿ ಉನ್ನತ ಹಾಗೂ ಶ್ರೀಮಂತಳಾಗಿ ಹುಟ್ಟುತ್ತಾಳೆ[೯].

ಈ ಮೇಲಿನ ನಿಯಮಗಳನ್ನು ಚಾಚು ತಪ್ಪದೆ ಪಾಲಿಸಿದ ಭಾರತದ ಹಿಂದೂ ಸಮಾಜ ಇಲ್ಲಿನ ಕೆಳ ಸಮುದಾಯಗಳನ್ನು(ವಿಶೇಷವಾಗಿ ಅಸ್ಪೃಶ್ಯರನ್ನು) ಜಾತಿ ಮತ್ತು ಧರ್ಮದ ಹೆಸರಿನಲ್ಲಿ ತಲಾ ತಲಾಂತರಗಳಿಂದ ಶೋಷಣೆಗೊಳಪಡಿಸಿತ್ತು. ಕ್ರಿ.ಪೂ.೬ನೇ ಶತಮಾನದಲ್ಲಿ ಗೌತಮ ಬುದ್ಧ ಈ ಸಾಮಾಜಿಕ ಅನ್ಯಾಯವನ್ನು ತೊಡೆದು ಹಾಕಲು ಮಾಡಿದ ಪ್ರಯತ್ನ ವಿಫಲವಾಯಿತು. ಕಾರಣ ಅಂದಿನ ಪಂಚಮರು ಆರ್ಥಿಕ ಪರಾಮಾವಲಂಬಿಗಳಾಗಿದ್ದು, ಅಶಿಕ್ಷಿತರಾಗಿದ್ದು ಬಹು ಮುಖ್ಯ ಕಾರಣವಾಗಿತ್ತು. ಮುಂದೆ ೧೨ನೇ ಶತಮಾನದಲ್ಲಿ ಬಸವೇಶ್ವರರು ಮಾಡಿದ ಸಾಮಾಜಿಕ ಕ್ರಾಂತಿ ಸಹ ಈ ಸಮಸ್ಯೆಗೆ ಅಷ್ಟೊಂದು ಫಲಕಾರಿಯಾಗಲಿಲ್ಲ. ನಂತರ ಮಧ್ಯಯುಗದ ಮುಸ್ಲಿಂರ ಆಳ್ವಿಕೆಯಲ್ಲೂ ಸಹ ಈ ವರ್ಗಗಳಿಗೆ ಸಾಮಾಜಿಕ ನ್ಯಾಯ ದೊರೆಯಲಿಲ್ಲ ಏಕೆಂದರೆ ಮುಸ್ಲಿಂರು ಗುಲಾಮಗಿರಿಗೆ ಹೆಚ್ಚು ಒತ್ತು ಕೊಟ್ಟಿದ್ದರಿಂದ ಸಾಮಾಜಿಕ ನ್ಯಾಯ ಎಂಬುದು ಪುನಃ ಈ ವರ್ಗಗಳಿಗೆ ಮರೀಚಿಕೆಯಾಯಿತು. ಮುಂದೆ ಬ್ರಿಟಿಷರ ಆಳ್ವಿಕೆಯಲ್ಲಿ ದೊರೆತ ಶಿಕ್ಷಣದ ಪರಿಣಾಮ ಸುಶಿಕ್ಷಿತ ಕೆಳ ವರ್ಗದ ಜನರು ಸಾಮಾಜಿಕ ನ್ಯಾಯಕ್ಕಾಗಿ ಜಾಗೃತರಾದರು[೧೦].

ತೇರದಾಳ ಪರಿಸರದಲ್ಲಿ ಇಂದಿಗೂ ಹಿಂದೂ, ಮುಸ್ಲಿಂ, ಜೈನ, ಭೌದ್ಧ, ಕ್ರಿಶ್ಚಿಯನ್ ಧರ್ಮಗಳ ವಿವಿಧ ಸಮುದಾಯಗಳ ಜನರು ವಾಸಿಸುತ್ತಿದ್ದಾರೆ. ಹಿಂದೂಗಳಲ್ಲಿನ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಎನ್ನುವ ಪ್ರಧಾನ ಜಾತಿ ವರ್ಗೀಕರಣವಿದ್ದು, ಅವುಗಳಲ್ಲಿಯೇ ಹಲವಾರು ಉಪ ಜಾತಿಗಳಿವೆ. ಈ ಜಾತಿಗಳ ನಡುವೆ ಇಂದಿಗೂ ಆಗಾಧವಾದ ಜಾತಿ ತಾರತಾಮ್ಯವಿದೆ. ಈ ಏಣಿ–ಶ್ರೇಣಿ ವ್ಯವಸ್ಥೆಯನ್ನು ಚಾಚು ತಪ್ಪದೇ ತೆರೆಮರೆಯಲ್ಲಿ ಆಚರಿಸುತ್ತಾ ಬರಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಈ ಪರಿಸರದಲ್ಲಿನ ವಿವಿಧ ಸಮುದಾಯಗಳ ವಿವರ ಈ ಮುಂದಿದೆ.

**ಬ್ರಾಹಣ ಸಮುದಾಯ**

ಭಾರತದಲ್ಲಿರುವ ಹಲವು ಜಾತಿಗಳಲ್ಲಿ ಬ್ರಾಹಣ ಸಮುದಾಯವು ಒಂದಾಗಿದ್ದು, ಇವರಲ್ಲಿ ಸ್ಮಾರ್ತ, ಮಾಧ್ವ, ಅಯ್ಯಂಗಾರ್ ಎನ್ನುವ ಪಂಗಡಗಳಿವೆ. ಮೇಲ್ವರ್ಗದವರು ಎಂದು ಭಾವಿಸಿರುವ ಇವರು ವಿದ್ಯೆ, ವೇದ–ಮಂತ್ರ ಪಠಣೆ, ಅರ್ಚಕ ವೃತ್ತಿಗಳನ್ನು ಪ್ರಧಾನವಾಗಿ ಮಾಡುತ್ತಾರೆ. ಇವರ ಒಳಪಂಗಂಡಗಳಲ್ಲಿಯೇ ಮೇಲು ಕೀಳು ಭಾವನೆ ಇದ್ದು, ಮಡಿವಂತಿಕೆಗೆ ಇವರು ಹೆಸರಾಗಿದ್ದಾರೆ. ಕೆಲವರು ಶಂಕರಾಚಾರ್ಯ, ಮಾಧ್ವಚಾರ್ಯ, ರಾಮಾನುಜಚಾರ್ಯ, ವ್ಯಾಸರಾಯರ ಅನುಯಾಯಿಗಳಿದ್ದು, ಅರ್ಚನೆ, ಹೋಮ, ಹವನ, ಮದುವೆ ಮುಂಜಿ ಮಾಡುವ ಕಾರ್ಯದಲ್ಲಿ ಹೆಚ್ಚಾಗಿ ತಲೀನರಾಗಿರುತ್ತಾರೆ. ಸಸ್ಯಾಹಾರಿಗಳಾಗಿರುವ ಇವರು ತೇರದಾಳ ಪರಿಸರದ

ಮದನಮಟ್ಟಿ, ಕಲ್ಲಳ್ಳಿ, ತೇರದಾಳ, ರಬಕವಿ, ಬನಹಟ್ಟಿ, ಹನಗಂಡಿ, ಅಸ್ಕಿ, ಹೊಸೂರು ಮೊದಲಾದೆಡೆ ನೆಲೆಸಿದ್ದಾರೆ[೧೧]. ಆದರೆ ಇವರ ಜನಸಂಖ್ಯೆ ಪ್ರಮಾಣ ಕೇವಲ ೦೨% ಇದೆ. ಕರ್ನಾಟಕ ಅಷ್ಟೆ ಅಲ್ಲದೆ ಇತರ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಮತ್ತು ಉತ್ತರ ಭಾರತದ ಗುಜರಾತ್, ರಾಜಸ್ಥಾನ, ಉತ್ತರಪ್ರದೇಶ, ಮಧ್ಯಪ್ರದೇಶದಲ್ಲಿಯೂ ರಾಜ್ಯಗಳಲ್ಲಿ ಕೂಡ ಈ ಸಮಾಜವು ಆಸ್ತಿತ್ವದಲ್ಲಿದೆ. ದ್ವಿಜರಾದ ನಾವೇ ಶ್ರೇಷ್ಠರೆಂದು ಉಳಿದ ಎಲ್ಲಾ ಜಾತಿಯವರು ಕನಿಷ್ಠವೆಂದು ತಿಳಿದಿದ್ದಾರೆ. ಆ ಕಾರಣಕ್ಕಾಗಿ ಉಳಿದ ಜಾತಿಯ ಜನರನ್ನು ತಮ್ಮ ಕುಟುಂಬದ ಕೆಲಸ ಕಾರ್ಯಗಳಿಗೆ ಆಹ್ವಾನಿಸುವುದಿಲ್ಲ ಮತ್ತು ಅವರನ್ನು ಮುಟ್ಟಿಸಿಕೊಳ್ಳುವುದಿಲ್ಲ ಹಾಗು ಅವರೊಟ್ಟಿಗೆ ಕುಳಿತು ಸಹಪಂಕ್ತಿ ಭೋಜನ ಸಹ ಮಾಡುವುದಿಲ್ಲ. ಸಂಪ್ರದಾಯವಾದಿಗಳಾಗಿರುವ ಇವರು ತಮ್ಮ ಕುಟುಂಬದ ಮಹಿಳೆಯರನ್ನು ಮುಟ್ಟಾದಾಗ ಹೊರಗಿಡುತ್ತಾರೆ. ಧಾರ್ಮಿಕ ಆಚಾರ-ವಿಚಾರಗಳ ಕಟ್ಟಾ ಅನುವಾದಕರಾಗಿದ್ದಾರೆ. ಇವರಲ್ಲಿ ಗೌಡ ಸಾರಸ್ವತ ಎನ್ನುವ ಉಪಪಂಗಡವಿದೆ[೧೨]. ಅವರು ಕರಾವಳಿ ತೀರದಲ್ಲಿ ಹೆಚ್ಚಾಗಿ ನೆಲೆಸಿದ್ದು, ಮಾಂಸಾಹಾರಿಗಳಾಗಿದ್ದಾರೆ. ಈ ಸಮುದಾಯದ ಸ್ತ್ರೀಯರು ಸೀರೆ ಮತ್ತು ಕುಬಸವನ್ನು ಧರಿಸುವ ಸಂಪ್ರದಾಯವಿದೆ. ಸಂಪ್ರದಾಯಿಕವಾಗಿ ಉಡುಗೆ ತೊಡುಗೆಗಳನ್ನು ತೊಡುತ್ತಾರೆ. ಗಂಡಸರು ದೊತ್ರ, ಟೊಪ್ಪಿಗೆ ಅಂಗಿ ಪ್ಯಾಂಟು ಕೆಲವರು ಪಟಕಾ ಸುತ್ತಿಕೊಳ್ಳುವ ಸಂಪ್ರದಾಯವಿದೆ. ಈ ಸಮಾಜದಲ್ಲಿ ಸಸ್ಯಾಹಾರಿಗಳು ಮಾತ್ರವಿದ್ದು ಅವರು ಜೋಳ, ಮೆಕ್ಕೆಜೋಳ, ಸಜ್ಜೆ, ಗೋಧಿಯ ಚಪಾತಿ, ಹೋಳಿಗೆ, ಕಡಬು, ತರಕಾರಿ ಮುಂತಾದ ಪ್ರಕಾರದ ಆಹಾರ ಸೇವಿಸುವರು.

### ವೈಶ್ಯ ಸಮುದಾಯ

ಭಾರತದಲ್ಲಿರುವ ಜಾತಿಗಳಲ್ಲಿ ವೈಶ್ಯ ಸಮುದಾಯವು ಒಂದಾಗಿದ್ದು, ಇವರಲ್ಲಿ ಕೆಲ ಉಪಪಂಗಡಗಳಿವೆ. ಈ ಸಮುದಾಯದವರು ಹೆಚ್ಚಾಗಿ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ಒಳಪಂಗಂಡಗಳಲ್ಲಿಯೇ ಮೇಲು ಕೀಳು ಭಾವನೆ ಇದ್ದು, ಬ್ರಾಹ್ಮಣರ ಹಾಗೇ ಇವರು ಸಹ ಮಡಿವಂತಿಕೆಗೆ ಇವರು ಹೆಸರಾಗಿದ್ದಾರೆ. ಸಸ್ಯಾಹಾರಿಗಳಾಗಿರುವ ಇವರು ತೇರದಾಳ ಪರಿಸರದ ಮದನಮಟ್ಟಿ, ಕಲ್ಲಳ್ಳಿ, ತೇರದಾಳ, ಹನಗಂಡಿ, ರಬಕವಿ, ಬನಹಟ್ಟಿ, ಅಸ್ಕಿ, ಹೊಸೂರು ಮೊದಲಾದೆಡೆ ನೆಲೆಸಿದ್ದಾರೆ. ಆದರೆ ಇವರ ಜನಸಂಖ್ಯೆ ಪ್ರಮಾಣ ಕೇವಲ ೦೩% ಇದೆ. ಕರ್ನಾಟಕ ಅಷ್ಟೆ ಅಲ್ಲದೆ ಇತರ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಮತ್ತು ಉತ್ತರ ಭಾರತದ ಗುಜರಾತ್, ರಾಜಸ್ಥಾನ, ಉತ್ತರಪ್ರದೇಶ, ಮಧ್ಯಪ್ರದೇಶದಲ್ಲಿಯೂ ರಾಜ್ಯಗಳಲ್ಲಿ ಕೂಡ ಈ ಸಮಾಜವು ಆಸ್ತಿತ್ವದಲ್ಲಿದೆ. ಮೇಲ್ವರ್ಗದವರಾದ ನಾವೇ ಶ್ರೇಷ್ಠರೆಂದು ಉಳಿದ ಎಲ್ಲಾ ಕೆಳ ಜಾತಿಯವರು ಕನಿಷ್ಠವೆಂದು ತಿಳಿದಿದ್ದಾರೆ. ಆ ಕಾರಣಕ್ಕಾಗಿ ಉಳಿದ ಕೆಳ ಜಾತಿಯ ಜನರನ್ನು ತಮ್ಮ ಕುಟುಂಬದ ಕೆಲಸ ಕಾರ್ಯಗಳಿಗೆ ಆಹ್ವಾನಿಸುವುದಿಲ್ಲ ಮತ್ತು ಅವರನ್ನು ಮುಟ್ಟಿಸಿಕೊಳ್ಳುವುದಿಲ್ಲ ಹಾಗೂ ಅವರೊಟ್ಟಿಗೆ ಕುಳಿತು ಸಹಪಂಕ್ತಿ ಭೋಜನ ಸಹ ಮಾಡುವುದಿಲ್ಲ[೧೩]. ಸಂಪ್ರದಾಯವಾದಿಗಳಾಗಿರುವ ಇವರು ಧಾರ್ಮಿಕ ಆಚಾರ-ವಿಚಾರಗಳ ಕಟ್ಟಾ ಅನುವಾದಕರಾಗಿದ್ದಾರೆ. ಇವರು ತಿರುಪತಿ ವೆಂಕಟೇಶ, ಬಾಲಾಜಿಯನ್ನು ಹೆಚ್ಚಾಗಿ ಆರಾಧಿಸುತ್ತಾರೆ. ಈ ಸಮುದಾಯದ ಮಹಿಳೆಯರು ಮತ್ತು

ಪುರುಷರು ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ಹಾಗೂ ಆಹಾರ ಪದ್ಧತಿಗಳನ್ನು ಜೀವನದಲ್ಲಿ ರೂಢಿಸಿಕೊಂಡಿದ್ದಾರೆ.

**ಜೈನ ಸಮುದಾಯ**

ಭಾರತದಲ್ಲಿರುವ ಧರ್ಮಗಳಲ್ಲಿ ಜೈನ ಧರ್ಮವು ಒಂದಾಗಿದ್ದು, ಅದು ಜೈನ ಸಿದ್ಧಾಂತ ಗ್ರಂಥಗಳ ಪ್ರಕಾರ ಜೈನ ಧರ್ಮ **"ಅನಾದಿ-ಅನಂತ"** ಧರ್ಮವಾಗಿದೆ. ವರ್ತಮಾನ ಕಾಲದಲ್ಲಿ ೨೪ ತೀರ್ಥಂಕರರಾಗಿದ್ದಾರೆ. ಇವರಲ್ಲಿ ಪ್ರಥಮ ತೀರ್ಥಂಕರ ವೃಷಭನಾಥರು. ಅವರ ಶೇಷ್ಠ ಪುತ್ರ ಚಕ್ರವರ್ತಿ ಭರತನಿಂದ ನಮ್ಮ ದೇಶಕ್ಕೆ ಭಾರತವೆಂದು ನಾಮಾಂಕಿತವಾಗಿದೆ. ಕೊನೆಯ ತೀರ್ಥಂಕರರೇ ಮಹಾವೀರರು. ಅವರ ನಂತರ ಅಂತಿಮ ಶೃತಕೇವಲಿ ಆಚಾರ್ಯ ಭದ್ರಬಾಹುಗಳ ಅವಧಿಯಲ್ಲಿ ಶ್ವೇತ್ವಾಂಬರ, ದಿಗಂಬರ ಎನ್ನುವ ಉಪಪಂಗಡಗಳಾಗಿವೆ. ಶ್ವೇತಾಂಬರರು ಬಿಳಿ ವಸ್ತ್ರಧಾರಿಗಳಾಗಿರುತ್ತಾರೆ. ಅದೇ ರೀತಿ ದಿಗಂಬರರು ನಿರವಸ್ತ್ರಧಾರಿಗಳಾಗಿರುತ್ತಾರೆ. ಈ ಸಮುದಾಯದವರು ಹೆಚ್ಚಾಗಿ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ಒಳಪಂಗಂಡಗಳಲ್ಲಿಯೇ ಮೇಲು ಕೀಳು ಭಾವನೆ ಇದ್ದು, ಬ್ರಾಹ್ಮಣರ ಹಾಗೇ ಇವರು ಸಹ ಮಡಿವಂತಿಕೆಗೆ ಹೆಸರಾಗಿದ್ದಾರೆ. ಅಹಿಂಸಾವಾದಿಗಳು ಮತ್ತು ಸಸ್ಯಾಹಾರಿಗಳಾಗಿರುವ ಇವರು ತೇರದಾಳ ಪರಿಸರದ ಮದನಮಟ್ಟಿ, ಭದ್ರಗಿರಿ, ಕಲ್ಲಳ್ಳಿ, ತೇರದಾಳ, ಹಳಿಂಗಳಿ, ಹನಗಂಡಿ, ರಬಕವಿ, ಬನಹಟ್ಟಿ, ಅಸ್ಕಿ, ಹೊಸೂರು, ಯಲ್ಲಟ್ಟಿ. ತಮದಂಡಿ ಮಾದಲಾದೆಡೆ ಹೇರಳವಾಗಿ ನೆಲೆಸಿದ್ದಾರೆ. ಆದರೆ ಇವರ ಜನಸಂಖ್ಯೆ ಪ್ರಮಾಣ ಕೇವಲ ೧೦% ಇದೆ[೧೪.] ಈ ಭಾಗದಲ್ಲಿ ಪ್ರಾಚೀನ ಕಾಲದ ಅನೇಕ ಜಿನಾಲಯಗಳಿವೆ. ಅವುಗಳಲ್ಲಿ ಪ್ರಸಿದ್ಧಿ ಪಡೆದ ತೇರದಾಳ ಗೊಂಕ ಜಿನಾಲಯ ಬಹು ಮುಖ್ಯವಾಗಿದೆ. ಅದೇ ರೀತಿ ತೇರದಾಳ ಸಮೀಪದ ಭದ್ರಗಿರಿಯಲ್ಲಿ ಅತ್ಯಂತ ಪ್ರಾಚೀನವೆನಿಸಿದ ದಿಗಂಬರ ಕ್ಷೇತ್ರವಿದ್ದು, ಅದನ್ನು ಶ್ರೀ.೧೦೮ ಕುಲರತ್ನ ಭೂಷಣ ದಿಗಂಬರ ಮಹಾರಾಜರು ಸಕಲ ರೀತಿಯಿಂದ ಅಭಿವೃದ್ಧಿ ಮಾಡುವ ಸಂಕಲ್ಪ ಹೊಂದಿದ್ದಾರೆ. ಆಚಾರ್ಯ ಗೋವರ್ಧನರ ಶಿಷ್ಯ ಅಂತಿಮ ಶ್ರುತಕೇವಲಿ ಭದ್ರಬಾಹು ಭಟ್ಟಾರಕರು ಕ್ರಿ.ಪೂ(೩೯೪-೩೬೪) ಅಂದರೆ ಕ್ರಿ.ಪೂ ಸುಮಾರು ೪ನೇ ಶತಮಾನದಲ್ಲಿ ಉತ್ತರಾರ್ಧ ಭಾಗದ ಉತ್ತರ ಭಾರತದಲ್ಲಿ ಸುಮಾರು ೧೨ ವರ್ಷಗಳ ಕಾಲ ಗಂಭೀರವಾಗಿ ಭೀಕರವಾದ ಕ್ಷಾಮಕ್ಕೆ ಒಳಪಡುವುದನ್ನು ತಮ್ಮ ದಿವ್ಯ ದೃಷ್ಟಿಯಿಂದ (ಅಂತರ ಜ್ಞಾನ) ಮುಂಚಿತವಾಗಿಯೇ ಅರಿತುಕೊಂಡು ತಮ್ಮ ಮುನಿ ಧರ್ಮ ವೃತಗಳನ್ನು ರಕ್ಷಿಸಿಕೊಳ್ಳುವ ಗೋಸ್ಕರ ಸಂಘದ ಜೊತೆಗೆ ಸೇರಿ ಆ ಭಾಗವನ್ನು ತೊರೆಯಲು ನಿರ್ಧರಿಸಿದರು. ಅದೇ ಅವಧಿಯಲ್ಲಿ ಮೌರ್ಯ ವಂಶದ ಸ್ಥಾಪಕನಾದ ಚಂದ್ರಗುಪ್ತ ಕ್ರಿ.ಪೂ೩೭೨-೩೬೦ ಭದ್ರಬಾಹು ಮುನಿಗಳ ಸಾನಿಧ್ಯದಲ್ಲಿ ಜೈನ ಧರ್ಮವನ್ನು ಸ್ವೀಕರಿಸಿದನು. ಅತನ ರಾಜ್ಯ ಭೀಕರವಾದ ಕ್ಷಾಮಗೊಳಪಡುವುದನ್ನು ಮುನಿಗಳಿಂದ ತಿಳಿದ ನಂತರ ತನ್ನ ಸಾಮ್ರಾಜ್ಯವನ್ನು ಮಗನಾದ ಬಿಂದುಸಾರನಿಗೆ ಒಪ್ಪಿಸಿ, ಚಂದ್ರಗುಪ್ತ ಮೌರ್ಯ ಗುರು ಭದ್ರಬಾಹುವಿನ ಜೊತೆ ಸೇರಿ ೧೨ ಸಾವಿರ ಮುನಿ ಸಂಘದೊಂದಿಗೆ ಉತ್ತರದ ಉಜ್ಜೆನಿಯಿಂದ-ದಕ್ಷಿಣ ಭಾರತದ ಪುನ್ನಾಟದೇಶದ(ಕರ್ನಾಟಕದ) ಕಳ್ವಪ್ಪುನಾಡಿಗೆ (ಶ್ರವಣಬೆಳಗೋಳ) ವಿಹರಿಸುತ್ತಿದ್ದ (ಸಂಚಾರ) ಸಂದರ್ಭದಲ್ಲಿ ಬಿಹಾರ, ಮಧ್ಯಪ್ರದೇಶ, ಮಹಾರಾಷ್ಟದ ಮಾರ್ಗವಾಗಿ ಇಂದಿನ ಕರ್ನಾಟಕದ ರಾಜ್ಯದ ಬೀದರ, ಕಲಬುರಗಿ, ಯಾದಗಿರಿ, ವಿಜಯಪೂರ, ಬಾಗಲಕೋಟ, ಜಮಖಂಡಿ,

ತೇರದಾಳ, (ಹಳಿಂಗಳಿ) ಕೊಣ್ಣುರು, ಗೋಕಾಕ, ಬೆಳಗಾವಿ, ಧಾರವಾಡ, ಹಾವೇರಿ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳ ಪ್ರದೇಶದ ಮಾರ್ಗವಾಗಿ ಸಾಗುತ್ತಾ ಮಾರ್ಗದುದ್ದಕ್ಕೂ ಅಲಲ್ಲಿ ಕೆಲಕಾಲ ನೆಲೆನಿಂತು ಧರ್ಮಭೋಧನೆಯ ಮೂಲಕ ಮನುಕುಲವನ್ನು ಉತ್ತಮ ಜೀವನ ಮತ್ತು ಮೋಕ್ಷ ಮಾರ್ಗ (ಸನ್ಮಾರ್ಗ)ದೆಡೆಗೆ ಜಾಗೃತಗೊಳಿಸಿದ್ದಾರೆ[೧೫]. ಮುನಿ ಸಂಘಗಳು ವಿಹರಿಸುವ (ಸಂಚರಿಸುವ) ವೇಳೆಯಲ್ಲಿ ವರ್ಷಕಾಲದ ಪ್ರಸಂಗವಾಗಿ ತಮ್ಮ ಚತುರ್ಮಾಸವನ್ನು ತೇರದಾಳ ಪರಿಸರದಲ್ಲಿ ಕೈಗೊಂಡು ಕೆಲಕಾಲ ನೆಲೆನಿಂತ ಕುರುಹುಗಳು (ಈಗಲೂ ನಾವು ತೇರದಾಳ, ಹಳಿಂಗಳಿ, ಹನಗಂಡಿ, ಮದನಮಟ್ಟಿ ಆಸಂಗಿಗಳಲ್ಲಿ ಮುನಿಗುಂಪಾಗಳು (ಮೌರ್ಯರ ಗುಡಿ) ಇರುವದನ್ನು ಕಾಣಬಹುದು. ಇದನ್ನು "ಭದ್ರಗಿರಿಯಲ್ಲಿ ದೊರೆತ ಶಿಲಾಶಾಸನವು ಸಾಕ್ಷೀಕರಿಸುತ್ತದೆ"[೧೬]. ಕರ್ನಾಟಕ ಅಷ್ಟೆ ಅಲ್ಲದೆ ಇತರ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಇನ್ನೂ ಅನೇಕ ರಾಜ್ಯಗಳಲ್ಲಿ ಮತ್ತು ಉತ್ತರ ಭಾರತದ ಗುಜರಾತ್, ರಾಜಸ್ಥಾನ, ಉತ್ತರಪ್ರದೇಶ, ಮಧ್ಯಪ್ರದೇಶದಲ್ಲಿಯೂ ಹೆಚ್ಚಾಗಿ ಈ ಸಮಾಜವು ಆಸ್ತಿತ್ವದಲ್ಲಿದೆ. ಮೇಲ್ವರ್ಗದವರಾದ ನಾವೇ ಶ್ರೇಷ್ಠರೆಂದು ಉಳಿದ ಎಲ್ಲಾ ಕೆಳ ಜಾತಿಯವರು ಕನಿಷ್ಠವೆಂದು ಇವರಲ್ಲಿನ ಸಂಪ್ರದಾಯವಾದಿಗಳು ತಿಳಿದಿದ್ದಾರೆ. ಇವರಲ್ಲಿ ಅಜೀವಿಕ ಎನ್ನುವ ಸನ್ಯಾಸಿ ಪರಂಪರೆ ಇದೆ.

**ಗಾಣಿಗರ ಸಮುದಾಯ**

ಭಾರತದಲ್ಲಿರುವ ಹಲವು ಜಾತಿಗಳಲ್ಲಿ ಗಾಣಿಗ ಸಮುದಾಯವೂ ಒಂದಾಗಿದ್ದು, ಅದರಲ್ಲಿ ಅನೇಕ ಉಪಪಂಗಂಡಗಳಿವೆ. ಇವರಲ್ಲಿ ಎಣ್ಣೆ ಮಾಡುವವರು, ಕೃಷಿ ಮಾಡುವವರು, ಧವಸ ಧಾನ್ಯ, ದಿನಬಳಕೆ ವಸ್ತುಗಳನ್ನು ವ್ಯಾಪಾರ ಮಾಡುವ ಪಂಗಂಡಗಳು ಮುಖ್ಯವಾಗಿವೆ. ಎಣ್ಣೆಗಾಣಿಗ ಸಮುದಾಯವು ತೇರದಾಳ ಪರಿಸರದ ಮದನಮಟ್ಟಿ, ಕಲ್ಲಳ್ಳಿ, ತೇರದಾಳ, ಅಸ್ಕಿ, ರಬಕವಿ, ಬನಹಟ್ಟಿ, ಹೊಸೂರು ಮೊದಲಾದೆಡೆ ಹೇರಳವಾಗಿ ನೆಲೆಸಿದ್ದಾರೆ. ಕ್ರಿ.ಪೂ.೫೦೦ ವರ್ಷಗಳ ಹಿಂದೆ ಜನರು ತಮ್ಮ ದಿನನಿತ್ಯದ ಜೀವನೋಪಾಯಕ್ಕಾಗಿ ಎಣ್ಣೆಯನ್ನು ಉತ್ಪಾದನೆ ಮಾಡುತ್ತಿದ್ದರು. ಎಣ್ಣೆ ಕಾಳುಗಳನ್ನು ಸಂಗ್ರಹಿಸಿ ಗಾಣಗಳ ಮುಖಾಂತರ ಎಣ್ಣೆ ಉತ್ಪಾದನೆ ಮಾಡಲಾರಂಭಿಸಿದರು. ಈ ವೃತ್ತಿಯನ್ನು ಮಾಡಲಾರಂಭಿಸಿದ್ದರಿಂದ ಇವರನ್ನು ಗಾಣಿಗರು ಎಂದು ಕರೆಯಲಾಯಿತು. ವಿದೇಶ ಸಾಹಿತಿಯಾದ ಮೊನಿಯರ್ ವಿಲಿಯಂ ೧೮೯೯ರಲ್ಲಿ ಈ ಕುರಿತಂತೆ ಅಧ್ಯಯನ ಮಾಡಿದ್ದಾರೆ. ಈ ಕಾರಣದಿಂದಾಗಿ ಎಣ್ಣೆಯನ್ನು ಯಾರು ತಯಾರಿಸುತ್ತಾರೆ ಅವರೆಲ್ಲರೂ ಗಾಣಿಗ ಅಂದು ಕರೆದುಕೊಂಡರು. ಗಾಣಿಗ ಸಮಾಜವು ನಾಲ್ಕು ವರ್ಗಗಳಲ್ಲಿ ವೈಶ್ಯರ ಗುಂಪಿಗೆ ಸೇರಿದಾಗಿದೆ. ವೈಶ್ಯರ ವರ್ಗವು ವ್ಯಾಪಾರಿಗಳಿಂದ ಮತ್ತು ಉತ್ಪಾದನಾ ವರ್ಗಕ್ಕೆ ಸೇರಿತು[೧೭]. ಈ ಕಾರಣಕ್ಕೆ ಎಣ್ಣೆಯನ್ನು ಉತ್ಪಾದನೆಯನ್ನು ಮಾಡುವ ಎಲ್ಲ ಜನರನ್ನು ಸಮಾಜವು ಮತ್ತು ಸರಕಾರವು ಜಾತಿಗಳ ಆಧಾರದಲ್ಲಿ ಮಾನ್ಯತೆ ನೀಡಿತು. ಕರ್ನಾಟಕ ಅಷ್ಟೆ ಅಲ್ಲದೆ ಇತರ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಇನ್ನೂ ಅನೇಕ ರಾಜ್ಯಗಳಲ್ಲಿ ಕೂಡ ಗಾಣಿಗ ಸಮಾಜವು ಆಸ್ತಿತ್ವದಲ್ಲಿದೆ. ಈ ಸಮಾಜದವರು ಸಹ ಇತರೆ ಸಮಾಜಗಳ ಮಹಿಳೆ ಮತ್ತು ಪುರುಷರ ರೀತಿಯಲ್ಲಿ ಉಡುಪುಗಳನ್ನು ಧರಿಸುತ್ತಾರೆ. ಇವರು ಸಸ್ಯಾಹಾರಿಗಳಾಗಿದ್ದು, ಸಾತ್ವಿಕ ಆಹಾರವನ್ನು ಸೇವಿಸುತ್ತಾರೆ.

**ಜಂಗಮ ಸಮುದಾಯ**

ವೀರಶೈವ ಜಂಗಮ ಎಂದು ಕರೆಯಲ್ಪಡುವ ಇವರನ್ನು ಕೆಲವಡೆ ಜಂಗಮ, ವೀರಶೈವ, ಗುಡ್ಡಯ್ಯ, ಮಠಪತಿಗಳು ಎಂದು ಕರೆಯಲಾಗುತ್ತದೆ. ಈ ಭಾಗದಲ್ಲಿ ನೆಲೆಸಿರುವ ವಿವಿಧ ಸಮುದಾಯಗಳಲ್ಲಿ ಜಂಗಮ ಜನಾಂಗವು ಒಂದಾಗಿದ್ದು, ಇವರು ತೇರದಾಳ ಅಸ್ಕಿ, ಮದನಮಟ್ಟಿ, ರಬಕವಿ, ಅಸಂಗಿ, ಹನಗಂಡಿ, ಹೊಸೂರು ಮೊದಲಾದೆಡೆ ಹೇರಳವಾಗಿ ನೆಲೆಸಿದ್ದಾರೆ. ಜಂಗಮರಲ್ಲಿ ಅವರ ವೃತ್ತಿಗೆ ಅನುಗಮವಾಗಿ ಅವರಿಗೆ ಕೆಲ ಅಡ್ಡ ಹೆಸರುಗಳನ್ನು ಇಡಲಾಗಿದೆ. ಇವರಲ್ಲಿ ಪಂಚಪೀಠಗಳಿವೆ. ಇವುಗಳಿಗೆ ಸಂಬಂಧಿಸಿದ ವಿವಿಧ ಅನುಯಾಯಿ ಪಂಗಡಗಳು ಸಹ ಇವರಲ್ಲಿವೆ. ಇವರಲ್ಲಿ ಮುಖ್ಯವಾಗಿ ಐದು ಉಪಪಂಗಡಗಳಿವೆ. ಅವುಗಳೆಂದರೆ

- ಹಿರೇಮಠದವರು – ಮಠದ ಹಿರಿಯರು
- ಮಠಪತಿಯವರು – ದೇವಸ್ಥಾನಗಳ ಪೂಜೆ
- ಕಂತಿ ಮಠದವರು – ಲಿಂಗಕ್ಕೆ ಕಂತಿ ಕುಡಿಸುವುದು
- ವಿಭೂತಿ ಮಠದವರು– ವಿಭೂತಿ ಅಂದರೆ ಭಸ್ಮ ತಯಾರಿಸುವುದು.
- ಗಣಾಚಾರಿಗಳು – ಮಠಪತಿಯವರು ಹೇಳಿದ ಹಾಗೇ ಕೇಳುವುದು

ಜಂಗಮ ಸಮುದಾಯದಲ್ಲಿ ಹಿರೇಮಠದವರು ಉನ್ನತ ಸ್ಥಾನ ಹೊಂದಿದ್ದು, ಇತರರಿಗಿಂತಲೂ ನಾವು ಶ್ರೇಷ್ಠ ಎಂದು ತಮ್ಮನ್ನು ತಾವು ಭಾವಿಸಿಕೊಂಡಿದ್ದಾರೆ. ಒಂದು ಮಠದ ಅಧಿಕಾರವನ್ನು ಹೊಂದಿರುವ ಇವರು ಮಠದ ಹಿರಿಯರಾಗಿರುತ್ತಾರೆ. ಇವರು ಒಂದು ಊರಿನಲ್ಲಿರುವ ಮಠಗಳಿಗೆ ತಮ್ಮ ಮಕ್ಕಳನ್ನು ಮರಿ ಬಿಡುವುದು, ಹೋಮ, ಹವನಗಳಲ್ಲಿ ಮಂತ್ರ ಪಠನ ಮಾಡುವುದು, ಊರಿನಲ್ಲಿರುವ ಮಠಗಳ ಜೀರ್ಣೋದ್ದಾರ ಮಾಡುವುದು. ಜಂಗಮರ ಮಕ್ಕಳಿಗೆ ಲಿಂಗಧೀಕ್ಷೇ ಮಾಡುವುದು. ಮರಣ ಹೊಂದಿದವರ ಗೋರಿಯ ಮೇಲೆ ನಿಂತು ಮೃತರಾದವರಿಗೇ ಮುಕ್ತಿ ಸಿಗಲೆಂದು ಪ್ರಾರ್ಥಿಸುವುದು ಇವರ ಮುಖ್ಯ ವೃತ್ತಿಯಾಗಿದೆ. ಇವರು ಪಾದೋದಕವನ್ನು(ಪಾದಪೂಜೆ)ಮಾಡಿ ತಂದು ಮನೆಗೆ ಸಿಂಪಡಿಸುವದರಿಂದ ಸೂತಕದ ಮನೆ ಶುದ್ಧವಾಗುತ್ತದೆ ಎಂಬ ನಂಬಿಕೆ ಇದೆ.

ಪ್ರಧಾನವಾಗಿ ಆರ್ಚಕ ವೃತ್ತಿ ಮಾಡುವ ಮಠಪತಿಗಳು ಜಂಗಮ ಸಮುದಾಯದಲ್ಲಿ ಹಿರೇಮಠದವರ ನಂತರದ ಸ್ಥಾನಮಾನ ಹೊಂದಿರುತ್ತಾರೆ. ಇವರು ನವಗ್ರಹಪೂಜೆ, ಸತ್ಯನಾರಾಯಣ ಪೂಜೆಗಳನ್ನು ಮತ್ತು ಇತರೆ ದೇವಾಲಯಗಳ ಪೂಜೆಗಳನ್ನು ಮಾಡುತ್ತಾರೆ. ಮದುವೆಗಳಲ್ಲಿ ಪೂಜೆಗಳನ್ನು ಮಾಡಿಸುವುದು, ವಿಘ್ನಬಾರದಂತೆ ಗಣಪತಿ ಪೂಜೆ, ನವಗ್ರಹ ಪೂಜೆ, ಪಂಚಪೀಠಗಳ ಪೂಜೆ ಮಾಡುವರು. ಹಿರೇಮಠದವರು ಇಲ್ಲದ ಸಂದರ್ಭದಲ್ಲಿ ಅವರ ಕಾರ್ಯಗಳನ್ನು ಮಠಪತಿಯವರೇ ನೆರವೇರಿಸುವರು. ಕೆಲವು ಕೆಳ ಜನಾಂಗದವರ ಸಮಾರಂಭಗಳಿಗೆ ಹಿರೇಮಠದವರು ಹೋಗುವುದಿಲ್ಲ. ಆದರೆ ಮಠಪತಿಯವರು ಹೋಗಿ ಪೂಜೆ ಕಾರ್ಯವನ್ನು ಮುಗಿಸಿಕೊಂಡು ಬರುತ್ತಾರೆ. ಮಠಪತಿಯವರು ಈ ಮೇಲ್ವರ್ಗ ಜನಾಂಗದವರ ಮನೆಗಳಲ್ಲಿ ನಡೆಯುವ ಮದುವೆ, ಪೂಜೆಗಳಿಗೆ ಹೋಗುತ್ತಾರೆ. ಇವು ಮರಣ ಹೊಂದಿದ ವ್ಯಕ್ತಿಯ

ಸಮಾಧಿಯ ಮೇಲೆ ನಿಂತು ಮೃತ ವ್ಯಕ್ತಿಗೆ ಮೋಕ್ಷ ಸಿಗಲೆಂದು ದೇವರಲ್ಲಿ ಪೂಜಿಸುತ್ತಾರೆ. ಮಠಪತಿ ಇವರು ಹಿರೇಮಠದವರು ಸೂಚಿಸಿದ ಇತರೆ ಪೂಜಾಗಳಲ್ಲಿ ಭಾಗವಹಿಸುತ್ತಾರೆ. ಗುಗ್ಗಳ ಪೂಜೆ, ವೀರಗಾಸೆಯಂತಹ ವೇಷವನ್ನು ಹಾಕಿ ವೀರಭದ್ರನ ಆಚರಣೆಯನ್ನು ಮಾಡುತ್ತಾರೆ. ಮಲ್ಲಿಕಾರ್ಜುನನ ದೇವಸ್ಥಾನದ ಪೂಜೆ, ಕಂಬಿಪೂಜೆಗಳನ್ನು ಬಹು ಶ್ರದ್ಧೆಯಿಂದ ಮಾಡುತ್ತಾರೆ. ಇವರು ಪ್ರತಿ ವರ್ಷವು ಇವರು ಮಲ್ಲಿಕಾರ್ಜುನ ಕಂಬಿಯನ್ನು ತೆಗೆದುಕೊಂಡು ಶ್ರೀಶೈಲಕ್ಕೆ ಹೋಗುತ್ತಾರೆ. ಮತ್ತು ಇವರ ಜೊತೆಗೆ ತೆರಳಿದ ಜನರಿಗೆ ಉರಿನ ಅಲ್ಲಮಪ್ರಭು ದೇವರ ಪ್ರಸಾದ ಸಮಿತಿಯ ನೆರವಿನೊಂದಿಗೆ ಆಹಾರದ ವ್ಯವಸ್ಥೆಯನ್ನು ಕೆಲವು ಸಂದರ್ಭದಲ್ಲಿ ಮಾಡುತ್ತಾರೆ. ಶ್ರೀಶೈಲಕ್ಕೆ ಹೋಗಿ ಬಂದ ನಂತರ ಕಂಬಿಗೆ ಹಾಕಿದ ಬೆಳ್ಳಿ ಮತ್ತು ಬಂಗಾರವನ್ನು ಊರಿನ ಪಂಚರ ಮುಂದಿಟ್ಟು ಕಂಬಿಗೇ ಬೇಕಾದ ಒಡವೆಗಳನ್ನು ಮಾಡಿಸುತ್ತಾರೆ. ಪುಣ್ಯತಿಥಿ, ಪೂಜೆ, ಸಮಾರಂಭಗಳಲ್ಲಿ ಇವರು ಮಂಗಳಾರಾತಿ ಮಾಡುವುದು ಮತ್ತು ಶಿವ ಭಜನಾ, ಶಿವಾನುಭವದಲ್ಲಿ ಶಿವನ ಸೂತ್ರಗಳನ್ನು ಪಠಿಸುವರು. ಅಲ್ಲದೇ ಇವರು ಪಂಚಾಂಗ, ಮದುವೆ ಮುಹೂರ್ತಗಳನ್ನು ನಿಗದಿಪಡಿಸುತ್ತಾರೆ. ಯಾವುದೆ ಶುಭಕಾರ್ಯದಲ್ಲಿ ಮಠಪತಿ ಹಾಗೂ ಹಿರೇಮಠದವರು ಪ್ರಸಾದವನ್ನು ಸೇವಿಸಿದ ನಂತರ ಉಳಿದವರು ಆಹಾರವನ್ನು ಸೇವಿಸುತ್ತಾರೆ. ತೇರದಾಳ ಹೋಬಳಿಯ ಸುತ್ತಮುತ್ತಲು ಶೇ.೧೦% ಮಠಪತಿಯವರ ಮನೆತನಗಳು ಅಸ್ಥಿತ್ವದಲ್ಲಿ ಇವೆ[೧೮]. ಈ ಸಮುದಾಯದ ಪುರುಷರು ಮತ್ತು ಮಹಿಳೆಯರು ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ, ಹಾಗೂ ಕಡ್ಡಾಯವಾಗಿ ಶಿವದಾರದ ಲಿಂಗವನ್ನು ಧರಿಸುತ್ತಾರೆ. ಸಾಂಪ್ರದಾಯಿಕ ಉಡುಗೆ, ತೊಡುಗೆಯನ್ನು ಉಡುತ್ತಾರೆ. ಸಾತ್ವಿಕ ಆಹಾರವನ್ನು ಸೇವಿಸಿ ವ್ರತಾಚರಣೆಗಳನ್ನು ಪಾಲಿಸುತ್ತಾರೆ.

**ಕುಂಬಾರ ಸಮುದಾಯ**

ಭಾರತದಲ್ಲಿರುವ ಹಲವು ಜಾತಿಗಳಲ್ಲಿ ಅತಿ ಪ್ರಾಚಿನವಾದ ಸಮುದಾಯಗಳಲ್ಲಿ ಕುಂಬಾರ ಸಮುದಾಯವು ಒಂದಾಗಿದ್ದು, ಅದರಲ್ಲಿ ಕೆಲ ಉಪ ಪಂಗಂಡಗಳಿವೆ. ಇವರಲ್ಲಿ ಕುಂಬಾರಿಕೆ ಮಾಡುವುದು ಮುಖ್ಯ ವೃತ್ತಿಯಾಗಿದೆ. ಶ್ರಮಿಕ ವರ್ಗವಾದ ಈ ಸಮುದಾಯಕ್ಕೆ ಪ್ರಾಚೀನ ಇತಿಹಾಸವವಿದೆ. ಕುಂಬಾರ ಗುಂಡಯ್ಯ, ಘೋರ ಭಕ್ತ ಕುಂಬಾರ ಮೊದಲಾದ ಪುಣ್ಯ ಪುರುಷರು ಈ ಸಮುದಾಯವನ್ನು ಬೆಳಗಿಹೋಗಿದ್ದಾರೆ. ಇವರಲ್ಲಿ ಶಿವ ಮತ್ತು ವಿಷ್ಣುವಿನ ಆರಾಧಕರು ಸಹ ಇದ್ದಾರೆ. ಇವರಲ್ಲಿ ಕುಂಬಾರ ಎಂದು ಕರೆಯುವ ಒಂದು ಪಂಗಡವಿದ್ದು, ಅವರು ಬಸವಣ್ಣನನ್ನು ವಿಶೇಷವಾಗಿ ಆರಾಧಿಸುವುದರೊಂದಿಗೆ ಕಾಯಕ ತತ್ವವನ್ನು ನಂಬಿ ಬದುಕುವ ಜನ ಇಲ್ಲಿದ್ದಾರೆ. ಈ ಸಮುದಾಯವು ತೇರದಾಳ ಪರಿಸರದ ರಬಕವಿ, ತೇರದಾಳ, ಅಸ್ಕಿ, ಹೊಸೂರು, ಜಮಖಂಡಿ, ಗೋಲಬಾಂವಿ, ಕಾಲತಿಪ್ಪಿ ಮಾದಲಾದೆಡೆ ಅಂದರೆ ಶೇ.೧೦% ರಷ್ಟು ನೆಲೆಸಿದ್ದಾರೆ[೧೯]. ಶಿಲಾಯುಗ ಕಾಲದಿಂದಲೂ ಮಡಿಕೆ ತಯಾರಿಕೆ ಮುಂದುವರಿದುಕೊಂಡು ಬಂದಿದೆ. ಪ್ರಸಕ್ತ ಈ ಉದ್ಯೋಗವನ್ನು ತಲಾತಲಾತರಗಳಿಂದ ಮಾಡಿಕೊಂಡ ಬಂದ ಆಯಗಾರ ಮನೆತನಗಳು ಈ ಭಾಗಗಳಲ್ಲಿವೆ. ಹಣತೆ, ಕುಂಭ, ಅಲಂಕಾರಿಕ ವಸ್ತುಗಳು, ಎತ್ತು ಮೊದಲಾದ ವಸ್ತುಗಳನ್ನು ತಯಾರು ಮಾಡಿ ಸಂತೆಗಳಲ್ಲಿ ಇವರು ಮಾರಾಟ ಮಾಡುತ್ತಾರೆ. ಇಲ್ಲಿ ತಯಾರಿಸಿದ ಮಡಿಕೆಗಳನ್ನು ನೆರೆಯ ರಾಜ್ಯ ಮಹಾರಾಷ್ಟ್ರದಲ್ಲಿಯೂ ಮಾರಾಟ ಮಾಡುತ್ತಾರೆ. ಇವರು ಸಹ ಇತರೆ ಸಮುದಾಯದವರಂತೆ ಸಾಮಾನ್ಯ ಉಡುಗೆ, ತೊಡುಗೆ, ಆಹಾರ ಪದ್ಧತಿಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

**ನಾಯಕ ಸಮುದಾಯ**

ಪ್ರಸಿದ್ಧ ಕವಿ ವಾಲ್ಮೀಕಿ ತಮ್ಮ ಮೂಲ ಪುರುಷನೆಂದು ಭಾವಿಸಿರುವ ತಮ್ಮನ್ನು ರಾಮ ವಂಶಿಯರು ಎಂದು ಕರೆದುಕೊಳ್ಳುವ "ರಾಮೋಶಿ" ಎನ್ನುವ ಪಂಗಡದವರನ್ನು ಮಹಾರಾಷ್ಟದಲ್ಲಿ ನಾಯಕ ಸಮುದಾಯದವರೆಂದು ಗುರುತಿಸಲಾಗುತ್ತದೆ. ಅದೇ ರೀತಿ ಕರ್ನಾಟಕದಲ್ಲಿ ನಾಯಕ, ವಾಲ್ಮೀಕಿ ಜಾತಿಯವರೆಂದು ಕರೆಯಲ್ಪಡುವ ನಾಯಕ ಸಮುದಾಯದಲ್ಲಿ ಮ್ಯಾಸನಾಯಕ ಮತ್ತು ಊರನಾಯಕ ಎನ್ನುವ ಎರಡು ಮುಖ್ಯ ಪಂಗಂಡಗಳಿವೆ[೨೦]. ಆದರೆ ಈ ಭಾಗಗಳಲ್ಲಿ ನಾಲ್ಕು ಒಳ ಪಂಗಡಗಳಿವೆ. ಅವುಗಳೆಂದರೆ

೧. ಬೇಡ, ಬೇರಡ, ವೇಡನ್-ಸಬೇಟಿಯಾಡುವುದು.
೨. ನಾಯಕ, ನಾಯಕಮಕ್ಕಳು, ನಾಯಕವಾಡಿ, ಪಾಳೆಯಗಾರರು-ಸೈನಿಕ ಸೇವೆ ಸಲ್ಲಿಸುವವರು.
೩. ಬೋವ-ಭಾರವಾದ ವಸ್ತುಗಳನ್ನು ಹೊರುವವರು, ರಾಜ ಪರಿವಾರದವರು.
೪. ತಳವಾರ-ಸೇವಾ ವರ್ಗದವರು, ರಾಜ ಪರಿವಾರದವರು.

ಇವರಲ್ಲಿ ಮ್ಯಾಸ ನಾಯಕರು ಚಿತ್ರದುರ್ಗ ಭಾಗದಲ್ಲಿ ಅಧಿಕವಾಗಿ ನೆಲೆಸಿದ್ದು, ಅವರು ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಅದೇ ರೀತಿ ಉತ್ತರ ಕರ್ನಾಟಕದ ಮತ್ತು ಬಾಂಬೆ ಕರ್ನಾಟಕದಲ್ಲಿ ಹೆಚ್ಚಾಗಿ ನೆಲೆಸಿರುವ ಊರ ನಾಯಕರು ತಮ್ಮದೇ ಆದ ವಿಶಿಷ್ಟ ಸ್ಥಾನಮಾನಗಳನ್ನು ಹೊಂದಿದ್ದಾರೆ. ತೇರದಾಳ ಪರಿಸರದ ಪ್ರತಿ ಗ್ರಾಮದಲ್ಲಿ ಶೇ.೦೫% ರಷ್ಟು ಊರ ನಾಯಕರು ವಾಸವಾಗಿದ್ದಾರೆ. ಈ ಭಾಗದಲ್ಲಿನ ನಾಯಕ ಜನಾಂಗದ ಮನೆದೇವರು ಮಂಗಸೂಳಿ ಮಲ್ಲಯ್ಯನಾಗಿದ್ದಾನೆ. ಇವರ ಪೂರ್ವಜರ ಮೊದಲ ಕಸುಬು ಬೇಟಿಯಾಡುವುದಾಗಿತ್ತು. ಆ ಕಾರಣಕ್ಕಾಗಿ ಇವರನ್ನು ಬೇಡರೆಂದು ಗುರುತಿಸಲಾಗುತ್ತಿದೆ. ಅದರೆ ಈಗ ಕೆಲವರು ಸರ್ಕಾರಿ ಕೆಲಸವನ್ನು ಇನ್ನುಳಿದವರು ಖಾಸಗಿ ಕೆಲಸವನ್ನು ಮಾಡುತ್ತಾರೆ. ಇವರ ಕುಲದ ಸಂತನಾದ ವಾಲ್ಮೀಕಿ ಮಹರ್ಷಿಯ ಜಯಂತಿಯನ್ನು ಪ್ರತಿವರ್ಷ ಅಕ್ಟೋಬರ್‌ನಲ್ಲಿ ಬಹಳ ವಿಜಂಭೃಣೆಯಿಂದ ಆಚರಿಸುತ್ತಾರೆ. ನಾಯಕ ಜನಾಂಗವು ಜಾತಿಯಿಂದ ಹಿಂದೂ ಬ್ಯಾಡರ ಆಗಿದ್ದು, ಅದನ್ನು ವಾಲ್ಮೀಕಿ ಜನಾಂಗವೆಂದು ಇಲ್ಲಿ ಗುರುತಿಸಿದ್ದಾರೆ. ಇದು ಕೆಲವು ಉಪಜಾತಿಗಳನ್ನು ಹೊಂದಿದ್ದು, ಅವರಲ್ಲಿ ನಾಯಕ, ಕುರ, ಬೇಡ, ಜಂಗಮ ತಳವಾರರು ಮುಖ್ಯರಾಗಿದ್ದಾರೆ. ಕೆಲವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮ ಸ್ಥಿತಿಗತಿಯನ್ನು ಹೊಂದಿದ್ದಾರೆ. ಸರ್ಕಾರ ಆರ್ಥಿಕವಾಗಿ ಹಿಂದುಳಿದಿರುವ ಕಾರಣಕ್ಕೆ ಇವರನ್ನು ಪರಿಶಿಷ್ಟ ಪಂಗಡಕ್ಕೆ (ಎಸ್.ಟಿ) ಸೇರಿಸಿ ಶೇಕಡಾ ೦೮% ಮೀಸಲಾತಿಯನ್ನು ನೀಡುತ್ತಿದೆ. ಊರ ನಾಯಕ, ಮ್ಯಾಸ ನಾಯಕ ಎನ್ನುವುವರ ನಡುವೆ ಏಣಿ ಶ್ರೇಣಿ ವ್ಯವಸ್ಥೆ ಇದ್ದು, ಶ್ರೇಷ್ಟ ಕನಿಷ್ಠ ಪರಿಕಲ್ಪನೆ ಇದ್ದು, ಇವರ ನಡುವೆ ಮದುವೆ ನಡೆಯುವುದಿಲ್ಲ. ಬದಲಾಗಿ ಆಯಾ ಪಂಗಡದ ಒಳಗೆ ನಡೆಸುವ ಸಂಪ್ರದಾಯವಿದೆ. ಇವರು ಸಹ ಸಾಮಾನ್ಯ ಉಡುಗೆ, ತೊಡುಗೆಗಳನ್ನು ಧರಿಸುತ್ತಾರೆ. ಇವರು ಸಸ್ಯಾಹಾರದ ಜೊತೆಗೆ ಮಾಂಸಾಹಾರ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ.

ನಾಯಕ ಸಮುದಾಯದಲ್ಲಿ ತಳವಾರ ಎನ್ನುವ ಉಪ ಸಮುದಾಯವಿದೆ. ಕನ್ನಡದ ಆದಿ ಕೃತಿಯಾದ "ವಡ್ಡಾರಾಧನೆ"ಯಲ್ಲಿ "ಚಿಲಾತಪುತ್ರನ ಕಥೆ" ಈ ಸಮುದಾಯಕ್ಕೆ ಸಂಬಂಧಿಸಿದೆ.

"ಚಿಲಾತಪುತ್ರ" ಎಂಬುದು ಸಂಸ್ಕೃತಿದ "ಕಿರಾತಪುತ್ರ" ಎಂಬುದರ ಪ್ರಾಕೃತ ರೂಪವೆಂದು ವಿದ್ವಾಂಸರು ನಿರೂಪಿಸಿದ್ದಾರೆ. ಅದೇ ಗ್ರಂಥದ "ವಿದ್ಯೂಚ್ಚೋರನೆಂಬ ಋಷಿಯ ಕಥೆ"ಯಲ್ಲಿಯ ಮದಂಡನೆಂಬ ತಳವಾರನ ಉಲ್ಲೇಖವಿದೆ. "ತಳವಾರ" ಎಂಬುದು ಮೂಲತ "ತಲಕಾರ" ಎಂಬುದರಿಂದ ಬಂದಿದೆ. ಎಂದರೆ ಆರಕ್ಷಕರೆಂಬರ್ಥದಲ್ಲಿ ಇದು ಮುಂಚೆ ಬಳಕೆಯಾಗುತ್ತಿತ್ತು. ಇದೇ ಅರ್ಥದಲ್ಲಿ ಹಳೆಗನ್ನಡದಲ್ಲಿಯ "ತಳಾವಿ-ವು "ತಳವಾರ" ಎಂಬ ರೂಪದಲ್ಲಿಯೂ ಪ್ರಯೋಗಗೊಳ್ಳತ್ತಿತ್ತು. ಈಗಿನ ಅರ್ಥದ 'ಆಯ'ವಲ್ಲ' ಉತ್ಪನ್ನ ಅಥವಾ ಕರವೆಂದು ಅರ್ಥ. ಕ್ರಿ.ಶ.೧೦೫೨ ಒಂದು ಶಾಸನದಲ್ಲಿ ತಳಾರ ಗೊಲಿಯ ಉಲ್ಲೇಖವೂ ಇದೆ. ಎಂದರೆ ಆ ಕಾಲಕ್ಕಾಗಲೆ ಇವರು ಸೇವಾ ಕಾರ್ಯಗಳನ್ನು ಕೈಗೊಳುತ್ತಿದ್ದರೆಂದು ತಿಳಿಯಬಹುದಾಗಿದೆ. ಪರಿವಾರದವರೆಂದರೆ ರಾಜಪರಿವಾರದವರೆಂದು ಅರ್ಥ. ಬೇಟೆ ಮತ್ತು ಯುದ್ದಗಳಲ್ಲಿ ರಾಜನ ಜತೆಗೆ ಯಾವತ್ತೂ ಹೋಗುತ್ತಿದ್ದುದರಿಂದ ಇವರು ಪರಿವಾರದವರೆನ್ನಿಸಿಕೊಂಡರು, ಬೋವರೆಂದರೆ ಮೇನೆ(ಪಲ್ಲಕ್ಕಿ) ಮುಂತಾದ ಭಾರಗಳನ್ನು ಹೊರುವವರೆಂದು ಅರ್ಥ. ತೇರದಾಳ ಹೋಬಳಿಯಲ್ಲಿ ಬರುವ ತಳವಾರ ಜನಾಂಗದವರು ಪ್ರಸಿದ್ಧರಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರು ಸವದತ್ತಿ ಎಲ್ಲಮ್ಮ, ದತ್ತರಗಿಯ ಬಾಗಮ್ಮ, ಮಲ್ಲಯ್ಯ ಮುಂತಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಸ್ಥಾನಿಕವಾಗಿ ಶಿವ ಮತ್ತು ದುರ್ಗಾದೇವಿ(ಭಾಗಮ್ಮ), ಅಲ್ಲಮ ಪ್ರಭುವಿಗೆ ನಡೆದುಕೊಳ್ಳುತ್ತಾರೆ. ಇವರಲ್ಲಿ ಕೂಡಾ ಭೂತ, ಮಾಟ, ಮಂತ್ರ. ದೈವ, ದೇವರ ಹತ್ತಿರ ವರ ಕೇಳುವುದು ಮುಂತಾದವುಗಳಲ್ಲಿ ನಂಬಿಕೆ ಇವೆ.

ತಳವಾರರಲ್ಲಿ ಹಲವಾರು ಸಂಪ್ರದಾಯಗಳು ಇವೆ. ಬೆಡಗು ಹೇಳುವ ಕ್ರಮ ಇವರಲ್ಲೂ ಇದೆ, ಗರ್ಭಿಣಿಯರಿಗೆ ಕುಪ್ಪಸ ಮಾಡುವುದು (ಪುಂಸವನ) ಜನನ ಸೂತಕ, ಸಟ್ಟೆವ್ವನ ಪೂಜೆ, ತೊಟ್ಟಲಿಗೆ ಹಾಕುವುದು, ಕಿವಿ ಚುಚ್ಚುವುದು, ಜವಳ(ಜಡಿ) ತಗೆಯುವುದು, ಲಗ್ನ ಮುತಾಂದ ಸಂಸ್ಕಾರಗಳಿವೆ. ಸತ್ತರೆ ಹೂಳುವುದು, ಇಲ್ಲವೆ ಅನಾರೋಗ್ಯಕೆ ಅಥವಾ ಅಪಘಾತವಾಗಿ ಸತ್ತರೆ ಅಗ್ನಿ ಸಂಸ್ಕಾರವೂ ಇದೆ, ಮರಣದ ಸೂತಕವನ್ನೂ ಆಚರಿಸುತ್ತಾರೆ.

ಸೈನಿಕ ವೃತಿ ಇವರಿಗೆ ಮೊದಲಿನಿಂದಲೂ ಪ್ರಿಯವಾದ ಉದ್ಯೋಗ, ಕರ್ನಾಟಕದ ಸೈನಿಕ ಸೇವೆಯಲ್ಲಿ ಈ ಜನಾಂಗದವರೇ ಅಧಿಕವಾಗಿದ್ದಾರೆ. ಉದಾ: ಸುರೇಂದ್ರ ಸಿದ್ರಾಮ ತಳವಾರ ಇವರು ೦೧-೦೬-೧೯೫೧ರಲ್ಲಿ ಹುಟ್ಟಿ ತಮ್ಮ ೧೯ನೇ ವರ್ಷದಲ್ಲಿ ಸೈನ್ಯಕ್ಕೆ ಸೇರ್ಪಡೆಯಾದರು. ಮುಂದೆ ಹಂತ ಹಂತವಾಗಿ ಉನ್ನತ ಹುದ್ದೆಗಳನ್ನು ಪಡೆಯುತ್ತಾ ನಾಯಕ್ ಹುದ್ದೆ ವೈಯರ್‌ಲೆಸ್ ಆಪರೇಟರ್‌ಆಗಿ ಸೇವೆ ಸಲ್ಲಿಸಿ ಸುಧೀರ್ಘಾವಧಿವಾಗಿ ೧೭ ವರ್ಷಗಳ ಕಾಲ ಸೇವೆಯನ್ನು ಸಲ್ಲಿಸಿ ನಿವೃತ್ತಿ ಹೊಂದಿದರು. ಮುಂದೆ ಎಚ್.ಎಂ.ಟಿ. ಕಂಪನಿಯಲ್ಲಿ ಸೇವೆಯನ್ನು ಸಲ್ಲಿಸಿ ಪುನಃ ತೇರದಾಳಕ್ಕೆ ಆಗಮಿಸಿ ಈಗ ಸಂಪೂರ್ಣವಾಗಿ ಸಮಾಜ ಕಾರ್ಯದಲ್ಲಿ ತೊಡಗಿದ್ದಾರೆ. (ಪ್ರಾಥಮಿಕ ಶಾಲಾ ಮಕ್ಕಳಿಗೆ ಆಗಸ್ಟ್ ೧೫ ಹಾಗೂ ಜನವರಿ ೨೬ರಂದು ಕವಾಯತುಗಳ ತರಬೇತಿಯನ್ನು ನೀಡಿ ಪಥಸಂಚಲನ ಮಾಡಿಸುತ್ತಾರೆ) ತಳವಾರಿಕೆ ಎಂದರೆ ಆರಕ್ಷಣೆಯ ಹೊಣೆ ಇವರದೆ ಆಗಿತ್ತೆಂಬ ಸಂಗತಿಯನ್ನು ಕುರಿತು ಈಗಾಗಲೆ ಹೇಳಲಾಗಿದೆ. ಗಸ್ತಿ ತಿರುಗುವುದು, ಕಾವಲು ಕಾಯುವುದು ಮುಂತಾದ ಕೆಲಸಗಳನ್ನು ಈ ಜನಾಂಗದವರು ಪ್ರಸಕ್ತವೂ ಗ್ರಾಮೀಣ ಪ್ರದೇಶಗಳಲ್ಲಿ ಮಾಡುತ್ತಾರೆ. ಇವರು ಬೇರೆಯವರ ಮನೆಗಳಲ್ಲಿ ಮತ್ತು ಮನರಂಜನಾ ಕಾರ್ಯದಲ್ಲಿ ಸಹಾಯಕ ಸಹಾಯ ಮಾಡುತ್ತಾರೆ ಹಾಗೂ ಸಂಪ್ರದಾಯವಾಗಿ ಬಂದ ಗಣೇಶನ

ಚತುರ್ಥಿಯ ಸಂದರ್ಭದಲ್ಲಿ ಜೋಕುಮಾರನ ಹೊತ್ತು ಕೊಂಡು ಊರೆಲ್ಲಾ ತಿರುಗಾಡುವ ಕಾರ್ಯಗಳನ್ನು ಈ ಭಾಗದಲ್ಲಿ ಮಾಡುತ್ತಾರೆ.

**ಹೂಗಾರ ಸಮುದಾಯ**

ತೇರದಾಳ ಪರಿಸರದಲ್ಲಿ ನೆಲೆಸಿರುವ ವಿವಿಧ ಸಮುದಾಯಗಳಲ್ಲಿ ಹೂಗಾರ ಸಮುದಾಯವು ಒಂದಾಗಿದೆ. ಹೂವಿನ ಹಾರನ್ನು ತಯಾರಿಸಿ ಅದನ್ನು ಮಾರಾಟ ಮಾಡುವುದು ಇವರ ಪ್ರಧಾನ ಕಾಯಕ. ಮನೆ ಮನೆಗೆ ಹೋಗಿ ದೇವರಿಗೆ ಬಿಲ್ವಪತ್ರೆಯನ್ನು ಮತ್ತು ಹೂವನ್ನು ನೀಡುತ್ತಾರೆ. ಅದರೊಂದಿಗೆ ಹನುಮಂತನ ಪೂಜೆಯು ಮಾಡುತ್ತಾರೆ. ಇವರನ್ನು **ಜಿನಗಾರ** ಇಲ್ಲವೇ ಜೀರರೆಂದು ಸಹ ಸಂಬೋಧಿಸಲಾಗುತ್ತದೆ. ಇವರಲ್ಲಿ ಲಿಂಗಾಯಿತ ಹೂಗಾರ, ಪೂಜಾರ ಹೂಗಾರ, ಬಣ್ಣದ ಹೂಗಾರ ಎನ್ನುವ ಉಪ ಪಂಗಡಗಳಿವೆ. ಇವರಲ್ಲಿಯೂ ಏಣಿ ಶ್ರೇಣಿಯ ಪರಿಕಲ್ಪನೆಗಳಿವೆ. ಲಿಂಗಾಯಿತ ಹೂಗಾರರು ಹೂವುಗಳನ್ನು ಕಟ್ಟಿ ಮಾರುವುದನ್ನು ಮತ್ತು ದೇವರಿಗೆ ಅಲಂಕಾರಕ್ಕಾಗಿ ಹೂವನ್ನು ಅರ್ಪಿಸುತ್ತಾರೆ. ಅಲ್ಲದೆ ಇವರು ಕೃಷಿಯನ್ನು ಪ್ರಧಾನ ಕಸಬುನ್ನಾಗಿ ಹೊಂದಿದ್ದಾರೆ. ಹೂಗಾರ ಪೂಜಾರಿಗಳೆಂದು ಕರೆಯಲ್ಪಡುವ ಹೂಗಾರರು ತೇರದಾಳ ಹೋಬಳಿಯ ಸುತ್ತ ಮುತ್ತಲಿನ ಊರುಗಳಲ್ಲಿ ಹನುಮನ ಗುಡಿಯಲ್ಲಿ ಅರ್ಚಕರಾಗಿ ಸೇವೆ ಸಲ್ಲಿಸುವ ವೃತ್ತಿಯನ್ನು ಮಾಡುತ್ತಾರೆ. ಇದಕ್ಕಾಗಿ ಅವರು ಭಕ್ತರಿಂದ ಉಪ್ಪು, ಸಕ್ಕರೆ, ಎಣ್ಣೆ, ದಕ್ಷಣೆ, ಧವಸ-ಧಾನ್ಯ ಪಡೆಯುತ್ತಾರೆ. ಅದೇ ರೀತಿ ಮುಜರಾಯಿ ಇಲಾಖೆಗೊಳಪಟ್ಟ ದೇವಾಲಯಗಳ ಆರ್ಚಕರಾಗಿರುವವರಿಗೆ ಸರ್ಕಾರದಿಂದ ನಿರ್ದಿಷ್ಟ ಸ್ವಲ್ಪ ವೇತನವನ್ನು ಸಹ ಪಡೆಯುತ್ತಾರೆ. ಗ್ರಾಮ ದೈವದ ಪೂಜೆಯನ್ನು ಮಾಡಲು ಎಲ್ಲ ಪೂಜಾರಿ ಹೂಗಾರರವರು ಮಾಡುವ ಹಕ್ಕುಳ್ಳವರಾಗಿದ್ದು, ತಮ್ಮ ನಿರ್ದಿಷ್ಟ ಸರದಿ ಬಂದಾಗ ಆ ಸಮಯದಲ್ಲಿ ಅವರವರು ಪೂಜೆಯನ್ನು ಮಾಡಿ ಲಾಭವನ್ನು ಪಡೆಯುತ್ತಾರೆ. ಬಣ್ಣದ ಹೂಗಾರರನ್ನು ಜಿನಗಾರ ಇಲ್ಲವೇ ಜೀರರೆಂದು ಸಹ ಕರೆಯುತ್ತಾರೆ. ಶೇ.೬%ರಷ್ಟು ಜನರು ತೇರದಾಳ ಅಸ್ಕಿ, ಹನಗಂಡಿ ರಬಕವಿ, ಬನಹಟ್ಟಿ, ಮದನಮಟ್ಟಿ, ಕಾಲತಿಪ್ಪಿ, ಗೊಲಬಾಂವಿ ಮೊದಲಾದ ಊರುಗಳಲ್ಲಿ ನೆಲೆಸಿದ್ದಾರೆ[೨೧]. ಇವರು ಇಂದು ಸರ್ಕಾರಿ, ಸ್ವಯಂ ಉದ್ಯೋಗ, ವಾಣಿಜ್ಯ ವ್ಯಾಪಾರ ಚಟುವಟಿಕೆಗಳಲ್ಲಿ ಹೆಚ್ಚಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರು ಸಾಮಾನ್ಯವಾಗಿ ಇತರೆ ಸಮುದಾಯಗಳು ಆಹಾರ ಪದ್ಧತಿಯನ್ನು ಹಾಗೂ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ಆದರೆ ಇವರು ಮಾಂಸಾಹಾರಿಗಳಲ್ಲ. ಇವರು ಸಾತ್ವಿಕ ಆಹಾರವನ್ನು ಭೋಜನ ಮಾಡುತ್ತಾರೆ.

**ಮಾದಿಗ ಸಮುದಾಯ**

ಭಾರತದಲ್ಲಿನ ಹಲವಾರು ಜಾತಿಗಳಲ್ಲಿ ಮಾದಿಗ ಸಮುದಾಯವು ಒಂದು. ಇವರನ್ನು ಚಮ್ಮಾರ ಜಾತಿ ಮೂಲದವರೆಂದು ನಂಬಲಾಗಿದೆ. ಇವರು ಹೆಚ್ಚಾಗಿ ಆಂಧ್ರ ಪ್ರದೇಶ, ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಕಂಡು ಬರುತ್ತಾರೆ. ಇವರನ್ನು ಅದಿಜಾಂಬವರು, ಮಾತಂಗರು, ಮಾದಿಗೌಡ, ಮಾದಿಗರು, ಎಡಗೈ ಮುಂತಾದ ಹೆಸರುಗಳಿಂದಲೂ ಗುರುತಿಸುತ್ತಾರೆ. ಜಾತಿ ಪದ್ಧತಿಯಲ್ಲಿ ಇವರು ಅತ್ಯಂತ ಶೋಷಣೆಗೆ ಒಳಪಟ್ಟವರು ಎಂದು ಪರಿಗಣಿಸಲ್ಲಟ್ಟಿದ್ದಾರೆ. ಇವರನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಗಿದೆ. ಸಾಂಪ್ರದಾಯಿಕವಾಗಿ ಇವರ ಕಸಬು ಕೃಷಿ, ಚರ್ಮ ಹದಮಾಡುವುದು, ತಮಟೆ, ಡೋಲು ಇತ್ಯಾದಿಗಳನ್ನು ತಯಾರಿಸುವುದು, ಬಾರಿಸುವುದು

ಇವರಿಗೆ ಪರಂಪರೆಯಿಂದ ಬಂದ ವೃತ್ತಿಗಳಾಗಿವೆ. ಆದರೆ ಪ್ರಸಕ್ತ ಈ ಪರಿಸರದಲ್ಲಿ ವಾಸಿಸುವ ಮಾದಿಗ ಜನಾಂದವರು ಇತ್ತೀಚಿನ ದಿನಗಳಲ್ಲಿ ಹಗ್ಗಗಳನ್ನು, ಸೀರೆ ನೇಯುವ ಕೆಲಸ, ಹಾಗೂ ಕಟ್ಟಡ ನಿರ್ಮಾಣ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ತೇರದಾಳ ಹೋಬಳಿಯಲ್ಲಿ ಮಾದಿಗ ಜನಾಂಗದ ದೇವಾಲಯ ದುರ್ಗಾದೇವಿ ಗುಡಿ, ಧರ್ಮರಾಜ ಗುಡಿ, ಮೂರು ಮುಖದ ದೇವಿಗುಡಿ, ಯಲ್ಲಮ್ಮನ ಗುಡಿಗಳು ಹೆಚ್ಚಾಗಿ ಕಂಡುಬರುತ್ತವೆ. ಮೇಲ್ಕಾಣಿಸಿದ ಗುಡಿಗಳು ಜಾತ್ರೆಯನ್ನು ಬಿಟ್ಟು ಮಾದಿಗರು ಹೊರ ಊರಿನ ದೇವತೆಗಳಾದ ಸವದತ್ತಿ ಯಲ್ಲಮ್ಮ, ಸೀತಿಮನಿ ಯಮನೂರ, ಗುಡ್ಡಾಪೂರ ದಾನಮ್ಮಾ ದೇವಿ ಹಾಗೂ ಫಂಡರಪೂರಕ್ಕೆ ಹೋಗುವುದು ರೂಢಿಯಲ್ಲಿದೆ. ಇವರಲ್ಲಿ ಉಡುಗೆ-ತೊಡುಗೆಗಳು ಇತರೆ ಸಮುದಾಯಗಳಂತೆ ಇದ್ದು, ಇವರು ಸಸ್ಯಾಹಾರ ಮತ್ತು ಮಾಂಸಾಹಾರಿಗಳಾಗಿದ್ದಾರೆ.

ಈ ಸಮುದಾಯದ ಮದುವೆಗಳಲ್ಲಿ ಹಲವು ಕಾರ್ಯಕ್ರಮ ನಡೆಯುತ್ತವೆ. ಅವುಗಳಲ್ಲಿ ಹಂದರ ಪೂಜೆ ಮತ್ತು ಹಾಲಗಂಬ ಪೂಜೆ, ಒಳಕಲ್ಲು ಪೂಜೆ, ಬಳಿ ಉಡಿಸುವ ಕಾರ್ಯ, ಸುತ್ತಿಂದೇವರ ಬಾನ, ಬೀಗರನ್ನು ಎದುರುಗೊಳ್ಳುವುದು, ಬಷ್ಪಗಿ ಹಾಕುವುದು, ಸುರಗಿ ನೀರು (ಅರಸಿನ ನೀರು), ದೇವರ ಅಕ್ಷತಾ ರೋಹಣ (ಮಾಂಗಲ್ಯ ಧಾರಣೆ), ದೈವದ ಅಕ್ಷತಾ ರೋಹಣ (ಸಾಮೂಹಿಕ ಅಕ್ಷತೆ), ಕನ್ಯಾ ದಾನ, ಊಟದ ವ್ಯವಸ್ಥೆ, ಬೀಗರ ಆಯೇರಿ, ಸುರಗಿ ಕೊಡುವುದು, ಮಧು ಮಗಳಿಗೆ ಉಡಿ ತುಂಬುವುದು, ಮಧುಮಗಳನ್ನು ವರನ ಮನೆಗೆ ಕಳುಹಿಸಿ ಕೊಡುವುದು. ಅಲ್ಲದೇ ಈ ಜಾತಿಯವರಲ್ಲಿ ಕೆಲವೂ ಮೂಢನಂಬಿಕೆಗಳು ಇಂದಿಗೂ ಜೀವಂತವಾಗಿದ್ದು, ಅವುಗಳನ್ನು ಅವರು ಹಳೇ ಕಾಲದಿಂದ ನಡೆಸಿಕೊಂಡು ಬರುತ್ತಿದ್ದಾರೆ. ಅವುಗಳಲ್ಲಿ ದೇವದಾಸಿ ಪದ್ಧತಿಯು ಒಂದಾಗಿದ್ದು, ಇನ್ನೂ ಅಲ್ಲಲ್ಲಿ ಅಸ್ಥಿತ್ವದಲ್ಲಿದೆ[೨೨]. ಇವರಲ್ಲಿ ವಿವಾಹಿತರು ಸತ್ತಾಗ ಸ್ಮಶಾನದಲ್ಲಿ ಸತ್ತ ವ್ಯಕ್ತಿಯನ್ನು ಕುಳ್ಳಿರಿಸಿ ಹೂಳುವುದು ರೂಢಿಯಲ್ಲಿದೆ. ಹಾಗೆಯೇ ಮೂರನೆಯ ದಿನಕ್ಕೆ ಹಕ್ಕಿಗೆ ಆಹಾರ ವಿಡುವ ಪದ್ದತಿ ರೂಡಿಯಲ್ಲಿವೆ. ಕಾರಣ ಹಕ್ಕಿಗೆ ಆಹಾರವನ್ನು ಇಟ್ಟಾಗ ಅವುಗಳು ಮುಟ್ಟಿದರೆ(ತಿಂದರೆ) ಸತ್ತ ವ್ಯಕ್ತಿಗೆ ಯಾವುದೇ ಆಸೆ ಆಕಾಂಕ್ಷೆಗಳು ಇಲ್ಲ ಎಂಬ ನಂಬಿಕೆ. ಹಾಗೆಯೇ ಮುಟ್ಟದಿದ್ದರೆ (ತಿನ್ನದಿದ್ದರೆ) ಸತ್ತ ವ್ಯಕ್ತಿಗೆ ಇನ್ನೂ ಆಸೆ ಆಕಾಂಕ್ಷೆಗಳಿದ್ದವು ಎನ್ನುವ ನಂಬಿಕೆಗಳಿವೆ.

**ಭಜಂತ್ರಿ ಅಥವಾ ವಾಜಂತ್ರಿ ಸಮಾಜ**

ವಾದ್ಯವನ್ನು ಬಾರಿಸುವ ವೃತ್ತಿಯವರನ್ನು ಭಂಜತ್ರಿವೆಂದು ಕರೆಯುತ್ತೆವೆ. ಇವರಲ್ಲಿ ಕೊರಚ, ಕೊರಮ ಎನ್ನುವ ಎರಡು ಮುಖ್ಯ ಪ್ರಭೇದಗಳಿವೆ. ಭಜಂತ್ರಿ ಎನ್ನುವುದು ಮರಾಠಿ ಪದವಾಗಿದೆ. ಇವರು ಮದುವೆಯ ಸಮಾರಂಭ, ತೊಟ್ಟಿಲ ಕಾರ್ಯದಲ್ಲಿ, ಸೀಮಂತ ಕಾರ್ಯಗಳ ಸಂದರ್ಭದಲ್ಲಿ, ಇನ್ನು ಸಾಕಷ್ಟು ಶುಭ ಸಮಾರಂಭಗಳಲ್ಲಿ ಒಟ್ಟಿನಲ್ಲಿ ಮಂಗಳ ಕಾರ್ಯಗಳಲ್ಲಿ ವಾದ್ಯ ಅಥವಾ (ನಾನಾ ತರಹದ ವಾಧ್ಯ) ಬಾರಿಸುವುದು ಇವರ ಉಪ ವೃತ್ತಿಯಾಗಿದೆ. ಈ ತಂಡದಲ್ಲಿ ಸುಮಾರು ೮ ರಿಂದ ೧೦ ಸದಸ್ಯರಿರುತ್ತಾರೆ. ಒಂದು ಮಂಗಳ ಕಾರ್ಯದಲ್ಲಿ ವಾದ್ಯವನ್ನು ಬಾರಿಸಿದರೆ ಸುಮಾರು ಸಂಭಾವನೆ, ಒಬ್ಬರಿಗೆ ಕೂಲಿಯಂತೆ ೫೦೦ ರಿಂದ ೧೦೦೦ ರೂ. ನೀಡುತ್ತಾರೆ. ಇವರ ಸ್ತ್ರೀ ಮತ್ತು ಪುರುಷರು ಸಹ ಇತರೆ ಸಮುದಾಯಗಳಂತೆಯೇ ಉಡುಗೆ ತೊಡುಗೆಗಳನ್ನು ಧರಿಸುತ್ತಾರೆ. ಇವರು ಸಸ್ಯಾಹಾರ ಮತ್ತು ಮಾಂಸಾಹಾರವನ್ನು

ಸೇವಿಸುತ್ತಾರೆ. ತೇರದಾಳ ಹೋಬಳಿಯಲ್ಲಿ ಇವರಿಗೆ ಸಂಬಂಧಿಸಿದ ಸುಮಾರು ೫೦೦ ರಿಂದ ೧೫೦೦ ಮನೆಗಳು ಇವೆ. ಇವರು ತಮ್ಮ ಸಮುದಾಯದ ಸಂತನಾದ "ನೂಲಿಯ ಚಂದಯ್ಯಾ" ಅವರ ದಿನಾಚರಣೆಯನ್ನು ಹಾಗೂ ಸಂಪ್ರದಾಯಿಕವಾಗಿ ತಮ್ಮ ಜಾತಿಗೆ ಸಂಬಂಧಿಸಿದ ಎಲ್ಲ ಹಬ್ಬಗಳನ್ನು ಆಚರಿಸುತ್ತಾರೆ. ನೂಲಿಯ ಚಂದಯ್ಯನ ದಿನಾಚರಣೆಯ ಸಂದರ್ಭದಲ್ಲಿ ಸಮಾಜದ ಎಲ್ಲ ಸದಸ್ಯರು ಸೇರಿ ವಿದ್ವಾಂಸರು ಹಾಗೂ ಗುರು ಹಿರಿಯರನ್ನು ಕರೆಯಿಸಿ ನೂಲಿಯ ಚಂದಯ್ಯರವರು ನಡೆದು ಬಂದ ದಾರಿಯನ್ನು ಕುರಿತು ತಿಳಿಸುತ್ತಾರೆ. ಕಸಪೊರಕೆ ತಯಾರಿಸುವುದು ಇವರ ಮುಖ್ಯ ವೃತ್ತಿ. ಅದಕ್ಕೆ ಬೇಕಾದ ಕಚ್ಚಾ ವಸ್ತುವನ್ನು (ಪೊರಕಿಯನ್ನು) ರಾಯಚೂರು ಸುತ್ತ ಮುತ್ತಲಿನ ಪ್ರದೇಶದಿಂದ ತರಿಸುತ್ತಾರೆ. ಅದರಲ್ಲಿ ಸುಮಾರು ೩೦೦ ರಿಂದ ೫೦೦ ಸೂಡುಗಳು ಇರುತ್ತವೆ. ದಿನಾಲು ೨ ರಿಂದ ೩ ಸೂಡುಗಳನ್ನು ಬಿಚ್ಚಿ ಬಿಸಿಲಿನಲ್ಲಿ ಒಣಗಿ ಹಾಕಿ ನಂತರ ಉದ್ದಾದ ಕಟ್ಟಿಗೆಯಿಂದ ಬಡಿದು ಪೂರಕ್ಕೆಯಿಂದ ಮುಳ್ಳನ್ನು ಬೇರ್ಪಡಿಸಿ, ನಂತರ ಪೊರಕೆಯಿಂದ ಗರಿಗಳನ್ನು ಬೇರ್ಪಡಿಸಿ ಗರಿಗಳನ್ನು ಒಟ್ಟಿಗೆ ಸೇರಿಸಿ ಹಿಡಿ ಮಾಡಿ ಸೂಡು ಕಟ್ಟಿ ಕಸ ಪೊರಕೆಯನ್ನು ತಯಾರಿಸುತ್ತಾರೆ. ಪ್ರತಿ ದಿನ ಮನೆಯಲ್ಲಿ ಮಹಿಳೆಯರು ಮನೆಗೆಲಸವನ್ನು ಮಾಡಿ ೫೦ ರಿಂದ ೬೦ ಪೊರಕೆಗಳನ್ನು ತಯಾರಿಸಿ ವಾರಕ್ಕೆ ೩೦೦ ರಿಂದ ೫೦೦ ಪೊರಕೆಗಳನ್ನು ತಯಾರಿಸಿ ಒಟ್ಟು ಗೂಡಿಸಿ ಸುತ್ತ ಮುತ್ತಲಿನ ಸಂತೆಗಳಿಗೆ ಹೋಗಿ ಮಾರಾಟ ಮಾಡಿಕೊಂಡು ಬರುತ್ತಾರೆ. ಒಂದು ಪೊರಕೆ ೩೦ ರಿಂದ ೫೦ ರೂ ಗಳಿಗೆ ಮಾರಾಟ ಮಾಡುತ್ತಾರೆ. ವಾದ್ಯ ಬಾರಿಸುವುದು ಪುರುಷರ ಕೆಲಸ. ಅವರು ತಮ್ಮ ಬಿಡುವಿನ ವೇಳೆಯಲ್ಲಿ ಮಹಿಳೆಯರಿಗೆ ಪೊರಕೆ ಕಟ್ಟಲು ಸಹಾಯ ಮಾಡುತ್ತಾರೆ[೨೩].

ಸಿಂದಿ (ಈಚಲ) ಬುಟ್ಟಿ ತಯಾರಿಕೆ ಈ ಸಮುದಾಯದ ಮತ್ತೊಂದು ವೃತ್ತಿ. ಇವರು ಸಿಂದಿ ಕಟ್ಟಿಗೆಯಿಂದ (ಈಚಲಗರಿ/ಬರಲು) ಪೊರಕೆಯನ್ನು ಬೇರ್ಪಡಿಸಿದ ನಂತರ ಸಿಂದಿ ಕಟ್ಟಿಗೆಯನ್ನು ೫ ಭಾಗವಾಗಿ ಸೀಳಿ ಅದಕ್ಕೆ ಮೇಲಿಂದ ಮೇಲೆ ನೀರಿನಲ್ಲಿ ಅದ್ದಿ ಕಟ್ಟಿಗೆಯನ್ನು ಮೃದು ಮಾಡಿ ಬುಟ್ಟಿಯನ್ನು ಹೆಣೆಯುತ್ತಾರೆ. ಆ ಬುಟ್ಟಿಗಳನ್ನು ಕೃಷಿ ಮತ್ತು ಇತರೆ ಮನೆ ಕಾರ್ಯಗಳಿಗೆ ಉಪಯೋಗಿಸುತ್ತಾರೆ. ಒಂದು ದಿನಕ್ಕೆ ೫ ರಿಂದ ೬ ಬುಟ್ಟಿಗಳನ್ನು ತಯಾರಿಸುತ್ತಾರೆ. ಒಂದು ಬುಟ್ಟಿಗೆ ೮೦ ರಿಂದ ೧೦೦ ರೂಗಳಿಗೆ ಒಂದರಂತೆ ಮಾರುತ್ತಾರೆ. ಈ ಜನಾಂಗದವರು ಮೊಹರಂ ಹಬ್ಬದ ಸಂದರ್ಭದಲ್ಲಿ ಮಾತ್ರ ವಿಶೇಷವಾಗಿ ಮಾಂಸಾಹಾರವನ್ನು ಎಲ್ಲರು ಸೇರಿ ಸೇವಿಸುತ್ತಾರೆ. ಉಳಿದ ದಿನಗಳಲ್ಲಿ ಸಸ್ಯಹಾರವನ್ನು ಸೇವಿಸುತ್ತಾರೆ. ಈ ಸಮುದಾಯದ ಸ್ತ್ರೀಯರು ಪುರುಷರು ಇತರೆ ಸಮುದಾಯಗಳ ಜನತೆಯಂತೆ ಉಡುಪುಗಳನ್ನು ಧರಿಸುತ್ತಾರೆ.

**ಚಮ್ಮಾರ ಸಮುದಾಯ**

ಚಮಾರ ಎಂಬ ಪದವನ್ನು ವ್ಯಾಖ್ಯಾನಿಸಿದಾಗ ಚ+ಮ+ಅ+ರ ಈ ನಾಲ್ಕು ಅಕ್ಷರಗಳಿಂದ ಇದು ನಿಷ್ಪತ್ತಿಗೊಂಡಿದೆ ಎಂದು ತಿಳಿಯುತ್ತದೆ. ಚ=ಚರ್ಮ, ಮ=ಮಾಂಸ, ಅ=ಅಸ್ತಿ, ರ=ರಕ್ತ ಚಅಮರ>ಚಮಾರ>ಚಮಗಾರ>ಸಮಗಾರ.(ಚರ್ಮಗಾರ>ಚಮ್ಮಾರ>ಚಮಾರ) ಚರ್ಮ, ಮಾಂಸ, ಅಸ್ತಿ, ರಕ್ತ-ಇವುಗಳ ಸಮಾಹಾರವೇ ಚಮಾರ: ಅರ್ಥಾತ ಚಮಾರ ಎಂಬುದು ಸಂಪೂರ್ಣ ೦ಮಾನವ ಜಾತಿಯನ್ನೇ ಒಳಗೊಳ್ಳುತ್ತದೆ. ಆದರೆ ಕಾಲಾಂತರದಲ್ಲಿ ಧರ್ಮ ಸಂಬಂಧಿಯಾದ ವೃತಿಯನ್ನು ಅವಲಂಬಿಸಿ ಅವುಗಳಿಂದ ಪಾದರಕ್ಷೆಗಳನ್ನು ನಿರ್ಮಿಸಲು ಪ್ರಾರಂಭಿಸಿದ ಬಳಿಕ ಈ

ಪರಿಕಲ್ಪನೆ ದೂರವಾಗಿ ವೃತಿಪರಿವಾರದ ಸದಸ್ಯರು ಮಾತ್ರ ಚಮ್ಮಾರ ಜಾತಿಯವರೆಂದು ಪರಿಗಣಿಸಲ್ಪಟ್ಟ, ಚರ್ಮ, ಮಾಂಸ, ಅಸ್ತಿ, ರಕ್ತಗಳೊಂದಿಗೆ ಅವಲಂಬಿತನಾದವನು ಚಮಾರ ಅರ್ಥಾತ್ ಮಾನವ ಎನ್ನುವಾಗ ಮಾನವ ವಿಕಾಸದ ಹಂತದಲ್ಲಿ ಆದಿಕಾಲದ ಮಾನವರು ಎನ್ನಲಾಗುತ್ತದೆ. ಎಲ್ಲರಂತೆ ಚಮ್ಮಾರರ ಹುಟ್ಟಿನ ವಿಷಯದಲ್ಲೂ ಅನೇಕ ದಂತಕತೆಗಳಿವೆ. ಮಹಾಭಾರತ ಅನುಶಾಸನ ಪರ್ವದಲ್ಲಿ ಚಮ್ಮಾರರ ಹೆಸರಿಗೆ ಸಂಬಂಧಿಸಿದಂತೆ ಚರ್ಮಕಾರ ಚರ್ಮಕೃತ, ಪಾದುಕಾರ, ಪಾದುಕೃತ ಇತ್ಯಾದಿ ಪ್ರಯೋಗಗಳು ಉಪಲಬ್ಧವಾಗುತ್ತವೆ. ಮಹಾಭಾರತದ ಒಂದು ಶ್ಲೋಕದಲ್ಲಿ ಚಮ್ಮಾರರನ್ನು ಚಂವರಾ(ಚಾಮರಾ) ಎಂದು ಉಲ್ಲೇಖಿಸಿದ್ದು ಕಂಡುಬರುತ್ತದೆ.

**ಮೇಕಲಾ ದ್ರವಿಡ ಲಾಟ ಪೌಢಾ: ಕೋನ್ವಶಿರಾಸ್ತಥಾ।**
**ಶೌಡಿಕಾಹರಹಾದರ್ವೀ, ಚಂವರಾಶರ್ವರ್‌ಬರ್ಬರಾ**
**ಕಿರಾತಾಯವನಾಶ್ಚೈವತಾಸ್ತಾ:ಕ್ಷತ್ರಿಯಜಾತಯ:**
**ವೃಷಲತತ್ವಂ ಮನುಪ್ರಾಪ್ತಂ ಬ್ರಾಹ್ಮಣ ದರ್ಶನಾತ್**

ಇದರಲ್ಲಿ "ಚಂವರ"ಶಬ್ದ "ಚಂವರವಂಶ"ದ ಗುರುತು ಮಾತ್ರವಾಗಿದೆ. ಒಂದು ದಂತಕತೆಯ ಪ್ರಕಾರ ದೇವಗಂಧರ್ವರೊಳಗೆ ಚಾಮರಬೀಸುವ ಕೆಲಸದಲ್ಲಿ ನಿಯುಕ್ತಳಾಗಿದ್ದ ದೇವದಾಸಿಯೊಬ್ಬಳಿದ್ದಳು. ಅವಳ ಗರ್ಭಸಂಜಾತರು "ಚಂವರ"ರೆಂದು ಕರೆಯಲ್ಪಟ್ಟರು. ಮುಂದೆ ಅವರೇ ಚಮ್ಮಾರ ಜಾತಿಯೆಂದು ಗುರುತಿಸಲ್ಪಟ್ಟರು. ಕರ್ನಾಟಕದಲ್ಲಿನ ಚಮ್ಮಾರರ ಉಪಜಾತಿಗಳಿವೆ. ಕರ್ನಾಟಕದಲ್ಲಿ ಇವರನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಗಿದೆ. ಇವರಲ್ಲಿ ೨೩ ಉಪ ಜಾತಿಗಳಿವೆ[೨೪]. ಅವುಗಳೆಂದರೆ ೧)ಭಾಂಬೀ ೨)ಭಾಂಭೀ ೩)ಅಸಾದರೂ ೪)ಅಸೋದೀ ೫)ಚಾಮಡಿಯಾ ೬)ಚಮಾರ ೭) ಚಮ್ಮಾರ ೮) ಚಾಮಗಾರ್ ೯)ಹರಲಯಯಾ ೧೦)ಹರಲೀ ೧೧)ಖಲಾಪಾ ೧೨)ಮೋಚಿಗಾರ್ ೧೩)ಮಾದಾರ್ ೧೪)ಮಾದಿಗ ೧೬)ಮೋಚೀ ೧೭)ಮುಚೀ ೧೮) ತೆಲಗು ಮೋಚೀರೆಂಗರ್ ೧೯)ಕಾಮಾಟಿ ಮೋಚೀ ೨೦)ರಾಣೀಗಾರ್ ೨೧)ರೋಹಿದಾಸ್ ೨೨)ರೋಹಿತ್ ೨೩) ಸಮಗಾರ. ಚಮ್ಮಾರ ಜಾತಿಯಲ್ಲಿ ಸಮಗಾರ ಜಾತಿ ಮುಖ್ಯವಾಗಿ ಈ ಭಾಗದಲ್ಲಿ ವಾಸಿಸುತ್ತಿದ್ದಾರೆ. ಈ ಸಮುದಾಯ ತೇರದಾಳ ಪರಿಸರದ ಸುತ್ತ ಮುತ್ತಲಿನ ಪ್ರದೇಶದಲ್ಲಿ ತಮ್ಮದೇ ಆದ ವೃತ್ತಿಯಾದ ಪಾದರಕ್ಷೆಯನ್ನು ತಯಾರಿಸಿ ಮಾರುವ ಕಾರ್ಯದಲ್ಲಿ ನಿರತರಾಗಿದ್ದಾರೆ[೨೫]. ಇವರು ಸಸ್ಯಾಹಾರದೊಂದಿಗೆ ಮಾಂಸಾಹಾರವನ್ನು ಸೇವಿಸುತ್ತಾ, ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ತೊಟ್ಟು ಸಾತ್ವಿಕವಾಗಿ ಜೀವನ ನಡೆಸುತ್ತಿದ್ದಾರೆ.

**ಹಿಂದೂ ಹೊಲೆಯ (ಹೊಲೇರ) ಛಲವಾದಿ ಸಮುದಾಯ**

ಈ ಸಮುದಾಯದವರನ್ನು ಕರ್ನಾಟಕದಲ್ಲಿ ಎಸ್.ಸಿ.ಛಲವಾದಿ ಮತ್ತು ಆದಿ ದ್ರಾವಿಡರೆಂದು ಕರೆಯುತ್ತಾರೆ, (ಬಲಗೈ) ಅಸ್ಪೃಶ್ಯರೆಂದು ಗುರುತಿಸಲಾಗಿರುವ ಈ ಜಾತಿಯವರು ಹಿಂದಿನಿಂದಲೂ ಸಂಪ್ರದಾಯಕ್ಕೆ ಕಟ್ಟುಬಿದ್ದು ಮೇಲ್ವರ್ಗದವರ ಸೇವೆಯನ್ನು ಮಾಡುತ್ತಾ ಬಂದಿದ್ದಾರೆ. ಇವರಲ್ಲಿ ಹಿಂದೂ ಸಂಪ್ರದಾಯದಂತೆ ಕನ್ಯಾದಾನ ವಾಗ್ದಾನ ನಡೆದು ವಿವಾಹದಲ್ಲಿ ಮಾಂಗಲ್ಯ ಧಾರಣೆ ನಡೆಯುತ್ತದೆ. ಇವರು ಆಗಿ ಹುಣ್ಣಿಮೆಗೆ ಯಲ್ಲಮ್ಮನ ಜಾತ್ರೆ ಮಾಡುವರು. ಆಗ ಬೆಂಕಿ ಕೊಂಡದಲ್ಲಿ ಸ್ವಾಮಿಗಳು ನಡೆಯುವರು. ಯುಗಾದಿಯ ಚೈತ್ರಮಾಸದ ಮೊದಲನೇ

ದಿನ ಒಬ್ಬರಿಗೊಬ್ಬರು ಬೇವು ಬೆಲ್ಲ ತಿನ್ನುವ ಸಂಪ್ರದಾಯವಿದೆ. ನಾಗರ ಪಂಚಮಿಯ ದಿವಸ ಹಾವಿನ ಹುತ್ತಕ್ಕೆ ಹಾಲು ಹಾಕುವರು. ಎಳ್ಳ ಅಮಾವಾಸ್ಯೆಯ ದಿವಸ ಮನೆಯ ಸದಸ್ಯರು ಹೋಲಗಳಿಗೆ ಹೋಗಿ ಅಲ್ಲಿ ಸೀಮಿಯ ಕಟ್ಟೆಗೆ ಪೂಜೆ ಮಾಡುವರು ಅದಕ್ಕಾಗಿ ಹೋಳಿಗೆ, ಜೋಳದ, ಸಜ್ಜೆಯರೊಟ್ಟಿ ಕಾಯಿಪಲ್ಲೆ ಮಾಡಿಕೊಂಡು ಹೋಗಿ ಇದನ್ನು ಚರಗ ಎಂದು ಕರೆಯುತ್ತಾರೆ. ಕಾರ ಹುಣ್ಣಿಮೆಗೆ ಮಣ್ಣಿನ ಆಕಳು, ದನಗಳಿಗೆ ಅಲಂಕಾರ ಮಾಡಿ ಅವುಗಳಿಗೆ ಆರತಿ ಮಾಡಿ ಪೂಜಿಸುವರು ಇದನ್ನು 'ಕರಿದಿನ' ಎಂತಲೂ ಕರೆಯುವರು. ಅಲ್ಲದೇ ಅಂಬೇಡ್ಕರ ಜನ್ಮದಿನ ಏಪ್ರಿಲ್ ೧೪ನ್ನು ಮತ್ತು ಅವರ ಮರಣದ ನೆನಪಿಗಾಗಿ ಡಿಸೆಂಬರ್ ೬ರನ್ನು ವಿಶೇಷವಾಗಿ ಆಚರಿಸುತ್ತಾರೆ. ಅಂದು ಸಮಾಜದ ಸದಸ್ಯರು ಭಕ್ತಿ ಮತ್ತು ಶ್ರದ್ದೆಯಿಂದ ಅಂಬೇಡ್ಕರವರಿಗೆ ಮೂರ್ತಿಗೆ ಹೂವಿನ ಹಾರ ಹಾಕಿ ಅವರ ಭಾವಚಿತ್ರವನ್ನು ಮೆರವಣಿಗೆ ಮಾಡಿ ನಂತರ ಅನ್ನಪ್ರಸಾದ ತದನಂತರ ಇತರ ಗಣ್ಯವ್ಯಕ್ತಿಗಳಿಂದ ಉಪನ್ಯಾಸ ಕೂಡಾ ಜರಗುವುದು. ಅಲ್ಲದೇ ಇವರು ಅಂಬೇಡ್ಕರರು ಬೌದ್ಧ ಮತ ಸ್ವೀಕರಿಸಿದ ಪ್ರಯುಕ್ತ ಬೌದ್ಧ ಪೂರ್ಣಿಮೆಯನ್ನು ಶ್ರದ್ದೆಯಿಂದ ಆಚರಿಸುತ್ತಾರೆ. ದಿವಂಗತ ತುಕಾರಾಮ್ ರೋಡ್ಕರ್ ಅವರು ಈ ವರ್ಗದ ಗಣ್ಯವ್ಯಕ್ತಿಗಳಲ್ಲೊಬ್ಬರು. ಇವರು ೧೯ನೇ ವಯಸ್ಸಿನಲ್ಲಿಯೇ ಸೈನ್ಯಕ್ಕೆ ಸೇರ್ಪಡೆಗೊಂಡು ಸುಮಾರು ೨೮ ವರ್ಷಗಳ ಕಾಲ ಸುದೀರ್ಘ ಸೇವೆ ಸಲ್ಲಿಸಿದ್ದಾರೆ. ಮಹಾರ್ ರೆಜ್‌ಮೆಂಟ್ ಆಗಿದ್ದರು. ಇವರಿಗೆ ನಿವೃತ್ತಿ ಸಮಯದಲ್ಲಿ ಹಾನರಿ ಕ್ಯಾಪ್ಟನ್ ಆಗಿ ಪದವಿ ಅಲಂಕರಿಸಿದ್ದರು. ನಿವೃತ್ತಿಯ ನಂತರದಲ್ಲಿ ಸಮಾಜಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. ಇವರು ಸಹ ಸಾಂಪ್ರದಾಯಿಕ ಉಡುಗೆ ತೊಡುಗೆಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

ಈ ಸಮಾಜದಲ್ಲಿ ಸಸ್ಯಾಹಾರ ಮತ್ತು ಮಾಂಸಾಹಾರವನ್ನು ಸೇವಿಸುವುದು ಕಂಡು ಬರುತ್ತದೆ. ಈ ಜಾತಿಯ ಮಹಿಳೆಯರ ಸಾಕ್ಷರತೆ ಪುರುಷರಗಿಂತ ಕಡಿಮೆ ಇದೆ. ಹೆಚ್ಚಾಗಿ ಜನರು ಕಟ್ಟಡ ಕಾರ್ಮಿಕರು, ಹೊಲಗಳಲ್ಲಿ, ಅಂಗಡಿಗಳಲ್ಲಿ ದುಡಿಯುತ್ತಾರೆ. ಕೆಲವರು ಸರ್ಕಾರಿ ನೌಕರಿಯಲ್ಲಿದ್ದಾರೆ. ಮೊದಲು ಇವರಲ್ಲಿದ್ದ ದೇವದಾಸಿ ಪದ್ದತಿ (ಕೆಲವು ಯುವತಿಯರನ್ನು ದೇವರ ಸೇವೆಗಾಗಿ ಬಿಡುತಿದ್ದರು. ಅದು ಸವದತ್ತಿಯಲ್ಲಿ ಬಳೆ ಒಡೆದು ಆಚರಿಸುತಿದ್ದರು) ಇಂದಿನ ದಿನಗಳಲ್ಲಿ ಎಚ್.ಐ.ವ್ಹಿ/ಏಡ್ಸ್ ಸೋಂಕಿನಿಂದ ದೇವದಾಸಿ ಪದ್ದತಿ ಅಥವಾ ವೇಶ್ಯಾವೃತ್ತಿ ತೀರಾ ಕಡಿಮೆ ಆಗಿದೆ. ಹಣಕ್ಕಾಗಿ ಬಡತನದಿಂದ ದೇಹಮಾರಿಕೊಳ್ಳುವ ಪದ್ದತಿ ಈಗ ಮಾಯವಾಗಿದೆ. ತೇರದಾಳ ಪರಿಸರದಲ್ಲಿ ಬರುವ ಈ ಹರಿಜನ ವರ್ಗದವರು ಕೊಕಟನೂರ ಯಲ್ಲಮ್ಮ, ಸವದತ್ತಿ ಯಲ್ಲಮ್ಮ, ಭೂದ್ಯಾಳ ಯಲ್ಲಮ್ಮ ಮತ್ತು ಪರಸಗಡದ ರಾಮನ ಮೇಲೆ ನಂಬಿಕೆಯುಳ್ಳವರಾಗಿದ್ದಾರೆ[೨೬].

**ಮೇದಾರ ಸಮುದಾಯ**

ಈ ಸಮಾಜವು ಆದಿ ಅನಾದಿ ಕಾಲದಿಂದ ನಡೆದು ಬಂದ ಒಂದು ಸಮಾಜವಾಗಿದೆ. ಇವರಲ್ಲಿ ಕೆಲ ಉಪಪಂಗಡಗಳಿವೆ. ಕರ ಕುಶಲ/ ಗುಡಿ ಕೈಗಾರಿಕೆಯ ಉದ್ಯೋಗವಾಗಿರುವ ಇದನ್ನು ನಂಬಿ ಜನರು ತಮ್ಮ ಉಪ-ಜೀವನ ನಡೆಸುತ್ತಿದ್ದಾರೆ. ಅಂದರೆ ದುಡಿಮೆಯೆ ದುಡ್ಡಿನ ತಾಯಿ ಯಾರು ಶ್ರಮ ವಹಿಸಿ ದುಡಿಯುತ್ತಾರೆ ಅವರಿಗೆ ತಾಯಿ ದುಡ್ಡು ಕೊಟ್ಟೆ ಕೊಡುತ್ತಾಳೆ. "ಕೈ ಕೆಸರಾದರೆ ಬಾಯಿ ಮೊಸರು" ಎಂಬಂತೆ ಈ ಉದ್ಯೋಗವನ್ನು ನಡೆಸಿಕೊಂಡು ಹೊರಟ್ಟಿದ್ದಾರೆ. ಈ ಸಮಾಜವು ಇಲ್ಲಿ ಬಹಳ ಚಿಕ್ಕ ಸಮಾಜ ಇಲ್ಲಿ ಕೇವಲ ತೇರದಾಳ ಹೋಬಳಿಯಲ್ಲಿ ೫%

ಮನೆತನದವರು ಮಾತ್ರ ಇವೆ. ಇಲ್ಲಿ ಈ ಕುಂಟುಬದವರು ಈ ಮೇದಾರ ಉದ್ಯೋಗವನ್ನು ಅಂದರೆ ಈ ಗುಡಿ ಕೈಗಾರಿಕೆಯಲ್ಲಿ ತಮ್ಮ ಉಪ ಜೀವನ ನಡೆಸಿಕೊಂಡು ಹೋಗುತ್ತಿದ್ದಾರೆ. ಇದರಲ್ಲಿ ಯಾರು ಶ್ರಮವಹಿಸಿ ದುಡಿಯುತ್ತಾರೆ ಅವರಿಗೆ ಪ್ರತಿಪಲ ಲಭಿಸುತ್ತದೆ. ಇವರಲ್ಲಿ ೫% ರಷ್ಟು ಮೇದಾರ ಉದ್ಯೋಗವನ್ನು ಬಿಟ್ಟು ಬೇರೆ ಯಾವುದೇ ತರಹದ ಉದ್ಯೋಗವನ್ನು ಮಾಡುವುದಿಲ್ಲ (ಬರುವುದಿಲ್ಲ) ಈ ಮೇದಾರ ಜನಾಂಗದವರು ಬೇರೆ ಊರಿನಿಂದ ಬಿದಿರುಗಳನ್ನು ತಂದು ಅದನ್ನು ಸರಿಯಾಗಿ ಸಿಳಿ(ಭಾಗ)ಮಾಡಿ ಆದರಿಂದ ಬುಟ್ಟಿ, ಮೋರ, ಚಿಬಲಗಿ, ಮದುವೆಯ ಬುಟ್ಟ, ಬೀಸಣಿಕೆ, ಜಗ(ದೇವರ ಜಗ) ಹಾವಿನ ಬುಟ್ಟಿ ಹೂವಿನ ಬುಟ್ಟಿ ಹೀಗೆ ನಾನಾ ತರಹದ ಸ್ಟ್ಯಾಂಡ್ ಬುಟ್ಟಿ ಹೀಗೆ ವಿಧ ವಿಧವಾದ ಬುಟ್ಟಿಗಳನ್ನು ತಯಾರು ಮಾಡುತ್ತ ತಮ್ಮ ಜೀವನ ಸಾಗಿಸುತ್ತಿದ್ದಾರೆ. ಆದರೆ ಇವರ ದುಡಿಮೆಗೆ ಸರಿಯಾದ ಫಲ ದೊರೆಯುವುದಿಲ್ಲ. ಆದರು ಇವರಲ್ಲಿ ಹೆಚ್ಚಾಗಿ ವಿದ್ಯೆಗೆ ಹೆಚ್ಚಿನ ಗಮನವನ್ನು ನೀಡದೆ, ತಮ್ಮ ಮೂಲ ಕಸುಬಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಾರೆ. ನಮ್ಮ ಈ ಸಮಾಜದವರು ಒಂದು ದಿನಕ್ಕೆ ಒಂದು ಬಿದಿರನ್ನು ಒಡೆದು (ಸೀಳಿ) ಅದರಲ್ಲಿ ಒಂದು ದಿನಕ್ಕೆ ೧೦ ಬುಟ್ಟಿಗಳನ್ನು ಮಾಡಿ ಅವುಗಳನ್ನು ಮಾರಾಟ ಮಾಡಿಕೊಂದು ಬಂದ ನಂತರವೆ ಊಟದ ತಯಾರಿ ನಡೆಯುತ್ತದೆ, ಇಲ್ಲದಿದ್ದರೆ ಇಲ್ಲ. ಅಂದರೆ ಈಗ ಈ ಬಿದಿರಿನಿಂದ ಮಾಡಿದ ಬುಟ್ಟಿಗಳ ಬೇಡಿಕೆ ಕಡಿಮೆ ಆಗಿದೆ[೨೭].

ಈ ಸಮುದಾಯದ ಸ್ತ್ರೀಯರು ಮತ್ತು ಪುರುಷರು ಇತರೆ ಸಮುದಾಯಗಳ ಜನತೆ ತೊಡುವ ಉಡುಗೆ ತೊಡುಗೆಗಳನ್ನೇ ಅನುಸರಿಸಿದ್ದಾರೆ. ಬೇರೆ ಯಾವುದೇ ವ್ಯತ್ಯಾಸ ಇರುವುದಿಲ್ಲ. ಆಹಾರ ಪದ್ಧತಿಯೂ ಸಹ ಸಸ್ಯಾಹಾರಿಗಳಾಗಿದ್ದಾರೆ.

**ಮುಸ್ಲಿಂ ಸಮುದಾಯ**

ಮುಸ್ಲಿಂ ಧರ್ಮವು ಅನ್ಯ ಧರ್ಮಗಳಿಗಿಂತ ಭಿನ್ನವಾದ ಸಂಸ್ಕೃತಿ ಮತ್ತು ಆಚಾರ-ವಿಚಾರಗಳನ್ನು ಒಳಗೊಂಡಿದೆ. ಇದು ಹಲವಾರು ನೈತಿಕ ನಿಯಮಗಳು ರೂಢಿ ಸಂಪ್ರದಾಯಗಳನ್ನು ಒಳಗೊಂಡಿದೆ. ಇದರಲ್ಲಿ ಸುನ್ನಿ ಶೇಖ್, ಶಿಯಾ ಎನ್ನುವ ಪಂಗಂಡಗಳನ್ನು ಒಳಗೊಂಡಿದೆ. ಇದು ಪುರಾತನ ಕಾಲದಿಂದ ಬಂದಿದ್ದು ಇದನ್ನು ಮೊಟ್ಟ ಮೊದಲ ಬಾರಿಗೆ ಪ್ರವಾದಿ ಮಹಮ್ಮದ್ ಫೈಗಂಬರ್‌ರವರು ಇವುಗಳನ್ನು ಆಚರಣೆಗೆ ತಂದರು. ಅವರ ತತ್ವ ಮತ್ತು ಬೋಧನೆಗಳು ತನ್ನದೆಯಾದ ಮುಸ್ಲಿಂ ಸಮುದಾಯದಲ್ಲಿ ಮಹತ್ವವನ್ನು ಪಡೆದು ಕೊಂಡಿದೆ. ಮುಸ್ಲಿಂ ಜನಾಂಗವು ಕಡಿಮೆ ಜನಸಂಖ್ಯೆಯನ್ನು ಹೊಂದಿದ್ದು ಆದ ಕಾರಣ ಇದನ್ನು "ಅಲ್ಪಸಂಖ್ಯಾತರ ಸಮೂಹ" ಎಂದು ಕರೆಯಲಾಗಿದೆ. ಬಟ್ಟೆ ಮತ್ತು ಇತರೆ ದೊಡ್ಡ ವ್ಯಾಪಾರ, ಗ್ಯಾರೇಜ್, ಗುಜರಿ, ಚರ್ಮದ ವ್ಯಾಪಾರಗಳನ್ನು ಇವರು ಹೆಚ್ಚಾಗಿ ಮಾಡುತ್ತಿದ್ದು, ಕೃಷಿಯನ್ನು ಕಡಿಮೆ ಜನರು ಅವಲಂಬಿಸಿದ್ದಾರೆ. ಇತರೆಡೆಯಂತೆ ತೇರದಾಳ ಭಾಗದ ಮುಸ್ಲಿಂರು ಇಂದು ರಂಜಾನ್, ಬಕ್ರೀದ್, ಮೊಹರಂ, ಈದ್‌ಮೀಲಾದ್ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಅಲ್ಲದೇ ಅವರು ಪ್ರಮುಖವಾಗಿ ಅಲ್ಲಾನನ್ನು ಏಕದೇವತಾರಾಧನೆಯನ್ನು ಮಾಡುತ್ತಾರೆ. ದಿನಕ್ಕೆ ಐದು ಬಾರಿ ನಮಾಜವನ್ನು ಮಾಡಿ ದೇವರಲ್ಲಿ ಪ್ರಾರ್ಥಿಸುತ್ತಾರೆ. ಮುಸ್ಲಿಂ ಸಮುದಾಯದವರು ಮೂರ್ತಿ ಪೂಜೆಯನ್ನು ನಂಬುವುದಿಲ್ಲ.

ಕುರಾನ್ ಮುಸ್ಲಿಂರ ಪವಿತ್ರವಾದ ಗ್ರಂಥವಾಗಿದೆ. ದಿನನಿತ್ಯ ಇದನ್ನು ಓದಬೇಕೆಂಬುವುದು ಮುಸ್ಲಿಂ ಸಮುದಾಯದಲ್ಲಿ ಕಡ್ಡಾಯ. ಇದರಿಂದ ಮನೆಯಲ್ಲಿರುವ ತೊಂದರೆ ದೂರವಾಗುತ್ತವೆ ಮತ್ತು ಇದನ್ನು ಓದುವುದರಿಂದ ಮನಸ್ಸಿಗೆ ನೆಮ್ಮದಿ ನೀಡುತ್ತದೆ ಎಂದು ಅವರು ನಂಬಿದ್ದಾರೆ. ಮುಸ್ಲಿಂ ಸಮುದಾಯದಲ್ಲಿ ಸೇರಬೇಕೆಂದರೆ ಮೊದಲು 'ಕಲ್ಮಾ'ವನ್ನು ಓದಲೇಬೇಕೆಂಬ ಕಡ್ಡಾಯವಿದೆ. ಕಲಮಾ ಎಂದರೆ "ಲಾ ಇಲಹಾ ಇಲ್ಲಲ್ಲಾಹು ಮಹಮ್ಮದ್ ರಸುಲುಲ್ಲಾಹಿ" ಎಂದರೆ ದೇವರು ಒಬ್ಬನೇ ಅವನೇ ಧರ್ಮಗುರು ಎಂದು. ಇವರು ಕಡ್ಡಾಯವಾಗಿ ರಂಜಾನ್ ತಿಂಗಳಲ್ಲಿ ಉಪವಾಸ ಮಾಡುತ್ತಾರೆ. ಇದನ್ನು ರೋಸಾ/ರೋಜಾ ಎನ್ನಲಾಗುತ್ತಿದ್ದು ಕಡ್ಡಾಯವಾಗಿ ಮಾಡಬೇಕು. ಈ ಆಚರಣೆಯಲ್ಲಿ ೩೦ ದಿನಗಳು ಬರುತ್ತವೆ. ಇದರಲ್ಲಿ ೨೭ನೇ ದಿನದ ರೋಜಾ ಅತೀ ದೊಡ್ಡದು. ಇದನ್ನು (ಸತಾವಿ) ಎನ್ನುವರು. ಇವರ ಜೀವನದಲ್ಲಿ ರೋಜಾ, ನಮಾಜ, ಜಕಾತ್, ಹಜ್, ಕಲ್ಮಾ ಮುಖ್ಯ ಪಾತ್ರ ವಹಿಸುತ್ತವೆ[೨೮].

ಭಾರತದಲ್ಲಿ ಮುಸ್ಲಿಂ ವಿವಾಹವು ಪ್ರಮುಖ ಸ್ಥಾನವನ್ನು ಪಡೆದಿದೆ. ಅದು ತನ್ನದೆ ಆದ ಲಕ್ಷಣಗಳನ್ನು ಮತ್ತು ರೂಪರೇಷಗಳನ್ನು ಒಳಗೊಂಡಿದೆ. ಇದು ಸಮಾಜದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆ. ಇದು ಹಿಂದೂ ವಿವಾಹಕ್ಕಿಂತ ಭಿನ್ನವಾಗಿದೆ. ಇದು ತನ್ನದೆ ಆದ ಸಂಸ್ಕೃತಿ, ಆಚಾರ–ವಿಚಾರ, ರೂಢಿ, ಸಂಪ್ರದಾಯ ಮತ್ತು ನೈತಿಕ ನಿಯಮಗಳನ್ನು ಒಳಗೊಂಡಿದೆ. ನಿಖಾವು ಮುಸ್ಲಿಂರಲ್ಲಿ ಪವಿತ್ರವಾದ ಸಂಸ್ಕಾರವಾಗಿದೆ. ಇಲ್ಲಿ ಮುಸ್ಲಿಂರು ಅಲ್ಲಾಹನನ್ನು ಸಾಕ್ಷಿಯನ್ನಾಗಿ ಇಟ್ಟುಕೊಂಡು ಅವರ ಮೌಲ್ವಿಯ ಪ್ರಕಾರ ನಿಖಾದ ಒಂದು ಕಾರ್ಯವನ್ನು ನಿರ್ವಹಿಸುತ್ತಾರೆ. ಇವರಲ್ಲಿ ವಧುಗಳನ್ನು ಅರಸು ಎಂದು ಕರೆಯುತ್ತಾರೆ ಅಥವಾ ದುಲಹನ್ ಎಂದು ಕರೆಯುತ್ತಾರೆ. ಮಹೇಂದಿ ದಿನವನ್ನು ಮದುವೆಯ ಎರಡು ದಿನದ ಮುಂಚಿತವಾಗಿ ಈ ಒಂದು ಕಾರ್ಯಕ್ರಮವನ್ನು ನಡೆಸಲಾಗುತ್ತದೆ. ಹಲದಿ (ಅರಿಶಿಣ), ಬಳೆ ಉಡುಗೆ ತೊಡುಗೆಗಳು, ವಲೀಮಾ ಮುಖ್ಯವಾಗಿವೆ. ಮುಸ್ಲಿಂರಲ್ಲಿ ಒಂದು ಮಗು ಜನನವಾದರೆ ಅವನು ಹುಟ್ಟಿನಿಂದ ಸಾಯುವವರೆಗೂ ಕೆಲವು ವಿಧಿ–ವಿಧಾನಗಳನ್ನು ಒಳಗೊಂಡಿರುತ್ತಾನೆ. ಹೆರಿಗೆಯಾದ ತಕ್ಷಣ ಅದು ಹೆಣ್ಣು ಇರಲಿ ಅಥವಾ ಗಂಡು ಇರಲಿ ಆಸ್ಪತ್ರೆಗೆ ಮೌಲ್ವಿಯನ್ನು ಕರೆಸಲಾಗುತ್ತದೆ. ಮೌಲ್ವಿಯಾದವನು ಏಕೈಕ ಅಲ್ಲಾವನ್ನು ಮನದಲ್ಲಿ ಇಟ್ಟುಕೊಂಡು ಐದು ದೇವರ ಹೆಸರುಗಳನ್ನು ಮಗುವಿನ ಕಿವಿಯಲ್ಲಿ ಹೇಳುತ್ತಾರೆ. ಅದಕ್ಕೆ ಈ ಕಾರ್ಯವನ್ನು "ಬಾಂಗ್ ನಮಾಜ" ಕರೆಯುತ್ತಾರೆ. ಜಡೆಯನ್ನು ಕಾರ್ಯವನ್ನು ಸಹೋದರ ಮಾವ(ಮಾಮು)ನಿಂದ ಮಾಡಲಾಗುತ್ತದೆ ಇದು ಮೂರು ತಿಂಗಳಿಗೆ, ಐದು ತಿಂಗಳಿಗೆ ಅಥವಾ ಒಂಬತ್ತು ತಿಂಗಳಿಗೆ ಮಾಡಬಹುದು. ಅದು ಮನೆಯ ದೇವರಿಗೆ ಹೋಗಿ ಜಡೆಯನ್ನು ತೆಗೆಸಲಾಗುತ್ತದೆ. ಅದೇ ಮರಣದಲ್ಲಿಯೂ ಹಲವು ವಿಧಾನಗಳನ್ನು ಅನುಸರಿಸುತ್ತಾರೆ. ಈ ಸಮುದಾಯದ ಸ್ತ್ರೀಯರು ಸೀರೆ ಮತ್ತು ಕುಬಸವನ್ನು ಧರಿಸುವುದರೊಂದಿಗೆ ಬುರ್ಖಾ ಪದ್ಧತಿ ರೂಢಿಯಲ್ಲಿದೆ. ಈ ಸಮಾಜದಲ್ಲಿ ಸಸ್ಯಾಹಾರ ಮತ್ತು ಮಾಂಸಾಹಾರವನ್ನು ಸೇವಿಸುವುದು ಕಂಡು ಬರುತ್ತದೆ. ಮಾಂಸಾಹಾರದಲ್ಲಿ ಇವರಿಗೆ ಬಿರಿಯಾನಿ ಹೆಚ್ಚು ಪ್ರಿಯವಾದ ಆಹಾರ.

**ಕ್ರೈಸ್ತ ಸಮುದಾಯ**

ತೇರದಾಳ ಸುತ್ತಮುತ್ತಲ ಕೆಲ ಗ್ರಾಮಗಳಲ್ಲಿ ನೆಲೆಸಿರುವ ಈ ಸಮುದಾಯದಲ್ಲಿ ಕ್ಯಾಥೋಲಿಕ್ ಮತ್ತು ಪ್ರಾಟಿಸ್ಟೆಂಟ್ ಎನ್ನುವ ಪಂಗಡಗಳಿವೆ. ಯೂರೋಪ್ ಮೂಲದ ಈ

ಧರ್ಮಕ್ಕೆ ಇಂದು ಈ ಭಾಗದಲ್ಲಿ ಕೆಳ ಜಾತಿಗಳಾದ ಇತ್ಯಾದಿಯವರು ಮತಾಂತರವಾಗಿದ್ದಾರೆ. ಯೇಸುವನ್ನು ಜಗದೊಡೆಯ ಎಂದು ಭಾವಿಸಿ ಆರಾಧಿಸಲಾಗುತ್ತದೆ. ಶುಭ ಶುಕ್ರವಾರ ಮತ್ತು ಕ್ರಿಸ್ತನ (ಕ್ರಿಸ್‌ಮಸ್)ಜನನವನ್ನು ವಿಶೇಷವಾಗಿ ಆಚರಿಸುತ್ತಾರೆ. ಇವರಲ್ಲಿ ಮೂಲ ಕ್ರಿಶ್ಚಿಯನ್ನರು ತಮ್ಮದೇ ಆದ ರೀತು ರಿವಾಜುಗಳನ್ನು ಹೊಂದಿದ್ದಾರೆ. ಇವರ ಸಂಖ್ಯೆ ಶೇ.೧೦%ರಷ್ಟಿದೆ. ಎಲ್ಲರಂತೆ ಇವರು ಸಾಮಾನ್ಯ ಉಡುಗೆ-ತೊಡುಗೆ ಮತ್ತು ಅಹಾರ ಪದ್ಧತಿಯನ್ನು ಹೊಂದಿದ್ದಾರೆ.

ಈ ಮೇಲಿನ ಜಾತಿಗಳಲ್ಲದೆ ಬೋವಿ, ವಡ್ಡರ, ಮಡಿವಾಳ, ಬಡಿಗಿ, ಅಕ್ಕಸಾಲಿ, ಕಮ್ಮಾರ, ಜಾಡರು (ನೇಯಕಾರರ) ಇನ್ನು ಮೊದಲಾದ ಸಮುದಾಯದವರು ಈ ತೇರದಾಳ ಪರಿಸರದಲ್ಲಿ ನೆಲೆಸಿದ್ದು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿದ್ದಾರೆ. ಅಲ್ಲದೇ ಮೇಲಿನ ಸಮುದಾಯದ ಕೆಲವು ಸಮಾನ ಲಕ್ಷ್ಮಣಗಳನ್ನು ಹೊಂದಿದ್ದಾರೆ.

### ೩.೩. ನಂಬಿಕೆ-ಸಂಪ್ರದಾಯ ಮತ್ತು ಆಚರಣೆಗಳು

ಮಾನವ ತನ್ನ ನಿತ್ಯದ ಬದುಕು ಸುಗಮವಾಗಿರಲಿ ಎಂಬ ಸದಾಶಯದಿಂದ ಕೆಲ ವ್ಯಕ್ತಿ, ವಿಷಯ ಮತ್ತು ದೈವ, ವಸ್ತುಗಳ ಮೇಲೆ ಸದಾಪ್ರಿಯವನ್ನಿಟ್ಟುಕೊಂಡಿದ್ದು ಅವುಗಳ ಸುತ್ತ ಹಲವು ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ಕಟ್ಟಿಕೊಂಡಿದ್ದಾನೆ. ಇವೆಲ್ಲವೂ ನನ್ನ ಒಳಿತಗಾಗಿ ಎಂದು ಅವನು ನಂಬಿದ್ದಾನೆ. ಮಾನವ ಶಿಲಾಯುಗದ ಸಂದರ್ಭದಲ್ಲಿ ಬದುಕಿಗಾಗಿ ನಿರಂತರವಾಗಿ ಪ್ರಕೃತಿಯೊಡನೆ ಸೆಣಸಾಡಬೇಕಿತ್ತು. ಆಹಾರಕ್ಕಾಗಿ ಅಲೆದಾಡುವಾಗ ಪ್ರಾಣಿಗಳನ್ನು ಎದುರಿಸುವ ಪರಿಸ್ಥಿತಿ ಅವನು ಸದಾ ಜಾಗರೂಕನಾಗಿರುವಂತೆ ಮಾಡಿತ್ತು. ಅದರ ಜೊತೆಗೆ ಪ್ರಕೃತಿ ಅವನಲ್ಲಿ ಭಯ, ಭೀತಿ ಮತ್ತು ಆಶ್ಚರ್ಯಗಳನ್ನು ಉಂಟುಮಾಡಿತು. ಆದಿ ಕಾಲದ ಮಾನವ ಮಳೆ, ಗುಡುಗು, ಸಿಡಿಲು, ಕಾಡ್ಗಿಚ್ಚುಗಳನ್ನು ನಿಸರ್ಗ ನಿಯಮಗಳು ಎಂಬುದನ್ನರಿಯದ ಕಾರಣ ಅವನಲ್ಲಿ ಅವು ಭೀತಿಯನ್ನು ಮೂಡಿಸಿದವು.

ನಿಸರ್ಗದಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ ಅದ್ಭುತ ಶಕ್ತಿ - ದೇವರು ಇದೆ ಎಂದು ನಂಬಿದನು ಜೊತೆ ಜೊತೆಗೆ ಆ ನಿಸರ್ಗದ ರಹಸ್ಯಗಳನ್ನು ಅರಿಯುವ ಕುತೂಹಲವೂ ಉಂಟಾಯಿತು. ಅವು ಪವಿತ್ರ, ಪೂಜಾರ್ಹ ಎಂಬ ಭಾವನೆಯೂ ಬೆಳೆಯಿತು. ಆ ನಿಸರ್ಗ ಶಕ್ತಿಗಳನ್ನು ಒಲಿಸಿಕೊಳ್ಳಬೇಕಾದರೆ ಅದನ್ನು ಆರಾಧಿಸಬೇಕು ಎಂದು ಮತ್ತು ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂತಹ ಶಕ್ತಿಗಳ ಬೆಂಬಲ, ಆಶೀರ್ವಾದ ಅವಶ್ಯವೆಂದು ಭಾವಿಸಿದ ಕಾರಣ ಆ ಶಕ್ತಿಗೆ ಒಂದು ರೂಪು ನೀಡಿ ಅದನ್ನು ಪ್ರತಿಮೆಯನ್ನಾಗಿಸಿ ಪೂಜಿಸುವ ಪದ್ಧತಿ ಆರಂಭವಾಯಿತು.

ನಮ್ಮ ದೇಶದ ಪ್ರಾಚೀನ ನಾಗರೀಕತೆಯಾದ ಸಿಂಧೂ ಬಯಲಿನ ನಾಗರೀಕತೆಯ (ಇಂಡಸ್ ವ್ಯಾಲಿ ಸಿವಿಲೈಜೇಷನ್) ಜನರು ಇತರೆ ದೇವರುಗಳ ಜೊತೆಗೆ ಮುಖ್ಯವಾಗಿ ಮಾತೃದೇವತೆ (ಮದರ್ ಗಾಡಸ್)ಯನ್ನು ಸಹ ಆರಾಧಿಸುತ್ತಿದ್ದರೆಂದು ಪುರಾತತ್ವ ಶಾಸ್ತ್ರಜ್ಞರಾದ ಶುಭಾಂಗಣಾ ಆತ್ರೇಯವರು ಹೇಳುತ್ತಾರೆ. ಅದಕ್ಕೆ ಅವರು ಅಲ್ಲಿ ದೊರೆತ ಮುದ್ರೆಗಳಲ್ಲಿನ ಚಿತ್ರಗಳನ್ನು ಆಧಾರವಾಗಿಟ್ಟುಕೊಂಡು ವಾದಿಸಿದ್ದಾರೆ[೨೯]. ನಮ್ಮ ಜನಪದರು ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಕೆಲ ನಗರಗಳಲ್ಲಿ ಇಂದಿಗೂ ಶಕ್ತಿ ದೇವತೆಗಳು ಜನರನ್ನು ಸಂರಕ್ಷಿಸುವ ತಾಯಿದೇವರ ಪ್ರತೀಕಗಳೆಂದು ತಿಳಿದು ಅವುಗಳನ್ನು ಮಾರಿ ಅಥವಾ ಮಾರವ್ವ(ಮ್ಮ),

ಮಲಿಯಮ್ಮ(ವ್ವ), ಗಂಗಮ್ಮ, ದುರುಗಮ್ಮ ಇತ್ಯಾದಿ ಹೆಸರುಗಳಿಂದ ಕರೆಯುವುದರ ಜೊತೆಗೆ ಕರಾರುವಕ್ಕಾದ ಆರಾಧನೆಯನ್ನು ಹಿಂದಿನಿಂದಲೂ ಮಾಡುತ್ತಾ ಬಂದಿದ್ದಾರೆ. ಈ ರೀತಿಯ ದೈವದ ಕರಾರುವಕ್ಕಾದ ಆರಾಧನೆಯೇ ಸಂಪ್ರದಾಯ ಮತ್ತು ಆಚರಣೆಗಳ ಹುಟ್ಟಿಗೆ ಮೂಲ ಕಾರಣವಾದವು[೩೦].

ಪ್ರಾಯಶಃ ಇದೇ ಹಿನ್ನೆಲೆಯಲ್ಲಿ ಮನುಷ್ಯ ಹುಟ್ಟಿನಿಂದ ಸಾಯುವವರೆಗೂ ಹಲವು ಆಚರಣೆಗಳನ್ನು ಬೇರೆ, ಬೇರೆ ಕಾರಣ ಹಾಗೂ ನಂಬಿಕೆಗಳ ಹಿನ್ನೆಲೆಯಲ್ಲಿ ಇಂದಿಗೂ ಮುನ್ನಡೆಸುತ್ತಾ ಸಂಸ್ಕೃತಿಯ ಪ್ರಸರಣಕ್ಕೆ ಕಾರಣೀಭೂತನಾಗಿದ್ದಾನೆ.

ಭಾರತ ಸಂಪ್ರದಾಯಗಳ ತವರೂರು. ಇಲ್ಲಿ ನೆಲೆಸಿರುವ ವಿವಿಧ ಜನಪದರು ತಮ್ಮದೇ ಆದ ನಂಬಿಕೆ, ಆಚರಣೆ ಹಾಗೂ ಸಂಪ್ರದಾಯಗಳನ್ನು ಹೊಂದಿದ್ದಾರೆ. ಇವುಗಳ ಮಧ್ಯೆ ಅವಿನಾಭಾವ ಸಂಬಂಧವಿದೆ. ಇಲ್ಲಿ ನೆಲೆಸಿರುವ ವಿವಿಧ ಜನಪದರು ತಮ್ಮದೆ ಆದ ನಂಬಿಕೆ ಮತ್ತು ಆಚರಣೆ ಅಥವಾ ಸಂಪ್ರದಾಯಗಳನ್ನು ತಲೆತಲಾಂತರದಿಂದ ಮಾಡುತ್ತಾ ಬಂದಿದ್ದಾರೆ. ಜನಪದರ ದೃಷ್ಟಿಯಲ್ಲಿ ಇವು ಜೀವನದ ಪ್ರಮುಖ ಭಾಗಗಳಾಗಿವೆ. ಸಂಪ್ರದಾಯದ ತಳಹದಿಯ ಮೇಲೆ ನಂಬಿಕೆ, ನಂಬಿಕೆಯ ತಳಹದಿಯ ಮೇಲೆ ಆಚರಣೆ ನಿಂತಿರುತ್ತದೆ. ಹಬ್ಬಗಳಲ್ಲಿ ಎಡೆ ಇಡುವುದು ಸಂಪ್ರದಾಯ. ಇಟ್ಟ ಎಡೆಯನ್ನು ಹಿರಿಯರು ಬಂದು ಸ್ವೀಕರಿಸುತ್ತಾರೆಂಬುದು ನಂಬಿಕೆ. ಎಡೆಯನ್ನು ಹೇಗೆ ಇಡಬೇಕು, ಯಾವ ವಿಧಾನದಿಂದ, ಯಾರು ಎಡೆ ಇಡಬೇಕು, ಯಾವ್ಯಾವ ಅಡುಗೆಗಳನ್ನು ಎಡೆಗಾಗಿ ಬಳಸಬೇಕು ಎನ್ನುವುದು ಆಚರಣೆ[೩೧].

ಆಚರಣೆಗಳೆಂದರೆ ಆಚರಿಸುವುದು, ಅನುಸರಿಸುವುದು, ಸಂಪ್ರದಾಯದಂತೆ ನಡೆಯುವುದು ಎಂದು ಅರ್ಥೈಸಬಹುದು. ಮನುಷ್ಯನು ಅಗೋಚರವಾದ ದೈವ ಶಕ್ತಿಗಳ ಪ್ರತ್ಯರ್ಥವಾಗಿ ನಡೆಸುವ ಮತಾಚಾರಗಳು ಕರ್ಮ ವಿಧಾನಗಳನ್ನು ಆಚರಣೆಗಳೆಂದು ಕರೆಯುವರು. ಆಚರಣೆಗಳನ್ನು ಪರಂಪರಾಗತವಾಗಿ ಮುಂದುವರೆಯಿಸಿಕೊಂಡು ಬಂದಿರುವುದರಿಂದ ಇವುಗಳ ಬಗ್ಗೆ ಬಲವಾದ ನಂಬಿಕೆಗಳು ಇರುತ್ತವೆ. ಈ ರೀತಿಯ ಆಚರಣೆಗಳು ಧಾರ್ಮಿಕ ವಲಯದಲ್ಲಿರುತ್ತವೆ. ಅವರ ಸಾಮಾಜಿಕ ಸ್ಥಿತಿಗೆ ಅನುಗುಣವಾಗಿ ನಡೆಯುತ್ತವೆ. ಜಾನಪದೀಯ ಆಚರಣೆಗಳಲ್ಲಿ ಕೆಲವು ಆಚರಣೆಗಳಿಗೆ ಫಲವಂತಿಕೆಯ ಹಿನ್ನೆಲೆ ಇರುತ್ತದೆ ಇಂತಹ ನಂಬಿಕೆಗಳು ಸಹಜವಾಗಿ ಮಾನವನಲ್ಲಿ ಕಂಡುಬರುತ್ತವೆ. ಆಚರಣೆಗಳನ್ನು ಮಾನವನ ಬದುಕಿಗೆ ಮತ್ತು ಆತನ ಬಾಹ್ಯ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳೆಂದು ವಿಭಾಗಿಸಬಹುದು. ದೈವಕ್ಕೆ ಸಂಬಂಧಿಸಿದ ಆಚರಣೆಗಳನ್ನು ಜನಪದರು ದಿನಕ್ಕೆ, ವಾರಕ್ಕೆ, ವಾರ್ಷಿಕ, ದೇವರ ಆರಾಧನೆ ಹಿನ್ನೆಲೆಯಲ್ಲಿ ಆಚರಿಸುತ್ತಾರೆ. ಇಂತಹ ಸಕಲ ಸಿದ್ಧತೆಗಳಿಂದ ಕೂಡಿದ ಹಬ್ಬ-ಹರಿದಿನಗಳು, ತಿಥಿ-ವಾರ ಅನೇಕ ಆಚರಣೆಗಳಿಗೆ ಆಧಾರಗಳಾಗಿವೆ. ಜನಪದರಿಂದ ಚಾಚೂತಪ್ಪದೆ ಆಚರಿಸುವ ಆಚರಣೆಗಳು ಸಂಸ್ಕೃತಿಯ ಪ್ರಸರಣದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇವುಗಳನ್ನು ವಿವಿಧ ಸಮುದಾಯಗಳ ಜನಪದರು ನಿರ್ದಿಷ್ಟ ಕಾಲಗಳಲ್ಲಿ ನಡೆಸುವ ಹಬ್ಬ, ಜಾತ್ರೆ, ಉತ್ಸವ, ಹರಿಕೆ, ಕಾಣಿಕೆ-ಮುಡಪು ಕೂಡುವ ಆಚರಣೆಗಳಲ್ಲಿ ನಾವು ಕಾಣಬಹುದಾಗಿದೆ.

ಆಧುನಿಕ ಯುಗದಲ್ಲಿಯೂ ನಮ್ಮ ನಾಡಿನ ಉದ್ದಗಲಕ್ಕೂ ಧರ್ಮ ಮತ್ತು ಸಂಸ್ಕಾರದ ಹೆಸರಿನಲ್ಲಿ ಹಲವಾರು ಆಚರಣೆಗಳು ನಡೆಯುತ್ತವೆ. ಜನಪದರು ಚಾಚೂತಪ್ಪದೆ ನಡೆಸುವ ಪ್ರತಿ

ಆಚರಣೆಗಳು ಆಯಾ ಸಮುದಾಯಗಳ ನಂಬಿಕೆ ಹಾಗೂ ಅವರ ಸಾಮಾಜಿಕ ಸ್ಥಿತಿಗೆ ಅನುಗುಣವಾಗಿ ನಡೆಯುತ್ತವೆ. ಜಾನಪದೀಯ ಆಚರಣೆಗಳಲ್ಲಿ ಕೆಲವು ಆಚರಣೆಗಳಿಗೆ ಫಲವಂತಿಕೆಯ ಹಿನ್ನೆಲೆ ಪ್ರಧಾನವಾಗಿದ್ದರೆ ಇನ್ನು ಕೆಲವು ಆಚರಣೆಗಳಿಗೆ ವೈಯಕ್ತಿಕ ಹಿತಾಸಕ್ತಿಗಳ ಹಿನ್ನೆಲೆ ಇರುತ್ತದೆ (ಸಾಮಾನ್ಯವಾಗಿ ಸಂಪತ್ತು ಮತ್ತು ಆರೋಗ್ಯ ಸುಧಾರಿಸುತ್ತದೆ ಎನ್ನುವ ಮನುಷ್ಯ ಸಹಜವಾದ ನಂಬಿಕೆಗಳು).

ಮಾನವ ತನ್ನ ಬೆಳವಣಿಗೆಯ ಆರಂಭದ ದಿನಗಳಲ್ಲಿ ನಡೆಸುತ್ತಿದ್ದ ಆಚರಣೆ, ಪದ್ಧತಿಗಳಿಗೆಲ್ಲಾ ಧಾರ್ಮಿಕ ಭಾವನೆಯೇ ಪ್ರೇರಕವಾಗಿತ್ತು. ಬದುಕಿನ ಒಂದು ಭಾಗವಾಗಿ ನಡೆಯುವ ಪ್ರತಿ ಜನಪದೀಯ ಆಚರಣೆಗಳಲ್ಲೂ ಇಂಥ ಧಾರ್ಮಿಕ ಹಿನ್ನೆಲೆಯನ್ನು ಕಾಣುತ್ತೇವೆ. ಮಾನವನ ಮನಸ್ಸು ಪಕ್ವಗೊಂಡಂತೆಲ್ಲ ಧರ್ಮದ ಬಗೆಗಿನ ಭಾವನೆಗಳು ನಾನಾ ರೀತಿಯಾಗಿ ರೂಪುಗೊಂಡವು. ಬಲಿ, ಬೆತ್ತಲ ಸೇವೆಯಂತಹ ಆಚರಣೆಗಳು ಕೆಲ ಸಮುದಾಯಗಳ ಮೌಢ್ಯತೆಯ ಪ್ರತಿಬಿಂಬಗಳಾಗಿದ್ದರೂ ಸಹ ಅವು ಆ ಸಮುದಾಯಗಳ ದೃಷ್ಟಿಯಲ್ಲಿ ಮೌಢ್ಯತೆಯ ಇಲ್ಲವೆ ಕ್ರೌರ್ಯದ ಆಚರಣೆಗಳಾಗಿರದೆ ಅವರ ಕಷ್ಟ ದೂರ ಮಾಡಿಕೊಳ್ಳುವ ಬಹು ವಿಶ್ವಾಸನೀಯ ಮತ್ತು 'ಹರಕೆ'ಯನ್ನು ತೀರಿಸಿಕೊಳ್ಳುವ ಆಚರಣೆಗಳಾಗಿರುವುದು ವಿಪರ್ಯಾಸ.

'ಸಂಸ್ಕೃತಿ'ಯ ಎಲ್ಲೆಯೊಳಗಡೆ ಮಾನವ ಆರಿಸಲ್ಪಡುವ ಆಚರಣೆಗಳನ್ನು ಮಾನವೀಯ ಹಾಗೂ ಅಮಾನವೀಯ ಆಚರಣೆಗಳೆಂದು ವಿಭಾಗಿಸಬಹುದು[೨]. ಇವುಗಳಿಗೆ ದೇವರ ಮೇಲಿನ ನಂಬಿಕೆ, ಭಕ್ತಿ ಹಾಗೂ ಧರ್ಮ ಮೂಲವಾಗಿರುತ್ತದೆ. ಮಾನವ ಕುರಿ, ಕೋಳಿ, ಕೋಣಗಳಂತಹ ಸಾಕು ಪ್ರಾಣಿಗಳನ್ನು ದೇವರಿಗೆ ಬಲಿಕೊಟ್ಟು ತನ್ನ ಕ್ರೌರ್ಯ ಇಲ್ಲವೇ ಅಮಾನವೀಯತೆ ಪ್ರದರ್ಶಿಸುತ್ತಾನೆ. ಮನುಷ್ಯ ತನ್ನ ದಿನನಿತ್ಯದ ಬದುಕಿನಲ್ಲಿ ಆಚರಿಸಲ್ಪಡುವ ಈ ಬಗೆಯ ಆಚರಣೆಗಳು ಮೂಢನಂಬಿಕೆಗಳು ಎನ್ನಿಸಿಕೊಳ್ಳುತ್ತವೆ. ಆದರೆ ಆಚರಣೆಗಳನ್ನು ನಮ್ಮ ಜನಪದರು ಗ್ರಹಿಸುವ ದೃಷ್ಟಿಯೇ ಬೇರೆ. ಅವರ ದೃಷ್ಟಿಯಲ್ಲಿ ಇವು 'ದೈವತ್ವದ ಸಂಕೇತ' ಎಂದು ಭಾವಿಸುತ್ತಾರೆ. ಅದಕ್ಕಾಗಿಯೇ ದೇವರಿಗಾಗಿ ಕೆಲವರು 'ಹರಕೆ' ಕಟ್ಟಿಕೊಳ್ಳುತ್ತಾರೆ.

ಮನುಷ್ಯರಿಗೆ ಜೀವನದಲ್ಲಿ ಅನೇಕ ಕಷ್ಟಗಳು ಬರುತ್ತವೆ. ಆಗ ಜನ ಅವುಗಳನ್ನು ಪರಿಹರಿಸಿಕೊಳ್ಳಲು ಗ್ರಾಮ ದೇವರ ಮೊರೆ ಹೋಗುತ್ತಾರೆ. 'ಹತ್ತು' ಹಲವು ಜನಗಳ ಚುಚ್ಚು ನುಡಿಗೆ ತುತ್ತಾದ ಬಂಜೆಯೊಬ್ಬಳು ತನಗೊಂದು ಕೂಸು ಕೊಟ್ಟರೆ ಸಾಕೆಂದು ಹಾತೊರೆಯುತ್ತಾಳೆ. ಒಂದೇ ಸಮನೆ ಕಾಯಿಲೆಗಳು ಬಂದಾಗ, ಮನೆಯಲ್ಲಿ ಕಷ್ಟವಾದಾಗ, ಯಾವುದೋ ಭೂತದ ಕಾಟ ಎಂದು ಭಾವಿಸುವ ಮುಗ್ಧ ಜನ ಹೆದರಿ ಇಲ್ಲವೇ ಭವಿಷ್ಯದಲ್ಲಿ ಅಪಾಯಗಳು ಬರದಂತೆ ಇರಲಿ ಎಂದು 'ಹರಕೆ' ಕಟ್ಟಿಕೊಳ್ಳುವ ಜನಪದರಿಗೆ ತಮ್ಮ ಹರಕೆ ತೀರಿಸಿಕೊಳ್ಳುವ ಒಂದು ಸುಸಂಧಿ ಎಂದರೆ ಆ ಗ್ರಾಮದಲ್ಲಿ ನಡೆಯುವ ಹಬ್ಬ, ಉತ್ಸವ ಇಲ್ಲವೇ ಗ್ರಾಮ ದೇವತೆಯ ಜಾತ್ರೆಗಳು. ವಿಭಿನ್ನ ಸ್ವರೂಪದ ಆಚರಣೆಗಳನ್ನು ತೇರದಾಳ ಸುತ್ತಲಿನ ಜನರು ತಮ್ಮ ಒಳಿತಿಗಾಗಿ ಹಿಂದಿನಿಂದ ಆಚರಿಸುತ್ತಾ ಬಂದಿದ್ದಾರೆ. ಆಧುನಿಕತೆ ಎಲ್ಲಡೆ ವ್ಯಾಪಿಸುತ್ತಿದ್ದರೂ ಸಾಂಪ್ರದಾಯಿಕ ಆಚರಣೆಗಳು ಕರ್ನಾಟಕದಲ್ಲಿ ಮರೆಯಾಗುತ್ತಿಲ್ಲ. ಇಂತಹ ಆಚರಣೆಗಳೇ ನಮ್ಮನ್ನು ಉನ್ನತಿಯತ್ತ ಕೊಂಡೊಯುವ ಮಾರ್ಗಗಳೆಂದು ನಮ್ಮ ಜನಪದರು ಭಾವಿಸಿರುವುದರಿಂದ ಅವು ನಿರಂತರವಾಗಿ ನಮ್ಮಲ್ಲಿ ನಡೆಯುತ್ತವೆ. ತೇರದಾಳ ಪರಿಸರದ ಜನಪದರು ಹಬ್ಬ-ಜಾತ್ರೆ-ಉತ್ಸವಗಳಿಗೆ ಸಂಬಂಧಿಸಿದಂತೆ ಅನೇಕ ವಿಶಿಷ್ಟ ಆಚರಣೆ ಮತ್ತು ಸಂಪ್ರದಾಯಗಳನ್ನು

ನಡೆಸುತ್ತಾರೆ. ಅಂತವುಗಳಲ್ಲಿ ಕೆಲ ಪ್ರಮುಖ ಜಾನಪದೀಯ ಆಚರಣೆ ಮತ್ತು ಸಂಪ್ರದಾಯಗಳನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ವಿಶ್ಲೇಷಿಸಲಾಗಿದೆ.

**೩.೩.೧. ಹಬ್ಬಗಳು**

ತೇರದಾಳ ಪರಿಸರದಲ್ಲಿ ನೆಲೆಸಿರುವ ಹಿಂದೂ, ಮುಸ್ಲಿಂ, ಕ್ರಿಶ್ಚಯನ, ಜೈನ, ಬೌದ್ಧ ಧರ್ಮಿಯರು ತಮ್ಮ ಸಂತಸಕ್ಕಾಗಿ ಸಂಪ್ರದಾಯದ ಹೆಸರಿನಲ್ಲಿ ಕೆಲವು ಆಚರಣೆಗಳನ್ನು ಹಿಂದಿನಿಂದ ಮಾಡುತ್ತಾ ಬಂದಿದ್ದಾರೆ. ಅವುಗಳಲ್ಲಿ ವಿವಿಧ ಧರ್ಮಿಯರ ಕೆಲ ಮುಖ್ಯ ಆಚರಣೆಗಳನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ವಿಶ್ಲೇಷಿಸಲಾಗಿದೆ.

**ಹಿಂದೂ ಧರ್ಮಿಯರ ಹಬ್ಬಗಳು**

ಭಾರತದ ಮೂಲ ನಿವಾಸಿಗಳು ಎಂದು ಪರಿಗಣಿಸಲ್ಪಟ್ಟಿರುವ ತೇರದಾಳ ಪರಿಸರದಲ್ಲಿ ವಾಸಿಸುವ ಹಿಂದೂಗಳು ಸಂಕ್ರಾಂತಿ, ಶಿವರಾತ್ರಿ, ಹೋಳಿಹುಣ್ಣಿಮೆ, ಯುಗಾದಿ, ಕಾರುಹುಣ್ಣಿಮೆ, ಮಣ್ಣೆತ್ತಿನ ಅಮಾವಾಸ್ಯೆ, ನಾಗರಪಂಚಮಿ, ಗಣೇಶ ಚತುರ್ಥಿ, ಜೋಕುಮಾರಹುಣ್ಣಿಮೆ, ದಸರಾ, ಮೊಹರಂ, ದೀಪಾವಳಿ, ಚರಗ ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಈ ಮುಂದೆ ವಿವರಿಸಲಾಗಿದೆ.

**ಹೋಳಿ/ಕಾಮನ ಹಬ್ಬ**

ತೇರದಾಳ ಪರಿಸರದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ಹೋಳಿ/ಕಾಮನ ಹಬ್ಬವು ಒಂದಾಗಿದೆ. ವಂಸತನಿಗೆ ಸುಖಾಗಮನ ಬಯಸುವ ಹಬ್ಬ, ಹೋಳಿ, ಜೀವನದ ಕಹಿಯನ್ನು ಮರೆತು, ಹಾಸ್ಯ ಫಿನೋದಗಳಿಂದ ಈ ಭಾಗದಲ್ಲಿಯೂ ಜನ ಹೋಳಿ ಆಚರಿಸುತ್ತಾರೆ. ಫಾಲ್ಗುಣ ಮಾಸದ (ಫೆಬ್ರವರಿ–ಮಾರ್ಚ್) ಹುಣ್ಣಿಮೆಯಂದು ಬಯಲು ಜಾಗದಲ್ಲಿ ದೊಡ್ಡ ಬೆಂಕಿಯನ್ನು ಉರಿಸುತ್ತಾರೆ. ಆನಂತರ ಮೂರು ದಿನ ಹೋಳಿ ಹಬ್ಬದ ವಿನೋದಗಳಿಗೆ ಮೀಸಲು. ದಕ್ಷಿಣ ಭಾರತದ ಕಾಮನಹಬ್ಬವೇ ಉತ್ತರ ಭಾರತದ ಹೋಳಿಯಾಗಿದೆ. ಪಿಚಕಾರಿಗಳಲ್ಲಿ ಬಣ್ಣದ ನೀರನ್ನು ತುಂಬಿಕೊಂಡು ಎರಚುವುದರಿಂದ ಬೀದಿಯಲ್ಲಿ ಅಡ್ಡಾಡಿದವರಿಗೆಲ್ಲ ಬಣ್ಣ ಹಚ್ಚೆ ಬೀಳುತ್ತದೆ. ಯಾರೂ ಬೇಡವೆನ್ನುವಂತಿಲ್ಲ. ಬೇಡವೆಂದರೂ ಕೇಳುವವರಿಲ್ಲ. ಬಣ್ಣದ ಒಣಪುಡಿಯನ್ನು ಮುಖ ತಲೆ ಕೈಗಳಿಗೆಲ್ಲ ಬಳೆಯುತ್ತಾರೆ. ಇದು ಉತ್ತರ ದಲ್ಲಿ ನಡೆಯುವ ಹೋಳಿ ಹಬ್ಬದ ವೈಖರಿ. ಬಹಳ ಕಡೆಗಳಲ್ಲಿ ಹೋಳಿ ಹಬ್ಬದ ಮುಖ್ಯ ವ್ಯಕ್ತಿ ಶ್ರೀಕೃಷ್ಣ ವಸಂತೋತ್ಸವದಲ್ಲಿ ಅವನು ರಾಧೆ ಹಾಗೂ ಗೋಪಿಯರೊಡನೆ ಬೃಂದಾವನದಲ್ಲಿ ನರ್ತಿಸುತ್ತಿದ್ದರ ದ್ಯೋತಕವಾಗಿ ಈ ಹಬ್ಬವನ್ನು ಆಚರಿಸುಲಾಗುತ್ತಿದೆ ಎಂದು ಭಾವಿಸಲಾಗಿದೆ. ಅದೇ ರೀತಿ ಶಿವ ಮನ್ಮಥನನ್ನು(ಕಾಮ) ಸಂಹರಿಸಿದರ ಪ್ರತೀಕವಾಗಿ ಆಚರಿಸಲಾಗುತ್ತದೆ ಎಂದು ಸಹ ನಂಬಲಾಗಿದೆ.

ಉತ್ತರ ಪ್ರದೇಶದ ಕೆಲವಡೆ ಹೋಳಿ ಬೆಂಕಿ ಉರಿಸಿ, ಅದರ ಸುತ್ತ ಸ್ತ್ರೀ ಪುರುಷರು "ರಾಸ್" ನರ್ತನದಲ್ಲಿ ಮಗ್ನರಾಗುತ್ತಾರೆ. ಬಂಗಾಳದಲ್ಲಿ ಇದನ್ನು ಡೋಲ್ ಯಾತ್ರಾ ಎಂದು ಕರೆಯುತ್ತಾರೆ. ಜನರಿಗೆ ಪ್ರೇಮ ಕರುಣೆಗಳ ಸಂದೇಶ ನೀಡಿದ ಚೈತನ್ಯದೇವ ಹುಟ್ಟಿದ್ದು ಈ ದಿನದಂದು ಅಲ್ಲಿನವರು ಉಯ್ಯಾಲೆಗಳನ್ನು ಕಟ್ಟಿ ಅವನ್ನು ಹೂವಿನಿಂದ ಅಲಂಕರಿಸುತ್ತಾರೆ. ಒಬ್ಬರಿಗೊಬ್ಬರು ಬಣ್ಣ ಬಳೆದು ಹಬ್ಬ ಆಚರಿಸುತ್ತಾರೆ. ಬುಂದೇಲ್ ಖಂಡ ಪ್ರದೇಶದಲ್ಲಿ ತುದಿಯಲ್ಲಿ ಬೆಲ್ಲ ಕಟ್ಟಿದ, ಎಣ್ಣೆ ಮೆತ್ತಿದ ಬೊಂಬನ್ನು ಏರುವುದು ಯುವಕರಿಗೋದು ಸವಾಲು.

ಉತ್ತರ ಭಾರತದ ಕೆಲವು ಗುಡ್ಡ ಗಾಡಿನವರು ಏಳು ದಿನ ಪಾಂಡವ ನೃತ್ಯ ಆಡುತ್ತಾರೆ. ಒಬ್ಬಳು ದ್ರೌಪದಿ ಐವರು ಪಾಂಡವರು ಕೊನೆಯಲ್ಲಿ ಎಣ್ಣೆಯಲ್ಲಿ ಕರಿಯುತ್ತಿರುವ ತಿಂಡಿಯನ್ನು ದ್ರೌಪದಿ ಕೈಯಿಟ್ಟು ತೆಗೆದು ತಿನ್ನುತ್ತಾಳೆ. ಭೀಮ ಮಣಗಟ್ಟಲೆ ಹಸಿ ತರಕಾರಿಗಳನ್ನೇ ಕಬಳಿಸುತ್ತಾನೆ. ಮಣಿಪುರದಲ್ಲಿ ಯುವಕ ಯುವತಿಯರು ಥಾವಲಾಚೊಂಬ ಎಂಬ ಹೋಳಿ ನೃತ್ಯ ಮಾಡುತ್ತಾರೆ. ಭಿಲ್ ಜನರ ಹಬ್ಬದಲ್ಲಿ ಬಣ್ಣ ಮುಖದ ಮೇಲೆ ಬೀಳದಂತೆ ತಪ್ಪಿಸಿಕೊಳ್ಳುವವರೇ ಸಾಹಸಿಗಳು.

ಇದೇ ಹೋಳಿ ಹಬ್ಬವನ್ನು ದಕ್ಷಿಣಭಾರತದಲ್ಲಿ ಕಾಮನ ಹುಣ್ಣಿಮೆ ಅಥವಾ ಕಾಮನಹಬ್ಬವೆಂದು ಆಚರಿಸುತ್ತಾರೆ. "ಕಾಮನ ಕಟ್ಟಿಗೆ, ಭಿಮನ ಬೆರಣಿ, ಅಡಿಕೆ ಗೋಟು, ಎಕ್ಕಡದೇಟು, ಏನೇನು ಕದ್ದರು? ಸೌದೆ ಬೇರಣಿ ಕದ್ದರು: ಯಾತಕ್ಕೆ ಕದ್ದರು? ಕಾಮನ್ನ ಸುಡೋಕೆ ಕದ್ದರು" ಎಂದು ಹೇಳಿ ಬಾಯಿ ಬಡಿದುಕೊಳ್ಳುವುದು ಕಾಮನ ಹಬ್ಬದ ಒಂದು ಪರಿಚಿತ ನೋಟ. ಕರ್ನಾಟಕದ ಹಲವು ಭಾಗಗಳಲ್ಲಿ ಕಾಮನ ಹುಣ್ಣಿಮೆಯನ್ನು ದೊಡ್ಡ ಹಬ್ಬವಾಗಿ ಆಚರಿಸುತ್ತಾರೆ. ಕೆಲವು ದಿನ ಮುಚಿಂತವಾಗಿಯೇ ಸೌದೆ, ಹಳೆಯ ನಿರುಪಯುಕ್ತ ಮರದ ಸಾಮಾನು, ಬೆರಣಿ ಮುಂತಾದುವನ್ನು ಎಲ್ಲರನ್ನೂ ಬೇಡಿ ಕಾಡಿ ಸಂಗ್ರಹಿಸುತ್ತಾರೆ. ಫಾಲ್ಗುಣ ಮಾಸದ ಪೂರ್ಣಿಮೆಯೇ ಕಾಮನ ಹುಣ್ಣಿಮೆ. ಕಾಮನ ಈ ದಹನ ಸಾಂಕೇತಿಕವೆಂದೂ ಕಾಮಗಳನ್ನು ನಿಯಂತ್ರಣದಲ್ಲಿಡಬೇಕು ಎಂಬುದು ಇದರ ಸಂದೇಶವೆಂದೂ ಹೇಳುತ್ತಾರೆ. ಕಾಮದಹನ ಕಥೆ ಹೀಗಿದೆ,. "ಶಿವ ತಪಸ್ಸು ಮಾಡುತ್ತಿದ್ದ ವೇಳೆ ಲೋಕ ಕಂಟಕನಾದ ತಾರಕಾಸುರನನ್ನು ಸಂಹಾರ ಮಾಡಲು ಶಿವನನ್ನು ಪಾರ್ವತಿಯಲ್ಲಿ ಆಸಕ್ತನನ್ನಾಗಿ ಮಾಡಲು ಕಾಮದೇವ ಪ್ರಯತ್ನಿಸಿ ಶಿವನ ತಪೋಭಂಗ ಮಾಡಿದ. ಶಿವ ಕೋಪಗೊಂಡು ತನ್ನ ಹಣೆಗಣ್ಣಿನಿಂದ ಕಾಮನನ್ನು ದಹಿಸಿದ" ಇದರ ನೆನಪಿನಲ್ಲಿ ಆಚರಿಸುವ ಹಬ್ಬವೇ ಕಾಮನ ಹಬ್ಬವಾಗಿದೆ ಎನ್ನಲಾಗುತ್ತದೆ[೩೩].

ಈ ಹಬ್ಬವನ್ನ ಫಾಲ್ಗುಣಮಾಸದ ಶುದ್ಧ ಬಿದಿಗೆಯಿಂದ ಕೃಷ್ಣ ಪಕ್ಷದ ಹುಣ್ಣಿಮೆಯ ಪಂಚಮಿಯವರೆಗೆ ಆಚರಿಸುತ್ತಾರೆ. ಅಂದು ಕಾಮನ ಮೂರ್ತಿಯನ್ನು ಅಲಂಕರಿಸಿ ಅದರ ಮುಂದೆ ಮನೋರಂಜನೆಯ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಹುಣ್ಣಿಮೆಯ ದಿನ ಕಾಮನದಹನ ನಡೆಯುತ್ತದೆ. ಹೋಳಿಯ ಹಬ್ಬವೂ ಇದೇ ಅವಧಿಯಲ್ಲಿ ನಡೆಯುವ್ವದರಿಂದ ಈ ಎರಡು ಹಬ್ಬಗಳ ಸಂಪ್ರದಾಯಗಳು ಒಳದರಲ್ಲೊಂದು ಬೆರೆತುಹೋಗಿವೆ.

ತೇರದಾಳ ಹೋಳಿ ಹಬ್ಬದ ಮರು ದಿನ ಅಂದರೆ ಕಾಮನನ ದಹನದ ಸಂದರ್ಭದಲ್ಲಿ ಎಲ್ಲ ಪುರುಷರು ನಸುಕಿನ ಜಾವದಲ್ಲಿ ತಾವು ಕದ್ದು ತಂದ ಕುಳ್ಳು, ಕಟ್ಟಿಗೆ ಬೆಂಕಿ ಹಚ್ಚಿ ಹೊಯಿಕೊಳ್ಳುವರು. ಎಲ್ಲರು ಸೇರಿ ನಾನಾ ವಿಧವಾದ ಬಣ್ಣವನ್ನು ಒಬ್ಬರಿಗೊಬ್ಬರು ಹಚ್ಚುತ್ತಾ ಸಂಭ್ರಮವನ್ನು ಪಡುತ್ತಾರೆ. ಇದೇ ವೇಳೆಯಲ್ಲಿ ಯಾರಾದರೂ ಕದ್ದು ಮುಚ್ಚಿ ಮನೆಯಲ್ಲಿ ಕುಳಿತ್ತಿದ್ದರೆ ಇವರಿಗೆ ಗೊತ್ತಾದರೆ ಎಲ್ಲರು ಸೇರಿ ಅವರ ಮನೆ ಮುಂದೆ ನಿಂತು ಬಾಯಿಬಡಿದುಕೊಂಡು ಕೂಗಾಡುತ್ತಾ ಅವರನ್ನು ಹೊರಗೆ ಕರೆದು ಕೊಂಡು ಬಂದು ಅವರಿಗೂ ಬಣ್ಣ ಹಚ್ಚಿ ಸಂಭ್ರಮಿಸುತ್ತಾರೆ. ಹೀಗೆ ಊರೆಲ್ಲ ಸುತ್ತುಹಾಕುತ್ತಾರೆ. ನಂತರ ಮಧ್ಯಾಹ್ನವಾದಂತೆ ಕಲ್ಲಟ್ಟಿ ಭಾಗದಲ್ಲಿ ಗುಗ್ಗಳ ಕಾರ್ಯವನ್ನು ನೆರವೇರಿಸುತ್ತಾರೆ. ಈ ಸಮಯದಲ್ಲಿ ಗುಗ್ಗಳಕ್ಕೆ ಬೇಕಾದ ಮಡಿಕೆಯನ್ನು ಕುಂಬಾರ ಮನೆಯಿಂದ, ಬಿದಿರನ್ನು ಮ್ಯಾದಾರ ಮನೆಯಿಂದ, ಬಣ್ಣದ

ಪರಪರೆಯನ್ನು ಮಾರುಕಟ್ಟೆಯಿಂದ ತಂದು ಗುಗ್ಗಳವನ್ನು ಶೃಂಗರಿಸಿ ಇಬ್ಬರು ಯುವಕರು ಅದರಲ್ಲಿ ಒಬ್ಬರು ಪುರುಷ ವೇಷನ್ನೂ ಇನ್ನೊಬರು ಸ್ತ್ರೀ ವೇಷವನ್ನು ಧರಿಸಿ ಸಂಪ್ರದಾಯದತೆ ಕೈಯಲ್ಲಿ ಆರತಿಯನ್ನು ಹಿಡಿದುಕೊಂಡು ೧) ಮಾದೇವ ಪರಪ್ಪ ಖವಾಸಿ ೨) ಪರಪ್ಪ ಮಾದೇವ ಮಂಗಸೂಳಿ ೩) ನಾಗಪ್ಪ ಮಾದೇವ ಹಿಕಡಿ ಇವರ ಮನೆಯಿಂದ ಎಣ್ಣೆ ಹಾಗೂ ಒಣಕಿಯನ್ನು ತಂದು, ಎಣ್ಣೆಯನ್ನು ಗುಗ್ಗಳಕ್ಕೆ ಹಾಕಿ ಒಣಕಿಯನ್ನು ಹಿಡಿದು ಮುಂದೆ ಸಾಗುತ್ತಾರೆ. ಪ್ರಥಮದಲ್ಲಿ ಕಲ್ಲಟ್ಟಿಯಲ್ಲಿ ವಡಪುಗಳನ್ನು ಹೇಳಿ, ಎರಡನೇ ಹಂತದಲ್ಲಿ ಹನುಮಂತದೇವರ ಮುಂದೆ ಒಡುಪುಗಳನ್ನು ಹೇಳಿ, ಮೂರನೇ ಹಂತದಲ್ಲಿ ರಮೇಶ ನಾಗರೆಡ್ಡಿ ಕಾಂಪ್ಲೆಕ್ಸ ಮುಂದೆ ವಡುಪುಗಳನ್ನು ಹೇಳಿ ಮುಂದೆ ಸಾಗಿ, ನಾಲ್ಕನೇ ಹಂತದಲ್ಲಿ ಅಲ್ಲಮ ಪ್ರಭುದೇವರ ಅಗಸಿ ಬಾಗಿಲಿನ ಹತ್ತಿರ ವಡುಪುಗಳನ್ನು ಹೇಳಿ, ಮುಂದೆ ಸಾಗುವ ಸಂದರ್ಭದಲ್ಲಿ ಕೈಯಲ್ಲಿ ಒಣಕಿಯನ್ನು ಹಿಡಿದವರು ಗುಗ್ಗಳವನ್ನು ಒಡೆಯಲು ಮುಂದೆ ಹೋದಾಗ ಅವರನ್ನು ತಡೆದು ಕಣ್ಣಲಿ ಕಾರದ ಪುಡಿಯಲ್ಲಿ ನೀರಿನಲ್ಲಿ ಹಾಕಿ ಅವರನ್ನು ತಡೆದು ಕಣ್ಣಲಿ ಕಾರದ ನೀರನ್ನು ಹಾಕುತ್ತಾರೆ, ಅವನಲಿದ್ದ ಅಹಂಕಾರ ಭಾವನೆ ಕಡಿಮೆಮಾಡುವುದು. ಪುನಃ ನೆರದಿರುವ ಜನಸಮೂಹ ಕಣ್ಣುತೊಳೆದುಕೊಳ್ಳಲು ನೀರನ್ನು ಕೊಡುವರು. ಎಲ್ಲಿಯೂ ಇಲ್ಲದ ಇಂತಹ ಸಂಪ್ರದಾಯವನ್ನು ತೇರದಾಳ ಪರಿಸರದ ಕಲ್ಲಟ್ಟಿಯಲ್ಲಿ ಪ್ರತಿವರ್ಷ ಹಿರಿಯರ ಸಮ್ಮುಖದಲ್ಲಿ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

**ನಾಗರ ಪಂಚಮಿ**

ತೇರದಾಳ ಪರಿಸರದಲ್ಲಿ ಹಿಂದೂಗಳಿಂದ ಆಚರಿಸಲ್ಪಡುವ ಹಬ್ಬಗಳಲ್ಲಿ ಪಂಚಮಿ ಹಬ್ಬವು ಒಂದಾಗಿದೆ. ಈ ಹಬ್ಬವು ನಾಡಿಗೆ ದೊಡ್ಡದು ಎಂದು ಖ್ಯಾತವಾಗಿದೆ. ನಾಗರ ಪಂಚಮಿ ಭಾರತದ ಎಲ್ಲ ಕಡೆಗಳಲ್ಲೂ ನಡೆಯುವ ಹಬ್ಬ, ಶ್ರಾವಣಮಾಸದ ಶುದ್ಧ ಪಂಚಮಿಯಂದು ನಾಗರ ಪಂಚಮಿಯನ್ನು ಆಚರಿಸುತ್ತಾರೆ. ಈ ಹಬ್ಬದ ಆಚರಣೆ ಅಂಗವಾಗಿ ರಂಗೋಲಿ ಹಿಟ್ಟಿನಲ್ಲಿ ಹಾವಿನ ಚಿತ್ರ ಬಿಡಿಸುತ್ತಾರೆ. ಹುತ್ತದ ಮಣ್ಣು, ಗರಿಕೆಹುಲ್ಲು, ಗೋಧಿ ಹಿಟ್ಟುನ್ನು ಕಲೆಸಿ ಹಾಲು, ತುಪ್ಪ, ಬಾಳೆಹಣ್ಣು, ಆರ್ಪಿಸುತ್ತಾರೆ. ಕೆಲವರು ಹುತ್ತಕ್ಕೆ, ನಾಗರಕಲ್ಲಿಗೆ ಪೂಜೆ ಮಾಡುತ್ತಾರೆ. ನಾಗರ ಪಂಚಮಿಯನ್ನು ಕನ್ನಡ ನಾಡಿನಲ್ಲಿ ವ್ಯಾಪಕವಾಗಿ ಆಚರಿಸುತ್ತಾರೆ. ಆದರಲ್ಲೂ ಉತ್ತರ ಕರ್ನಾಟಕದಲ್ಲಿ ಇದು ದೊಡ್ಡ ಹಬ್ಬ. ಗಂಡನ ಮನೆಯಲ್ಲಿರುವ ಹೆಣ್ಣು ಮಕ್ಕಳನ್ನು ತವರುಮನೆಗೆ ಕರೆಸಿಕೊಂಡು ಅವರನ್ನು ಆಧರಿಸಿ ಉಡುಗೊರೆ ಕೊಡುತ್ತಾರೆ. ಪಂಜಾಬಿನಲ್ಲಿ ಮನೆಯ ಗೋಡೆಯ ಮೇಲೆ ಕಪ್ಪು ಚಿತ್ರ ಬರೆಯುತ್ತಾರೆ. ಅದು ಸರ್ಪದೇವತೆಯ ಸೂಚಕ. ಇದರಿಂದ ಮನೆಗೆ ಸರ್ಪದ ಪೀಡೆ ಇರುವದಿಲ್ಲ ಎಂದು ನಂಬುಗೆ.

ಉತ್ತರ ಪ್ರದೇಶದಲ್ಲಿ ಹಬ್ಬಕ್ಕೆ ಏಳು ದಿನ ಮುಂಚಿತವಾಗಿ ನೀರಿನಲ್ಲಿ ಗೋಧಿ, ಬೇಳೆ, ದ್ವಿದಳ ಧಾನ್ಯ ನೆನೆಹಾಕುತ್ತಾರೆ. ಮನೆಯ ಗೋಡೆಯ ಮೇಲೆ ಬಣ್ಣದಲ್ಲಿ ಸರ್ಪದ ಆಕಾರವನ್ನು ಹೊಸೆದು ಬೇಳೆ ನೆನೆಸಿರುವ ನೀರಿನಲ್ಲಿ ಅದ್ದಿ ಸಿಹಿ ತಿಂಡಿಯೊಂದಿಗೆ ಹಾಗೆ ಕೊಡುತ್ತಾರೆ. ಮಹಾರಾಷ್ಟ್ರದಲ್ಲಿ ಹುತ್ತಕ್ಕೆ ಹಾಲು ಸುರಿಸುತ್ತಾರೆ. ಅಕ್ಕಿ ಹಾಕುತ್ತಾರೆ. ಹಾವು ಗಣಪತಿಯ ಹೊಟ್ಟೆಗೆ ಪಟ್ಟಿಯಾಗಿ, ಶಿವನ ಆಭರಣವಾಗಿ, "ವಿಷ್ಣು"ನ ಹಾಸಿಗೆಯಾಗಿ ಹಾಗೂ ದುರ್ಯೋಧನನ ಧ್ವಜ ಚಿಹ್ನೆಯಾಗಿರುವ ಸರ್ಪದ ಪೂಜೆ ಭಾರತದಲ್ಲಿ ಸಾರ್ವತ್ರಿಕವಾಗಿದೆ[೩೪]. ತೇರದಾಳ ಪರಿಸರದಲ್ಲಿ

ಪರಿಸರದ ಸುತ್ತಮುತ್ತಲಿನ ಪ್ರದೇಶದಲ್ಲಿ ನಾಗರ ಪಂಚಮಿಯ ದಿವಸ ಕುಂಬಾರ ಜನಾಂಗದವರು ಮಣ್ಣನ್ನು ತಂದು ನಾಗಪ್ಪನ ಮೂರ್ತಿಯನ್ನು ಮಾಡಿ ಮನೆ ಮನೆಗೆ ಹೋಗಿ ಕೊಟ್ಟು ಬರುತ್ತಾರೆ. ನಂತರ ಸಂಜೆ ಮನೆಯವರು ಎಲ್ಲರೂ ಸೇರಿ ನಾಗಪ್ಪನ ಮೂರ್ತಿಗೆ ನಾಗಪ್ಪ ಹೆಸರನ್ನು ತೆಗೆದುಕೊಂಡು, ನೂಲಿನ ಜನಿವಾರವನ್ನು ಹಾಕಿ ನಾಗಪ್ಪನ ಪಾಲವೆಂದು ಹೇಳುತ್ತಾ ಇನ್ನೂಳಿದ ಎಲ್ಲ ದೇವರ ಹೆಸರು ಹೇಳುತ್ತಾ ನೆನಪಿಸಿಕೊಂಡು ಕೊನೆಯದಾಗಿ ತಮ್ಮ ಮನೆಯವರ ಹಾಗೂ ತಮ್ಮ ಸಂಬಂಧಿಕರ ಹೆಸರನ್ನು ಹೇಳುತ್ತಾ ನಾಗಪ್ಪನ ಪಾಲ, ದೇವರ ಪಾಲ, ಹಾಲಪಾಲ್, ನೀರಪಾಲ ಎಂದು ಮುಕ್ತಾಯ ಮಾಡಿ ತಮ್ಮ ಮನೆಯಲ್ಲಿ ಮಾಡಿದ ಸಿಹಿಯಾದ ಉಂಡಿಗಳನ್ನು ನೈವೇದ್ಯ ಮಾಡಿ ನಂತರ ಮನೆಯವರೆಲ್ಲರೂ ಸೇರಿ ಸಿಹಿ ಉಂಡಿಗಳನ್ನು ಸೇವಿಸುತ್ತಾರೆ.

**ಸಂಕ್ರಾಂತಿ**

ತೇರದಾಳ ಪರಿಸರದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ಸಂಕ್ರಾತಿ ಹಬ್ಬವು ಒಂದಾಗಿದ್ದು, ಪ್ರಮುಖ ಹಬ್ಬವೆಂದು ಖ್ಯಾತಿಗಳಿಸಿದೆ. ಸಂಕ್ರಾಂತಿ ಸಾಮಾನ್ಯವಾಗಿ ಜನವರಿ ೧೪ರಂದು ಒಮ್ಮೊಮ್ಮೆ ೧೫ರಂದು ಬರುವ ಹಬ್ಬ. ಆ ದಿನ ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡುವುದು ಪುಣ್ಯಪ್ರದವೆಂದು ನಂಬಿಕೆ. ಸೂರ್ಯ ಮಕರರಾಶಿಯನ್ನು ಪ್ರವೇಶಿಸುವ ದಿನವಾದ್ದರಿಂದ ಆ ದಿನವನ್ನು ಮಕರ ಸಂಕ್ರಾಂತಿ ಎಂದೂ ಕರೆಯುತ್ತಾರೆ. ಅಂದು ದೇವರಿಗೆ ಎಳ್ಳು ನೈವೇದ್ಯ ಮಾಡಿ ಬಾಳೆಹಣ್ಣು, ಕಬ್ಬು ಮೊದಲಾದವುಗಳೊಡನೆ ಇಷ್ಟ ಮಿತ್ರರ ಮನೆಗೆ ತೆಗೆದುಕೊಂಡು ಹೋಗಿ ಪರಸ್ಪರ ಶುಭಾಶಯ ಹೇಳಿ ಅವುಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ತುಳುನಾಡು, ಆಂಧ್ರಗಳಲ್ಲಿ ಇದನ್ನು ಪೊಂಗಲ್ ಹಬ್ಬ ಎನ್ನುತ್ತಾರೆ. ಮೂರು ದಿನಗಳ ಕಾಲ ಆಚರಿಸುತ್ತಾರೆ. ಮೊದಲ ದಿನ ಭೋಗಿಹಬ್ಬ ಅದು ಕುಟುಂಬದವರು ಮಾಡಿಕೊಳ್ಳುವ ಹಬ್ಬ. ಎರಡನೆಯ ದಿನ ಸೂರ್ಯ ಪೊಂಗಲ್, ಸೂರ್ಯ ಪೂಜೆಗೆ ಪ್ರಾಶಸ್ತ್ಯ. ಪೊಂಗಲ್ ತಯಾರಿಸಿ ಸೂರ್ಯನಿಗೆ ನಿವೇದನೆ ಮಾಡುತ್ತಾರೆ. ಮೂರನೆ ದಿನ ಪಶುಪೂಜೆ, ಎತ್ತಿನ ಕೋಡಿಗೆ ಬಣ್ಣ ಹಚ್ಚಿ ಹೂ ಮುಡಿಸಿ ಅಲಂಕಾರ ಮಾಡುತ್ತಾರೆ. ಕೆಲವು ಕಡೆ ಎತ್ತು ಕಾಳಗ, ಕೋಣ ಕಾಳಗ ನಡೆಸುತ್ತಾರೆ. ಸಂಕ್ರಾತಿಯ ಮರುದಿನ ಅರಸಿನ ಕುಂಕುಮ ಹಾಕಿದ ಪೊಂಗಲಿನ ಉಂಡೆಗಳನ್ನು ಹಕ್ಕಿಗಳಿಗಾಗಿ ಬಯಲಿನಲ್ಲಿ ಇಡುತ್ತಾರೆ. ಬಲಿಷ್ಠವಾದ ಎತ್ತಿನ ಕೋಡಿಗೆ ದುಡ್ಡಿನ ಚೀಲಕಟ್ಟಿ ತುಂಬಿದ ಜನ ಸಮೂಹದಲ್ಲಿ ಬಿಟ್ಟಿದ್ದಾರೆ. ಎತ್ತು ಬರುತ್ತಿರುವ ರಭಸಕ್ಕೆ ಬೆದರಿ ಜನ ಅದಕ್ಕೆ ದಾರಿ ಬಿಡುತ್ತಾರೆ. ಧೈರ್ಯ ಶಾಲಿಯಾದ ಒಬ್ಬ ಯುವಕ ಅಂಜದೆ ಮುನ್ನುಗ್ಗಿ ಎತ್ತನ್ನು ತಡೆದು ನಿಲ್ಲಿಸುತ್ತಾನೆ. ಎತ್ತಿನ ಕೋಡಿಗೆ ಕಟ್ಟಿದ ಹಣದ ಚೀಲ ಅವನದಾಗುತ್ತದೆ. ಇದು ಸಂಕ್ರಾಂತಿ ಹಬ್ಬದಲ್ಲಿ ತಮಿಳುನಾಡಿನ ಕೆಲವು ಭಾಗಗಳಲ್ಲಿ ಆಚರಿಸುವ ಆಚರಣೆಗಳಲ್ಲೊಂದು. ಸಂಕ್ರಾಂತಿ ಸುಗ್ಗಿ ಕಾಲದ ಹಬ್ಬ. ಹೊಸ ಅಕ್ಕಿಯನ್ನು ಉಪಯೋಗಿಸಿ ಅಡುಗೆ ಮಾಡುವುದು ವಿಶೇಷವಾಗಿದೆ[೩೩].

**ಗಣೇಶ ಚತುರ್ಥಿ**

ತೇರದಾಳ ಪರಿಸರದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ಗಣೇಶನ ಹಬ್ಬವು ಮತ್ತೊಂದು ಪ್ರಮುಖ ಹಬ್ಬವಾಗಿದೆ. ಭಾದ್ರಪದ ಮಾಸದ ಶುದ್ಧ ಚೌತಿಯಂದು ಗಣೇಶನ ಹಬ್ಬವನ್ನು ಆಚರಿಸುತ್ತಾರೆ. ಇದು ಗಣೇಶನ ಹುಟ್ಟುಹಬ್ಬವೆಂದು ನಂಬಿಕೆ. ಅಂದು ಜೇಡಿಮಣ್ಣಿನಿಂದ ಮಾಡಿದ

ಗಣೇಶನ ಹೊಸ ವಿಗ್ರಹವನ್ನು ಪೂಜಿಸುವುದು ವಾಡಿಕೆ, ಭಾರತದ ಎಲ್ಲ ಭಾಗಗಳಲ್ಲೂ ಹಿಂದೂಗಳು ಈ ಹಬ್ಬವನ್ನು ಭಕ್ತಿಯಿಂದ ಆಚರಿಸುತ್ತಾರೆ. ಗಣೇಶ ಚತುರ್ಥಿಯ ಹಿಂದಿನ ದಿನ ಗೌರೀ ಪೂಜೆ ನಡೆಯುತ್ತದೆ. ತೌರಿಗೆ ಬಂದ ಗೌರಿಯನ್ನು ಹಿಂದಕ್ಕೆ ಕರೆತರಲು ಶಿವ ಗಣಪತಿಯನ್ನು ಮರುದಿನವೇ ಕಳುಸುತ್ತಾನೆ. ಗೌರಿ ಬಂದ ೩, ೫ ಅಥವಾ ಸಮ ದಿನವೊಂದರಲ್ಲಿ ಗೌರಿಯನ್ನೂ ಗಣಪತಿಯನ್ನು ನದಿ, ಕೆರೆ ಅಥವಾ ಕೊಳ್ಳಕ್ಕೆ ಒಯ್ದು ವಿಸರ್ಜಿಸುತ್ತಾರೆ. "ಗಣೇಶ ಬಂದ ಕಾಯ್ಕಡುಬು ತಿಂದ, ದೊಡ್ಡ ಕೆರೇಲಿ ಬಿದ್ದ, ಚಿಕ್ಕ ಕೆರೇಲಿ ಎದ್ದ"ಎಂದು ಹೇಳುತ್ತಾ ಹುಡುಗರು ಗಣಪತಿಯ ಮೂರ್ತಿಯನ್ನ ನೀರಿನಲ್ಲಿ ಬಿಡುತ್ತಾರೆ. ನೀರಿನಲ್ಲಿ "ವಿಸರ್ಜಿಸಲು" ಗಣೇಶನನ್ನು ವೈಭವದ ಮೆರವಣಿಗೆಯಲ್ಲಿ ಕರೆದೊಯ್ಯುತ್ತಾರೆ.

ಗಣೇಶ ಮೋದಕ ಅಂದರೆ ಸಿಹಿ ಕಡುಬು ಪ್ರಿಯ. ಹೊಟ್ಟೆ ಬಿರಿಯುವಂತೆ ಕಡುಬು ತಿಂದು ಇಲಿಯ ಮೇಲೆ ಕುಳಿತು ಗಣಪತಿ ಹೊರಟ. ದಾರಿಯಲ್ಲಿ ಹಾವನ್ನು ಕಂಡು ಹೆದರಿದ ಇಲಿ ನೆಗೆಯಿತು. ಗಣಪತಿ ಕೆಳಗೆ ಬಿದ್ದ. ಹೊಟ್ಟೆ ಬಿರಕು ಬಿಟ್ಟಿತು. ಆ ಹಾವನ್ನೇ ಹಿಡಿದು ತನ್ನ ಹೊಟ್ಟೆಗೆ ಬಿಗಿದುಕೊಂಡನು. ಗಣೇಶನ ಅವಸ್ಥೆಯನ್ನು ನೋಡಿ ಚಂದ್ರ ನಕ್ಕು ಬಿಟ್ಟ. ಕೆರಳಿದ ಗಣೇಶ ಚೌತಿ ದಿನ ನಿನ್ನನ್ನು ನೋಡಿದವರಿಗೆ ವೃತ ಅಪವಾದ ಬರಲಿ ಎಂದು ಚಂದ್ರನಿಗೆ ಶಾಪಕೊಟ್ಟ. ಚಂದ್ರ ಕ್ಷಮೆ ಕೇಳಿದ. ಆಗ ಗಣಪತಿ ಚತುರ್ಥಿ ದಿವಸ ಗಣಪತಿ ವ್ರತ ಮಾಡಿದರೆ ವೃತ ಅಪವಾದ ಬರುವುದಿಲ್ಲ ಇಂಥ ಅಪವಾದ ಬಂದ ಮೇಲೆ ಕೂಡ ಭಕ್ತಿಯಿಂದ ಈ ವ್ರತ ಮಾಡಿದರೆ ಅಪವಾದ ನಿವಾರಣೆಯಾಗುತ್ತದೆ ಎಂದು ತನ್ನ ಶಾಪಕ್ಕೆ ಪರಿಹಾರ ಸೂಚಿಸಿದ. ಇದು ಗಣೇಶ ಚತುರ್ಥಿ ಹಬ್ಬದ ಆಚರಣೆಗೆ ಇರುವ ಹಿನ್ನೆಲೆಯಾಗಿದೆ.

ಮಹಾರಾಷ್ಟ್ರದಲ್ಲಿ ಗಣೇಶ ಉತ್ಸವಕ್ಕೆ ಬಹಳ ಮಹತ್ವ, ಬಾಲಗಂಗಾಧರ ತಿಲಕರ ನೇತೃತ್ವದಲ್ಲಿ ಈ ಉತ್ಸವದ ಆಚರಣೆ ಒಂದು ಸಾರ್ವಜನಿಕ ಕಾರ್ಯಕ್ರಮವಾಗಿ ರೂಪುಗೊಂಡಿತು. ಸಾಮಾಜಿಕ, ರಾಜಕೀಯ ಉದ್ದೇಶಗಳಿಗಾಗಿಯೂ ಅದನ್ನು ಪರಿಣಾಮಕಾರಿಯಾಗಿ ಉಪಯೋಗಿಸಿದರು. ಅಲ್ಲಿ ಈ ಉತ್ಸವ ಹತ್ತು ಹನ್ನೆರಡು ದಿನಗಳಷ್ಟು ದೀರ್ಘವಾಗಿ ಕೂಡ ನಡೆಯುವುಂಟು. ಗಣೇಶ ಪಾರ್ವತಿಯಿಂದ ಸೃಷ್ಠಿಸಿಲ್ಪಟ್ಟು ಶಿವನ ಅನುಗ್ರಹಕ್ಕೆ ಪಾತ್ರನಾದ ದೇವರು. ಈತ ಗಣಗಳ ಈಶ–ಗಣೇಶ. ಇವನಿಗೆ ವಿಘ್ನೇಶ್ವರ, ವಿಘ್ನರಾಜ ಎಂಬ ಹೆಸರಗಳೂ ಇವೆ. ಇವನ ಕೃಪೆಯಿಂದ ವಿಘ್ನಗಳು ನಿವಾರಣೆಯಾಗುತ್ತವೆಂಬುದು ಭಕ್ತರ ನಂಬಿಕೆ[೩೬]. ಮಹಾಗಣಪತಿ, ವೀರ ಗಣಪತಿ, ತರುಣ ಗಣಪತಿ, ಭಕ್ತಿ ಗಣಪತಿ, ತೃಪ್ತ ಗಣಪತಿ, ಧ್ವಜ ಗಣಪತಿ, ಭುವನೇಶ ಗಣಪತಿ. ಲಕ್ಷ್ಮೀ ಗಣಪತಿ, ಊರ್ದ್ವಗಣಪತಿ, ನೃತ್ಯ ಗಣಪತಿ, ಉಚ್ಚಿಷ್ಟ ಗಣಪತಿ. ಹೇರಂಬ ಗಣಪತಿ, ಸಿದ್ದಿ ಗಣಪತಿ, ವಿಘ್ನರಾಜ ಗಣಪತಿ, ಬಾಲ ಗಣಪತಿ, ಶಕ್ತಿ ಗಣಪತಿ ಎನ್ನುವ ಪ್ರಕಾರಗಳಿವೆ. ಪರಿಸರ ಸುರಕ್ಷತೆಯನ್ನು ಗಮನದಲ್ಲಿಕೊಂಡು ತೇರದಾಳದಲ್ಲಿ ಗಣಪತಿಯನ್ನು ವಿಶೇಷವಾಗಿ ಕುಂಬಾರ ವರ್ಗಕ್ಕೆ ಸೇರಿದ ಗುರುಬಸಪ್ಪ ಕುಂಬಾರ ಇವರ ಮಕ್ಕಳಾದ ಕೆಂಚಪ್ಪ, ಪ್ರಕಾಶ ಸಹೋದರರು ಹಾಗೂ ಅವರ ಕುಂಟುಬವರ್ಗದವರು ಮಣ್ಣಿನ ಗಣಪತಿ ತಯಾರಿಸುತ್ತಾರೆ. ಈ ಹಿಂದೆ ಪ್ಲ್ಯಾಸ್ಟರನಿಂದ ಗಣೇಶ ವಿಗ್ರಹಗಳನ್ನು ತಯಾರಿಸಲಾಗುತ್ತಿತ್ತು, ಈಗ ಪರಿಸರದ ಸಂರಕ್ಷಣೆಗಾಗಿ ಪುನಃ ಮಣ್ಣಿನಿಂದ ಗಣಪತಿ ತಯಾರಿಸುತ್ತಿದ್ದಾರೆ.

## ದಸರಾ

ಹಿಂದೂಗಳಿಂದ ತೇರದಾಳ ಪರಿಸರದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ದಸರಾ ಹಬ್ಬವು ಮತ್ತೊಂದು ಪ್ರಮುಖ ಹಬ್ಬವಾಗಿದೆ. ಕರ್ನಾಟಕದಲ್ಲಿ ವಿಜಯನಗರ ಸಂಸ್ಥಾನದಲ್ಲಿ ದಸರಾ ಉತ್ಸವಕ್ಕೆ ಚಾಲನೆ ಸಿಕ್ಕಿದರೆ, ೧೫೬೫ರಲ್ಲಿ ವಿಜಯನಗರ ಪತನವಾದ ನಂತರ ಮೈಸೂರು ಸಂಸ್ಥಾನದ ಒಡೆಯರು ೧೬೧೦ ರಿಂದ ಈ ಪರಂಪರೆಯನ್ನು ಮುಂದುವರಿಸಿ ಅದು ಮನೆ ಮನೆಗಳಲ್ಲೂ ಪ್ರಚಲಿತವಾಯಿತು. ಬ್ರಹ್ಮನಿಂದ ವರ ಪಡೆದು ಮಹಿಷಾಸುರ ಪ್ರಜಾ ಪೀಡಕನಾಗಿದ್ದ ಅವನ ಕೋಟಲೆಗಳಿಂದ ತಮ್ಮನ್ನು ಪಾರಾಗಿಸಲು ಜನರು, ದೇವತೆಗಳೂ ತ್ರಿಮೂರ್ತಿಗಳನ್ನು ಆಶ್ರಯಿಸಿದರು. ಆಗ ಆ ಮೂವರೂ ತಮ್ಮ ಉತ್ತಮ ಗುಣಗಳನ್ನು ಕೊಟ್ಟು ದುರ್ಗಾ ದೇವಿಯನ್ನು ಸೃಷ್ಟಿಸಿದರು. ದೇವಿ ಸಿಂಹ ವಾಹಿನಿಯಾಗಿ ಮಹಿಷಾಸುರನೊಡನೆ ಯುದ್ಧಕ್ಕೆ ನಿಂತಳು. ಯುದ್ದ ೯ ದಿನ ನಡೆಯಿತು. ೧೦ನೆಯ ದಿನ ದೇವಿಯಿಂದ ಮಹಿಷಾಸುರನ ವಧೆಯಾಯಿತು. ಈ ಘಟನೆಯ ನೆನಪಿನ ಹಬ್ಬವೇ ಈ ನವರಾತ್ರಿ ಹಬ್ಬವಾಗಿದೆ. ವಿಜಯದ ದಿನವೂ ಸೇರಿದಂತೆ ಇದು ಒಟ್ಟು ಹತ್ತು (ದಸರಾ) ದಿನಗಳ ಹಬ್ಬ. ಭಾರತದಾದ್ಯಂತ ಆಚರಣೆಯಲ್ಲಿರುವ ಈ ಹಬ್ಬವನ್ನು ತೇರದಾಳ ಪರಿಸರದಲ್ಲಿ ಪ್ರತಿ ವರ್ಷವು ಚಾಚು ತಪ್ಪದೇ ಹತ್ತು ದಿನಗಳ ಕಾಲ ಎಲ್ಲಾ ಹಿಂದುಗಳು ಆಚರಿಸುತ್ತಾರೆ. ಇದು ಆಶ್ವಯುಜ ಮಾಸದ ಮೊದಲನೆಯ ದಿನದಿಂದ ಆರಂಭವಾಗುತ್ತದೆ. ಈ ಅವಧಿಯಲ್ಲಿ ದೇವಿಯ ಪೂಜೆಗೆ ಪ್ರಾಶಸ್ತ್ಯ. ವಿಜಯ ನಗರ ಅರಸರು ದಸರಾ ಉತ್ಸವವನ್ನು ವೈಭವದಿಂದ ನಡೆಸುತ್ತಿದ್ದರಂತೆ. ಉತ್ಸವ ನಡೆಸಲು ಅವರು ಕಟ್ಟಿಸಿದ ನವರಾತ್ರಿ ದಿಬ್ಬದ(ಮಹಾನವಮಿ ದಿಬ್ಬ) ಅವಶೇಷಗಳನ್ನು ಈಗಲೂ ಹಂಪೆಯಲ್ಲಿ ಕಾಣಬಹುದು. ವಿಜಯನಗರಕ್ಕೆ ಬಂದಿದ್ದ ವಿದೇಶಿ ಪ್ರವಾಸಿಗರು ಈ ಹಬ್ಬದ ವೈಭವಪೂರಿತ ಆಚರಣೆಯ ವಿವರಗಳನ್ನು ತಮ್ಮ ಪ್ರವಾಸಿ ಕಥನಗಳಲ್ಲಿ ವಿಶ್ಲೇಷಿಸಿದ್ದಾರೆ. ಶ್ರೀ ರಾಮನು ರಾವಣನ ಮೇಲೆ ಯುದ್ದ ಮಾಡುವ ಮುನ್ನ ದುರ್ಗೆಯನ್ನು ಪೂಜಿಸಿ ವರ ಪಡೆದಿದ್ದನೆಂಬ ಕಥೆ ಇದೆ. ದುಷ್ಟ ಶಕ್ತಿ ರಾವಣನ ಮೇಲೆ ಶ್ರೀ ರಾಮನ ಜಯದ ಸಂಕೇತವಾಗಿ ನವರಾತ್ರಿಯನ್ನು ಆಚರಿಸುತ್ತಾರೆ. ಅಲ್ಲದೇ ಪಾಂಡವರು ಕೌರವರ ಮೇಲೆ ವಿಜಯ ಸಾಧಿಸಿದ ದಿನವೂ ಇದೆಂದು ಅದರ ಪ್ರತೀಕವಾಗಿ ಈ ಹಬ್ಬವನ್ನು ಆಚರಿಸಲಾಗುತ್ತಿದೆ ಎಂದು ಹೇಳಲಾಗುತ್ತದೆ. ತೇರದಾಳ ಬ್ರಾಹ್ಮಣರು ನವರಾತ್ರಿಯಲ್ಲಿ ಪ್ರತಿದಿನ ವೆಂಕಟೇಶ್ವರ ದೇವಸ್ಥಾನದಿಂದ ಹನುಮಂತ ದೇವಸ್ಥಾನದವರೆಗೆ ದೇವರ ವಿವಿಧ ರೂಪಗಳನ್ನು ಅವರ ವಾಹನ ಸಮೇತ ಮೆರವಣೆಗೆಯನ್ನು ಈ ಮುಂದಿನಂತೆ ಮಾಡುತ್ತಾರೆ. ೧ನೇ ದಿನ ಕಲ್ಪವೃಕ್ಷ, ೨ನೇ ದಿನ-ಶೇಷ, ೩ನೇ ದಿನ-ನವಿಲು, ೫ನೇ ದಿನ -ಕಾಮದೇನು, ೫ನೇ ದಿನ-ಗರುಡ, ೬ನೇ ದಿನ-ಹನುಮಂತ, ೭ನೇ ದಿನ-ಆನೆ, ೮ನೇ ದಿನ-ಸಿಂಹ. ೯ನೇ ದಿನ ಆಶ್ವ (ಕುದುರೆ), ೧೦ನೇ ದಿನ ವೆಂಕಟೇಶ್ವರ ದೇವರ ರಥೋತ್ಸವನ್ನು ವಿಶೇಷವಾಗಿ ಆಚರಿಸುತ್ತಾರೆ. ಸುಮಾರು ೧೦೦ ವರ್ಷಗಳಿಂದ ಈ ರಥೋತ್ಸವ ನಡೆದುಕೊಂಡು ಬಂದಿದೆ[೩೭]. ರಥವು ೧೯ ಅಡಿ ಎತ್ತರವಿದ್ದು, ನಾಲ್ಕು ಕಲ್ಲಿನ ಗಾಲಿಗಳ ಸುಮಾರು ೫ ಟನ್ನಗಳಿಷ್ಟಿದ್ದು ಒಟ್ಟು ೩೦೦ ಟನ್ನಗಳಿಷ್ಟಿದೆ, ತೇರು ವಿಜಯ ದಶಮಿಯ ದಿನ ದಂದು ವೆಂಕಟೇಶ್ವರ ದೇವಸ್ಥಾನ ಪ್ರಮುಖ ಬಿದಿಗಳಲ್ಲಿ ಹಾಯ್ದು ಉಪ್ಪಾರ ಮೋಪಗಾರ ಗಲ್ಲಿಯಲ್ಲಿರುವ ವೇಕಟೇಶ್ವರ ದೇವಸ್ಥಾನಕ್ಕೆ ಭೇಟಿ ನೀಡಿ ಪುನಃ ಮೂಲ ಸ್ಥಳಕ್ಕೆ ಬರುತ್ತದೆ. ಈ ರಥೋತ್ಸವ ಸಂದರ್ಭದಲ್ಲಿ ಬ್ರಾಹ್ಮಣ ವರ್ಗದವರು ಪ್ರಮುಖ ಪಾತ್ರವನ್ನುವಹಿಸುತ್ತಾರೆ. ಇನ್ನುಳಿದ ವರ್ಗದವರು ಸಹ ಭಾಗವಹಿಸುತ್ತಾರೆ. ಕಳೆದ ವರ್ಷ ರಥವನ್ನು ಹೊಸದಾಗಿ ನಿರ್ಮಿಸಲಾಗಿದೆ.

ವೆಂಕಟೇಶ್ವರ ದೇವಸ್ಥಾನ ಪ್ರಮುಖ ಅರ್ಚಕರಾದ ಗೋವಿಂದಾಚಾರ್ಯ ಜೋಶಿ ಪೂಜಾ ಹಾಗೂ ಪುರಾಣ ಕಾರ್ಯವನ್ನು ನೇರವೇರಿಸುತ್ತಾರೆ. ನಂತರ ಗ್ರಾಮದ ಜನರು ಬನ್ನಿ ಗಿಡಕ್ಕೆ ಹೋಗಿ ಪೂಜೆಯನ್ನು ಮಾಡಿ ಬನ್ನಿ ತರುತ್ತಾರೆ. ಸಂಜೆ ಮನೆಯಲ್ಲಿ ದೀಪವನ್ನು ಬೆಳಗಿ ಬನ್ನಿಯನ್ನು ತೆಗೆದುಕೊಂಡು ಅಲ್ಲಮ ಪ್ರಭು ದೇವಸ್ಥಾನಕ್ಕೆ ಹೋಗಿ ದೇವರಿಗೆ ಬನ್ನಿಯನ್ನು ಮೊದಲು ಅರ್ಪಿಸುತ್ತಾರೆ. ಅಲ್ಲಮಪ್ರಭು ದೇವಸ್ಥಾನದಲ್ಲಿ ನಿರಂತರವಾಗಿ ಒಂಬತ್ತು ದಿನಗಳ ಕಾಲ ಓಂನಮಃ ಶಿವಾಯ ಮಂತ್ರಪಠಣೆಯನ್ನು ೨೪ ಗಂಟೆಗಳ ಕಾಲ ಒಂಬತ್ತು ದಿನಗಳ ಕಾಲ ಭಕ್ತರು ಪಠಿಸುತ್ತಾರೆ. ನಂತರ ಪರಸ್ಪರವಾಗಿ ನಾವು ನೀವು ಬಂಗಾರದಂಗ್ಗೆ ಇರೋಣವೆಂದು ಹೇಳಿ ಹಬ್ಬವನ್ನು ಆಚರಿಸುತ್ತಾರೆ. ಶುಕ್ಲ ಪಕ್ಷದಲ್ಲಿ ಪ್ರಥಮಾ ತಿಥಿಯಿಂದ ದಶಮಿಯವರೆಗೆ ದಿನ ನಿತ್ಯ ಪೂಜೆ ಪುನಸ್ಕಾರ ಸಂತರ್ಪಣೆ, ಹಬ್ಬದ ವಾತಾವರಣವನ್ನು ಕಾಣಬಹುದು. ಈ ಕಾಲವು ಎಲ್ಲ ದೇವತೆಗಳ ಉಪಾಸನೆಗಳಿಗೆ ಶ್ರೇಷ್ಠವಾಗಿದ್ದರು ಶಕ್ತಿದೇವತೆಯನ್ನು ಪ್ರಸನ್ನಗೊಳಿಸುವ ಕಾಲವಾಗಿದೆ. ಈ ಸಮಯದಲ್ಲಿ ವಿವಾಹ, ಉಪನಯನ ಇತ್ಯಾದಿ ಶುಭಕರ್ಮಗಳಿಗೆ ತಿಥಿ, ವಾರ, ನಕ್ಷತ್ರ, ಮುಂತಾದವುಗಳನ್ನು ಗಮನಿಸುವ ಅಗತ್ಯವಿಲ್ಲವೆಂದು ಭಾವಿಸಲಾಗುತ್ತದೆ. ಏಕೆಂದರೆ ಈ ಹತ್ತು ದಿನಗಳಲ್ಲಿ ಯಾವ ಕೆಲಸವನ್ನೂ ಮಾಡಿದರೂ ಯಶಸ್ಸು ದೊರಕುವುದೆಂಬ ನಂಬಿಕೆ ಇದೆ. ಹಿಂದೂಗಳ ಮನೆಯಲ್ಲಿ ದಸರಾ ಕಾಲದಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ. ಸಪ್ತಮಿಯು ಸರಸ್ವತಿ ಪೂಜೆ ಪುಸ್ತಕಗಳು, ಸಂಗೀತವಾದ್ಯಗಳಿಗೂ ಪೂಜೆ ಸಲ್ಲುತ್ತದೆ. ಮರುದಿನ ದುರ್ಗಾಷ್ಟಮಿ ಮಹಾನವಮಿ ದಿವಸ ಆಯುಧ ಪೂಜೆ : ತಮ್ಮ ಮನೆಯ ಮೂಲ ವೃತ್ತಿಯನ್ನು ಮಾಡಲು ಬೇಕಾದ ಸಲಕರಣೆಗಳನ್ನು ತೊಳೆದು ಸ್ವಚ್ಛಗೊಳಿಸಿ ಅವುಗಳನ್ನು ಸಾಲಾಗಿ ಇಟ್ಟು ವಿಭೂತಿ ಕುಂಕುಮವನ್ನು ಹಚ್ಚಿ ಹೂವುಗಳಿಂದ ಸಿಂಗರಿಸಿ ಸಸಿಗಳನ್ನು ಇಟ್ಟು ದೀಪವನ್ನು ಬೆಳಗಿಸಿ ನೈವೇದ್ಯವನ್ನು ಮಾಡಿ ಕಾಯಿ ಒಡೆಯುತ್ತಾರೆ. ನಂತರ ಬನ್ನಿ ಮುಡಿಯಲು ಹೋಗುತ್ತಾರೆ. ವಿಜಯದಶಮಿಗೆ ಇನ್ನೊಂದು ಹೆಸರು ವಿದ್ಯಾ ದಶಮಿ. ಅಕ್ಷರಭ್ಯಾಸ, ಸಂಗೀತ–ನೃತ್ಯಾಭ್ಯಾಸ ಆರಂಭಿಸಲು ವಿಜಯದಶಮಿ ಶುಭ ದಿನ ಎಂಬ ನಂಬಿಕೆಯಿದೆ. ಜೈನ ಧರ್ಮಿಯರ ಪ್ರಕಾರ ಮಹಾನವಮಿಯು ಆಯುಧಾಗಾರದಲ್ಲಿ ಸುದರ್ಶನಚಕ್ರಾದಿ ಆಯುಧಪೂಜೆ ಹಾಗೂ ವೃಷಭದೇವರ ಜೇಷ್ಠಪುತ್ರ ಪ್ರಥಮ ಚಕ್ರವರ್ತಿ ಭರತೇಶ್ವರನು ನವರಾತ್ರಿಯಲ್ಲಿ ಒಂಬತ್ತು ದಿನಗಳ ಕಾಲ ನವಕ್ಷಾಯಿಕ ಲಬ್ಧಿಗಳ ಪ್ರಾಪ್ತಿಗಾಗಿ ನವದೇವತಾ ಆರಾಧನೆ ಮಾಡಿ, ಅಯೋಧ್ಯಾಪುರದ ದೀನ–ದಲಿತರಿಗೆ ಹಾಗೂ ಪ್ರಜೆಗಳಿಗೆ ಮುತ್ತು, ರತ್ನ, ವಜ್ರ–ವೈಢೂರ್ಯ, ಹೊನ್ನ(ಕನಕಾದಿ) ದಾನಮಾಡಿ ವಿಜಯದಶಮಿಯಂದು ದಿಗ್ವಿಜಕ್ಕಾಗಿ ಷಟ್ಖಂಡಾಧಿಪತಿಯಾಗಲು ಹೊರಟ ಸುದಿನ ಹಾಗೆಯೇ ದಶ–ಹರಾ ದಶಾನನ ರಾವಣನ ಸೋಲಿಸಿದ ದಿನವೇ ರಾಮನ ವಿಜಯೋತ್ಸವದ ದಿನವಾಗಿದೆ.

**ಯುಗಾದಿ**

ಹಿಂದೂ ಧರ್ಮಿಯರಿಂದ ತೇರದಾಳ ಪರಿಸರದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ಯುಗಾದಿ ಹಬ್ಬವು ಮತ್ತೊಂದು ಪ್ರಮುಖ ಹಬ್ಬವಾಗಿದೆ. ನೂತನ ವರ್ಷದ ಮೊದಲ ದಿನ ಯುಗಾದಿ ಹಬ್ಬ. ವಿಶೇಷವಾಗಿ ದಕ್ಷಿಣ ಭಾರತದ ಹಬ್ಬ ಇದು. ಯುಗ ಎಂದರೆ ವರ್ಷ, ಅದಿ ಎಂದರೆ ಪ್ರಾರಂಭ. ಈ ವೇಳೆ ಹೊಸ ಚಿಗುರನ್ನು ಹೊತ್ತು ಮರಗಳು ಶೋಭಿಸುತ್ತವೆ. ಕೋಗಿಲೆ ಇಂಪಾದ ದನಿಯಲ್ಲಿ ಹಾಡುತ್ತದೆ. ಜನ ಎಣ್ಣೆ ನೀರು ಹಾಕಿಕೊಂಡು, ಹೊಸಬಟ್ಟೆ ಉಟ್ಟು

ಉತ್ಸಾಹ ಸಂಭ್ರಮಗಳಿಂದ ನೂತನ ವರ್ಷವನ್ನು ಎದುರುಗೊಳ್ಳುತ್ತಾರೆ. ಕರ್ನಾಟಕ, ಆಂಧ್ರ ಪ್ರದೇಶಗಳಲ್ಲಿ ಚಾಂದ್ರಮಾನದಂತೆ ಸಂವತ್ಸರದ ಲೆಕ್ಕಾಚಾರ. ಫಾಲ್ಗುಣ ಮಾಸದ ಅಮಾವಾಸ್ಯೆಯ ಮರುದಿನ ಚೈತ್ರ ಮಾಸದ ಪಾಡ್ಯದ ದಿವಸ ಯುಗಾದಿ ಹಬ್ಬ. ತಮಿಳುನಾಡಿನಲ್ಲಿ ಸೌರಮಾನ ಲೆಕ್ಕದಲ್ಲಿ ಇದರ ಆಚರಣೆ.

ಯುಗಾದಿ/ ವಸಂತ ಋತು ಅಂದರೆ ಕಡು ಬಿಸಿಲಿನ, ಭಣ ಭಣ ಧಗೆಯ ಒಣ ಹವೆಯ ದಿನಗಳು. ತೇರದಾಳ ಪರಿಸರದಲ್ಲಿ ಇದೆ. ರೀತಿಯ ಹವಾಮಾನದಿಂದ ಕೂಡಿರುತ್ತದೆ. ಯುಗಾದಿ ಪಾಢ್ಯ ದಿನ ಮುಂಜಾನೆ ಅಭ್ಯಂಜನ ಸ್ನಾನ (ಎಣ್ಣೆ ಸ್ನಾನ)ವನ್ನು ಬೇವಿನ ತಪ್ಪಲನ್ನು ಹಾಕಿ ಎಣ್ಣೆ ಹಚ್ಚಿ ಮೈಯಲ್ಲಾ ಸ್ನಾನ ಮಾಡುತ್ತಾರೆ. ಮನೆಯ ಬಾಗಿಲಿಗೆ, ದೇವರ ಗುಡಿಗೆ, ಮಂದಿರಗಳಿಗೆ ತೋರಣ (ಮಾವಿನ ತೋರಣ) ಕಟ್ಟುತ್ತಾರೆ. ಯುಗಾದಿ ಪಾಢ್ಯಯ ದಿನ ರತ್ನ ಪಕ್ಷಿಯನ್ನು ನೋಡಲು ಹೋಗುತ್ತಾರೆ. ಆ ಪಕ್ಷಿಯನ್ನು ಕಂಡರೆ ವರ್ಷದಲ್ಲಿ ಶುಭವಾಗುತ್ತದೆ ಎಂಬ ನಂಬಿಕೆ ಇದೆ. ಮನೆಯಲ್ಲಿ ಆ ದಿನ ವಿಶೇಷವಾದ ಶಾವಿಗೆ ಪಾಯಸ, ಹೋಳಿಗೆಯನ್ನು ಮಾಡಿ ಬಂಧು ಬಳಗವನ್ನು ಕರೆದುಕೊಂಡು ಊಟ ಮಾಡುತ್ತಾರೆ. ನಂತರ ಬೇವಿನ ಹೂ ಅರೆದು ಬೆಲ್ಲ ಸೇರಿಸಿ ಎಲ್ಲರಿಗೂ ಹಚ್ಚುತ್ತಾರೆ.

ಇತರೆಡೆಯಂತೆ ಇಲ್ಲಿಯೂ ಸಹ ಜನರು ಆ ದಿನ ಬಾಗಿಲಿಗೆ ಮಾವಿನ ಎಲೆಯ ತೋರಣ, ಬೇವಿನ ಚಿಗುರುಗಳ ಅಲಂಕಾರ ಮಾಡುತ್ತಾರೆ. ದೇವರ ಪೂಜೆಯಾದ ಆನಂತರ ಬೇವು ಬೆಲ್ಲ ಪರಸ್ಪರ ಕೊಟ್ಟು ತೆಗೆದು ಕೊಳ್ಳುತ್ತಾರೆ. ಜೀವನದಲ್ಲಿ ಬರುವ ಕಷ್ಟ ಸುಖಗಳೆರಡನ್ನೂ ಸಮಾನ ರೀತಿಯಲ್ಲಿ ಅನುಭವಿಸಬೇಕೆಂಬ ತತ್ತ್ವವನ್ನು ಈ ಸಂಪ್ರದಾಯ ಸಾರುತ್ತದೆ. ಸಾಯಂಕಾಲ ಪಂಚಾಂಗ ಶ್ರವಣ. ಪುರೋಹಿತರು ಅಥವಾ ಮನೆಯ ಹಿರಿಯರೊಬ್ಬರು ಪಂಚಾಂಗವನ್ನು ಓದುತ್ತಾರೆ. ಮಹಾರಾಷ್ಟ್ರ, ಗುಜರಾತ್ ಮನೆಯ ಮೇಲೆ ಗುಡಿ (ಬಾವುಟ) ಹಾರಿಸುತ್ತಾರೆ. ಕೆಲವು ಕಡೆ ಎತ್ತಿನ ಬಂಡಿ ಪಂದ್ಯ, ಕೋಣಗಳ ಬಂಡಿಗಳ ಪಂದ್ಯ ನಡೆಸುವುದೂ ಉಂಟು. ಪುರಾಣಗಳ ಪ್ರಕಾರ, ಹಿಂದೆ ವೈಶಾಖ ಮಾಸ, ಅಶ್ವಯುಜ ಮಾಸ, ಹೇಮಂತ ಋತು ಮುಂತಾದ ಕಾಲದಲ್ಲಿ ಯುಗಾದಿಯನ್ನೂ ಆಚರಿಸುತ್ತಿದ್ದಂತೆ ತೋರುತ್ತದೆ. ಯುಗಾದಿಯ ದಿನ ನಂಟರು ಮಿತ್ರರಿಗೆ ಅಂಚೆಯ ಮೂಲಕ ಶುಭಾಶಯ ತಿಳಿಸುವ ಹತ್ತಿರವಿದ್ದರೆ ಮನೆಗೆ ಹೋಗಿ ಶುಭಕೋರುವ, ಪದ್ಧತಿಯೂ ಇದೆ[೩೮].

ಬೇವಿಗಿಂತ ಕಹಿ ವಸ್ತು ಬೇರಾವುದಿದೆ? ಅಂಥ ಬೇವಿನ ಬಳಕೆ ಯುಗಾದಿಯ ಸಂದರ್ಭದಲ್ಲಿ ಪ್ರಸಿದ್ಧ. ಹಾಗೆಯೇ ಬೆಲ್ಲಕ್ಕಿಂತ ಮಧುರ ವಸ್ತುವಿಲ್ಲ. ಬೇವಿನ ಮರದ ಎಳೆ ಚಿಗುರುಗಳನ್ನು ಬೆಲ್ಲದ ಸಂಗಡ ಕೂಡಿಸಿ, ಸಾಂಕೇತಿಕವಾಗಿ ತಿನ್ನುವೆವು. ಅದರಲ್ಲಿಯೇ ಯುಗಾದಿ ಹಬ್ಬ ಮುಗಿಸುತ್ತೇವೆ. ಆದರೆ ಸತ್ಯ ಅಷ್ಟೆ ಅಲ್ಲ. ಅಂಥ ಕಹಿರಸವನ್ನು ನಿತ್ಯ ಸೇವಿಸಬೇಕು. ವಸಂತ ಋತು ಕಳೆಯುವವರೆಗೂ ಕಹಿಯ ಸೇವನೆ ಇರಬೇಕು. ಇದು ಅರೋಗ್ಯ ಸೂತ್ರದ ಪರಿಪಾಲನೆ, ನಿತ್ಯವೂ ಬೇವಿನಂಥ ಕಹಿಪದಾರ್ಥ ಸೇವಿಸಿದರಾಯಿತು. ಅದೇನು ಮುಷ್ಟಿಗಟ್ಟಲೆ ಬೇಡ. ಕಫ ಕರಗಿಸಲು ಒಂದೈದು ಗ್ರಾಂ ಸೇವನೆ ಮಾತ್ರ ಸಾಕು. ಅಮೃತಬಳ್ಳಿಯ ಎಲೆ, ಕಾಂಡ ಕೂಡ ಅತ್ಯಮತ ಕಹಿ. ನಾವು ಪೇಟೆಯವರು. ಇವೆಲ್ಲ ಸಿಗದು ಅಂದಿರಾ? ಅಡುಗೆ ಮನೆಯ ಕರಿಬೇವು ಇದೆಯಲ್ಲ, ಅದಕ್ಕಿಂತ ಕಹಿ ಸಾಂಬಾರ್ ಬೇರೆ ಇಲ್ಲ. ಅದರ ಸೇವನೆಯಿಂದ ಜ್ವರ, ನೆಗಡಿ

ಕಾಯಿಲೆ, ಮಲಬದ್ದತೆ, ಮೂಲವ್ಯಾಧಿಯ ರಕ್ತಸ್ರಾವ ತಪ್ಪಿಸಹುದು ಎನ್ನುವ ವೈಜ್ಞಾನಿಕ ಚಿಂತನೆ ಇದೆ.

**ಗುಳ್ಳವ್ವನ ಹಬ್ಬ**

ಆಷಾಢ ಮಾಸದಲ್ಲಿ ಬರುವ ಪ್ರತಿಯೊಂದು ಮಂಗಳವಾರವನ್ನು ಉತ್ತರ ಕರ್ನಾಟಕದಲ್ಲಿ ಗುಳ್ಳವ್ವನ ಹಬ್ಬವನ್ನಾಗಿ ಆಚರಿಸುವ ಸಂಪ್ರದಾಯವೊಂದು ಜಾಗತೀಕರಣದ ದಿನಗಳಲ್ಲಿ ಉಳಿದುಕೊಂಡು ಬಂದಿರುವುದು ವಿಶೇಷ. ನಮ್ಮ ಹಬ್ಬ ಮತ್ತು ಆಚರಣೆಗಳು ನಮ್ಮ ರೈತಾಪಿ ಜನರನ್ನು ಅವಲಂಬಿಸಿವೆ. ರೈತರಿಗೆ ಮತ್ತು ಸಾಮಾನ್ಯ ಜನರಿಗೆ ಅನ್ನ ಕೊಡುವ ದೇವತೆ ಈ ಭೂತಾಯಿ. ಅದಕ್ಕಾಗಿ ಅವಳಿಗಾಗಿ ಪೂಜೆಯನ್ನು ಸಲ್ಲಿಸುವುದಕ್ಕಾಗಿ ನಾವು ವಿವಿಧ ಹಬ್ಬಗಳನ್ನು ಆಚರಿಸುತ್ತೇವೆ, ಒಂದು ಋತುವಿನಲ್ಲಿ ಮಣ್ಣಿಗೆ ರೈತರು ಐದು ಪೂಜೆಗಳನ್ನು ಮಾಡುತ್ತಾರೆ.

೧. ಕಾರ ಹುಣ್ಣಿಮೆ ಸಮಯದಲ್ಲಿ ಮಣ್ಣಿನ ಎತ್ತಿನ ಮೂರ್ತಿಯನ್ನು ತಂದು ಪೂಜೆಯನ್ನು ಮಾಡುತ್ತಾರೆ. ನಂತರ ಗುಳ್ಳವ್ವ ನಂತರ ನಾಗರ ಪಂಚಮಿ, ಗಣಪತಿ ಹಾಗೂ ಜೋಕುಮಾರ ಕೊನೆಗೆ ಗೌರಿ ಹಬ್ಬ ಇಲ್ಲವೆ ಶೀಗವ್ವ, ಗುಳ್ಳವ್ವನನ್ನು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ಆಚರಿಸುತ್ತಾರೆ. ಉದ್ದೇಶ ಮಾತ್ರ ಒಂದೇ. ಮಣ್ಣು ನಮಗೆ ಇಲ್ಲಿ ಶಕ್ತಿಯಾಗಿ ಕಾಣುತ್ತದೆ. ಏಕೆಂದರೆ "ಒಳ್ಳೊಳ್ಳೆಯವರು ಉಳ್ಯಾಡು ಮುಂದ ಗುಳ್ಳವ್ವ ಪಲ್ಲಕ್ಕಿ ಬೇಡಿದಳಂತೆ" ಎಂಬ ಮಾತು ಬರುತ್ತದೆ. ಇದು ಅವಳಲ್ಲಿರುವ ಶಕ್ತಿಯ ಬಗ್ಗೆ ತಿಳಿಸುತ್ತದೆ. ಕುಂಬಾರ ಹದವಾದ ಮಣ್ಣನ್ನು ತಂದು ಚೆನ್ನಾಗಿ ಹದವನ್ನು ಮಾಡಿ ಗುಳ್ಳವನ್ನು ತಯಾರಿಸಿ ಮಾರಾಟಮಾಡುತ್ತಾರೆ. ಗುಳ್ಳವ್ವನನ್ನು ಎರಡು ಆಕಾರದಲ್ಲಿ ಮಾಡುತ್ತಾರೆ. ಮೊದಲನೇ ಎತ್ತರವಾದ ಆಕಾರದಲ್ಲಿ ಮಾಡಿದರೆ ಎರಡನೆಯದು ಲಿಂಗಾಕಾರ ಗುಳ್ಳವ್ವನ ಜೊತೆಗೆ ಚಿಕ್ಕದಾದ ಚನ್ನಮುರಗಿ ಕೊಡುತ್ತಾರೆ.

ಮನೆಗೆ ತಂದ ಗುಳ್ಳವ್ವನಿಗೆ ಗುಲಗಂಜಿ ಮತ್ತು ಬಣ್ಣ ಬಣ್ಣದ ಕುಸಬಿ ಕಾಳುಗಳಿಂದ ಶೃಂಗಾರ ಮಾಡುತ್ತಾರೆ. ಜೊತೆಗೆ ಚಿಕ್ಕ ಚಿಕ್ಕ ಆಕಾರದ ಗುಬ್ಬಿ ಇತರೆ ಪಕ್ಷಿಗಳನ್ನು ಮಾಡುತ್ತಾರೆ. ಯಾಕೆಂದರೆ ಇವು ಭೂತಾಯಿಯ ಮಕ್ಕಳು ಎಂಬುದು ಕೆಲವರ ಭಾವನೆ. ಗುಳ್ಳವ್ವನನ್ನು ಪೂಜಿಸುವುದು ಹೆಣ್ಣು ಮಕ್ಕಳ ಕೆಲಸ, ಮಣ್ಣಿನಿಂದ ಮಾಡಿದ ಆರತಿಯನ್ನು ತೆಗೆದುಕೊಂಡು ಮನೆ ಮನೆಗಳಿಗೆ ತೆರಳಿ ಪೂಜಿಸಿದ ನಂತರ ಗುಳ್ಳವ್ವನ ಸುತ್ತಲೂ ಕುಳಿತು ಹಾಡುಗಳನ್ನು ಹಾಡುತ್ತಾರೆ

**"ಗುಳವ್ವಾ ಗುಳ್ಳವ್ವಾ ಎಂದ ಬರತಿ ಗುಳ್ಳವ್ವಾ.....**
**ಗುಡ್ಡಕ ಹೋಗಿ ಗುಲಗಂಜಿ ತರತೀನಿ ಎಂದ ಬರತಿ......**
**ಇಲಕಲ್‌ಗೆ ಹೋಗಿ ಸೀರಿ ತರತೀನಿ ಎಂದ ಬರತಿ ಗುಳ್ಳವ್ವಾ.....**
**ಗುಳೇದಗುಡ್ಡಕ್ಕ್ ಹೋಗಿ ಖಣಾ ತರತೀನಿ ಎಂದ ಬರತಿ ಗುಳ್ಳವ್ವಾ.....**
**ಗೋಕಾದ ಹೋಗಿ ಕರದಂಟ ತರತೀನಿ ಎಂದ ಬರತಿ ಗುಳ್ಳವ್ವಾ.....**
**ಕೋಲಾರ ಹೋಗಿ ಬಂಗಾರ ತರತೀನೆ ಎಂದ ಬರತಿ ಗುಳ್ಳವ್ವಾ"** ಅದೇ ರೀತಿಯಾಗಿ ಹಾಡುತ್ತಾರೆ.

ನಂತರ ಮುತ್ತೈದೆಯರು ಆರತಿಯನ್ನು ಮಾಡಿ ಒಡಪುಗಳನ್ನು ಹೇಳಿ ಗಂಡನ ಹೆಸರನ್ನು ಹೇಳುವುದು ವಿಶೇಷವಾಗಿದೆ "ಹಂಡೆದಾಗ ಕುಂತ ಉಂಡಿ ತಿಂತಾನ" "ತಲ್ಯಾಗ ತಲಿ, ಹೂವಿನ ಮಾಲಿ, ಹಸರಂಗಿ ತೊಟಗೊಂಡ ದಸರೆಗೆ ಹೋಗ್ತಾನ" "ಹುಳ್ಳಿ ಕಾಳಷ್ಟು ಹೂರಣ, ಮಿಳ್ಳಿ ಕಾಳಿನಷ್ಟು ಕಣಕ ಹೊಳ್ಳೆ ಮುಳ್ಳೆ ಹೋಳಗಿ ಬೇಡ್ತಾನ್" ನಂತರ ಅವರು ಆರತಿಯನ್ನು ಮಾಡಿ ಅಳ್ಳು ಮತ್ತು ಉಂಡಿಗಳನ್ನು ಹಾಕುತ್ತಾರೆ.

ಮರು ದಿವಸ ವಿವಿಧ ರೀತಿಯ ಅಡುಗೆಯನ್ನು ಮಾಡಿಕೊಂಡು ಹೆಣ್ಣು ಮಕ್ಕಳು ಹೊಲ, ತೋಟಕ್ಕೆ, ನದಿ, ಗುಡ್ಡಕ್ಕೆ ಹೋಗಿ ಎಲ್ಲರೂ ದುಂಡಾಗಿ ಕುಳಿತು ಊಟ ಮಾಡಿ ನಂತರ ಆಟವನ್ನು ಆಡಿ ಸಾಯಂಕಾಲ ಹೊತ್ತಿಗೆ ಮನೆಗೆ ಬರುತ್ತಾರೆ.

**ದೀಪಾವಳಿ**

ಹಿಂದೂ ಧರ್ಮಿಯರಿಂದ ತೇರದಾಳ ಪರಿಸರದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ದೀಪಾವಳಿ ಹಬ್ಬವು ಮತ್ತೊಂದು ಪ್ರಮುಖ ಹಬ್ಬವಾಗಿದೆ. ಮುಂಗಾರು ಬೆಳೆ ಕಟಾವಿಗೆ ಬರುವ ಕಾಲದಲ್ಲಿ ಈ ಹಬ್ಬ ಬರುತ್ತದೆ. ಆಶ್ವಯುಜ ಮಾಸದ ಕೊನೆಯ ಎರಡು ದಿನಗಳು ಹಾಗೂ ಕಾರ್ತಿಕ ಮಾಸದ ಮೊದಲನೆಯ ದಿನ ಹಬ್ಬ ನಡೆಯುತ್ತದೆ. ಕೆಲವು ಕಡೆ ಮುಂದಿನ ಎರಡು ದಿವಸಗಳನ್ನೂ ಸೇರಿಸಿಕೊಂಡು ೫ ದಿನ ಹಬ್ಬ ಮಾಡುತ್ತಾರೆ. ಈ ಭಾಗದಲ್ಲಿ ನಡೆಯುವ ಹಬ್ಬಗಳಲ್ಲೆಲ್ಲ ಹೆಚ್ಚು ಸಡಗರ ಸಂಭ್ರಮ ಕಾಣಬರುವುದು ದೀಪಾವಳಿಯಲ್ಲಿ. ಹಬ್ಬದಂದು ಎಣ್ಣೆ ನೀರು ಸ್ನಾನ ಮಾಡಿ ಹೊಸಬಟ್ಟೆ ತೊಟ್ಟು, ದೇವರ ಪೂಜೆ ಮಾಡುತ್ತಾರೆ. ಅನಂತರ ಪಟಾಕಿ, ಬಾಣಬಿರುಸು, ದೀಪಾಲಂಕಾರ, ಹೊಸ ಅಳಿಯನನ್ನು ಹಬ್ಬಕ್ಕೆ ಬರಮಾಡಿಕೊಂಡು ಆಧರಿಸುವುದು ಸಿಹಿ ಊಟ ಮಾಡುವುದು ದೀಪಾವಳಿಯ ವಿಶೇಷ.

ಉತ್ತರ ಭಾರತದಲ್ಲಿ ಇದನ್ನು ದೀವಾಲಿ ಎಂದು ಕರೆಯುತ್ತಾರೆ. ದೀಪಾವಳಿಗೆ ಎರಡು ದಿನ ಮೊದಲು ನೀರು ತುಂಬುವ ಹಬ್ಬ. ಮರುದಿನ ನರಕ ಚತುರ್ದಶಿ–ನರಕಾಸುರ ಎಂಬ ರಾಕ್ಷಸನನ್ನು ಕೃಷ್ಣ ಸಂಹರಿಸಿ ಲೋಕಕ್ಕೆಲ್ಲ ಹರ್ಷವನ್ನುಂಟು ಮಾಡಿದ ಸ್ಮರಣೆಯ ದಿನ. ಅಮಾವಾಸ್ಯೆಯ ದಿನ ದೀಪಾವಳಿ, ಲಕ್ಷ್ಮೀಪೂಜೆ. ಮರುದಿನ ಬಲಿಪಾಡ್ಯಮಿ ಇರುತ್ತದೆ. ವಾಮನನಿಂದ ಪಾತಾಳಕ್ಕೆ ತುಳಿಯಲ್ಪಟ್ಟ ಬಲೀಂದ್ರ ಆ ದಿನ ಭೂಮಿಗೆ ಬರುವನೆಂಬ ನಂಬಿಕೆಯೇ ಬಲಿಪಾಡ್ಯಮಿ ಆಚರಣೆಯ ಮೂಲ. ಅಂದು ಸಗಣಿಯಲ್ಲಿ ಸಂಜೆ ಬಲೀಂದ್ರನ ಪೂಜೆ ನಡೆಯುತ್ತದೆ. ಐದು ದಿನ ಹಬ್ಬ ಮಾಡುವವರು ಮಾರನೆಯ ದಿನ "ಬಂಧು ದ್ವಿತಿಯೆ" ಆಚರಿಸುತ್ತಾರೆ. ಅಂದು ಅಣ್ಣ ತಮ್ಮಂದಿರು ಸಹೋದರಿಯ ಮನೆಗೆ ಊಟಕ್ಕೆ ಹೋಗುತ್ತಾರೆ. ಐದನೆಯ ದಿನ 'ಭಗಿನಿ ತೃತೀಯೆ' ಅಣ್ಣ ತಮ್ಮಂದಿರು ಸಹೋದರಿಯನ್ನು ಕರೆದು ಹಬ್ಬದೂಟ ಮಾಡಿಸಿ, ಉಡುಗೊರೆ ಕೊಡುತ್ತಾರೆ. ಬಂಗಾಳದಲ್ಲಿ ದೀಪಾವಳಿಯಲ್ಲಿ ಕಾಳಿಪೂಜೆ ನಡೆಯುತ್ತದೆ. ದೀಪಾವಳಿ ದಿನ ತಾನು ಸೆರೆಯಲ್ಲಿಟ್ಟಿದ್ದ ಗುರು ಹರಗೋವಿಂದರನ್ನು ಜಹಾಂಗಿರ್ ಬಿಡುಗಡೆ ಮಾಡಿದ ಸಿಖ್ಖರು ಆ ದಿನ ಅಮೃತಸರದಲ್ಲಿರುವ ಸ್ವರ್ಣ ಮಂದಿರಕ್ಕೆ ಭೇಟಿ ಕೊಟ್ಟು ಅಲ್ಲಿರುವ ಕೊಳದಲ್ಲಿ ಸ್ನಾನ ಮಾಡುತ್ತಾರೆ[೩೯]. ಜೈನರಿಗೂ ದೀಪಾವಳಿ ಪವಿತ್ರ ದಿನ ಅಂದು ಆ ಮತ ಸ್ಥಾಪಕ ಮಹಾವೀರ ನಿರ್ವಾಣ ಹೊಂದಿದ ದಿನ ಅದು. ಆ ದಿನ ತೇರದಾಳ ಸಮೀಪದ ಹಳಿಂಗಳಿಯ ಭದ್ರಗಿರಿಯ ಜಲಮಂದಿರದಲ್ಲಿ ಶ್ರೀ ೧೦೮ ಕುಲರತ್ನ ಮಹಾರಾಜರ ಸಮ್ಮುಖದಲ್ಲಿ

ಭಕ್ತಿಯಿಂದ ವಿಶೇಷವಾಗಿ ದೀಪೋತ್ಸವವನ್ನು ಆಚರಿಸುತ್ತಾರೆ. ಗುಜರಾತದಲ್ಲಿ ದೀಪಾವಳಿಯಿಂದ ಹೊಸ ವರ್ಷ ಆರಂಭವಾಗುತ್ತದೆ. ನೇಪಾಳದಲ್ಲಿ ದೀಪಾವಳಿ ಐದು ದಿವಸ ನಡೆಯುತ್ತದೆ. ವ್ಯಾಪಾರಿಗಳು ದೀಪಾವಳಿಯಂದು ತಮ್ಮ ಲೆಕ್ಕವನ್ನು ಮುಗಿಸಿ, ಹೊಸ ಲೆಕ್ಕ ಆರಂಭಿಸುತ್ತಾರೆ. ಜೂಜಾಡಲು ಪ್ರಶಕ್ತ ದಿನ ದೀಪಾವಳಿ ಎಂದು ಕೆಲವರು ನಂಬಿಕೆ.

ದೀಪಗಳನ್ನು ಬೆಳಗುವ ಹಿಂದಿರುವ ಪುರಾಣದ ಕಥೆ ಭಾರತದ ಉತ್ತರ ಭಾಗದಲ್ಲಿ ಪ್ರಸಿದ್ಧಿ ಕಥೆಯೊಂದರಂತೆ ಹಿಂದೆ ಶ್ರೀ ರಾಮನು ತನ್ನ ಮಡದಿ ಹಾಗೂ ತಮ್ಮನೊಡನೆ ೧೪ ವರ್ಷಗಳ ಕಾಲ ವನವಾಸ ಮುಗಿಸಿಕೊಂಡು ಅಯೋಧ್ಯೆಗೆ ಮರಳಿ ಬಂದ ಸಮಯವೆಂದು ಸಾಂಪ್ರದಾಯಿಕವಾಗಿ ದೀಪಗಳಿಂದ ಬೆಳಗುತ್ತಾರೆ. ಹೀಗಾಗಿ ದೀಪಗಳನ್ನು ಬೆಳಗುವ ಸಂಪ್ರದಾಯವು ಮುಂದುವರಿದಿದೆ. ಭಾರತದ ದಕ್ಷಿಣ ಭಾಗದಲ್ಲಿ ಜನರು ಕುಖ್ಯಾತ ರಾಕ್ಷಸನಾಗಿದ್ದ ನರಕಾಸುರನನ್ನು ದುರ್ಗಾದೇವಿಯು ಇದೇ ಸಮಯದಲ್ಲಿ ಸಂಹಾರ ಮಾಡಿದ ವಿಜಯವನ್ನು ಆಚರಿಸಲು ದೀಪಗಳನ್ನು ಬೆಳಗುತ್ತಾರೆ. ಆದ್ದರಿಂದ ದಕ್ಷಿಣ ಭಾರತದಲ್ಲಿ ಜನರು ಕತ್ತಲೆ ಸಾಗಿ ಬೆಳಕು ಬರುವ ಹಬ್ಬ ಅಂದರೆ "ದುಷ್ಟಶಕ್ತಿಯ ಮೇಲಿನ ವಿಜಯವನ್ನು ಆಚರಿಸಲು ನರಕಚತುರ್ದಶಿಯಂದು ದೀಪಗಳನ್ನು ಬೆಳಗುತ್ತಾರೆ".

ದೀಪಾವಳಿಯ ಜೈನ ಧರ್ಮದಲ್ಲಿ ಕಡೆಯ ತೀರ್ಥಂಕರ ಮಹಾವೀರರು ಕಾರ್ತಿಕ ಅಮವಾಸೆಯಂದು ಕ್ರಿ.ಪೂ.೪೨೭ ಅಕ್ಟೋಬರ್ ೧೪ ಪಾವಾಪೂರಿಯಲ್ಲಿ ಮೋಕ್ಷಹೊಂದಿದ ದಿನವಾಗಿ ಅವರು ಭಕ್ತಿಯಿಂದ ಹಬ್ಬವನ್ನು ಆಚರಿಸುತ್ತಾರೆ. ಇಂದಿಗೂ ಸಹ ಪ್ರತಿವರ್ಷ ದೀಪಾವಳಿಗೆ ಬಿಹಾರ ರಾಜ್ಯದ ಪಾವಾಪೂರ ಪದ್ಮಸರೋವರ ಜಲಮಂದಿರದಲ್ಲಿ ದೀಪೋತ್ಸವ ಬಹುವಿಜೃಂಭಣೆಯಿಂದ ಜರುಗುತ್ತದೆ. ಆ ಬಿಹಾರ ರಾಜ್ಯದ ಮಹಾವೀರರ ನಿರ್ವಾಣಭೂಮಿ ಜಲಮಂದಿರದ ಪ್ರತಿಕೃತಿ ಎಂದೇ ಪ್ರಸಿದ್ಧಿಯಾದ ತೇರದಾಳ ಪರಿಸರದ ಹಳಿಗಂಳಿ ಭದ್ರಗಿರಿಯ ಕೃತ್ರೀಮ ಪದ್ಮಸರೋವರ ಜಲಮಂದಿರವೂ ದಕ್ಷಿಣ ಭಾರತದಲ್ಲಿ ತನ್ನದೇಯಾದ ಛಾಪು ಮೂಡಿಸಿದೆ. ಪ್ರತಿವರ್ಷ ದೀಪಾವಳಿಯ ಅಮಾವಾಸ್ಯೆಯಂದು ಮುಂಜಾನೆ ಬ್ರಾಹ್ಮೀ ಮುಹೂರ್ತದಲ್ಲಿ ಭಗವಾನ್ ಮಹಾವೀರ ಮೋಕ್ಷ ಕಲ್ಯಾಣ ಮಹಾಮಹೋತ್ಸವ ಪೂಜೆ ಸಾಯಂಕಾಲ ವಿದ್ಯುತ್ ದೀಪಗಳಿಂದ ಅಲಂಕೃತ ಜಲಮಂದಿರದಲ್ಲಿ ಸಹಸ್ರ-ಸಹಸ್ರ ದೀಪೋತ್ಸವಕ್ಕೆ ಲಕ್ಷಾಂತರ ಭಕ್ತರು ಆಗಮಿಸುವ ಕಾರ್ಯ ಜರುಗುತ್ತದೆ.

ದೀಪಾವಳಿ ಹಬ್ಬವನ್ನು ಸಾಮಾನ್ಯವಾಗಿ ಅಶ್ವಯುಜ ಮಾಸ ಕೃಷ್ಣಪಕ್ಷದ ಚತುರ್ದಶಿ, ಅಮವಾಸ್ಯೆ ಹಾಗೂ ಕಾರ್ತಿಕ ಮಾಸ ಶುಕ್ಲಪಕ್ಷದ ಪಾಢ್ಯ ಈ ದಿನಗಳಲ್ಲಿ ದೀಪಾವಳಿಯನ್ನು ಆಚರಿಸಲಾಗುತ್ತದೆ. ದೀಪಾವಳಿ ಹಬ್ಬ ಸಾಮಾನ್ಯವಾಗಿ ಅಕ್ಟೋಬರ್ ಅಥವಾ ನವೆಂಬರ್ ತಿಂಗಳಿನಲ್ಲಿ ಆಚರಿಸಲಾಗುತ್ತದೆ.

ಈ ಮೇಲಿನ ಹಬ್ಬಗಳೊಂದಿಗೆ ತೇರದಾಳ ಪರಿಸರದ ಜನಪದರು ಪ್ರತಿ ಅಮಾವಾಸ್ಯೆ ಮತ್ತು ಹುಣ್ಣಿಮೆಗಳನ್ನು ಪ್ರತಿ ತಿಂಗಳು ಆಚರಿಸುವ ರೂಢಿ ಇಟ್ಟುಕೊಂಡಿದ್ದಾರೆ. ಇವುಗಳಲ್ಲಿ ಕಾರ ಹುಣ್ಣಿಮೆ ಕುರಿತ ವಿವರ ಇಲ್ಲಿದೆ.

**ಕಾರ ಹುಣ್ಣಿಮೆ ಮತ್ತು ಮಣ್ಣೆತ್ತಿನ ಅಮಾವಾಸ್ಯೆ**

ಕಾರ ಹುಣ್ಣಿಮೆ ಹಬ್ಬಗಳ ಕರಕೊಂಡು ಬಂತು ಹೋಳಿ ಹುಣ್ಣಿಮೆ ಹೊಯ್ದುಕೊಂಡು (ಬಾಯಿ ಬಡಿದುಕೊಂಡು) ಹೋಯ್ತು. ಎಂಬ ಹಿರಿಯರ ನುಡಿ ಅಷ್ಟೆ ಸತ್ಯ. ವೈಶಾಖದ ಬಿಸಿಲ ಬೇಗೆಯಿಂದ ತಂಪಿನಡೆಗೆ ಮೋಡಗಳನ್ನು ನೋಡುತ್ತಾ ಮಳೆಯಾದೊಡನೆ ಬೀಜ ಬಿತ್ತುವ ತವಕದಿಂದ ರೈತ ಇರುವಾಗ ಮಳೆಮೋಡಗಳ ಮೂಲಕ ಬರುವುದು. ಕಾರ ಹುಣ್ಣಿಮೆ. ಅದೇ ರೀತಿ ರೈತಾಪಿಗಳು ಸಡಗರದಿಂದ ಪೂಜಿಸುವ ಮತ್ತೊಂದು ಹಬ್ಬವೇ ಮಣ್ಣೆತ್ತಿನ ಅಮವಾಸ್ಯೆ

**ಪೂಜ್ಯಭಾವ.......**
**ಮಣ್ಣನ್ನೇ ನಂಬಿ ಮಣ್ಣಿಂದ ಬದುಕೇನ**
**ಮಣ್ಣೆ ನಗೆ ಮುಂದೆ ಹೊನ್ನ ಅಣ್ಣಯ್ಯ**
**ಮಣ್ಣೆ ಲೋಕದಲ್ಲಿ ಬೆಲೆಯಾದ್ದು ......**

ಎಂದು ಹುಟ್ಟಿನಿಂದ ಚಟ್ಟದವರೆಗೂ ಮಣ್ಣ ಜೊತೆಗೆ ನಮ್ಮ ಬದುಕಿನಲ್ಲಿ ಆ ಮಣ್ಣಿನಿಂದ ಆರಂಭವಾಗುವ ಮಣ್ಣೆತ್ತಿನ ಅಮಾವಾಸ್ಯೆ. ಈ ಅಮಾವಾಸ್ಯೆಗೆ ತಮ್ಮ ಮನೆಯ ಎತ್ತುಗಳನ್ನು ಸಿಂಗರಿಸುವುದಷ್ಟೇ ಅಲ್ಲ. ಎತ್ತುಗಳು ಇರಲಿ ಇಲ್ಲದಿರಲಿ ಎಲ್ಲರೂ ಗೌರವಿಸುವರು. ಕುಂಬಾರ ಮಾಡಿದ ಮಣ್ಣಿಂದ ಎತ್ತಿನ ಮೂರ್ತಿಗಳನ್ನು ತಂದು ಅವುಗಳನ್ನು ಮನೆಯಲ್ಲಿ ಇಟ್ಟು ಅಮಾವಾಸ್ಯೆಯಂದು ಪೂಜಿಸುವರು, ಅಮಾವಾಸ್ಯೆ ದಿನ ಎತ್ತುಗಳನ್ನು ಸಿಂಗರಿಸಿ ಅವುಗಳಿಗೂ ಕೂಡಾ ವಿಶಾಂತ್ರಿ ನೀಡುವ ಜೊತೆಗೆ ಪೂಜ್ಯನೀಯವಾಗಿ ಪೂಜಿಸುವರು ಅವುಗಳಿಗೆ ಉತ್ತಮ ಆಹಾರ ನೀಡುವುದು. ಚೆನ್ನಾಗಿ ನೋಡಿಕೊಳ್ಳುವುದು ಮುಂದೆ ಶ್ರಾವಣ ಆರಂಭವಾಗುವ ಹೊತ್ತಿಗೆ ಅವು ವಿಶ್ರಾಂತಿಯಿಂದ ಮತ್ತೆ ಹೊಲ-ಗದ್ದೆಗಳ ಕೆಲಸಕ್ಕೆ ಅಣಿಯಾಗಲೆಂದು ಪೂಜಿಸುವರು. ಅಷ್ಟೇ ಅಲ್ಲ ಮಣ್ಣಿನಿಂದ ಮಾಡಿದ ಮೂರ್ತಿಗಳನ್ನು ಜಗುಲಿಯ ಮೇಲಿಟ್ಟು ನಾಗರ ಪಂಚಮಿಯ ನಂತರದ ದಿನ ಕೆರೆಕಟ್ಟಂಬಲೆ ಅಂತಾ ಆಚರಿಸುವರು. ಆ ದಿನ ಮಣ್ಣೆತ್ತಿನ ಅಮವಾಸ್ಯೆ ಪೂಜಿಸಿದ ಮೂರ್ತಿಗಳನ್ನು ಮನೆಯಲ್ಲಿ ಅಂಬಲಿ ಮಾಡಿಕೊಂಡು ಹೊಲಕ್ಕೆ ಒಯ್ದು ಒಂದೆಡೆ ಬೇವಿನ ಮರವಿದ್ದರೆ ಅವುಗಳ ಕೆಳಗೆ ಇಟ್ಟು ಅಂಬಲಿ ಎಡೆ ಹಿಡಿದು ಬರುವರು. ಅಂಬಲಿ ಕುಡಿದು ಮನಸ್ಸು ಹೇಗೆ ತನ್ನಗಿದ್ದು ಮತ್ತೆ ಚೇತನಗೊಳ್ಳುವುದೋ ಹಾಗೆ ತನ್ನ ಜಾನುವಾರುಗಳ ಬದುಕು ಕೂಡ ತನ್ನಂತೆ ವರ್ಷವಿಡೀ ಉತ್ತಮ ರೀತಿಯಿಂದ ಕೂಡಿರಲಿ ಎಂಬ ಭಕ್ತಿ ಭಾವದಿಂದ ಈ ಹಬ್ಬವನ್ನು ಆಚರಿಸಲಾಗುತ್ತದೆ.

**ಮುಸ್ಲಿಂರ ಪ್ರಮುಖ ಹಬ್ಬಗಳು**

ಹಿಂದೂಗಳಂತೆ ತೇರದಾಳ ಪರಿಸರದಲ್ಲಿ ವಾಸವಾಗಿರುವ ಮುಸ್ಲಿಂ ಧರ್ಮಿಯರು ಸಹ ರಮಜಾನ್, ಬಕ್ರೀದ್, ಮೊಹರಂ ಮೊದಲಾದ ಹಲವಾರು ಹಬ್ಬಗಳನ್ನು ಆಚರಿಸುತ್ತಾರೆ ಆ ಕುರಿತ ವಿವರ ಇಂತಿದೆ.

**ರಮಜಾನ್**

ತೇರದಾಳ ಭಾಗದ ಮುಸ್ಲಿಂರು ಆಚರಿಸುವ ಹಬ್ಬಗಳಲ್ಲಿ ರಮಜಾನ ಹಬ್ಬವು ಒಂದಾಗಿದೆ. ಈ ರಮಜಾನವು 'ರಮ್ಮಜಾನ ತಿಂಗಳಲ್ಲಿ' ಬರುತ್ತದೆ ಇದರ ಮೊದಲ 'ಶಾಬಾನ್' ತಿಂಗಳಲ್ಲಿ

ರೋಜಾ (ಉಪವಾಸ) ಇರುವುದಾಗಿದೆ. ಇದನ್ನು ಒಂದು ತಿಂಗಳಲ್ಲಿ ೩೦ ರೋಜಾ ಇರುವುದು ಕಡ್ಡಾಯವಾಗಿದೆ.

ಮುಸ್ಲಿಂ ರೋಜಾ ತಿಂಗಳ ಮೊದಲೇ ಒಂದು ತಿಂಗಳಿಂದ ತಯಾರಿ ಮಾಡುವುದಾಗಿದೆ ರಂಜಾನ ಮುಸ್ಲಿಂ ಸಮುದಾಯದ ಪ್ರಮುಖ ಹಬ್ಬವಾಗಿದೆ. ರಂಜಾನ್ ತಿಂಗಳಲ್ಲಿ ರೋಜಾ ಮಾಡುವುದೆಂದರೆ ಮುಂಜಾನೆ ಸೂರ್ಯ ಉಗಮದ ಮೊದಲು ಊಟ ಸೇವನೆ ಮಾಡುವುದು ನಂತರ ಅದರ ಪ್ರಾರ್ಥನೆ ಮಾಡುವುದು. "ಬಿಸೋಮ ಗದಿನ ನವಾಯಿತು ಮಿನ್ ರಹರಿ ರಂಜಾನ್" ಇದು ಪೂರ್ಣ ದಿನ ಒಂದು ಹನಿ ನೀರನ್ನು ಸಹ ಕುಡಿಯುವ ಹಾಗಿಲ್ಲ ನಂತರ ಸಂಜೆಗೆ 'ಮೊಗರಿಬ್' ಸಮಯದಲ್ಲಿ ಉಪವಾಸ ಬಿಡಬೇಕು ಅದನ್ನು ಪ್ರಾರ್ಥನೆ ಹೇಳುವ ಮುಖಾಂತರ "ಖರ್ಜುರಿ" ಸಿಹಿತಿಂಡಿ ಸೇವನೆ ಮಾಡಿ ಬಿಡುವುದಾಗಿದೆ. ರಂಜಾನ್ ರೋಜಾ ಮುಗಿದ ನಂತರ ರಂಜಾನ್ ದಿನದಂದು ಬೇಗನೆ ಎದ್ದು "ಸುರ ಕುರ್ಮಾ" ಮಾಡುವುದು. ಇದೊಂದು ಸಿಹಿಯಾದ ಪದಾರ್ಥವಾಗಿದೆ. ಇದು ಮಾಡುವುದು ಕಡ್ಡಾಯ, ಎಲ್ಲಾರೂ ಒಬ್ಬರಿಗೊಬ್ಬರು ಶುಭಾಶಯ ಕೋರುವುದು ಮತ್ತು ಹೊಸ ಬಟ್ಟೆಯನ್ನು ಧರಿಸಬೇಕು. ಆ ದಿನ ಕಡ್ಡಾಯವಾಗಿ ಮಹಿಳೆಯರು ಮನೆಯಲ್ಲಿ ಮತ್ತು ಪುರುಷರು 'ಈದ್ಗಾ'ದಲ್ಲಿ ನಮಾಜವನ್ನು ಮಾಡುತ್ತಾರೆ.

**ಬಕ್ರೀದ್**

ಮುಸ್ಲಿಂರಿಂದ ತೇರದಾಳ ಪರಿಸರದಲ್ಲಿ ಆಚರಿಸುವ ಹಬ್ಬಗಳಲ್ಲಿ ಬಕ್ರೀದ್ ಹಬ್ಬವು ಒಂದಾಗಿದೆ. ಈ ಹಬ್ಬದಲ್ಲಿ ಪ್ರಮುಖವಾಗಿ ಪ್ರಾಣಿಬಲಿಯನ್ನು ಕೊಡುವುದು. ಇದನ್ನು "ಜಿಲ್ ಹಜ್ಜಾ" ತಿಂಗಳಲ್ಲಿ ಮಾಡುವುದಾಗಿದೆ. ಈ ಸಂದರ್ಭದಲ್ಲಿಯೂ ಸಹ ನಮಾಜ ಮಾಡುವುದು ಕಡ್ಡಾಯವಾಗಿದೆ. ದೇವರಲ್ಲಿ ನಂಬಿಕೆಯಿಂದ ತಮ್ಮ ಸಾಮರ್ಥ್ಯವಿದ್ದರೆ ಪ್ರಾಣಿಬಲಿಯನ್ನು ಕೊಡುತ್ತಾರೆ, ಇದರಲ್ಲಿ ದಾನವನ್ನು ಬಡವರಿಗೆ ನೀಡುವುದು. ತಮ್ಮ ಹಣದ ಮತ್ತು ಬಂಗಾರದ, ಆಸ್ತಿಗಳ ಮೇಲಿನ 'ಜಕಾತ್'/ಹಣವನ್ನು ಕೊಡುವುದು ಕಡ್ಡಾಯವಾಗಿದೆ. ಇದರಲ್ಲಿ ಪ್ರಾಣಿಬಲಿಯನ್ನು ಕೊಟ್ಟು ಅಂದರೆ "ಕುರ್ಬಾನಿ"ಯನ್ನು ಮುಸ್ಲಿಂ ಸಮುದಾಯದಲ್ಲಿ ಒಬ್ಬರಿಗೊಬ್ಬರು ಹಂಚುವುದಾಗಿದೆ. ಈ ತಿಂಗಳಲ್ಲಿ ಹೆಚ್ಚಾಗಿ 'ಹಜ್' ಯಾತ್ರೆಯನ್ನು ಕೈಗೊಳ್ಳಲಾಗುತ್ತದೆ. ಈ ದಿನವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಎಲ್ಲಾ ಸಂಬಂಧಿಕರ ಮನೆಗೆ ಹೋಗಿ ಊಟ-ಉಪಚಾರ ಮಾಡುತ್ತಾರೆ. ರಂಜಾನ್ ಬಕ್ರೀದ್‌ಗಿಂತ ಸಂಭ್ರಮದಿಂದ ಕೂಡಿರುತ್ತದೆ. ಇದು ಹಲವಾರು ಸಂಸ್ಕೃತಿ ಹೊಂದಿದೆ.

**ಮೊಹರಂ**

ಮುಸ್ಲಿಂರಿಗೆ ಇದು ದುಃಖದ ತಿಂಗಳಾಗಿದ್ದು, ಈ ಹಬ್ಬವನ್ನು ಸಹ ತೇರದಾಳ ಪರಿಸರದ ಮುಸ್ಲಿಂರು ಆಚರಿಸುತ್ತಾರೆ. ಈ ತಿಂಗಳಲ್ಲಿ ಮೂರು ರೋಜಾವನ್ನು ಆಚರಿಸುತ್ತಾರೆ. ಇದು ಹಸೇನ್ ಮತ್ತು ಹುಸೇನರವರು ಯುದ್ದದಲ್ಲಿ ಮರಣ ಹೊಂದಿದ ನೆನಪಿಗಾಗಿ ದುಃಖದ ಹಬ್ಬವಾಗಿ ಆಚರಿಸುತ್ತಾರೆ. ಇದನ್ನು ಹಿಂದೂಗಳು ಸಹ ಆಚರಿಸುತ್ತಾರೆ. ಈ ಹಬ್ಬದಲ್ಲಿ ಮಾಡುವ ಪ್ರಮುಖವಾದ ಆಹಾರ ತಿನಿಸುಗಳೆಂದರೆ ಚೊಂಗೆ, ಕುದರಿ, ಮಾದಲಿ ಮಾಡಿ ಪರಸ್ಪರ ಹಂಚಿಕೊಂಡು ತಿನ್ನುತ್ತಾರೆ. ನಂತರ ಪಾನೀಯವಾದ ಶರಭತ್‌ಅನ್ನು ದರ್ಗಾದಲ್ಲಿ ಬಳಿ ಇರುವ

ಭಕ್ತರಿಗೆ ಹಂಚುತ್ತಾರೆ. ಇವರಲ್ಲಿ ಬಕ್ರೀದ್ ಹಬ್ಬದಂತೆ ಈದ್ ಮಿಲಾದ್ ಮತ್ತು ಹಿರಿಯರು ಸತ್ತ ನೆನಪಿಗಾಗಿ ಈದ್-ಉಲ್-ಪಿತುರ್ ಆಚರಿಸುತ್ತಾರೆ.

ಹಿಂದೂ ಮುಸ್ಲಿಂರಂತೆ ತೇರದಾಳ ಪರಿಸರದಲ್ಲಿ ನೆಲೆಸಿರುವ ಇತರೆ ಸಮುದಾಯಗಳು ಅಂದರೆ ಜೈನ, ಕ್ರೈಸ್ತ ಧರ್ಮಿಯರು ಸಹ ತಮ್ಮ ಧರ್ಮಗಳಿಗೆ ಸಂಬಂಧಿಸಿದ ಹಬ್ಬಗಳನ್ನು ಬಹಳ ಸಂಭ್ರಮದಿಂದ ಆಚರಿಸುವ ಪರಿಪಾಠವನ್ನು ಇಟ್ಟುಕೊಂಡಿದ್ದಾರೆ. ಈ ಎಲ್ಲಾ ಹಬ್ಬಗಳು ಅಧ್ಯಯನ ದೃಷ್ಟಿಯಿಂದ ಪ್ರಮುಖವಾಗಿದ್ದು ನಮ್ಮ ನಾಡಿನ ಪರಂಪರೆಯ ದ್ಯೋತ್ಯಕಗಳಾಗಿವೆ.

**೩.೩.೨. ಜಾತ್ರೆ – ಉತ್ಸವಗಳು**

ತೇರದಾಳ ಪರಿಸರದಲ್ಲಿ ನಡೆಯುವ ಹಬ್ಬಗಳಂತೆ ಇಲ್ಲಿ ನಡೆಯುವ ಜಾತ್ರೆ ಮತ್ತು ಉತ್ಸವಗಳು ನಮ್ಮ ಸಂಸ್ಕೃತಿಯ ಪರಂಪರೆಯ ದ್ಯೋತಕಗಳಾಗಿವೆ. ಈ ಹಿನ್ನಲೆಯಲ್ಲಿ ಈ ಭಾಗದಲ್ಲಿ ನಡೆಯುವ ಪ್ರಮುಖ ಜಾತ್ರೆ ಮತ್ತು ಉತ್ಸವಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕಾಲತಿಪ್ಪಿ ಆಂಜನೇಯ ಸ್ವಾಮಿ ಜಾತ್ರೆ

ತೇರದಾಳ ಪರಿಸರದಲ್ಲಿ ಬರುವ ಕಾಲತಿಪ್ಪೆಯಲ್ಲಿ ಶ್ರೀ ಆಂಜನೇಯ ಸ್ವಾಮಿಯ ಜಾತ್ರೆಯು ಪ್ರತಿವರ್ಷ ನಡೆಯುತ್ತದೆ. ಸಾಮಾನ್ಯವಾಗಿ ಇದು ಡಿಸೆಂಬರ್ ತಿಂಗಳ ಕಾರ್ತೀಕ ಶುದ್ಧ ಹೊಸ್ತಲ ಹುಣ್ಣಿಮೆಯ ನಂತರ ಅಥವಾ ಅದರ ಒಳಗೆ ಬರುವ ಶುಕ್ರವಾರದಂದು ಬೆಳಿಗ್ಗೆ ಜರುಗುತ್ತದೆ. ಜಾತ್ರೆಯು ಸಮಯದಲ್ಲಿ ಪಲ್ಲಕ್ಕಿ, ಉತ್ಸವ ಮೊದಲಾದ ಕಾರ್ಯಕ್ರಮಗಳನ್ನು ವಿಜೃಂಭಣೆಯಿಂದ ಜರುಗಿಸಲಾಗುತ್ತದೆ. ಮೊದಲ ದಿನ ಎಲ್ಲಾ ದೈವದವರು ಸೇರಿ ದೇವಸ್ಥಾನದ ಮುಂದೆ ಹಂದರ ಹಾಕುತ್ತಾರೆ. ನಂತರ ಸಾಯಂಕಾಲ ಸ್ವಾಮಿಗೆ ಪೂಜೆ ಮಾಡಿ ಅಲಂಕರಿಸಲಾಗುತ್ತದೆ. ಇಲ್ಲಿಯೇ ಸೋಮವಾರ ದಿನ ಸಾಯಂಕಾಲ ಓಕಳಿ ನಡೆಯುತ್ತದೆ. ನಂತರ ಉತ್ಸವ ಮೂರ್ತಿಯನ್ನು ೮ ಗಂಟೆಗೆ ತೊಟ್ಟಿಲದಲ್ಲಿ ಕೂರಿಸಿ ತೊಟ್ಟಿಲ ತೂಗುವುದರ ಮೂಲಕ ತೊಟ್ಟಿಲ ಪೂಜೆ ಮಾಡುತ್ತಾರೆ. ಮಕ್ಕಳ ಆಪೇಕ್ಷೆ ಇರುವವರು ಈ ಒಂದು ಕಾರ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಾರೆ.

ಈ ದೇವಾಲಯದಲ್ಲಿ ಇತರೆ ಬಿಡಿ ದಿನಗಳಲ್ಲಿಯೂ ಕೆಲ ಆಚರಣೆಗಳನ್ನು ಮಾಡಲಾಗುತ್ತದೆ. ಮೂಲ ವಿಗ್ರಹಕ್ಕೆ ಯುಗಾದಿಗೆ ೧೦೧ ಕೊಡ ನೀರು ಹಾಕುವುದು, ಮತ್ತು ಪಂಚಾಮೃತದಿಂದ ಅಭಿಷೇಕ ಮಾಡಲಾಗುತ್ತದೆ. ವಿಜಯದಶಮಿಯ ಹಬ್ಬದಲ್ಲಿ ದಶಮಿಗೂ ಮುಂಚೆ ಬರುವ ಶನಿವಾರದಂದು ಶ್ರೀ ಸ್ವಾಮಿಯನ್ನು ಪಲ್ಲಕ್ಕಿ ಉತ್ಸವದ ಮೂಲಕ ಪೂಜಿಸಿ ನಂತರ ತಿಮ್ಮಯ್ಯನ ಗುಡ್ಡಕ್ಕೆ ಹೋಗಿ ರಾತ್ರಿಯಲ್ಲಾ ಭಕ್ತರು ಸೇರಿ ಪೂಜೆ ಸಲ್ಲಿಸುತ್ತಾರೆ. ಸೇರಿರುವ ಎಲ್ಲಾ ಜನರಿಗೆ ಪ್ರಸಾದ ವ್ಯವಸ್ಥೆ ಇರುತ್ತದೆ. ನಂತರ ಮುಂಜಾನೆ ಮೂಲ ಗುಡಿಗೆ ದೇವರನ್ನು ಕರೆತರಲಾಗುತ್ತದೆ. ಅದೇ ರೀತಿ ವಿಜಯದಶಮಿಯ ನವಮಿ ದಿನ ಬನ್ನಿಯನ್ನು ಮುಡಿಯುವ ಕಾರ್ಯಕ್ರಮವನ್ನು ನೇರವೇರಿಸಿ ಭಕ್ತಾದಿಗಳಿಗೆಲ್ಲಾ ಬನ್ನಿ ನೀಡಿ ಆರ್ಶೀವದಿಸಲಾಗುತ್ತದೆ. ಅಲ್ಲದೇ ಇಲ್ಲಿ ಪ್ರತೀ ಶನಿವಾರ ವಿಶೇಷ ಪೂಜೆ ಉತ್ಸವಗಳು ಜರುಗುತ್ತವೆ[೪೦].

**ತೇರದಾಳ ಅಲ್ಲಮಪ್ರಭು ದೇವರ ಜಾತ್ರೆ**

ಈ ಪರಿಸರದಲ್ಲಿ ನಡೆಯುವ ಜಾತ್ರೆಗಳಲ್ಲಿ ತೇರದಾಳದ ಅಲ್ಲಮಪ್ರಭು ದೇವರ ಜಾತ್ರೆ ಮುಖ್ಯವಾಗಿದ್ದು, ಅಧ್ಯಯನ ದೃಷ್ಟಿಯಿಂದ ಪ್ರಮುಖವಾಗಿದೆ. ಇದು ಸಾಮಾನ್ಯವಾಗಿ ನಾಲ್ಕನೆಯ ಶ್ರಾವಣ ಸೋಮವಾರ ದಿವಸ ಬಹು ವಿಜೃಂಭಣೆಯಿಂದ ಜರಗುವುದು. ಈ ಅವಧಿಯಲ್ಲಿ ಅಭಿಷೇಕ, ಗಂಗಾಪೂಜೆ, ಪಲ್ಲಕ್ಕಿ ಉತ್ಸವ, ನಂದಿಕೋಲ ಉತ್ಸವ ವಿಶೇಷವಾಗಿ ಜರುಗುತ್ತವೆ. ಅಲ್ಲದೇ ಜಾತ್ರೆಯ ಸಮಯದಲ್ಲಿ ಪ್ರತಿನಿತ್ಯವೂ ಅನ್ನ ಪ್ರಸಾದದ ಸಮಿತಿಯವರು ಪ್ರಸಾದ ವ್ಯವಸ್ಥೆಯನ್ನು ಬಹು ಅಚ್ಚು ಕಟ್ಟಾಗಿ ನೆರವೇರಿಸುವರು.

ಶ್ರಾವಣ ಸೋಮವಾರಂದು ಬೆಳಗ್ಗೆ ಮುಂಜಾನೆಯ ನಸುಕಿನ ವೇಳೆಯಲ್ಲಿ ಎಲ್ಲ ಪುರುಷ ಹಾಗೂ ಮಹಿಳಾ ಭಕ್ತರೆಲ್ಲರೂ ತಮ್ಮ ಇಷ್ಟಾರ್ಥ ಈಡೇರಿಕೆಗಾಗಿ ಇಲ್ಲಿ ವಿಶೇಷವಾಗಿ ದೀಡ್ ನಮಸ್ಕಾರವನ್ನು ಹಾಕುತ್ತಾರೆ. ಇಲ್ಲಿ ಹರಕೆ ಹೊತ್ತವರು, ಮಕ್ಕಳಾಗದವರು, ಮದುವೆಯಾಗದವರು, ರೋಗರುಜಿನಕ್ಕೆ ಒಳಗಾದವರು, ಖಾಯಿಲೆಯಿಂದ ವಾಸಿಯಾದವರು, ಅಪೇಕ್ಷಿಸಿದ ಫಲ ದೊರೆಯಬೇಕೆಂಬುವವರು ವಿಶೇಷವಾಗಿ ದೀಡ್ ನಮಸ್ಕಾರ ಹಾಕುತ್ತಾರೆ.

ದೀಡ್ ನಮಸ್ಕಾರ ಹಾಕುವುದೆಂದರೆ ಒಂದು ರೀತಿಯಲ್ಲಿ ದೇವರನ್ನು ತೃಪ್ತಿಗೊಳಿಸುವುದು ಎಂಬರ್ಥದಲ್ಲಿ ನೋಡಬಹುದಾಗಿದೆ. ದೀಡ್ ನಮಸ್ಕಾರವನ್ನು ಹಾಕುವವರು ಒಂದು ಕೊಡ ನೀರಿನಿಂದ ಅಡಿಯಿಂದ ಮುಡಿಯ ತನಕ ಸುರಿದುಕೊಂಡು ತಮ್ಮ ಮೈಯನ್ನು ತೊಳೆದುಕೊಳ್ಳುತ್ತಾರೆ. ಹಸಿ/ವದ್ದೆ ಬಟ್ಟೆಯಿಂದಲೇ ದೀಡ್ ನಮಸ್ಕಾರ ಹಾಕುವ ಪರಂಪರೆ ಇದೆ. ಹತ್ತಿರದ ಸ್ಥಳದಿಂದ ಅಥವಾ ಕೆರೆಯ/ನದಿಯ ದಂಡೆಯಿಂದ ಮೈಯನ್ನು ತೊಯ್ಸಿಕೊಂಡು ಆ ವದ್ದೆ ಬಟ್ಟೆಯಲ್ಲಿಯೇ ಅಲ್ಲಮ ಪ್ರಭುವನ್ನು ಮನದಲ್ಲಿ ಸ್ಮರಿಸುತ್ತಾ ನೆಲಕ್ಕೆ ಬೋರಲು ಮಲಗಿ ಸಾಷ್ಟಾಂಗ ನಮಸ್ಕಾರ ಮಾಡಿ, ತಮ್ಮ ಬಲಗೈಯಲ್ಲಿರುವ ಕೋಲನ್ನು ಚಾಚಿ (ಒಂದು ಸಣ್ಣ ಬಿದಿರಿನ ಕಟ್ಟಿಗೆಯ ತುಂಡನ್ನು/ಜೋಳದ, ಗೋವಿನ ಜೋಳದ ದಂಟನ್ನು) ದೀಢ ನಮಸ್ಕಾರ ಹಾಕುವ ವ್ಯಕ್ತಿಯ ಕೈಯಲ್ಲಿ ಹಿಡಿದುಕೊಂಡು ದಟ್ಟಿನ ತುದಿಗೆ ಹೂವನ್ನು ಕಟ್ಟಿರುತ್ತಾರೆ) ಮುಂದೆ ಹಿಡಿದುಕೊಂಡು ಗೆರೆ ಹಾಕಿ, ಪುನಃ ಮೇಲೆದ್ದು, ಪುನಃ ನಾಲ್ಕು ಹೆಜ್ಜೆ ಮುಂದಿಟ್ಟು ಅಡ್ಡ ಬೀಳುತ್ತಾ ದೇವಸ್ಥಾನ ತಲುಪುವವರೆಗೆ ಸಾಷ್ಟಾಂಗ ನಮಸ್ಕಾರ ಹಾಕುವುದಕ್ಕೆ ದೀಢ್ ನಮಸ್ಕಾರ ಎನ್ನುತ್ತಾರೆ. ದೀಢ್ ನಮಸ್ಕಾರ ಹಾಕುವ ಸಂಸ್ಕೃತಿ ತೇರದಾಳ ಪರಿಸರದ ಸುತ್ತಮುತ್ತಲಿನ ಗ್ರಾಮೀಣ ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ[೪೧].

ತೇರದಾಳ ಪರಿಸರದಲ್ಲಿ ಅಲ್ಲಮಪ್ರಭು ದೇವರ ಜಾತ್ರೆಯಸು ಸಂದರ್ಭದಲ್ಲಿ ಹಾಗೆಯೇ ಸುತ್ತಮುತ್ತಲಿನ ಗ್ರಾಮದ ಪ್ರತಿಯೊಂದು ಜಾತ್ರೆಯ ಸಂದರ್ಭದಲ್ಲಿ ಜಾತಿ ಮತ ಭೇದ ಭಾವವನ್ನು ಮರೆತು ಮಕ್ಕಳಿಂದ ಹಿಡಿದು ವಯೋವಧ್ಧರವರೆಗೆ ಮಹಿಳೆಯರು, ಪುರುಷರು ಎಲ್ಲರೂ ದೀಡ್ ನಮಸ್ಕಾರ ಹಾಕುತ್ತಾರೆ. ಈ ಪರಂಪರೆ ನಿನ್ನೆ ಮೊನ್ನೆಯದಲ್ಲ. ಇದು ಪ್ರಾಚೀನ ಕಾಲದ ಒಂದು ಪರಂಪರೆಯಾಗಿದ್ದು, ತೇರದಾಳ ಪರಿಸರದಲ್ಲಿ ತೇರದಾಳ, ರಬಕವಿ, ಬನಹಟ್ಟಿ, ಸಸಾಲಟ್ಟಿ, ಗೋಲಬಾವಿ, ಕಾಲತಿಪ್ಪಿ, ಹನಗಂಡಿ, ಅಸ್ಕಿ, ಆಸಂಗಿ, ಹಿಪ್ಪರಗಿ, ಯಲ್ಲಟ್ಟಿ, ಆಯಾ ಗ್ರಾಮದ ಪ್ರಮುಖ ದೇವಾಲಯಗಳ ಜಾತ್ರೆಯ ಸಂದರ್ಭದಲ್ಲಿಯೂ ಬೆಳಗು ಮುಂಜಾನೆ ತಮ್ಮ ಹರಕೆಯನ್ನು ತೀರಿಸಲು ದೀಡ್ ನಮಸ್ಕಾರವನ್ನು ಹಾಕುತ್ತಾರೆ.

**ಆಸಂಗಿ ಗ್ರಾಮದ ಜ್ಯೋತಿಬಾ/ಗುಲಾಲ ಜಾತ್ರೆ**

ತೇರದಾಳ ಪರಿಸರದಲ್ಲಿ ಆಸಂಗಿ ಗ್ರಾಮದಲ್ಲಿ ಜ್ಯೋತಿಬಾ ದೇವರ ಜಾತ್ರಾ ಮಹೋತ್ಸವವು ಸಂಭ್ರಮ ಸಡಗರದೊಂದಿಗೆ ಪ್ರತಿ ವರ್ಷ ನಡೆಯುತ್ತದೆ. ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಆಚರಿಸಲಾಗುವ ಈ ಜಾತ್ರೆಯನ್ನು ಗುಲಾಲ ಜಾತ್ರೆ ಎಂದೇ ಕರೆಯುತ್ತಾರೆ. ಅಂದಾಜು ೧೦ರಿಂದ ೧೨ ಕ್ವಿಂಟಲ್‌ಗಿಂತ ಹೆಚ್ಚು ಗುಲಾಲವನ್ನು ಪರಸ್ಪರ ಎರಚುತ್ತಾರೆ. ನೆರೆಯ ರಾಜ್ಯದ ಮಹಾರಾಷ್ಟ್ರ ರಾಜ್ಯದ ಜ್ಯೋತಿಬಾದಲ್ಲಿ ನಡೆಯುವ ಜಾತ್ರೆಯ ನಂತರ ಅತಿ ಹೆಚ್ಚಿನ ಪ್ರಮಾಣದ ಗುಲಾಲನ್ನು ಬಳಸುವುದು ವಾಡಿಕೆ. ಜಾತ್ರೆಯ ದಿನದಂದು ಗ್ರಾಮದ ಪ್ರತಿಯೊಬ್ಬರು ಈ ಜಾತ್ರೆಯಲ್ಲಿ ಪಾಲ್ಗೊಂಡು ಜ್ಯೋತಿಬಾ ದೇವರ ದರ್ಶನ ಪಡೆದುಕೊಳ್ಳುವರು.

ಸಂಜೆ ಜ್ಯೋತಿಬಾ ದೇವಸ್ಥಾನದಿಂದ ಸಕಲ ಮಂಗಲ ವಾದ್ಯಗಳೊಂದಿಗೆ ಆರಂಭವಾದ ಪಲ್ಲಕ್ಕಿ ಉತ್ಸವವು ಗ್ರಾಮದ ಪ್ರಮುಖ ಬೀದಿಗಳಲ್ಲಿ ಸಂಚರಿಸಿ ಮರಳಿ ದೇವಸ್ಥಾನಕ್ಕೆ ಮುಕ್ತಾಯಗೊಳ್ಳುತ್ತದೆ. ಉತ್ಸವದಲ್ಲಿ ಮಹಿಳೆಯರು ಕುಂಭ, ಆರತಿ ಹೊತ್ತು ಭಾಗವಹಿಸುತ್ತಾರೆ. ಗಂಡು ಮಕ್ಕಳು ತಮ್ಮ ಕೈಗಳಲ್ಲಿ ದೀವಟಿಗೆಗಳನ್ನು ಹಿಡಿದುಕೊಂಡು ದೇವರಿಗೆ ಬೆಳಕನ್ನು ನೀಡುತ್ತಾ, ಈ ಜ್ರಾತ್ರೆಗೆ ನೆರೆಯ ಮಹಾರಾಷ್ಟ್ರ ವಿವಿಧ ನಗರ ಮತ್ತು ಗ್ರಾಮೀಣ ಪ್ರದೇಶದ ಜನರು ಹಾಗೂ ಆಸಂಗಿ ಗ್ರಾಮದ ಸುತ್ತಮುತ್ತಲಿನ ಗ್ರಾಮ ಹಾಗೂ ನಗರದ ಸಾವಿರಾರು ಜನ ಆಗಮಿಸಿ ಜಾತ್ರೆಯಲ್ಲಿ ಭಾಗವಹಿಸಿ ಗುಲಾಲ ಎರಚಿ ಸಂಭ್ರಮ ಪಡುತ್ತಾರೆ[೪೨.] ಈ ಗುಲಾಲ ಜಾತ್ರೆಯಲ್ಲಿ ಮಹಿಳೆಯರು ಕೂಡಾ ಭಾಗವಹಿಸುವುದು ವಿಶೇಷವಾಗಿದೆ.

**ತೇರದಾಳದ ದುರ್ಗಾದೇವಿ ಜಾತ್ರೆ**

ತೇರದಾಳಲ್ಲಿ ನಡೆಯುವ ಜಾತ್ರೆಗಳಲ್ಲಿ ದುರ್ಗಾದೇವಿಯ ಜಾತ್ರೆಯೂ ಒಂದಾಗಿದೆ. ಅಲ್ಲಿಯ ಅಸ್ಪೃಶ್ಯ ಸಮುದಾಯವಾದ ಹೊಲೆಯರು ಈ ಜಾತ್ರೆಯನ್ನು ಪ್ರತಿ ವರ್ಷ ಜನೆವರಿ ಮೊದಲನೆಯ ವಾರ ತಪ್ಪದೇ ಆಚರಿಸುತ್ತಾರೆ. ತಲತಲಾಂತರಗಳಿಂದ ಆಚರಿಸಿಕೊಂಡು ಬರಲಾಗಿರುವ ಈ ಜಾತ್ರೆಯಲ್ಲಿ ವಿವಿಧ ಕಾರ್ಯಕ್ರಮಗಳನ್ನು ಆಚರಿಸಲಾಗುತ್ತದೆ. ಅವುಗಳಲ್ಲಿ ಜಾತ್ರೆಯ ಮಂಗಳವಾರದ ಮುಂಜಾನೆ ದುರ್ಗಾ ದೇವಿಗೆ ರುದ್ರಾಭೀಷೇಕವನ್ನು ನೇರವೇರಿಸುತ್ತಾರೆ. ನಂತರ ಕುಂಭಮೇಳದೊಂದಿಗೆ ಪಲ್ಲಕ್ಕಿ ಉತ್ಸವ ಸಹ ಅಂದೇ ಜರುಗುವುದು. ಮಧ್ಯಾಹ್ನ ಪ್ರಸಾದ ಜರುಗುವುದು, ನಂತರ ವಿಶೇಷ ಉತ್ಸವ ಕಾರ್ಯ ಹಾಗೂ ರಾತ್ರಿ ಮನರಂಜನಾ ಕಾರ್ಯ ಜರುಗುವುದು.

**ತೇರದಾಳ ಭಾಗಮ್ಮ ಜಾತ್ರೆ**

ತೇರದಾಳಲ್ಲಿ ರಾಮವ್ವಾ ಲಕ್ಷ್ಮಣ ತೇರದಾಳ, ಶ್ರೀ ನಿಂಗಪ್ಪ ಲಕ್ಷ್ಮಣ ತೇರದಾಳ ಇವರ ಮನೆಯಲ್ಲಿ ಘತ್ತರಗಿಯ ಭಾಗಮ್ಮ ಉದ್ಭವಮೂರ್ತಿಯ ರೂಪದಲ್ಲಿ ನೆಲೆಸಿದ್ದಾಳೆಂದು ಅಲ್ಲಿಯ ಸ್ಥಳೀಯರು ನಂಬಿದ್ದಾರೆ. ಶ್ರೀ ನಿಂಗಪ್ಪ ತೇರದಾಳ ಇವರ ಮಾರ್ಗದರ್ಶನ ಪ್ರತಿ ವರ್ಷ ಜನೆವರಿ ಮೊದಲನೆಯ ವಾರ ಭಾಗಮ್ಮ ಜಾತ್ರೆ ಉತ್ಸವ ಜರಗುವುದು. ಜಾತ್ರೆಯ ದಿನ ಮುಂಜಾನೆ ಭಾಗಮ್ಮ ದೇವಿಗೆ ರುದ್ರಾಭೀಷೇಕವನ್ನು ನೆರವೇರಿಸುತ್ತಾರೆ. ಕುಂಭ ಮೇಳದೊಂದಿಗೆ ಪಲ್ಲಕ್ಕಿ ಉತ್ಸವ ಸಹ ಜರಗುವುದು. ಮಧ್ಯಾಹ್ನ ಪ್ರಸಾದ ಜರುಗುವುದು, ನಂತರ ವಿಶೇಷ ಉತ್ಸವಕಾರ್ಯ ಸಂಜೆ ೫ ಗಂಟೆಗೆ ಜರಗುವುದು. ರಾತ್ರಿ ಮನರಂಜನಾ ಕಾರ್ಯಕ್ರಮ ಜರುಗುವುದು[೪೩.]

**ಇತರೆ ಆಚರಣೆಗಳು**

ತೇರದಾಳ ಪರಿಸರದ ವಿವಿಧ ಗ್ರಾಮದಗಳಲ್ಲಿ ಜನರು ತಮ್ಮ ಒಳಿತನ್ನು ಗಮನದಲ್ಲಿಟ್ಟುಕೊಂಡು ಕೆಲ ವಿಶೇಷ ದಿನಗಳಲ್ಲಿ ಮತ್ತು ಸಾಧಾರಣ ದಿನಗಳಲ್ಲಿ ಕೆಲವು ಆಚರಣೆಗಳನ್ನು ನಡೆಸುತ್ತಾರೆ. ಇವುಗಳಲ್ಲಿ ವಿಭಿನ್ನ ಧರ್ಮದವರು ಆಚರಿಸುವ ಕೆಲ ಇತರೆ ಆಚರಣೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**೧. ಮದುವೆ ಸಂದರ್ಭದಲ್ಲಿ ಆಚರಿಸುವ ಆಚರಣೆ:**

ತಮ್ಮ ಜೀವನದ ಭಾಗವಾಗಿ ತೇರದಾಳ ಪರಿಸರದಲ್ಲಿ ವಾಸಿಸುವ ವಿವಿಧ ಸಮುದಾಯದವರು ತಮ್ಮದೇ ಆದ ಪದ್ಧತಿಗಳಿಗೆ ಅನುಗುಣವಾಗಿ ವಿವಾಹಗಳನ್ನು ಆಚರಿಸುತ್ತಾರೆ. ಆ ಕುರಿತ ಸಂಕ್ಷಿಪ್ತ ವಿವರ ಇಂತಿದೆ.

ಹಿಂದೆ ಹಿಂದೂಗಳಲ್ಲಿ ವಿವಾಹವು ಸಾಮಾನ್ಯವಾಗಿ ೧೬ ದಿನ, ೦೯ ದಿನ, ೦೫ ದಿನ ನಡೆಯುತ್ತಿತ್ತು. ಆದರೆ ಈಗ ಕೇವಲ ೦೩ ದಿನದಲ್ಲಿ ಮದುವೆ ಕಾರ್ಯ ಮುಗಿಸುತ್ತಾರೆ. ಮದುವೆಗೂ ಮುನ್ನ ವಾರ ಹದಿನೈದು ದಿನಗಳ ಮುಂಚೆ ಮನೆಯನ್ನು ಶುಭ್ರಗೊಳಿಸಲಾಗುತ್ತದೆ. ಮೊದಲನೆ ದಿನ ಬೆಳಿಗ್ಗೆಯೇ ಹಂದರದ ಕಂಬವನ್ನು ಪೂಜೆ ಮಾಡುವುದು. ನಂತರ ಹಂದರವನ್ನು ಹಾಕಿ ಲಗ್ನದ ಅಕ್ಕಿ ಗಂಟನ್ನು ಪೂಜಿಸುವುದು. ಮುತ್ತೈದೆಯರಿಗೆ ಬಳೆಗಳನ್ನು ಇಡುವ ಕಾರ್ಯಕ್ರಮ ಇರುತ್ತದೆ. ಎರಡನೆ ದಿನ ಬೆಳಿಗ್ಗೆ ಹಿರಿಯರ ಪೂಜೆ, ದೇವರ ಕಾರ್ಯ, ಜೊತೆಗೆ ಲಕ್ಷ್ಮಿ ಪೂಜೆ, ಹಾಗೂ ೫ ಜನ ಮುತ್ತೈದೆಯರಿಗೆ ಉಡಿ ತುಂಬುವುದು ಮತ್ತು ಅವರುಗಳು ಹಾಡು ಹೇಳುತ್ತಾ ೫ ವಿಧದ ಧಾನ್ಯಗಳನ್ನು(ಜೋಳ, ಅಕ್ಕಿ, ತೊಗರಿ, ಗೋಧಿ, ಕಡಲೆ) ಒಳಕಲ್ಲಿನಲ್ಲಿ ಹಾಕಿ ಕುಟ್ಟುವ ಒಳಕ್ಕಿಶಾಸ್ತ್ರ ಮಾಡುತ್ತಾರೆ. ನಂತರ ಒಳಕಲ್ಲು, ಬಿಸುಕಲ್ಲು, ಶಾವಿಗೆ ಮಣಿ ಪೂಜೆಯನ್ನು ಮಾಡುತ್ತಾರೆ. ಸಂಜೆ ಅರಿಷಿಣ ಹಚ್ಚುವ ಕಾರ್ಯಕ್ರಮ ನಂತರ ಊಟವಿರುತ್ತದೆ. ಹಾಗೂ ಮರುದಿನ ಮಂಗಲ ವಾದ್ಯದೊಂದಿಗೆ ಬಾಸಿಂಗ ತಾಳಿಯನ್ನು ತರುವುದು, ರಾತ್ರಿ ಬೀಗರನ್ನು ಎದುರು ಗೊಳ್ಳುವ ಕಾರ್ಯಕ್ರಮವಿರುತ್ತದೆ. ಇದರಲ್ಲಿ ತಮಾಷೆಗಾಗಿ ಗಂಡು ಹುಡಗರು ಹೆಣ್ಣಿನ ವೇಷಧರಿಸುವುದು, ಛತ್ರಿ ಚಾಮರ ಹಿಡಿದು ಮಂಗಳವಾದ್ಯದೊಂದಿಗೆ ಮೆರವಣಿಗೆಯ ಮೂಲಕ ಮಧುಮಕ್ಕಳನ್ನು ಒಟ್ಟಿಗೆ ಕೂಡಿಸಿ ಜೊತೆಗೆ ಬೀಗರನ್ನು ಬರಮಾಡಿಕೊಳ್ಳಲಾಗುತ್ತದೆ. ನಂತರ ಅವರಿಗೆ ಊಟ ಉಪಹಾರದ ವ್ಯವಸ್ಥೆ ಮಾಡಲಾಗುತ್ತದೆ.

ಮೂರನೇ ದಿನ ಹಂದರದಲ್ಲಿ ಸುರಗಿ ಎರೆಯುವ ಕಾರ್ಯಕ್ರಮ ನಂತರ ಬೀಗರು ಒಬ್ಬರಿಗೊಬ್ಬರು ಹೊಸ ಬಟ್ಟೆಗಳನ್ನು ಉಡುಗೊರೆಯಾಗಿ ಕೊಡುತ್ತಾರೆ. ನಂತರ ಪುರೋಹಿತರ ನೇತೃತ್ವದಲ್ಲಿ ಮಾಂಗಲ್ಯಧಾರಣೆ ಯಾಗುತ್ತದೆ. ಊಟ ಉಡುಗೊರೆ ಎಲ್ಲಾ ಆದ ಮೇಲೆ ಮುತ್ತೈದೆಯರೆಲ್ಲಾ ಸೇರಿ ಗಂಗಮ್ಮನ ಪೂಜೆ ಮಾಡಿಕೊಂಡು ನೀರು ತುಂಬಿದ ಬಿಂದಿಗೆಯನ್ನು ಮಧುಮಗಳ ತಲೆಯ ಮೇಲೆ ಹೊರಿಸಿ ಮನೆಯ ಹೊಸ್ತಲಿಗೆ ಮಳೆಯನ್ನು ಮಧುಮಗನಿಂದ ಬಡಿಸುತ್ತಾರೆ. ಸಾಯಂಕಾಲ ಎಣ್ಣೆ ಭೀರುವ ಕಾರ್ಯಕ್ರಮ ನಡೆಯುತ್ತದೆ, (ದೇವರಿಗೆ ದೀಪ ಹಚ್ಚಿ ಎಲ್ಲಾ ಸಂಬಂಧಿಕರ ಮನೆಗಳಿಗೆ ಹೋಗಿ ಮನೆಯ ಹೊಸ್ತಲಿಗೆ ಎಣ್ಣೆ ಯನ್ನು ಹಾಕಿ ಬರುತ್ತಾರೆ.) ಮರುದಿನ ಬೀಗರ ಊರಿಗೆ ಮದುಮಕ್ಕಳನ್ನು ಕಳಿಸಿಕೊಡಲಾಗುತ್ತದೆ. ಅಲ್ಲಿ ನೀರು ಹಾಕುವ ಕಾರ್ಯಕ್ರಮವಿರುತ್ತದೆ. ಮದುವೆ ಗಂಡಿನ ಮನೆಯ ಮುಂದೆ ಜರುಗಿದರೆ ಹೆಣ್ಣಿನವರ

ಮನೆಯಲ್ಲಿ ನೀರು. ಮದುವೆ ಹೆಣ್ಣಿನ ಮನೆ ಮುಂದೆ ಜರುಗಿದರೆ ಗಂಡಿನ ಮನೆಯಲ್ಲಿ ನೀರು ಹಾಕುವ ಕಾರ್ಯಕ್ರಮ ಇಟ್ಟುಕೊಳ್ಳುವುದು ವಾಡಿಕೆ. ಮದುವೆ ಮುಗಿದು ಒಂದು ತಿಂಗಳೊಳಗೆ ಬಾಸಿಂಗವನ್ನು ನದಿಗೆ ಬಿಡಲಾಗುತ್ತದೆ. (ಈ ಪರಿಸರದ ಗ್ರಾಮಗಳಲ್ಲಿ ನಡೆಯುವ ಬಹುತೇಕ ಮದುವೆಗಳು ಗ್ರಾಮದ ಅಧಿಪತಿಯಾದ ಶ್ರೀ ಆಂಜನೇಯಸ್ವಾಮಿ ಇಲ್ಲವೇ ಗ್ರಾಮ ದೈವಗಳ ದೇವಸ್ಥಾನದಲ್ಲಿ ಜರುಗುತ್ತವೆ.) ಒಟ್ಟು ೫ ನೀರು. ೧ ಗಂಡಿನ ಮನೆಯಲ್ಲಿ ೨.ಹೆಣ್ಣಿನ ಮನೆಯಲ್ಲಿ ೩.ಮಾಂಗಲ್ಯಕ್ಕೂ ಮುಂಚೆ ನಡೆಯುವ ಸುರುಗಿಯ ನೀರು ಸೇರಿ ಐದು ನೀರುಗಳಾಗುತ್ತವೆ ಎಂದು ಇಲ್ಲಿನ ಹಿರಿಯರು ಹೇಳುತ್ತಾರೆ[೪೪].

ಹಿಂದೂಗಳಲ್ಲಿರುವಂತೆ ಭಾರತದಲ್ಲಿ ಮುಸ್ಲಿಂ ವಿವಾಹವು ಸಹ ಪ್ರಮುಖ ಸ್ಥಾನವನ್ನು ಪಡೆದಿದೆ. ಅದು ತನ್ನದೆ ಆದ ಲಕ್ಷಣಗಳನ್ನು ಮತ್ತು ರೂಪರೇಷಗಲನ್ನು ಒಳಗೊಂಡಿದೆ. ಇದು ಹಿಂದೂ ವಿವಾಹಕ್ಕಿಂತ ಭಿನ್ನವಾಗಿದೆ. ಇದು ತನ್ನದೆ ಆದ ಸಂಸ್ಕೃತಿ, ಆಚಾರ-ವಿಚಾರ, ರೂಢಿ, ಸಂಪ್ರದಾಯ ಮತ್ತು ನೈತಿಕ ನಿಯಮಗಳನ್ನು ಒಳಗೊಂಡಿದೆ. ನಿಖಾವು (ಮದುವೆ)ಮುಸ್ಲಿಂರಲ್ಲಿ ಪವಿತ್ರವಾದ ಸಂಸ್ಕಾರವಾಗಿದೆ. ಇಲ್ಲಿ ಮುಸ್ಲಿಂರು ಅಲ್ಲಾಹನನ್ನು ಸಾಕ್ಷಿಯನ್ನಾಗಿ ಇಟ್ಟುಕೊಂಡು ಅವರ ಮೌಲ್ವಿಯ ಪ್ರಕಾರ ನಿಖಾದ ಒಂದು ಕಾರ್ಯವನ್ನು ನಿರ್ವಹಿಸುತ್ತಾರೆ.

ಈ ಸಮುದಾಯದ ಮದುವೆಗಳಲ್ಲಿ ಮೆಹೇಂದಿಯ ಕಾರ್ಯಕ್ರಮ (ಮದರಂಗಿ) ನಿಖಾಕ್ಕೂ ಮುಂಚೆ ಜರುಗುತ್ತದೆ. ಇವರು ವಧುಗಳನ್ನು ಅರಸು ಅಥವಾ ದುಲಹನ್ ಎಂದು ಕರೆಯುತ್ತಾರೆ. ಮಧುವಿಗೆ ಎರಡು ದಿನದ ಮುಂಚಿತವಾಗಿಯೆ ಮದರಂಗಿಯನ್ನು ಐದು ಜನ ಮುತ್ತೈದೆಯರಿಂದ ಐದು ಬೆರಳಿಗೆ ಪ್ರಥಮವಾಗಿ ಹಚ್ಚಲಾಗುತ್ತದೆ. ಇದರ ಉದ್ದೇಶ ಕೇವಲ ವಧು ಅದವಳು ಸದಾಕಾಲ ಮುತ್ತೈದೆಯಾಗಿರಲಿ ಎಂಬುದಾಗಿದೆ. ಇದು ಇವರ ವಿವಾಹದ ಎರಡನೆಯ ಪ್ರಮುಖವಾದ ಕಾರ್ಯ ಅಥವಾ ಸಂಪ್ರದಾಯವಾಗಿದೆ. ಹಳದಿ/ಅರಿಶಿಣ ಹಚ್ಚುವ ಕಾರ್ಯ ವಿವಾಹಕ್ಕಿಂತ ಒಂದು ದಿನ ಮುಂಚಿತವಾಗಿರುತ್ತದೆ, ಆ ದಿನ ಮುಂಜಾನೆಯಿಂದ ಮಧ್ಯಾಹ್ನ ಹನ್ನೆರಡು ಗಂಟೆಯವರೆಗೆ ಅರಿಷಿಣ ಹಚ್ಚುವ ಮುತ್ತೈದೆಯರು ಉಪವಾಸ ಮಾಡಿ ಆ ನಂತರ ಅವರು ಉಪವಾಸವನ್ನು ಸ್ವಾದಿಷ್ಟ ಆಹಾರದಿಂದ ಬಿಡುವುದನ್ನು ಬೀಪರಿ ಎಂದು ಕರೆಯುತ್ತಾರೆ. ಆನಂತರ ವಧುವಿಗೆ ಹಸಿರು ಬಣ್ಣದ ಗಾಜಿನ ಬಳೆಯನ್ನು ತೊಡಿಸಿ ತದ ನಂತರ ಮನೆಯ ಸದಸ್ಯರಿಗೆ ಮತ್ತು ನೆರೆಹೊರೆಯವರಿಗೆ ಬಳೆ ಉಡಿಸುವ ಕಾರ್ಯ ನಡೆಯುತ್ತದೆ. ಇದಾದ ನಂತರ ನಿಖಾ/ವಿವಾಹ ಜರುಗುತ್ತದೆ. ವಧು ಅದವಳನ್ನು ಐದು ಜನ ಮುತ್ತೈದೆಯವರು ಎರೆದು ಶೃಂಗರಿಸುತ್ತಾರೆ. ಕಾಲಿನಲ್ಲಿ ಕಾಲ ಉಂಗುರ ಧರಿಸುವುದು ಮತ್ತು ಗಂಡಿನವರು ಮಧು ಮಗಳಿಗೆ ವಸ್ತ್ರಗಳು, ಬೆಳ್ಳಿ, ಬಂಗಾರ, ಪಾದರಕ್ಷೆಗಳನ್ನು ತರುತ್ತಾರೆ ಮತ್ತು ಹೆಣ್ಣಿನವರು ಕೂಡ ವಸ್ತ್ರಗಳು, ಬೆಳ್ಳಿ, ಬಂಗಾರ, ಪಾದಗಳನ್ನು ಕೊಡುತ್ತಾರೆ. ಇದೆಲ್ಲವನ್ನು ತೊಟ್ಟಿಕೊಂಡು ಅವರು ನಿಖಾಃದ ಒಂದು ಸ್ಥಳಕ್ಕೆ ಬಂದು ಆಗಮಿಸುತ್ತಾರೆ. ಆಗ ವರನು ಮದುವೆ ಮನೆಯ ಹೊರಾಂಗಣದಲ್ಲಿ ಅನೇಕ ಹಿರಿಯರು ಮತ್ತು ಮೌಲ್ವಿಗಳ ನಡುವೆ ವೇದಿಕೆಯ ಮೇಲೆ ಕುಳಿತುಕೊಳ್ಳುತ್ತಾನೆ. ತದನಂತರ ಐದು ಜನ ಸಾಕ್ಷಿದಾರರಿಂದ ಈ ಕಾರ್ಯವನ್ನು ಮಾಡಲಾಗುತ್ತದೆ ಮೌಲ್ವಿಯವರು ತಮ್ಮ ಮಂತ್ರ ಪಠಣೆಯನ್ನು ಮಾಡುತ್ತಾರೆ ಮತ್ತು ಎಲ್ಲರು ದೇವರೊಂದಿಗೆ ಪ್ರಾರ್ಥಿಸುತ್ತಾರೆ(ದುವಾವನ್ನು ಮಾಡುತ್ತಾರೆ). ತದನಂತರ ವರನನ್ನು ಹೀಗೆ ಕೇಳಲಾಗುತ್ತದೆ ಅದೇನೆಂದರೆ ಈ ವಿವಾಹ ನಿಮಗೆ ಒಪ್ಪಿಗೆ ಇದೆಯೇ ಎಂದು

ಕೇಳುತ್ತಾರೆ. ಆ ವೇಳೆಯಲ್ಲಿ ಅವರು ಈ ವಾಕ್ಯವನ್ನು ಮೂರು ಬಾರಿ ಹೇಳಬೇಕು ಅದೆಂದರೆ "ಅಲಹಮದುಲಿಲ್ಲಾಹ ಮೈನೆ ಕುಬೂಲ್ ಕಿಯಾ" ಇದರ ಅರ್ಥ ಈ ಮದುವೆ ನನಗೆ ಸಂಪೂರ್ಣವಾಗಿ ಒಪ್ಪಿಗೆ ಇದೆ ಎಂದು ಹೇಳುತ್ತಾನೆ. ವಧು ಅದವಳು ಮನೆಯಲ್ಲಿ ಕುಳಿತು ಆ ಒಂದು ನಿಖಾಃದ ತತ್ವ, ಬೋಧನೆಗಳನ್ನು ಕೇಳಿಕೊಳ್ಳುತ್ತಾಳೆ. ಅವಳಿಗೆ ಗಂಡಿನ ಕಡೆಯಿಂದ ತಾಳಿಯನ್ನು ಒಬ್ಬ ಮುತ್ತೈದೆ ಹಿರಿಯ ಹೆಣ್ಣುಮಗಳಿಂದ ಕಟ್ಟುತ್ತಾರೆ ಅದಾದ ತಕ್ಷಣ ಅವಳು ಕೂಡ ಮೂರು ಬಾರಿ 'ಕುಬೂಲ್ ಹೈ' ಎನ್ನುತ್ತಾಳೆ. ಅವಳ ಒಂದು ಸಾಕ್ಷಿಯಾಗಿ ಸಹಿ ಮುಖಾಂತರ ತೆಗೆದುಕೊಳ್ಳುತ್ತಾರೆ. ತದ ನಂತರ ವಿವಾಹದಲ್ಲಿ ಅಕ್ಷತಾರೋಹಣವನ್ನು ಖರ್ಜೂರ, ಅಕ್ಕಿ, ಕಲ್ಲುಸಕ್ಕರೆ, ಬದಾಮಿಯನ್ನು ಅವಳ ಮೇಲೆ ಮತ್ತು ಅವನ ಮೇಲೆ ಹರಿಸುತ್ತಾರೆ ಇದರಿಂದ ವಿವಾಹವು ಸಂಪೂರ್ಣವಾಗುತ್ತದೆ.

ತದ ನಂತರ ವರನು ಎಂದರೆ ವಧುವಿಗೆ ಹಣ ಅಥವಾ ಬಂಗಾರದ ರೂಪದಲ್ಲಿ ಇಂತಿಷ್ಟು ಎಂದು ಮೇಹರ/ಉಡುಗೊರೆಯಾಗಿ ನೀಡಲಾಗುತ್ತದೆ. ಅದನ್ನು ಅವಳು ತನ್ನ ಸದುಪಯೋಗಕ್ಕಾಗಿ ಖರ್ಚು ಮಾಡಬಹುದು. ಒಂದು ವೇಳೆಯಲ್ಲಿ ಮೇಹರ ಇಲ್ಲದಿದ್ದರೆ ಆ ವಿವಾಹವು ಸಂಪೂರ್ಣವಾಗುವುದಿಲ್ಲ. ತದ ನಂತರ ಸ್ವಾದೀಷ್ಟವಾದ ಊಟ/ಆಹಾರವನ್ನು ಸೇವಿಸಿ ಎಲ್ಲಾರು ಖುಷಿಯಾಗಿ ಮನೆಗೆ ಹೋಗುತ್ತಾರೆ.

ವಲೀಮಾವನ್ನು ಹಿಂದೂಗಳಲ್ಲಿ "ಕೈ ಬಳಸುವ ಕಾರ್ಯ" ಎಂದು ಕರೆಯುತ್ತಾರೆ. ಇದು ಮದುವೆಯಾದ ಮರು ದಿನ ಗಂಡನ ಮನೆಯವರು ಆಚರಿಸುತ್ತಾರೆ. ಇದು ಕಡ್ಡಾಯವಾಗಿದೆ ಇದರಲ್ಲಿ ಹೆಣ್ಣಿನವರು ಗಂಡನ ಮನೆಗೆ ವಧು–ವರರನ್ನು ಆಶೀರ್ವದಿಸಲು ಮತ್ತು ಸಮವಸ್ತ್ರಗಳನ್ನು ತೆಗೆದುಕೊಂಡು ಬರುತ್ತಾರೆ. ವಲೀಮಾದಲ್ಲಿ ಹೆಣ್ಣಿನವರನ್ನು ಊಟ–ಉಪಚಾರವನ್ನು ಮಾಡಿಸುತ್ತಾರೆ. ನಂತರ ಪೋಟೋ ಕಾರ್ಯಕ್ರಮವನ್ನು ನಡೆಸುತ್ತಾರೆ. ತದನಂತರ ಆ ರಾತ್ರಿಯಲ್ಲಿ ಐದು ಪ್ರಕಾರದ ಆಟವನ್ನು ವಧು–ವರರಿಂದ ಆಡಿಸಲಾಗುತ್ತದೆ. ಅವುಗಳು ೧)ಉಂಗುರವನ್ನು ಹುಡುಕುವುದು. ೨)ನಂತರ ಇಬ್ಬರ ಮಧ್ಯ ಒಂದೆ ಚಪಾತಿಯನ್ನು ಬೆಲ್ಲುನಿಗೆಯಿಂದ ಲಟಿಸುವುದು. ೩)ವರನಾದವನು ವಧುವಾದವಳ ಜಡೆಯನ್ನು ಬಿಚ್ಚುವುದು. ೪)ತದನಂತರ ಕನ್ನಡಿಯಲ್ಲಿ ಮುಖವನ್ನು ಸಂದರ್ಶಿಸುವುದು. ೫)ತದನಂತರ ವಧು ಮತ್ತು ವರರು ಒಂದು ಒಡಪಿನ ಮುಖಾಂತರ ಒಬ್ಬರ ಹೆಸರನ್ನು ಮತ್ತೊಬ್ಬರು ಹೇಳುವುದು ಇಲ್ಲಿಗೆ ಮುಸ್ಲಿಂರಲ್ಲಿ ವಿವಾಹ ಕಾರ್ಯ ಅಂತಿಮಗೊಳ್ಳುತ್ತದೆ[೪೫]. ಅದೇ ರೀತಿ ಕ್ರೈಸ್ತರಲ್ಲಿ ಮತ್ತು ಜೈನ ಸಮುದಾಯಗಳಲ್ಲಿಯೂ ಮದುವೆ ತನ್ನದೇ ಆದ ಸಾಂಪ್ರದಾಯಿಕ ಮಹತ್ವವನ್ನು ಹೊಂದಿದ್ದು, ಅದನ್ನು ಚಾಚು ತಪ್ಪದೇ ಆಚರಿಸುತ್ತಾರೆ.

**೨. ಋತುಮತಿಯಾದಾಗ ಆಚರಿಸುವ ಆಚರಣೆ**

ತೇರದಾಳ ಪರಿಸರದ ಹಿಂದೂಗಳಲ್ಲಿ ಋತುಮತಿಯಾಗುವುದನ್ನು "ದೊಡ್ಡವಳಾಗುವುದು", "ಮೈನೆರೆಯುವುದು" ಎನ್ನುತ್ತಾರೆ. ಈ ಸಂದರ್ಭದಲ್ಲಿ ಮೈಲಿಗೆಯನ್ನು ಸಹ ಕಡ್ಡಾಯವಾಗಿ ಆಚರಿಸುತ್ತಾರೆ. ಕೊನೆಯ ನೀರು ಅಥವಾ ಆರತಿಯ ದಿನದ ಕಾರ್ಯಕ್ರಮವನ್ನು "ಎಬ್ಬಿಸುವುದು" ಎಬ್ಬಿಸುವ ಕಾರ್ಯಕ್ರಮ ಎನ್ನುವುದು ವಾಡಿಕೆ.

ಈ ಸಮುದಾಯದಲ್ಲಿ ಹೆಣ್ಣು ಮಗಳು ಋತು ಮತಿಯಾದರೆ ೧೬, ೧೯, ೨೧ ದಿನಗಳವರೆಗೆ ನೀರನ್ನು ಹಾಕುವ ಕಾರ್ಯಕ್ರಮ ಇರುತ್ತದೆ. ಆದರೆ ಈಗ ೫, ಮತ್ತು ೩ ದಿನಕ್ಕೆ ಸೀಮಿತವಾಗಿದೆ. ಋತುಮತಿಯಾದ ಮೊದಲ ದಿನ ಆ ಮಹಿಳೆಯ ಸೋದರ ಅತ್ತೆ ಬಂದು ಮೊದಲ ನೀರನ್ನು (ಸ್ನಾನಮಾಡಿಸುವುದು) ಹಾಕಬೇಕು, ಕೆಲವು ಸಂದರ್ಭದಲ್ಲಿ ಸೋದರತ್ತೆ ಇಲ್ಲದಿದ್ದಾಗ ತಾವೇ ಸ್ನಾನ ಮಾಡಿಸುತ್ತಾರೆ. ನಂತರ ಬೇರೆಯವರು ನೀರನ್ನು ಹಾಕುತ್ತಾರೆ. ನಂತರ ಆರತಿಯನ್ನು ಮಾಡುತ್ತಾರೆ. ಈ ಕಾರ್ಯವನ್ನು ಪ್ರತಿ ದಿನ ಬೆಳಿಗ್ಗೆ ಮತ್ತು ಸಂಜೆ ಮಾಡುತ್ತಾರೆ. ಹಾಗೂ ನಿಗದಿ ಮಾಡಿದ ದಿನಗಳವರೆಗೆ ಆ ಮಹಿಳೆಗೆ ಬೇರೆ ಜಾಗ, ಬೇರೆ ತಟ್ಟೆ, ಗ್ಲಾಸ್, ಬೇರೆ ತಂಬಿಗೆ, ಬೇರೆ ಹಾಸಿಗೆಯನ್ನು ದಿಂಬಿನ ವ್ಯವಸ್ಥೆ ಮಾಡಲಾಗುತ್ತದೆ. ಮತ್ತು ಬೇರೆಯ ಅಡುಗೆ, ಊಟದ ವ್ಯವಸ್ಥೆ, ಪ್ರತಿ ದಿನ ಸಿಹಿ ಊಟವನ್ನು ಮಾಡಿಸುತ್ತಾರೆ. ಕೊನೆಯ ನೀರನ್ನು ಹಾಕುವ ತನಕ ಹೊರಗಡೆ ಆಕೆಯನ್ನು ಯಾವುದಕ್ಕೂ ಕಳಿಸುವುದಿಲ್ಲ ಮತ್ತು ಯಾವುದೇ ಕೆಲಸವನ್ನು ಆಕೆಯ ಕೈಯಿಂದ ಮಾಡಿಸುವುದಿಲ್ಲ.

ಕೊನೆಯ ದಿನ ಮನೆಯನ್ನೆಲ್ಲಾ ಶುಭ್ರಗೊಳಿಸಿ, ಗೋಮೂತ್ರವನ್ನು ಮನೆಗೆ ಸಿಂಪಡಿಸಲಾಗುತ್ತದೆ. ಆ ಮೂಲಕ ಮೈಲಿಗೆಯನ್ನು ತೆಗೆದು ಹಾಕಲಾಗುತ್ತದೆ ಮತ್ತು ಸಂಬಂಧಿಕರೆಲ್ಲಾ ಆಕೆಗೆ ನೀರು ಹಾಕುತ್ತಾರೆ. ಆರತಿಯನ್ನು ಮಾಡುತ್ತಾರೆ. ಹೊಸ ಹಸಿರು ಬಣ್ಣದ ಬಳೆಗಳನ್ನು ತೊಡಿಸಲಾಗುತ್ತದೆ. ಆಕೆಯ ಸೋದರ ಮಾವ ತಂದ ಹೊಸ ಬಟ್ಟೆಗಳನ್ನು ಕೊಡುತ್ತಾರೆ. ನಂತರ ತಮ್ಮ ಇಷ್ಟವಾದ ದೇವಸ್ಥಾನಕ್ಕೆ ಹೋಗಿ ಹಣ್ಣು ಕಾಯಿ ಮಾಡಿಸಿ ಬಂದ ನಂತರ ಬಂಧು ಬಳಗದವರು ಸೇರಿ ಅರಿಶಿಣ ಕುಂಕುಮ ಕೊಟ್ಟು ಆರತಿ ಮಾಡುತ್ತಾರೆ. ನಂತರ ಸಂಬಂಧಿಕರೆಲ್ಲರಿಗೆ ಊಟದ ವ್ಯವಸ್ಥೆ ಮಾಡಿರುತ್ತಾರೆ.

ಇದೇ ರೀತಿ ಈ ಪರಿಸರದಲ್ಲಿ ವಾಸಿಸುವ ಮುಸ್ಲಿಂ, ಜೈನ ಮತ್ತು ಕ್ರೈಸ್ತ ಮೊದಲಾದ ಧರ್ಮಿಯರು ತಮ್ಮ ಕುಲಾಚಾರ ಪದ್ಧತಿಯಂತೆ ಋತುಮತಿಯಾದವರನ್ನು ಒಳಗೆ ಕರೆದುಕೊಳ್ಳುವ ಆಚರಣೆಯನ್ನು ಮಾಡುತ್ತಾರೆ. ಈ ಧರ್ಮಿಯರ ಆಚರಣೆಗಳೂ ಸಹ ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಅವುಗಳನ್ನು ವ್ಯವಸ್ಥಿತವಾಗಿ ದಾಖಲಿಸಬೇಕಾದ ಅವಶ್ಯಕತೆ ಇದೆ.

**೩. ನಾಮಕರಣದ ಸಂದರ್ಭದಲ್ಲಿನ ಆಚರಣೆ**

ಹಿಂದೂ ಸಮುದಾಯದಲ್ಲಿ ಮಗು ಹುಟ್ಟಿ ೧೧, ೧೬, ೨೧, ಅಥವಾ ಒಂದು ತಿಂಗಳ ಒಳಗೆ ಮಗುವಿಗೆ ಸಾಮಾನ್ಯವಾಗಿ ಹೆಸರಿಡುವ ಕಾರ್ಯ ಮಾಡುತ್ತಾರೆ. ಹೆಸರಿಡುವ ದಿನ ಮನೆಯನ್ನು ಶುಭ್ರಗೊಳಿಸಿ ಗೋಮೂತ್ರವನ್ನು ಮನೆಗೆಲ್ಲಾ ಸಿಂಪಡಿಸುತ್ತಾರೆ. ನಂತರ ತೊಟ್ಟಿಲನ್ನು ಹೂವಿನಿಂದ ಮತ್ತು ಬಲೂನ್‌ಗಳಿಂದ ಅಲಂಕರಿಸುತ್ತಾರೆ. ಮಗು ಮತ್ತು ತಾಯಿ ಜೊತೆ ಮುತ್ತೈದಿಯರೆಲ್ಲಾ ಸೇರಿ ಗಂಗಮ್ಮನ ಪೂಜೆಯನ್ನು ನೆರವೇರಿಸುತ್ತಾರೆ. ನಂತರ ಮಗುವನ್ನು ಹೊಸ ತೊಟ್ಟಿಲಲ್ಲಿ ಹಾಕುತ್ತಾರೆ.

ಈ ಒಂದು ಕಾರ್ಯವನ್ನು ಮಗುವಿನ ಸೋದರತ್ತೆ (ಗಂಡು ಮಗುವಿಗೆ) ಹೆಣ್ಣು ಮಗುವಿಗೆ ಸೋದರ ಮಾವ ಹೆಸರಿಡುತ್ತಾರೆ. ಇಡಬೇಕಾದ ಹೆಸರನ್ನು ಮಗುವಿನ ಕಿವಿಯಲ್ಲಿ ಮೂರುಬಾರಿ ಹೇಳುತ್ತಾರೆ. ಮಗುವಿಗೆ ಹೊಸ ಬಟ್ಟೆ ಹಾಗೂ ಬೆಳ್ಳಿ, ಚಿನ್ನದ ಆಭರಣವನ್ನು

(ಅವರವರ ಆರ್ಥಿಕಸ್ಥಿತಿಗೆ ತಕ್ಕಂತೆ) ಹಾಕುತ್ತಾರೆ. ಇದು ತವರು ಮನೆಯಲ್ಲಿ ಆಚರಿಸುವ ಕಾರ್ಯಕ್ರಮ.

ಮೂರರಿಂದ ಐದು ತಿಂಗಳ ಒಳಗಾಗಿ ಮಗು ಮತ್ತು ತಾಯಿಯನ್ನು ಗಂಡನ ಮನೆಯವರು ಕರೆದು ಕೊಂಡು ಹೋಗುತ್ತಾರೆ. ಈ ವೇಳೆ ಸೋದರ ಮಾವನಿಗೆ ಬಟ್ಟೆ ಇತರೆ ಉಡುಗೊರೆಯನ್ನು ಗಂಡನ ಮನೆಯವರು ಕೊಡುವುದು ಹಿಂದೂ ಸಮುದಾಯದ ಸಾಂಪ್ರದಾಯವಾಗಿದೆ. ಈ ಎಲ್ಲಾ ಕಾರ್ಯಕ್ರಮಗಳು ಆಧುನಿಕತೆಗೆ ಒಳಗಾಗಿದ್ದು, ಇವುಗಳನ್ನು ತುಂಬಾ ಸೀಮಿತ ಕಾಲಾವಧಿಯಲ್ಲಿ ತುಂಬಾ ಸರಳವಾಗಿ ಮುಗಿಸುವುದು ಕಂಡುಬರುತ್ತದೆ. ಹಿಂದೂಗಳಂತೆ ಮುಸ್ಲಿಂರಲ್ಲಿ ಒಂದು ಮಗು ಜನನವಾದರೆ ಅವನು ಹುಟ್ಟಿನಿಂದ ಸಾಯುವವರೆಗೂ ಕೆಲವು ವಿಧಿ-ವಿಧಾನಗಳಿಗೆ ಒಳಗಾಗುತ್ತದೆ. ಹಿಂದೂಗಳ ಪ್ರಕಾರ ಹಿಂದೂಗಳಲ್ಲಿ ಒಂದು ದೃಢವಾದ ನಂಬಿಕೆ ಇದೆ ಅದೇನೆಂದರೆ ಇವರ ಪ್ರಕಾರ ಹುಟ್ಟಿದ ಐದು ದಿನಕ್ಕೆ ಸೆಟಗವ್ವಾ ಎಂಬುವ ಪವಿತ್ರ ದೇವಕನ್ಯ ಬಂದು ಮಗುವಿನ ಹಣೆಯ ಮೇಲೆ ಅವಳು/ಅವನ ಭವಿಷ್ಯವನ್ನು ಬರೆಯುತ್ತಾಳೆ. ಆ ದಿನದಂದು ತಾಯಿಯಾದವಳನ್ನು ಮಗುವು ಒಂದು ಭವಿಷ್ಯಕ್ಕಾಗಿ ದೇವರಲ್ಲಿ ಬೇಡಿಕೊಳ್ಳುತ್ತಾರೆ.

ಈ ಧರ್ಮದಲ್ಲಿ(ಮುಸ್ಲಿಂರಲ್ಲಿ) ಹುಟ್ಟಿದ ಮಗುವಿಗೆ ಒಬ್ಬರು ೫೦ ದಿವಸಕ್ಕೆ ಹೆಸರನ್ನು ಇಟ್ಟರೆ ಮತ್ತೆ ಕೆಲವೊಬ್ಬರು ೩ ತಿಂಗಳು ಅಥವಾ ೫ ತಿಂಗಳಿಗೆ ಹೆಸರನ್ನು ಇಡುತ್ತಾರೆ ಇದನ್ನು “ಚಿಲ್ಲಾ” ಎಂದು ಕರೆಯುತ್ತಾರೆ. ಈ ದಿನ ಸಂಬಂಧಿಕರು ಬೆಳ್ಳಿ, ಬಂಗಾರ, ಬಟ್ಟೆ ಮುಂತಾದವುಗಳನ್ನು ಮಗುವಿಗೆ ಮತ್ತು ಮಗುವಿನ ತಂದೆ-ತಾಯಿಯವರಿಗೆ ಸಂಪ್ರದಾಯಗಳಿಂದ ಆಚರಿಸಿ ಉಡುಗೊರೆಯನ್ನು ಕೊಡುತ್ತಾರೆ. ನಾಮಕರಣ ಸಂಸ್ಕಾರವನ್ನು ಸೋದರತ್ತೆಯಿಂದ ಮಾಡಿಸಲಾಗುತ್ತದೆ. ಅದೇ ರೀತಿ ಮಗುವಿನ ಜಡೆಯನ್ನು ತೆಗೆಯುವ ಕಾರ್ಯವನ್ನು ಈ ಸಮುದಾಯದಲ್ಲಿ ಸೋದರ ಮಾವ(ಮಾಮು)ನಿಂದ ತೆಗೆಸಲಾಗುತ್ತದೆ. ಇದು ಮೂರು ತಿಂಗಳಿಗೆ, ಐದು ತಿಂಗಳಿಗೆ ಅಥವಾ ಒಂಬತ್ತು ತಿಂಗಳಿಗೆ ಮಾಡಬಹುದು. ಅದು ಮನೆಯ ದೇವರಿಗೆ ಹೋಗಿ ಜಡೆಯನ್ನು ತೆಗೆಸಲಾಗುತ್ತದೆ. ಈ ದಿನದಂದು ತಾಯಿ ಮತ್ತು ಮಗುವನ್ನು ಉಡುಗೊರೆಯನ್ನು ನೀಡಲಾಗುತ್ತದೆ. ನಂತರ ಊಟೋಪಚಾರಗಳಿಂದ ಈ ಕಾರ್ಯವನ್ನು ಪೂರ್ಣ ಮಾಡುತ್ತಾರೆ.

**೪. ಮರಣದ ನಂತರ ಆಚರಿಸುವ ಆಚರಣೆ**

ಹಿಂದೂಗಳಲ್ಲಿ ಸಾಮಾನ್ಯವಾಗಿ ಸಾವು ರಾತ್ರಿಯಾದರೆ ಅದಕ್ಕೆ ಸ್ನಾನಮಾಡಿಸಿ ಹೊಸ ಬಟ್ಟೆಹಾಕಿ ಕೂಡಿಸುತ್ತಾರೆ. ಹಾಗೂ ಬಂಧು ಬಳಗದವರು ಬರುವ ತನಕ ಅಂದರೆ ರಾತ್ರಿಯಲ್ಲಾ ಭಜನೆ ಮಾಡಿ ಮರುದಿನ ಸಂಬಧಿಕರೊಡನೆ ನದಿಯ ಪಕ್ಕದಲ್ಲಿ ತೆಗೆದು ಕೊಂಡು ಹೋಗಿ ಅಗ್ನಿ ಸ್ಪರ್ಶಮಾಡುತ್ತಾರೆ, ಹಿಂದೂಗಳಲ್ಲಿನ ಕೆಲವು ಸಮುದಾಯದಲ್ಲಿ ಸುಡುವುದರ ಬದಲು ಹೂಳುವ ಪದ್ಧತಿ ಜಾರಿಯಲ್ಲಿದೆ. ಒಂದು ವೇಳೆ ಗ್ರಾಮದಲ್ಲಿ ಏನಾದರು ದೇವರ ಕಾರ್ಯಕ್ರಮಗಳಿದ್ದಾಗ ಯಾರಿಗೂ ಕಾಯದೇ ಬೇಗ ಮುಗಿಸುವುದು ವಾಡಿಕೆ. ಹಿಂದುಗಳಲ್ಲಿನ ಕೆಲ ಸಮುದಾಯದಲ್ಲಿ ಪುರುಷರಿಗೆ ಮುದ್ರೆ ಹಾಕುವ ಪದ್ಧತಿ ಇದ್ದು, ಮುದ್ರೆ ಹಾಕಿಸಿಕೊಂಡವರಿಗೆ ಏನಾದರು ಸಾವಿನ ಸುದ್ದಿ ಕಿವಿಗೆ ಬಿದ್ದರೆ ಅವರು ಅಂತ್ಯ ಸಂಸ್ಕಾರ

ಆಗುವವರೆಗೂ ಊಟ ಮಾಡುವುದಿಲ್ಲ. ಆನಂತರವೇ ಸ್ನಾನ ಪೂಜೆ ನಂತರ ಊಟಮಾಡುವ ಪದ್ಧತಿಯನ್ನು ಈಗಲೂ ನಡೆಸಿಕೊಡು ಬಂದಿದ್ದಾರೆ. ಮುದ್ರೆಯನ್ನು ದೇವಸ್ಥಾನದ ಅರ್ಚಕರಾದವರು ಬೆಳ್ಳಿ ಮತ್ತು ಬಂಗಾರದಿಂದ ಮಾಡಿದ ಶಂಖ ಮತ್ತು ಚಕ್ರ ಗುರುತಿನ ಮುದ್ರೆಯನ್ನು ಬೆಂಕಿಯಲ್ಲಿ ಕಾಸಿ ಬಿಸಿ ಇರುವಾಗಲೇ ಪುರುಷರು ರಟ್ಟೆಗೆ ಹಾಕಿಸಿಕೊಳ್ಳುವುದು ಕಡ್ಡಾಯವಾಗಿದೆ. ಮುದ್ರೆ ಹಾಕಿಸಿ ಕೊಳ್ಳದವರು ಮದುವೆಗೆ ಅರ್ಹರಲ್ಲ ಎಂದು ಒಂದು ವೇಳೆ ಹಾಕಿಸಿ ಕೊಂಡಿಲ್ಲದಿದ್ದರೆ ಮದುವೆಯ ಸಂದರ್ಭದಲ್ಲಿಯಾದರೂ ಹಾಕಿಯೇ ಹಾಕುತ್ತಾರೆ.

ಮೇಲ್ವರ್ಗದವರು ಮತ್ತು ಜೈನ ಸಮುದಾಯದಲ್ಲಿ ಸಾವು ಸಂಭವಿಸಿದ ಮೂರನೇ ದಿನದಂದು ಸುಟ್ಟ ಬೂದಿಯನ್ನು ಮತ್ತು ಅಸ್ಥಿಯನ್ನು ತೆಗೆದು ಕೊಂಡು ನದಿಗೆ ಬಿಡುತ್ತಾರೆ. ಹಾಗೂ ಕಾಗೆ ಪಿಂಡವನ್ನು ಮಾಡುವ ಅಂದರೆ ಸ್ಮಶಾನದಲ್ಲಿ ಒಂದು ಹೊಸ ಮಡಿಕೆಯಲ್ಲಿ ಸ್ವಲ್ಪ ಅಕ್ಕಿಯನ್ನು ಹಾಕಿ ಅನ್ನವನ್ನು ಮಾಡಿ ಕಾಗೆಗಳಿಗೆ ಹಾಕುತ್ತಾರೆ. ಕಾಗೆಗಳು ಆ ಅನ್ನವನ್ನು ತಿಂದರೆ ಸತ್ತ ವ್ಯಕ್ತಿಯು ಯಾವುದೇ ಆಸೆಗಳಿಲ್ಲದೇ ಮುಕ್ತಿಯನ್ನು ಹೊಂದುತ್ತಾನೆ ಎಂದು. ಕಾಗೆಗಳು ಅನ್ನವನ್ನು ತಿನ್ನದೇ ಇದ್ದರೆ, ಸತ್ತ ವ್ಯಕ್ತಿಯು ಯಾವುದೇ ಒಂದು ಆಸೆ ಮನಸ್ಸಿನಲ್ಲೆ ಉಳಿದಿದೆ ಎಂಬ ನಂಬಿಕೆ ಇದೆ. ಆ ಒಂದು ಆಸೆಯನ್ನು ಇರುವ ಮಕ್ಕಳು ಪೂರೈಸುವಂತೆ ಹಿರಿಯರಾದವರು ಸೂಚಿಸುತ್ತಾರೆ. ಆಗ ಆ ಅನ್ನವನ್ನು ಕಾಗೆಗಳು ತಿನ್ನುತ್ತವೆ. ಈ ತರದ ಆಶ್ಚರ್ಯಕರ ಆಚರಣೆಗಳ ಸಂಗತಿಗಳು ಈ ಕಾಲದಲ್ಲಿಯೂ ಇರುವುದು ಸೂಜಿಗವನ್ನು ಉಂಟು ಮಾಡುತ್ತಿದೆ.

ಸಾವು ಸಂಭವಿಸಿದ ೩, ೫, ೯ ದಿನಗಳಲ್ಲಿ ತಿಥಿ ಕಾರ್ಯವನ್ನು ಮಾಡಲಾಗುತ್ತದೆ ಒಳಗೆ ತೆಗೆದುಕೊಳ್ಳುವುದು ಎಂದು ಕರೆಯುವುದು ವಾಡಿಕೆ. ಆ ದಿನ ಮನೆಯನ್ನೆಲ್ಲಾ ಶುಭ್ರಗೊಳಿಸಿ ಗೋಮೂತ್ರವನ್ನು ಸಿಂಪಡಿಸಿ ಸತ್ತ ವ್ಯಕ್ತಿಯು ಏನೆಲ್ಲಾ ತಿನ್ನುತ್ತಿದ್ದಂತಹ ಪದಾರ್ಥಗಳನ್ನು ಅಡುಗೆ ಮಾಡಿ ಆ ವ್ಯಕ್ತಿಯನ್ನು ಹೂತ(ಸಮಾಧಿ)ಜಾಗಕ್ಕೆ ಹೋಗಿ ಪೂಜೆ ಮಾಡಿ ನೈವೇದ್ಯ ಮಾಡುವ ಪದ್ಧತಿ ಇದೆ. ಆನಂತರ ಬಂಧು ಬಳಗದವರಿಗೆ ಊಟ ಹಾಕುವ ಪದ್ಧತಿ ಜಾರಿಯಲ್ಲಿದೆ[೪೬]. ಹಿಂದೂಗಳಂತೆ ಮುಸ್ಲಿಂರಲ್ಲಿಯೂ ಸಹ ಮರಣಕ್ಕೆ ಕೆಲ ವಿಧಿ-ವಿಧಾನಗಳನ್ನು ಆಚರಿಸಲಾಗುತ್ತದೆ. ಏಕೆಂದರೆ ಮುಸ್ಲಿಂರಲ್ಲಿಯೂ ನಂತರ 'ಸ್ವರ್ಗ' ಅಂದರೆ 'ಜನ್ನತ್' ಮತ್ತು 'ನರಕ' ಎಂದರೆ ಜಹನ್ನುಮದ ಪರಿಕಲ್ಪನೆಗಳಿವೆ[೪೭].

೧. ಮರಣದ ತಕ್ಷಣ ಆ ಶವವನ್ನು ಮನೆಯ ನಡುವೆ ಇಟ್ಟುಕೊಂಡು ಅನೇಕ ಜನರು ಕುರಾನ್ ಮತ್ತು ತಸವಿಯನ್ನು ಓದಲು ಕುಳಿತುಕೊಳ್ಳುತ್ತಾರೆ ಇದರ ಉದ್ದೇಶ ಅವರ ಕಿವಿಯಲ್ಲಿ ಆ ಒಂದು ಓದುವುದನ್ನು ಅವರಿಗೆ ಹೋಗಿ ಮುಟ್ಟಬೇಕು.

೨. ಹೆಣ್ಣು ಸತ್ತರೆ ಅವಳಿಗೆ ಹೆಂಗಸರು ಸ್ನಾನವನ್ನು ಮಾಡಿಸಬೇಕು, ಗಂಡು ಸತ್ತರೆ ಅವನನ್ನು ಗಂಡಸರೆ ಸ್ನಾನವನ್ನು ಮಾಡಿಸಬೇಕು.

೩. ಸ್ನಾನವನ್ನು ಮಾಡಿಸಿದ ನಂತರ ಬಿಳಿ ಬಟ್ಟೆಯನ್ನು ಉಡಿಸುವುದು ಅದಕ್ಕೆ 'ಕಫನ್' ಎನ್ನುವರು ಮತ್ತು ಅವರಿಗೆ ಸುರಮಾ ಎಂದರೆ 'ಕಾಡಿಗೆ'/ಅತ್ತರ ಅಂದರೆ ಸುಗಂಧ ವಾಸನೆ ಮತ್ತು ಹೂವುಗಳನ್ನು ಹಾಕುತ್ತಾರೆ ನಂತರ ಮುಖವನ್ನು ಎಲ್ಲರಿಗೆ ಸಂದರ್ಶಿಸುತ್ತಾರೆ.

೪. ತದನಂತರ ಮೌಲ್ವಿಯನ್ನು ಕರೆಯಲಾಗುತ್ತದೆ ಅವರು ಬಂದು ಶವವನ್ನು ಎತ್ತಿಕೊಂಡು ಸ್ಮಶಾನಕ್ಕೆ ಹೋಗುತ್ತಾರೆ. ಅಲ್ಲಿ ಶವವನ್ನು ಇಟ್ಟು ಪ್ರಾರ್ಥಿಸುತ್ತಾರೆ. ತದ ನಂತರ ಅಲ್ಲಿ ಶವವನ್ನು ಹೂಳುವ ಕಾರ್ಯ ನಡೆಯುತ್ತದೆ.

೫. ಶವವನ್ನು ಹೂಳುವ ಸ್ಥಳದಲ್ಲಿ ಇಟ್ಟು ಎಲ್ಲರೂ ಐದು ಮುಷ್ಠಿ ಮಣ್ಣನ್ನು ಒಬ್ಬೊಬ್ಬರು ಆ ಶವದ ಮೇಲೆ ಹಾಕುತ್ತಾರೆ. ತದನಂತರ ಈ ಕಾರ್ಯವನ್ನು ಪೂರ್ಣಗೊಳಿಸುತ್ತಾರೆ.

ಇವರಲ್ಲಿ ಮರಣದ ನಂತರ ಮೂರು ದಿನದ ತಿಥಿಗಳೆಂದು ಆಚರಿಸಲಾಗುತ್ತದೆ. ಮರಣದ ನಂತರ ಒಂಬತ್ತು ದಿವಸಕ್ಕೆ ಅವರ ಹೆಸರಿನ ಮೇಲೆ ಊಟವನ್ನು ಹಾಕಿಸಿ, ಶಾಂತಿಯಾಗಲಿ ಎಂದು ಪ್ರಾರ್ಥಿಸುತ್ತಾರೆ. ಅದೇ ರೀತಿ ಕೊನೆಯದಾಗಿ ನಲವತ್ತು ದಿವಸಕ್ಕೆ ಅವರ ಆತ್ಮಕ್ಕೆ ನೆಮ್ಮದಿ ಸಿಗಲೆಂದು ಮೌಲ್ವಿಯನ್ನು ಕರೆಸಿ ಮಂತ್ರ ಪಟನೆಯನ್ನು ಮಾಡಿಸುತ್ತಾರೆ. ಏಕೆಂದರೆ ಸತ್ತ ವ್ಯಕ್ತಿ ಮುಕ್ತಿಯನ್ನು ಪಡೆಯಬೇಕು  ಮತ್ತು ಸ್ವರ್ಗದ (ಜನ್ನತ್) ಬಾಗಿಲು ಅವರ ಸಲುವಾಗಿ ತೆರೆಯಬೇಕು ಇವರ ತಪ್ಪುಗಳನ್ನು ಅಲ್ಲಾ ಕ್ಷಮಿಸಬೇಕು ಎನ್ನುವುದು ಈ ಆಚರಣೆಯ ಉದ್ದೇಶವಾಗಿರುತ್ತದೆ. ಈ ಪರಿಸರಲ್ಲಿ ಜೀವಿಸಿರುವ ಇನ್ನಿತರೆ ಸಮುದಾಯಗಳಲ್ಲಿಯೂ ಇದೇ ರೀತಿಯ ಮರಣಕ್ಕೆ ಸಂಬಂಧಿಸಿದ ಆಚರಣೆಗಳನ್ನು ನಾವು ಗುರುತಿಸಬಹುದಾಗಿದ್ದು, ಅವು ಸಹ ಅಧ್ಯಯನದ ದೃಷ್ಟಿಯಿಂದ ಮಹತ್ವ ಪಡೆದಿವೆ.

**೩.೪. ಕಲಾ ಪರಂಪರೆ ಮತ್ತು ವಿಶಿಷ್ಟ ಕಲಾವಿದರು**

ತೇರದಾಳ ಪರಿಸರದಲ್ಲಿ ಇಂದಿನ ಜಾಗತೀಕರಣದಲ್ಲೂ ಉತ್ತಮ ಜಾನಪದ ವೈವಿಧ್ಯತೆ ಇದೆ. ಜಾನಪದ ಸಿರಿವಂತಿಕೆಗೆ ಹೆಸರಾದ ಈ ಭಾಗದಲ್ಲಿ ಹಲವಾರು ಜಾನಪದ ಕಲಾ ಪ್ರಕಾರಗಳು ಜೀವಂತವಾಗಿದ್ದು, ಅವುಗಳು ನಾಡಿನ ಜಾನಪದ ಉಳಿಯುವಿಕೆಗೆ ಕಾರಣವಾಗಿವೆ. ಅವುಗಳಲ್ಲಿ  ಪುರವಂತಿಕೆ ಕುಣಿತ, ಡೊಳ್ಳು ಕುಣಿತ, ಸಂಬಾಳವಾದ್ಯ, ಹಲಗೆ ವಾದನ, ಬಯಲಾಟ, ಸಣ್ಣಾಟ, ಜಾನಪದ ಮತ್ತು ಸೋಬಾನೆ ಹಾಡುವವರು, ಗೊಂದಲಿಗರ ನೃತ್ಯ, ಭಜನೆ ಮೇಳೆ, ಗೀಗಿ ಮೇಳ ಪ್ರಮುಖವಾಗಿದ್ದು, ಅವುಗಳ ವಿಶೇಷತೆಯನ್ನು ಸಂಕ್ಷಿಪ್ತವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ.

ಸಾಂಸ್ಕೃತಿಕ ರಂಗದಲ್ಲಿ ಬಹಳಷ್ಟು ಹೆಸರು ಮಾಡಿದ ಜಾನಪದ ಕಲಾವಿದರು ಈ ಪರಿಸರದಲ್ಲಿ ವಾಸವಾಗಿದ್ದಾರೆ. ಅವರಲ್ಲಿ ಸೋಬಾನೆ ಹಾಡುಗಾರರು, ಡೊಳ್ಳಿನ ಕಲಾವಿದರು, ಭಜನಾ ಕಲಾವಿದರು, ನಾಟಕ ಕಲಿಸುವ ಮಾಸ್ತರರು ಮೊದಲಾದ ಕಲಾವಿದರು ಇಲ್ಲಿ ಇದ್ದಾರೆ. ಇವರಲ್ಲಿ ಕೆಲವು ಕಲಾವಿದರು ಆಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳನ್ನು ಪಡೆದು ಈ ಕ್ಷೇತ್ರಕ್ಕೆ ಮತ್ತಷ್ಟು ಕಳಶವನ್ನಿಟ್ಟಿದ್ದಾರೆ. ತೇರದಾಳ ಪರಿಸರದಲ್ಲಿ ಹಲವು ಜಾನಪದ ಕಲಾ ಪ್ರಕಾರಗಳು ಜೀವಂತಾಗಿವೆ. ಅವುಗಳಲ್ಲಿ ಸಂಬಾಳ ವಾದ್ಯ ಮೇಳಗಳು, ಡೊಳ್ಳಿನ ಕುಣಿತ ಹಾಗೂ ಪದಗಳು, ಚೌಡಕಿ ಪದಗಳ ಮೇಳಗಳು, ಗೀಗೀ ಪದಗಳ ಮೇಳಗಳು, ಭಜನಾ ಮೇಳಗಳು, ಹೆಜ್ಜೆ ಮೇಳ (ಕರಬಲ ಮೇಳಗಳು), ಕೀಲು ಕುದರೆ ಕುಣಿತ ಮೇಳಗಳು, ಲಂಬಾಣಿ ನೃತ್ಯಗಳು, ಗೊಂದಲಿಗರ ಪದಗಳು, ಲಂಬಾಣಿ ಭಜನಾ ಮೇಳಗಳು, ಏಕತಾರಿ ಹಾಡುಗಳು, ಲಾವಣಿ ಹಾಡುವವರು, ಕೀರ್ತನಕಾರರು, ಬಯಲಾಟಗಳು, ಸಂಗ್ಯಾ ಬಾಳ್ಯಾ, ವೀರಭದ್ರ ಪುರವಂತಕೆ

ಕುಣಿತಗಳು ಮುಖ್ಯವಾಗಿದ್ದು, ಇವುಗಳೊಂದಿಗೆ ವಿವಿಧ ಪ್ರಕಾರದ ಜಾನಪದ ಹಾಡುಗಾರರು ಇಲ್ಲಿದ್ದಾರೆ. ಈ ಭಾಗದಲ್ಲಿನ ಪ್ರಮುಖ ಕಲಾ ಪ್ರಕಾರಗಳನ್ನು ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

**ವೀರಭದ್ರ ಕುಣಿತ/ಪುರವಂತಕೆ ಕುಣಿತ**

ಕರ್ನಾಟಕದಾದ್ಯಂತ ಅಪಾರ ಜನಪ್ರಿಯತೆ ಪಡೆದ ದೈವಗಳಲ್ಲಿ ಒಂದಾದ ವೀರಭದ್ರ ದೇವರು ಪ್ರಮುಖವಾಗಿ ಶೈವ ಮತ್ತು ವೀರಶೈವರ ಆರಾಧ್ಯ ಪುರುಷ. ಶಿವ ಮತ್ತು ದಕ್ಷಬ್ರಹ್ಮರ ನಡುವಿನ ವೈಷಮ್ಯದಲ್ಲಿ ಶಿವನ ಅಪೇಕ್ಷೆಯಂತೆ ಜನ್ಮ ತಾಳುವ ವೀರಭದ್ರ, ಶಿವನ ಅಣತಿಯಂತೆ ದಕ್ಷನನ್ನು ಕೊಂದು ನಂತರ ಪ್ರಮುಖ ಯುದ್ಧ ದೈವವಾಗಿ ಕಾಣಿಸಿಕೊಂಡಿದ್ದಾನೆ. ಕೂರ್ಮ ಪುರಾಣ ಮತ್ತು ಭಾಗವತ ಪುರಾಣಗಳಲ್ಲಿ ವೀರಭದ್ರ ದಕ್ಷನನ್ನು ಕೊಂದ ಬಗೆಯನ್ನು ವಿವರಿಸಲಾಗಿದೆ. ಇಲ್ಲಿನ ಅನೇಕ ಕಾವ್ಯಗಳಲ್ಲಿ ವೀರಭದ್ರನ ಕಥೆಯ ಉಲ್ಲೇಖ ಬರುತ್ತದೆ. ತೇರದಾಳ ಪರಿಸರದಲ್ಲಿ ಪ್ರದೇಶದಲ್ಲಿ ವೀರಭದ್ರನ ಆರಾಧನೆ ವೈಶಿಷ್ಟ್ಯಪೂರ್ಣವಾಗಿದೆ. ವೀರಭದ್ರನ ಪ್ರತೀಕವೆಂದು ಭಾವಿಸಲಾಗಿರುವ ಈ ಕುಣಿತವನ್ನು ಪುರವಂತಿಕೆಯ ಕುಣಿತವೆಂದು ಕರೆಯಲಾಗುತ್ತದೆ. ಈ ಕಲಾವಿದರನ್ನು ಪುರವಂತರೆಂದೇ ಕರೆಯುತ್ತಾರೆ. ಈ ಹಿನ್ನೆಲೆಯಲ್ಲಿ ಪುರವಂತಿಕೆಯ ಹೆಸರಿನ ಕೆಲವೊಂದು ಕುಟುಂಬಗಳೂ ತೇರದಾಳ ಪರಿಸರದಲ್ಲಿ ಕಾಣುತ್ತವೆ. ಗುಗ್ಗಳ ಸಂದರ್ಭದಲ್ಲಿ ದೇಹದ ವಿವಿಧ ಭಾಗಗಳಿಗೆ ಶಸ್ತ್ರಗಳನ್ನು ಚುಚ್ಚಿಕೊಂಡು ಕುಣಿಯುವುದೇ ಶಸ್ತ್ರ ಪವಾಡ. ಇನ್ನುಳಿದಲ್ಲಿ ಕಂಠ ಶಸ್ತ್ರ, ನಾಭಿಸ್ತ್ರ, ಫಣಿಸ್ತ್ರ, ಕಪ್ಪೆ ಶಸ್ತ್ರ, ಜಿಹ್ವಾಶಸ್ತ್ರ, ಮೊದಲಾದ ಪವಾಡಗಳಿವೆ. ಕಂಠ, ನಾಭಿ, ಹಣೆ ಮೊದಲಾದ ದೇಹದ ಅಂಗಗಳಿಗೆ ಶಸ್ತ್ರಗಳನ್ನು ಚುಚ್ಚಿಕೊಳ್ಳುವುದನ್ನೇ ಈ ಬೇರೆಬೇರೆ ಹೆಸರುಗಳು ಸೂಚಿಸುತ್ತವೆ. ಕೆಲವೊಮ್ಮೆ ಇವರು ಒಬ್ಬರಿಗೊಬ್ಬರು ಎದುರು ಬದುರಾಗಿ ನಿಂತು ಪರಸ್ಪರ ತುಟಿ ನಾಲಗೆಗಳನ್ನು ಶಸ್ತ್ರದ ಮೂಲಕ ಚುಚ್ಚಿಕೊಳ್ಳುವುದುಂಟು. ಇವರು ಧೋತ್ರ ಹಾಗೂ ಕಾವಿ ಅಂಗಿ ಧರಿಸಿರುತ್ತಾರೆ. "ಗಲೀಪದಂತಹ" ವಸ್ತ್ರವನ್ನು ಶರೀರಕ್ಕೆ ಹಾಕಿಕೊಂಡಿರುತ್ತಾರೆ. ತಲೆಗೆ ಕಾವಿಯ ರೇಷ್ಮೆ ರುಮಾಲು, ತೋಳಿಗೆ ಬೆಳ್ಳಿಯ ನಾಗರ, ಎದೆಗೆ ತೀರ್ಥ ಮುಖ, ದರ್ಪಣ, ನಡುವಿಗೆ ನರಸಿಂಹ ಮುಖ, ರುಂಡಮಾಲೆ, ಮಣಿಕಟ್ಟು ಮತ್ತು ಕೊರಲಿಗೆ ರುದ್ರಾಕ್ಷಿಮಾಲೆ, ರಕ್ಷಾ ಜೋಳಿಗೆ, ಹಣೆಗೆ ವಿಭೂತಿ, ಬಲಗೈಯಲ್ಲಿ ಖಡ್ಗ ಅಥವಾ ತ್ರಿಶೂಲ, ಎಡಗೈಯಲ್ಲಿ ಪಂಚಲೋಹದಿಂದ ಮಾಡಿದ ಸುಮಾರು ಒಂದೂವರೆ ಅಂಗುಲ ಮೂರು ನಾಲ್ಕು ಅಡಿ ಉದ್ದವಿರುವ ಶಸ್ತ್ರಗಳು ಪುರವಂತಿಕೆಯವರು ಬಳಸಿಕೊಂಡು ತಮ್ಮ ನೃತ್ಯವನ್ನು ಪ್ರದರ್ಶಿಸಿ ಜನರನ್ನು ಆಕರ್ಷಿಸುತ್ತಾರೆ[೪೮]. ಇವರು ತಮ್ಮ ಪರಂಪರೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಅವರಲ್ಲಿ ಪರಪ್ಪ ಶಿವಲಿಂಗಪ್ಪ ಚಿಚಕಂಡಿ, ಈರಪ್ಪ ತಿಪಣ್ಣಪ್ಪ ಗಿರೆನ್ನವರ, ಸಿದ್ದರಾಮ ದುಂಡಪ್ಪ ಮನ್ನಿ, ಈಶ್ವರ ಪರಪ್ಪ ಗೋಲಬಾಂವಿ, ಲಕ್ಷಣ ಅಲ್ಲಪ್ಪ ಮನ್ನಿ, ಗಂಗಾದರ ಪರಪ್ಪ ಗೋಲಬಾಂವಿ, ಮಾನಿಂಗ ಗಿರಮಲ್ಲಪ್ಪ ಚಿಮ್ಮಡ, ರಾಮಣ್ಣ ಸುಭಾಷ ಕಂಪನ್ನವರ ಪ್ರಮುಖರಾಗಿದ್ದಾರೆ.

ಈ ಮೇಲಿನ ಕಲಾ ಪ್ರಕಾರವಲ್ಲದೇ ತೇರದಾಳ ಪರಿಸರದಲ್ಲಿ ಇನ್ನೂ ಹಲವಾರು ಜಾನಪದ ಕಲಾ ಪ್ರಕಾರಗಳು ಅಸ್ತಿತ್ವದಲ್ಲಿದ್ದು, ಕಲಾ ಪ್ರದರ್ಶನಕ್ಕಾಗಿಯೇ ಹಲವು ಮೇಳ(ಸಂಘ)ಗಳನ್ನು ಕಟ್ಟಿಕೊಂಡಿದ್ದಾರೆ. ಅವುಗಳನ್ನು ಮುಂದಿನಂತೆ ಗುರುತಿಸಬಹುದು.

**ಸಂಬಾಳ ವಾದ್ಯ ಮೇಳಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಸಂಬಾಳ ವಾದ್ಯವು ಒಂದಾಗಿದೆ. ಇದರಲ್ಲಿ ಕನಿಷ್ಠ ೮-೧೦ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಈ ವಾದ್ಯದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ. ಅವುಗಳಲ್ಲಿ ನಾವಲಗಿಯಲ್ಲಿ ಶ್ರೀ ಹನುಮಾನ ಸಂಬಾಳ ವಾದ್ಯ ಕಲಾ ಮೇಳ, ಶ್ರೀ ಜೈ ಹನುಮಾನ ಸಂಬಾಳ ವಾದ್ಯ ಹಾಗೂ ಶಹನಾಯಿ ಕಲಾ ಮೇಳ, ಶ್ರೀ ಮಾರುತೇಶ್ವರ ಸಂಬಾಳ ವಾದ್ಯ ಹಾಗೂ ಶಹನಾಯಿ ಕಲಾ ಮೇಳಗಳಿವೆ. ಶ್ರೀ ಗುರು ಜೈ ಹನುಮಾನ ಸಂಬಾಳ ವಾದ್ಯ ಹಾಗೂ ಶಹನಾಯಿ ಕಲಾ ಮೇಳ ನಾವಲಗಿ, ಶ್ರೀ ಬಲಭೀಮ ಸಂಬಾಳ ವಾದ್ಯ ಹಾಗೂ ಶಹನಾಯಿ ಕಲಾ ಮೇಳಗಳಿವೆ. ಅದೇ ರೀತಿ ಮದರಖಂಡಿಯಲ್ಲಿ ಶ್ರೀ ಮಹಾಲಕ್ಷ್ಮೀ ಸಂಬಾಳ ವಾದ್ಯ ಹಾಗೂ ಶಹನಾಯಿ ಕಲಾಮೇಳ ಹಾಗೂ ಬನಹಟ್ಟಿಯಲ್ಲಿ ಶ್ರೀಧರ ಹೂಗಾರ ಕಲಾ ಸಂಘವಿದೆ.

**ಡೊಳ್ಳಿನ ಕುಣಿತ ಹಾಗೂ ಪದಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಡೊಳ್ಳು ಕುಣಿತ ಒಂದಾಗಿದೆ. ಕುರುಬ ಸಮುದಾಯದವರು ವಿಶೇಷವಾಗಿ ಈ ಕಲೆಯನ್ನು ರೂಢಿಸಿಕೊಂಡಿದ್ದಾರೆ. ಇದರಲ್ಲಿ ಕನಿಷ್ಠ ೮-೧೦ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಈ ವಾದ್ಯದ ಪ್ರದರ್ಶನವನ್ನು ಏಪರ್ಡಿಸುತ್ತಾರೆ[೪೯]. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ. ಅವುಗಳಲ್ಲಿ ಶ್ರೀ ಪರಮಾನಂದ ಡೊಳ್ಳಿನ ಕಲಾ ಸಂಘ ಸಾ॥ ನಾವಲಗಿ, ಶ್ರೀ ಸಿದ್ದು ಉಪ್ಪಲದಿನ್ನಿ ಡೊಳ್ಳಿನ ಕಲಾ ಸಂಘ ಸಾ॥ ಕಲ್ಲೋಳ್ಳಿ, ಶ್ರೀ ಬೀರಪ್ಪಾ ಬಿಜ್ಜುಗಾರ ಡೊಳ್ಳಿನ ಕಲಾ ಸಂಘ ಸಾ॥ ಮದರಖಂಡಿ, ಶ್ರೀ ಜೈ ಕರ್ನಾಟಕ ಕಲಾ ಸಾಂಸ್ಕೃತಿಕ ಸಂಘ ಡೊಳ್ಳಿನ ಕೈ ಪಟ್ಟು ಸಾ॥ ಗೋಲಬಾವಿ, ಶ್ರೀ ಗಂಗಪ್ಪ ಮೇಟಿ ಡೊಳ್ಳಿನ ಕೈ ಪಟ್ಟು ಸಾ॥ ಜಗದಾಳ, ಶ್ರೀ ಭರಮ ದೇವರ ಡೊಳ್ಳಿನ ಕೈ ಪಟ್ಟು ಸಾ॥ ಹಿಪ್ಪರಗಿ, ಶ್ರೀ ಬೀರಸಿಂಗ ಡೊಳ್ಳಿನ ಕೈ ಪಟ್ಟು ಸಾ॥ ಹಿಪ್ಪರಗಿ, ಶ್ರೀ ಅಂಭಾಬಾಯಿ ಡೊಳ್ಳಿನ ಕೈ ಪಟ್ಟು ಸಾ॥ ಹಿಪ್ಪರಗಿ, ಶ್ರೀ ಲಕ್ಕಪ್ಪ ಸಂಗಪ್ಪ ಮುಂಡಗನೂರ ಸಾ॥ ಹಿಪ್ಪರಗಿ, ಶ್ರೀ ಮಾಳಿಂಗರಾಯ ಡೊಳ್ಳಿನ ಕಲಾ ಸಂಘ ಸಾ॥ ಬನಹಟ್ಟಿ, ಶ್ರೀ ದುರ್ಗಾದೇವಿ ಡೊಳ್ಳಿನ ಕಲಾ ಸಂಘ ಸಾ॥ ನಾವಲಗಿ ಅಸ್ಥಿತ್ವದಲ್ಲಿವೆ.

**ಚೌಡಕಿ ಪದಗಳ ಮೇಳಗಳು**

ತೇರದಾಳ ಪರಿಸರದಲ್ಲಿನ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಚೌಡಕಿ ಬಾರಿಸುವುದು ಒಂದಾಗಿದೆ. ಇದರಲ್ಲಿ ಕನಿಷ್ಠ ೩-೫ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಈ ವಾದ್ಯದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ. ಅವುಗಳಲ್ಲಿ ರುಕಮವ್ವಾ

ಹನುಮಂತ ಬರಗಾಲ ಚೌಡಕಿ ಮೇಳ ಸಾ॥ ನಾವಲಗಿ, ದುರ್ಗವ್ವಾ ಚನ್ನಾಳ ಚೌಡಕಿ ಮೇಳ ಸಾ॥ ನಾವಲಗಿ, ರುಕಮವ್ವಾ ಹುಣಸ್ಯಾಳ ಚೌಡಕಿ ಮೇಳ ಸಾ॥ ನಾವಲಗಿ, ಲಕ್ಷ್ಮೀಬಾಯಿ ಬರಗಾಲ ಚೌಡಕಿ ಮೇಳ ಸಾ॥ ನಾವಲಗಿ, ಕಮಲವ್ವಾ ಕೆಂಚವ್ವಗೋಳ ಚೌಡಕಿ ಮೇಳ ಸಾ॥ ಜಗದಾಳ, ಗಂಗವ್ವಾ ಹಟ್ಟೆನ್ನವರ ಚೌಡಕಿ ಮೇಳ ಸಾ॥ ತೇರದಾಳ, ದೋಡವ್ವಾ ಪಕೀರಪ್ಪ ದೊಡಮನಿ ಚೌಡಕಿ ಮೇಳ ಸಾ॥ ಜಗದಾಳ, ಶ್ರೀ ಲಕ್ಕವಾ ಕೆಂಚವ್ವಗೋಳ ಚೌಡಕಿ ಮೇಳ ಸಾ॥ ನಾವಲಗಿ, ರುಕಮವ್ವಾ ಸೀತವ್ವಾ ಮಾದರ ಚೌಡಕಿ ಮೇಳ ಸಾ॥ ಮದರಖಂಡಿ

**ಕರಡಿ ಮಜಲು ಮೇಳಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಕರಡಿ ಮಜಲು ಒಂದಾಗಿದೆ. ಇದರಲ್ಲಿ ಕನಿಷ್ಠ ೬–೮ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಈ ವಾದ್ಯದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ. ಅವುಗಳಲ್ಲಿ ಚನ್ನಪ್ಪಾ ಸದಪ್ಪಾ ಹಳ್ಳಿ, ಕರಡಿ ಮೇಳ ಸಾ॥ ನಾವಲಗಿ, ಸಿದ್ದಪ್ಪಾ ಕಂಚು ಕರಡಿ ಮೇಳ ಸಾ॥ ನಾವಲಗಿ, ಮಾದೇವಪ್ಪ ಪರಪ್ಪಾ ಕಂಪು ಕರಡಿ ಮೇಳ ಸಾ॥ ನಾವಲಗಿ, ಮಹಾಂತೇಶ ಸವ್ವಾಚಾರಿ ಕರಡಿ ಮೇಳ ಸಾ॥ ಕುಲಹಳ್ಳಿ, ಚನ್ನಪ್ಪ ಕಲ್ಲಪ್ಪ ಗುರವ ಕರಡಿ ಮೇಳ ಸಾ॥ ಹಿಪ್ಪರಗಿ, ಗಜಪ್ಪಾ ನಾಗರಾಳ ಕರಡಿ ಮೇಳ ಸಾ॥ ರಬಕವಿ

**ಕಣಿ ಮೇಳಗಳು**

ತೇರದಾಳ ಪರಿಸರದಲ್ಲಿರುವ ಹಲವು ಜನಪ್ರಿಯ ಕಲಾ ಪ್ರಕಾರಗಳಲ್ಲಿ ಕಣಿ ಬಾರಿಸುವುದು ಒಂದಾಗಿದೆ. ಇದರಲ್ಲಿ ಕನಿಷ್ಠ ೫–೬ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಈ ವಾದ್ಯದ ಪ್ರದರ್ಶನವನ್ನು ಏಪರ್ಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ. ಅವುಗಳಲ್ಲಿ ಹನುಮಂತ ಬರಗಾಲ ಕಣಿ ಮೇಳ ಸಾ॥ ನಾವಲಗಿ, ತುಕ್ಕಪ್ಪ ಕುದರಿ ಕಣಿ ಮೇಳ ಸಾ॥ ನಾವಲಗಿ, ಸಿದ್ದಪ್ಪ ಕಂಚು ಸಾ॥ ನಾವಲಗಿ, ಶ್ರೀಶೈಲ ಬಸಪ್ಪ ಮಾಂಗ ಸಾ॥ ಆಸಂಗಿ, ಬಸಪ್ಪ ಮಾದರ ಸಾ॥ ಹಿಪ್ಪರಗಿ

**ಭಜನಾ ಮೇಳಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯವಾಗಿರುವ ಕಲಾ ಪ್ರಕಾರಗಳಲ್ಲಿ ಭಜನೆಯು ಒಂದಾಗಿದೆ. ಇದರಲ್ಲಿ ಕನಿಷ್ಠ ೬–೮ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮರಣದ ಸಂದರ್ಭದಲ್ಲಿ, ದೇವತಾಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಈ ವಾದ್ಯದ ಪ್ರದರ್ಶನವನ್ನು ಏರ್ಪಡಿಸುತ್ತಾರೆ[೫೦]. ಈ ಭಾಗದಲ್ಲಿನ ಕಲಾವಿದರು ಇದಕ್ಕಾಗಿ ಅನೇಕ ಕಲಾ ಸಂಘಗಳನ್ನು ರಚಿಸಿಕೊಂಡು ಈ ಕಲೆಯ ಏಳ್ಗೆಗಾಗಿ ಶ್ರಮಿಸುತ್ತಿದ್ದಾರೆ. ಅವುಗಳಲ್ಲಿ ಶ್ರೀ ಸೋಮಯ್ಯಾ ಸಂಘಯ್ಯಾ ಹಿರೇಮಠ ಸಾ॥ ನಾವಲಗಿ, ಶ್ರೀ ಗೋಪಾಲ ಮೇತ್ರಿ ಸಾ॥ ನಾವಲಗಿ, ಶ್ರೀ ಶ್ರೀಶೈಲ ಚನ್ನಪ್ಪ ಪಟ್ಟಣಶೆಟ್ಟಿ ಸಾ॥ ನಾವಲಗಿ, ಶ್ರೀಮತಿ ಗಂಗವ್ವಾ ಸೌದಿ ಸಾ॥

ನಾವಲಗಿ, ಶ್ರೀಮತಿ ಬಸವ್ವಾ ರಾಮಪ್ಪ ಗೋಲಬಾವಿ ಸಾ॥ ನಾವಲಗಿ, ಶ್ರೀ ಸಿದ್ದರಾಮಪ್ಪ ಹೊಸೂರು ಸಾ॥ ಜಗದಾಳ, ಶ್ರೀ ಮಾಹಾಲಿಂಗಯ್ಯಾ ಚ ಮಠಪತಿ ಸಾ॥ ಮದರಖಮಡಿ, ಶ್ರೀ ಈಶ್ವರ ಮಾದರ ಸಾ॥ ಮದರಖಮಡಿ, ಶ್ರೀಮತಿ ಲಕ್ಷ್ಮವ್ವಾ ತಳವಾರ ಸಾ॥ ಕಲ್ಲಹಳ್ಳಿ, ಶ್ರೀ ಬಸಯ್ಯ ಗುರುಪಾದಯ್ಯ ಮಠಪತಿ ಸಾ॥ ಕಲ್ಲಹಳ್ಳಿ, ಶ್ರೀ ಸಿದ್ದಪ್ಪ ಸಿದಗಿರಪ್ಪ ಚಿಚಖಂಡಿ ಸಾ॥ ನಾವಲಗಿ, ಶ್ರೀ ಶ್ರೀಶೈಲ ತೋಟದ ಸಾ॥ ಗೋಲಬಾವಿ, ಶ್ರೀ ಪ್ರಭುದೇವರ ಭಜನಾ ಮಂಡಳಿ ಸಾ॥ ಚಿಮ್ಮಡ, ಶ್ರೀ ಗುರಬಸಪ್ಪ ಪಾಟೀಲ ಭಜನಾ ಮಂಡಳಿ ಸಾ॥ ಹಿಪ್ಪರಗಿ, ಶ್ರೀ ಕರಿಯಪ್ಪ ಪೂಜಾರಿ ಭಜನಾ ಮಂಡಳಿ ಸಾ॥ ಹಿಪ್ಪರಗಿ, ಶ್ರೀ ಹನುಮಂತಪ್ಪ ಗುರವ ಭಜನಾ ಮಂಡಳಿ ಸಾ॥ ತಮದಡ್ಡಿ, ಶ್ರೀ ಗುರುಶಾಂತಪ್ಪ ಭಜನಾ ಮಂಡಳಿ ಸಾ॥ ರಾಮಪೂರ, ಶ್ರೀ ಈರಪ್ಪ ಮನ್ನಿ ಭಜನಾ ಮಂಡಳಿ ಸಾ॥ ರಬಕವಿ, ಶ್ರೀ ಮುತಪ್ಪ ಹಾಲಹಳ್ಳಿ ಭಜನಾ ಮಂಡಳಿ ಸಾ॥ ಸಸಾಲಟ್ಟಿ, ಶ್ರೀ ಪರಪ್ಪ ಸಲಬನ್ನವರ ಭಜನಾ ಮಂಡಳಿ ಸಾ॥ ಸಸಾಲಟ್ಟಿ, ಶ್ರೀ ದುಂಡಪ್ಪ ಸರಿಕರ ಭಜನಾ ಮಂಡಳಿ ಸಾ॥ ಸಸಾಲಟ್ಟಿ, ಶ್ರೀ ರಾಮಣ್ಣ ಮಾಸ್ತರ ಭಜನಾ ಮಂಡಳಿ ಸಾ॥ ಹಿಪ್ಪರಗಿ, ಶ್ರೀ ಸಿದ್ದಾರೂಢ ಭಜನಾ ಮಂಡಳಿ ಸಾ॥ ಕುಲಹಳ್ಳಿ, ಶ್ರೀ ಸಿದಗೀರೇಶ್ವರ ಭಜನಾ ಮಂಡಳಿ ಸಾ॥ ಕುಲಹಳ್ಳಿ, ಶ್ರೀ ಶಿವಲಿಂಗೇಶ್ವರ ಭಜನಾ ಮಂಡಳಿ ಸಾ॥ ಕುಲಹಳ್ಳಿ, ಶ್ರೀ ಶಿವಾನಂದ ಭಜನಾ ಮಂಡಳಿ ಸಾ॥ ಯಲ್ಲಟ್ಟಿ, ಶ್ರೀ ನರಸಿಂಹಶ್ವರ ಭಜನಾ ಮಂಡಳಿ ಸಾ॥ ಯಲ್ಲಟ್ಟಿ, ಶ್ರೀ ರಾಮಸಿ ನಾಯ್ಕ ಹರಿ ಭಜನಾ ಮಂಡಳಿ ಸಾ॥ ಕುಲಹಳ್ಳಿ, ಶ್ರೀ ಕೆಂಪಣ್ಣಾ ಹರಿಜನ ಭಜನಾ ಮಂಡಳಿ ಸಾ॥ ಸಸಾಲಟ್ಟಿ, ಶ್ರೀ ಸತ್ಯಪ್ಪ ಸುಣಗಾರ ಭಜನಾ ಮಂಡಳಿ ಸಾ॥ ತೇರದಾಳ, ಶ್ರೀ ಸಿದ್ದಾರೂಢ ಭಜನಾ ಮಂಡಳಿ ಸಾ॥ ತೇರದಾಳ, ಶ್ರೀ ಭೀಮಾ ಅವದೂತ ಭಜನಾ ಮಂಡಳಿ ಸಾ॥ ರಬಕವಿ, ಶ್ರೀ ಶಿವಾನಂದ ಬಸ್ಮೇ ಭಜನಾ ಮಂಡಳಿ ಸಾ॥ ರಾಮಪೂರ, ಶ್ರೀಮತಿ ಪಾರ್ವತಿ ಪೂಜಾರಿ ಭಜನಾ ಮಂಡಳಿ ಸಾ॥ ರಬಕವಿ ಪ್ರಮುಖವಾಗಿವೆ. ಭಜನಾ ಕಲಾವಿದರಾದ ತುಳಸಾಬಾಯಿ ರಾಮಣ್ಣಾ ಪೂಜಾರಿ ಸಾ॥ ಹಿಪ್ಪರಗಿ, ಯಲ್ಲವ್ವಾ ನಾಯ್ಕ ಸಾ॥ ನಾವಲಗಿ, ರುಕಮವ್ವಾ ಹನುಮಂತ ಬರಗಾಲ ಸಾ॥ ನಾವಲಗಿ ಮೊದಲಾದ ಕಲಾವಿದರು ತಮ್ಮ ಕಲಾ ಸೇವೆಗಾಗಿ ಜಾನಪದ ಆಕಾಡಮಿ ಪ್ರಶಸ್ತಿಯನ್ನು ಪಡೆದು ತೇರದಾಳ ಪರಿಸರದಲ್ಲಿ ಖ್ಯಾತರೆನಿಸಿದ್ದಾರೆ. ಅದೇ ರೀತಿ ಇದೇ ಕಲೆಯಲ್ಲಿ ವಿಶೇಷ ಸಾಧನೆ ಮಾಡಿದ ಸತ್ಯಪ್ಪ ದಾಸರ ಭಜನಾ ಕಲಾವಿದರು, ಸಾ॥ ತೇರದಾಳ ಇವರುಗಳು ಬಾಗಲಕೋಟ ಜಿಲ್ಲಾ ರಾಜೋತ್ಸವ ಪ್ರಶಸ್ತಿಯನ್ನು ಪಡೆದಿದ್ದಾರೆ. ಅಲ್ಲದೇ ಭಜನೆ ಕಲೆಯಲ್ಲಿ ವಿಶೇಷ ಹೆಸರು ಮಾಡಿರುವ ಕಲಾವಿದರಾದ ಶಿವರುದ್ರ ರೇವಣಸಿದ್ದಪ್ಪ ಮುಧೋಳ ಸಾ॥ ಹಿಪ್ಪರಗಿ ಮತ್ತು ಸಾಹಿತ್ಯಗಳಾದ ದು.ನಿ.ಬೆಳಗಲಿ ಸಾ॥ ಬನಹಟ್ಟಿ ಇವರುಗಳು ತಮ್ಮ ಸಾಹಿತ್ಯ ಕ್ಷೇತ್ರ ಸೇವೆಗಾಗಿ ಕರ್ನಾಟಕ ರಾಜೋತ್ಸವ ಪ್ರಶಸ್ತಿಗೆ ಬಾಜನರಾಗಿದ್ದಾರೆ.

**ಜಾನಪದ ತತ್ವಪದ ಮೇಳಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯವಾಗಿರುವ ಕಲಾ ಪ್ರಕಾರಗಳಲ್ಲಿ ತತ್ವಪದ ಹೇಳುವುದು ಒಂದಾಗಿದೆ. ಇದರಲ್ಲಿ ಕನಿಷ್ಟ ೨-೫ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಜಾತ್ರೆ-ಹಬ್ಬ-ದೇವತಾ ಕಾರ್ಯ, ಸಾರ್ವಜನಿಕ ಮೆರವಣಿಗೆ ಇತ್ಯಾದಿ ಶುಭ ಸಂದರ್ಭಗಳಲ್ಲಿ ಈ ಮೇಳದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ.

ಅವುಗಳಲ್ಲಿ ಶ್ರೀ ಗುರುರಾಜ ಕೆಂದೂಳಿ/ಶ್ರೀಕಾಂತ ಕೆಂದೂಳಿ ಸಾ॥ ರಬಕವಿ ಇವರು ಈ ಕಾರ್ಯದಲ್ಲಿ ವಿಶೇಷವಾಗಿ ತಲ್ಲೀನವಾಗಿದ್ದು ಈ ಕಲೆಯ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ.

**ಚಿಕ್ಕಲಗಾರ ಸೋಗ ಮೇಳಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಚಿಕ್ಕಲಗಾರ ಸೋಗ ಮೇಳವು ಒಂದಾಗಿದೆ. ಇದರಲ್ಲಿ ಕನಿಷ್ಟ ೮-೧೦ ಜನ ಕಲಾವಿದರಿದ್ದು ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಜಾತ್ರೆ-ಹಬ್ಬ-ಸಾರ್ವಜನಿಕ ಮೆರವಣಿಗೆ ಇತ್ಯಾದಿ ಶುಭ-ಸಂದರ್ಭಗಳಲ್ಲಿ ಈ ಮೇಳದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣಿಭೂತರಾಗಿದ್ದಾರೆ. ಅವುಗಳಲ್ಲಿ ಶ್ರೀ ಗಣಪತಿ ಬಾರಸಕಳೆ ಚಿಕ್ಕಲಗಾರ ಸೋಗ, ಸಾ॥ ನಾವಲಗಿ, ಶ್ರೀ ಮಾರುತಿ ದೇವರ ಚಿಕ್ಕಲಗಾರ ಸೋಗ, ಸಾ॥ ಜಗದಾಳ ಇವರು ರಚಿಸಿಕೊಂಡಿರುವ ಮೇಳಗಳು ಅತಿ ಮುಖ್ಯವಾಗಿವೆ.

**ಹಂತಿ ಪದಗಳ ಕಲಾ ತಂಡಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಹಂತಿ ಪದಗಳು ಒಂದಾಗಿವೆ. ಇದರಲ್ಲಿ ಕನಿಷ್ಟ ೮-೧೦ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಜಾತ್ರೆ-ಹಬ್ಬ-ಸಾರ್ವಜನಿಕ ಮೆರವಣಿಗೆ ಇತ್ಯಾದಿ ಶುಭ-ಸಂದರ್ಭಗಳಲ್ಲಿ ಈ ಮೇಳದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ರಕ್ಷಣೆಯಲ್ಲಿ ತೊಡಗಿದ್ದಾರೆ. ಅವುಗಳಲ್ಲಿ ಶ್ರೀಶೈಲ ಚನ್ನಪ್ಪ ಪಟ್ಟಣಶೆಟ್ಟಿ ಹಂತಿ ಪದಗಳ ಕಲಾ ತಂಡ ಸಾ॥ ನಾವಲಗಿ, ಗಿರಿಮಲ್ಲಪ್ಪಾ ಆಸಂಗಿ ಹಂತಿ ಪದಗಳ ಕಲಾ ತಂಡ ಸಾ॥ ನಾವಲಗಿ, ಸದಪ್ಪ ಗೂಳಪ್ಪ ಮುಗಳಖೋಡ ಹಂತಿ ಪದಗಳ ಕಲಾ ತಂಡ ಸಾ॥ ನಾವಲಗಿ, ಹನುಮಂತಪ್ಪ ಜನವಾಡ ಹಂತಿ ಪದಗಳ ಕಲಾ ತಂಡ ಸಾ॥ ಜಗದಾಳ, ಬಸಲಿಗಂಪ್ಪ ಕುಂಬಾರ ಹಂತಿ ಪದಗಳ ಕಲಾ ತಂಡ ಸಾ॥ ರಬಕವಿ, ಬೆನಕಪ್ಪ ಬೇಕ್ಕರಿ ಹಂತಿ ಪದಗಳ ಕಲಾ ತಂಡ ಸಾ॥ ರಬಕವಿ ಇವರ ಸಂಘಗಳು ಪ್ರಮುಖವಾಗಿವೆ.

**ಬಯಲಾಟಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಬಯಲಾಟಗಳು ಸಹ ಒಂದಾಗಿವೆ. ಇದರಲ್ಲಿ ಕನಿಷ್ಟ ೧೦-೨೦ಜನ ಕಲಾವಿದರಿದ್ದು, ದೊಡ್ಡಾಟ, ಮತ್ತು ಸಣ್ಣಾಟ ಎನ್ನುವ ಪ್ರಕಾರಗಳಿವೆ. ದೊಡ್ಡಾಟದಲ್ಲಿ ಕೃಷ್ಣಾರ್ಜುನ ಕಾಳಗ, ರಾಮ-ರಾವಣ ಯುದ್ಧ, ಲವಕುಶ, ದ್ರೌಪದಿ ವಸ್ತ್ರಪಹರಣ, ಮುಂತಾದ ಆಟಗಳು ಜನ ಮನ್ನಣೆ ಗಳಿಸಿವೆ. ಸಣ್ಣಾಟದಲ್ಲಿ ಸಂಗ್ಯಾಬಾಳ್ಯ ಸಾಕಷ್ಟು ಪ್ರಸಿದ್ಧಿಯಾಗಿದ್ದು, ಅದಕ್ಕಾಗಿ ಇರುವ ನಿಯಮಗಳನ್ನು ಕಲಾವಿದರು ಅಳವಡಿಸಿಕೊಂಡು ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ದೇವತಾ ಕಾರ್ಯ, ಜಾತ್ರೆ-ಹಬ್ಬ-ಉತ್ಸವ ಇತ್ಯಾದಿ ಶುಭ-ಸಂಧರ್ಭಗಳಲ್ಲಿ ಬಯಲಾಟದ ಪ್ರದರ್ಶನವನ್ನು ಏಪರ್ಡಿಸುತ್ತಾರೆ[೫೧]. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ಉಳಿಯುವಿಕೆಗೆ ಕಾರಣೀಭೂತರಾಗಿದ್ದಾರೆ. ಅವುಗಳಲ್ಲಿ ಶ್ರೀ ಹನುಮಾನ ಶ್ರೀ ಕೃಷ್ಣ ಪಾರಿಜಾತ ಕಲಾ ಸಂಘ ಸಾ॥

ನಾವಲಗಿ, ಶ್ರೀ ಗುರು ನಾಟ್ಯ ಸಂಘ/ಕಡ್ಲಿಮಟ್ಟಿ ಕಾಸೀಬಾಯಿ ಬೈಲಾಟ ಕಲಾ ಸಂಘ ಸಾ॥ ನಾವಲಗಿ, ಶ್ರೀ ಬಸವೇಶ್ವರ ಬೈಲಾಟ ಕಲಾ ಸಂಘ ಸಾ॥ ಬಂಡಿಗಣಿ, ಶ್ರೀ ಅಕ್ಕಮಹಾದೇವಿ ಬೈಲಾಟ ಕಲಾ ಸಂಘ ಸಾ॥ ಬಂಡಿಗಣಿ, ಶ್ರೀ ಶಿವಲಿಂಗೇಶ್ವರ ನಾಟ್ಯ ಬೈಲಾಟ ಕಲಾ ಸಂಘ ಸಾ॥ ಕುಲಹಳ್ಳಿ, ಶ್ರೀ ಶಿವಾನಂದ ನಾಟ್ಯ ಬೈಲಾಟ ಕಲಾ ಸಂಘ ಸಾ॥ ಕುಲಹಳ್ಳಿ, ಶ್ರೀ ಸಿದ್ದರಾಮೇಶ್ವರ ನಾಟ್ಯ ಬೈಲಾಟ ಕಲಾ ಸಂಘ ಸಾ॥ ಹಿಪ್ಪರಗಿ ಅದೇ ರೀತಿ ಸಂಗ್ಯಾ ಬಾಳ್ಯಾ ನಾಟಕದ ಪ್ರದರ್ಶನಕ್ಕಾಗಿಯೇ ಸ್ಥಾಪಿಸಿಕೊಂಡ ಶ್ರೀ ಹನುಮಾನ ಸಂಗ್ಯಾ ಬಾಳ್ಯಾ ಬೈಲಾಟ ಕಲಾ ಸಂಘ ಸಾ॥ ನಾವಲಗಿ ಈ ಪರಿಸರದಲ್ಲಿ ಸಾಕಷ್ಟು ಪ್ರಸಿದ್ಧಿ ಪಡೆದಿವೆ. ಬೈಲಾಟ ಕಲಾವಿದರಾದ ಮಲಿಕಸಾಬ ಹನಗಂಡಿ ಸಾ॥ ಬನಹಟ್ಟಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪಡೆದು ಖ್ಯಾತರಾಗಿದ್ದಾರೆ. ಶ್ರೀಯುತ ರಾಯಪ್ಪ ಸಂಗಪ್ಪ ಕುಂಬಾರ ಸಾ॥ ತೇರದಾಳ, ತಮ್ಮ ಕಲಾ ಸೇವೆಗಾಗಿ ಜಿಲ್ಲಾ ರಾಜ್ಯೋತ್ಸವ, ಜಾನಪದ ಶ್ರೀ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪಡೆದು ಖ್ಯಾತರಾಗಿದ್ದಾರೆ. ವಿಲಾಸ ಬಾಯಿ ರಾಯಣ್ಣವರ ಸಾ॥ ತೇರದಾಳ ಇವರ ಕಲಾ ಸೇವೆಗಾಗಿ ಜಾನಪ ಶ್ರೀ, ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ ನೀಡಲಾಗಿದೆ. ಪಾರಿಜಾತ ಕಲಾವಿದರಾದ ಕಲ್ಲಪ್ಪಾ ಚನ್ನಪ್ಪಾ ಪಟ್ಟಣಶೆಟ್ಟಿ, ಸಾ॥ ನಾವಲಗಿ, ಶಂಕರ ಚನ್ನಪ್ಪಾ ಪಟ್ಟಣಶೆಟ್ಟಿ, ಸಾ॥ ನಾವಲಗಿ, ಶ್ರೀಶೈಲ ಚನ್ನಪ್ಪಾ ಪಟ್ಟಣಶೆಟ್ಟಿ, ಸಾ॥ ನಾವಲಗಿ, ಚಂದ್ರವ್ವಾ ಪರಪ್ಪ ಗುಡ್ಲಮನಿ ಸಾ॥ ನಾವಲಗಿಯವರು ಮತ್ತು ಸಂಗ್ಯಾ ಬಾಳ್ಯಾ ಕಲಾವಿದರಾದ ಮಲ್ಲಪ್ಪ ಬಸಪ್ಪ ಗಣಿ ಸಾ॥ ನಾವಲಗಿಯವರು ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದಿದ್ದಾರೆ. ಪರಪ್ಪ ಮಗೇಪ್ಪ ಪುಠಾಣಿ ಸಾ॥ ತೇರದಾಳ ರಂಗ ಭೂಮಿ ಕಲಾವಿದರು ಇವರ ಕಲಾ ಸೇವೆಯನ್ನು ಗುರುತಿಸಿ ಜಿಲ್ಲಾ ರಾಜೋತ್ಸವ ಪ್ರಶಸ್ತಿಯನ್ನು ಪಡೆದಿದ್ದಾರೆ.

**ಸಂಪ್ರದಾಯ ಪದಗಳ ಮೇಳಗಳು**

ತೇರದಾಳ ಪರಿಸರದಲ್ಲಿ ಜನಪ್ರಿಯ ಕಲಾ ಪ್ರಕಾರಗಳಲ್ಲಿ ಸಂಪ್ರದಾಯ ಪದಗಳ ಮೇಳಗಳು ಸಹ ಒಂದಾಗಿದ್ದು, ಅವು ಈ ಭಾಗದಲ್ಲಿ ಜನಮನ್ನಣೆಗಳಿಸಿವೆ. ಇದರಲ್ಲಿ ಕನಿಷ್ಟ ೪ ಜನ ಕಲಾವಿದರಿದ್ದು, ತಮ್ಮ ಕಲಾ ಪ್ರದರ್ಶನವನ್ನು ಮಾಡುತ್ತಾರೆ. ಮದುವೆ, ದೇವತಾ ಕಾರ್ಯ, ಜಾತ್ರೆ-ಹಬ್ಬ-ಸಾರ್ವಜನಿಕ ಮೆರವಣಿಗೆ ಇತ್ಯಾದಿ ಶುಭ-ಸಂದರ್ಭಗಳಲ್ಲಿ ಈ ಸಂಪ್ರದಾಯದ ಪದಗಳ ಮೇಳದ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಈ ಭಾಗದಲ್ಲಿ ಅನೇಕ ಕಲಾ ಸಂಘಗಳನ್ನು ಇದಕ್ಕಾಗಿ ರಚಿಸಿಕೊಂಡು ಈ ಕಲೆಯ ರಕ್ಷಣೆಯಲ್ಲಿ ತೊಡಗಿದ್ದಾರೆ. ಅವುಗಳಲ್ಲಿ ಪಾರವ್ವಾ ಕಡಕಬಾಂವಿ ಸಾ॥ ನಾವಲಗಿ, ನಿಬೇವ್ವಾ ಯಾದವಾಡ ಸಾ॥ ನಾವಲಗಿ, ಶಾಂತವ್ವಾ ಹಗ್ಗದವರ ಸಾ॥ ನಾವಲಗಿ, ಮುತ್ತವ್ವಾ ರಾಮಪ್ಪ ಸನದಿ ಸಾ॥ ನಾವಲಗಿ, ಚಂದ್ರವ್ವಾ ತಳವಾರ ಸಾ॥ ನಾವಲಗಿ, ನಿಂಗವ್ವಾ ಹುಗಾರ ಸಾ॥ ನಾವಲಗಿ, ನೀಲವ್ವಾ ತಳವಾರ ಸಾ॥ ನಾವಲಗಿ, ಸೂಲೋಚನಾ ಕದಮ ಸಾ॥ ನಾವಲಗಿ, ಲಕ್ಷ್ಮವ್ವಾ ಗಾಡಿವಡ್ಡರ ಸಾ॥ ನಾವಲಗಿ, ಗಂಗವ್ವಾ ಗಾಡಿವಡ್ಡರ ಸಾ॥ ನಾವಲಗಿ, ಬಾಗವ್ವಾ ಗಾಡಿವಡ್ಡರ ಸಾ॥ ನಾವಲಗಿ, ನೀಲವ್ವಾ ಬಿಮಾನೆ ಸಾ॥ ನಾವಲಗಿ, ಸುಮಿತ್ರಾ ಸಿದ್ದನ್ನವರ ಸಾ॥ ಆಸಂಗಿ, ರಂಗವ್ವಾ ಅಣ್ಣಪ್ಪಾ ಕುಂಬಾರ ಸಾ॥ ತೇರದಾಳ, ಪದವ್ವಾ ಅಸುಂಡಿ (ನಂದಿ) ಸಾ॥ ಮದರಖಂಡಿ, ನೀಲವ್ವಾ ಪರಪ್ಪನ್ನವರ ಸಾ॥ ಮದರಖಂಡಿ, ಕಾಸವ್ವಾ ಕಂಬಾರ ಸಾ॥ ಮದರಖಂಡಿ, ಪದ್ದವ್ವಾ ಯರಗಟ್ಟಿ ಸಾ॥ ಮದರಖಂಡಿ, ಯಲ್ಲವ್ವಾ ಜಂಗಪನ್ನವರ ಸಾ॥ ಮದರಖಂಡಿ, ಉಮವ್ವಾ ಸಣ್ಣಕ್ಕಿ ಸಾ॥ ಕುಲಹಳ್ಳಿ ಇವರ ಸಂಘಗಳು ಮುಖ್ಯವಾಗಿವೆ.

ಈ ಭಾಗದಲ್ಲಿ ಮೇಲಿನ ಕಲಾ ಮೇಳಗಳಲ್ಲದೆ ಹಿಂದೂಸ್ಥಾನಿ ಶಾಸ್ತ್ರೀ ಸಂಗೀತ ಕಲಾ ತಂಡಗಳು ಸಹ ಇಲ್ಲಿವೆ. ಅವುಗಳಲ್ಲಿ ಹಿಂದೂಸ್ಥಾನಿ ಸಂಗೀತಗಾರರಾದ ಶ್ರೀ ಜಯವಂತ ಕೊರ್ಪಡೆ ಸಾ॥ ಬನಹಟ್ಟಿ, ಶ್ರೀ ಗುಂಡುರಾವ್ ಗುರವ ಸಾ॥ ಮದರಖಂಡಿ ಇವರು ರಚಿಸಿಕೊಂಡಿರುವ ಕಲಾ ಸಂಘಗಳು ಮುಖ್ಯವಾಗಿವೆ. ಅಲ್ಲದೇ ಶ್ರೀ ಬೀರಪ್ಪ ಕರೆಪ್ಪ ಬಿಜುಗಾರ ಸಾ॥ ಮದರಖಂಡಿ ವಕ್ಕಲಗ್ಯಾರ ಹಾಡುಗಳನ್ನು ಹಾಡುವುದರಲ್ಲಿ ಮತ್ತು ಶ್ರೀಶೈಲ ಚನ್ನಪ್ಪ ಪಟ್ಟಣಶೆಟ್ಟಿ ಸಾ॥ ನಾವಲಗಿ, ಶ್ರೀ ದಾನಯ್ಯಾ ಮಠಪತಿ ಸಾ॥ ನಾವಲಗಿ ಇವರು ಲಾವಣಿ ಹಾಡುವವರು ಪ್ರಸಿದ್ಧಿಯಾಗಿದ್ದಾರೆ. ಅದೇ ರೀತಿ ಕೀರ್ತನ/ಪ್ರವಚನ ಕ್ಷೇತ್ರದಲ್ಲಿ ಹೆಸರು ಮಾಡಿದ ಶ್ರೀ ಶ್ರೀಶೈಲ ಬಸಯ್ಯ ಹೀರೆಮಠ ಸಾ॥ ನಾವಲಗಿ, ಶ್ರೀ ಶಿವರುದ್ರ ರೇವಣ ಸಿದ್ದಪ್ಪ ಮುಧೋಳ ಸಾ॥ ಹಿಪ್ಪರಗಿ, ಶ್ರೀ ಶಿವಗೊಂಡ ಶಿವರುದ್ರಪ್ಪ ಮುಧೋಳ ಸಾ॥ ಹಿಪ್ಪರಗಿ, ಶ್ರೀ ಗುರುಪಾದಪ್ಪ ಗುರಲಿಂಗಪ್ಪಾ ಹೊಸಮನಿ ಸಾ॥ ಹಿಪ್ಪರಗಿ ಮೊದಲಾದ ಕಲಾವಿದರು ಈ ಕಲೆಗಳಲ್ಲಿ ಪ್ರಸಿದ್ಧರಾಗಿದ್ದಾರೆ. ಅಲ್ಲದೇ ಸತ್ಯಕಾಮ ಸಾ॥ ಕಲಹಳ್ಳಿ ಶ್ರೀ ಸಂಗನ ಬಸಯ್ಯಾ ಹಿರೆಮಠ ಶಾಸ್ತ್ರೀಯ ಸಂಗೀತಗಾರರು ಸಾ॥ ಮದರಖಂಡಿ ಇವರು ಮತ್ತು ಕೀರ್ತನಕಾರರಾದ ಶಿವರುದ್ರ ರೇವಣಸಿದ್ದಪ್ಪ ಮುಧೋಳ ಸಾ॥ ಹಿಪ್ಪರಗಿ ತಮ್ಮ ಕಲಾ ಸೇವೆಗಾಗಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪಡೆದು ಖ್ಯಾತರಾಗಿದ್ದಾರೆ. ಶಹನಾಯಿ ವಾದಕರಾದ ಮಾರುತಿ ಹನುಮಂತ ಭಜಂತ್ರಿ ಸಾ॥ ನಾವಲಗಿ, ಮಲ್ಲಯ್ಯ ಹಿಡಕಲ ಸಾ॥ ಮದರಖಂಡಿ ಇವರುಗಳು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮತ್ತು ಬಾಗಲಕೋಟೆ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ ವಿಜೇತರಾಗಿದ್ದಾರೆ. ಅದೇ ರೀತಿ ಕಣಿ ವಾದ್ಯ ಕಲಾವಿದರಾದ ಹನುಮಂತ ದುರ್ಗಪ್ಪ ಕುದರಿ ಸಾ॥ ನಾವಲಗಿ, ಸದಪ್ಪ ಮಾನಿಗಂಪ್ಪ ಸಾ॥ ನಾವಲಗಿ, ಹನುಮಂತ ಬರಗಾಲ ಸಾ॥ ನಾವಲಗಿ ಮತ್ತು ತಾಳವಾದ್ಯ ಕಲಾವಿದರಾದ ಸದಪ್ಪ ಮಾನಿಂಗಪ್ಪ ಕಂಪು ತಾಳ ವಾದ್ಯ ಸಾ॥ ನಾವಲಗಿ ಇವರುಗಳು ತಮ್ಮ ಕಲಾ ಸೇವೆಗಾಗಿ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿಯನ್ನು ಸಹ ಪಡೆದು ಕಲಾ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ.

**ಜಾನಪದ ಹಾಡುಗಳು**

ತೇರದಾಳ ಪರಿಸರದಲ್ಲಿ ಜಾನಪದ ಕಲಾ ಪ್ರಕಾರದ ಇನ್ನೊಂದು ಪ್ರಕಾರವಾದ ಹಲವು ಮೌಖಿಕ ಜಾನಪದ ಹಾಡುಗಳು ಲಭ್ಯ ಇವೆ. ಅವುಗಳು ಆ ಭಾಗದ ಜನ ಜೀವನದ ಜೀವನಾಡಿಗಳಾಗಿದ್ದು, ಅವುಗಳ ಮುಖಾಂತರ ಅಲ್ಲಿನ ಸಮಾಜೋ-ಧಾರ್ಮಿಕ ನೀತಿಯನ್ನು ಅಧ್ಯಯನ ಮಾಡಬಹುದಾಗಿದೆ. ಅವುಗಳಲ್ಲಿ ಪ್ರಮುಖವಾದ ಹಾಡುಗಳು ಇಂತಿವೆ.

### ೧) ಲಾಲಿಹಾಡು(ಜೋಗುಳ)

ತೂಗುವೇ ತೂಗುವೇ ಮಲಗೋ ಶಂಕರ
ಮುನಿಗಳಿಗೆ ಸಿಲುಕಿದ ಓಂಕಾರ ಯೋಗಿ
ಜನರಿಗೆ ನೀನು ಪ್ರೇಮದ ಸಾಗರ
ಶಂಭೋ ರಾಗರಹಿತನಾದಿ ಜಗದೋಳು ಗಂಭೀರ
ಜೋ,ಜೋ---

### ೨) ತೊಟ್ಟಿಲು ಹಾಡು

ಜೋ ಜೋ ಜಗಜ್ಯೋತಿ ಬಸವೇಶ ।
ಜಗದೋಳ ತೋರಿದಿ ನಿನ್ನ ಪ್ರಕಾಶ ।
ನಿನ್ನ ಸ್ಮರಣೆಯಿಂದ ಪಾಪವಿನಾಶ ।
ಹಿಂಗಾ ಜೋ ಎಂದು ತೂಗುವೆ ಬಸವ ಜಗದೀಶ
॥ ಜೋ ಜೋ ॥ ೧ ॥
ಬಸವೇಶ ಕೂಡಲ ಸಂಗಮದಿಂದ ।
ಕಲ್ಯಾಣ ನಗರಕ್ಕೆ ಭರದಿಂದ ಬಂದ ।
ಸೋದರ ಮಾವನ ಆಶ್ರಯ ಪಡೆದ ।
ಹಿಂಗಾ ಬಿಜ್ಜಳರಾಜನ ಮಂತ್ರಿಯಾದ ॥ ಜೋ
ಜೋ ॥ ೨ ॥

### ೩) ಬೀಸುವ ಹಾಡು

ಬೀಸಕ ಕುಂತೇನ । ಕೇಸರಿ ಜೋಳವನ
ಈಶನನ್ನಣ್ಣ ಧೊರಿಬಂದೆ । ತಂಗಿನ ಕೆರಿಬಂದೆ ।
ಎದರು ಗುಡ್ಡದ ಮ್ಯಾಲ । ಹಾರಿಬರುವವನ್ಯಾರೆ ।
ಚದುರನನ್ನಣ್ಣ ಧೊರಿಬಂದೆ । ತಂಗಿನ ಕರಿ ಬಂದೆ॥
ಬಂಗಾರ ಹೋಯಿತೋ । ಹಿಂದುದೇಶದ ಬಿಟ್ಟು

### ೪)ಕುಟ್ಟುವ ಹಾಡು

ಓಮನೆಂದು ಕುಟ್ಟೋನುಬಾರೆ । ಸೋಮನೆಂದು
ಬೀಸನು ಬಾರೆ ॥
ಓಮ ಸೊಮ ಎರಡು ತಿಳಿಯಬೇಕ ನಾರಿ ।
ಹಾಕವ್ವಯಾರಿ ॥ ೧ ॥
ಇಬ್ಬರ ಹೆಂಡರ ಮ್ಯಾಲ । ಕದ್ದರಂದಿಗೆ ಮಾಡಿ ।
ಇದ್ದೋಟಕೋರಿ ಕಳಕೊಂಡ ನಾರಿ। ಹಕವ್ವಯಾರಿ॥
ಇದ್ ಓಟ ಕೋರಿ ಕಳಕೋಡ ನಾರಿ । ಬಿದ್ದ
ಮೊಳಕಾಲ ಒಡಕೊಂಡ ॥ ೨ ॥

### ೫) ಭಲಾಯಿ ಹಾಡು

ನಮ್ಮಕ್ಕತಂಗಿದೇರೆ । ನೆರಮನಿಗೆಳದೇರೆ ॥
ನೆರಮನಿಗೆಳದೇರೆ । ನಮ್ಮಗ್ಹಡದ ತಾಯಿದೇರೆ
ಕೋಲೆನ್ನಕೋಲೆ ॥ ೧ ॥
ನಮ್ಮ ಆಕಾಳ ಹೆಂಡಿ ಸಾರಿಸಿ ಮನೆ ಗ್ವಾಡಿ ।
ಧರುಸ್ಯಾರೆ ವಿಭೂತಿ ಮಾಡಿ ಕೋಲೆನ್ನಕೋಲೆ॥೨॥

### ೬) ಸ್ವಾತಂತ್ರ ಪೂರ್ವದಲ್ಲಿ

ಸುಕಾ ಎಲ್ಲೋರಿಗೆಲ್ಯಾದ ಯಕ್ಕಾ । ದು:ಖ
ತುಂಬ್ಯಾದ ಮರುತ್ಯಾದ ಮ್ಯಾಲ ॥ತಾಮಾಡಿದ
ಪಾಪ ತಾ ಗಳಿಬೇಕ । ಶಿವನ ಮ್ಯಾಲ್ಯಾಕ
ಶಬುದಿಡಬೇಕಾ॥೧॥
ಇಸವಿ ೧೯೫೭ ಬಿಚ್ಚತಲವಾದ ಹಿಡಕೊಂಡ
ಬೀದ್ಯಾಗ ಇಗ್ಲೀಷರ ।
ಕಾಟ ದೇವರಿಗೆ ಅಂತ ಹಾಕ್ಯಾರೆ ಧಾಕಾ । ಸುಕಾ
ಎಲ್ಲೋರಿಗೆಲ್ಲಾದ ಯಕ್ಕಾ ॥ ೨ ॥

### ೭) ಹಾಡಿನಲ್ಲಿ ಊರು ಹೆಸರು ಹೇಳುವುದು

ಕೊಳಿಲ್ಲದ ಕೋಳಿಗುಡ್ಡ ನೀರಿಲ್ಲದ ಸಂಕ್ರಟ್ಟಿ ।
ಸಾಲ ತೆಂಗಿನದ ತೇರದಾಳ ।
ಸಾಲ ತೆಂಗಿನದ ತೇರದಾಳ ಮುಂದಿರುವ ।
ಬಂಗಾದರದ ಗಿಂಡಿ ಹನಗಂಡಿ.
ಬಂಗಾದರದ ಗಿಂಡಿ ಹನಗಂಡಿ ಮುಂದಿರುವ
ರೊಕ್ಕದ ರಾಶಿ ರಬಕವಿ.
ರೊಕ್ಕದ ರಾಶಿ ರಬಕವಿ ಮುಂದಿರುವ
ಬಾಡ ಮಾರುದು ಬನಹಟ್ಟಿ.
ಬಾಡ ಮಾರುದು ಬನಹಟ್ಟಿ ಮುಂದಿರುವ
ಜನಖೊಪ್ಪುವ ಸಂತಿ ಜಮಖಂಡಿ ।

### ೮) ಗೌರಿ ಹಾಡು

ಆಡಿ ಜಡಿ ಮಳಿ ಬಿದ್ದು ಕಲ್ಲೆಲ್ಲ ತೋಯಿದ್ಯಾವೆ ।
ಕಲ್ಲಾಗ ಕಡ್ಡಿ ಬೆಳೆದಾವ ಕೋಲೆ ॥ ೧ ॥
ಕಲ್ಲಾಗ ಎಲೆ ಕಡ್ಡಿ ಬೆಲೆದಾವ ಗೌರಮ್ಮ
ಒಬ್ಬಳೆ ಹ್ಯಾಂಗ ತೊಯಿಸ್ಯಾಳೆ ಕೋಲೆ ॥ ೨

**೯) ಸೀಗಿ ಹಾಡು**

ಕೆಂಪ ಗುಡ್ಡದ ಮ್ಯಾಲ ಕೆಂಪೆತ್ತು ಕಾಯುವ
ಕಂಪ ಚಲ್ಲಾಣಿ ಅಬರಂಗ ಕೋಲೆ ॥ ೧ ॥
ನಿನ್ನೆ ಇಡಸಿದ ಬಳಿ । ಹೊನ್ನ ಹೂವಿನ ಬಳಿ ॥
ಇನ್ನೇನು ಮಾಡಿ ಒಡಕೊಂಡೆ ಕೋಲೆ ॥ ೨ ॥

**೧೦) ಮೈನೆರದ ಹಾಡು**

ಸೋಬಾನ ಸೋಳರೊಟ್ಟಿ । ಮದುಮಗಾ
ಪಾರಬಟ್ಟಿ
ಯಾಕ ಮೈನೆರದೆ ಹುಚ್ಚಗೊಟ್ಟಿ ಸೋಬಾನೆ ॥೧ ॥
ಬಾಲಿ ಮೈನೆರದ ಸುದ್ದಿ ಯಾರ‍್ಯಾರು ಕೇಳ್ಯಾರೆ ।
ಮಾವ ಕೇಳ್ಯಾನ ಮಳದಾಗ ಸೋಬಾನೆ ॥ ೨ ॥

**೧೧) ಸೋಬಾನ ಹಾಡು**

ಆಪತ್ತು ಬಂದಾಗ । ಅಕ್ಕತಂಗೆರಬೇಕು ॥
ಹೊಟ್ಯಾಗಿನೆರಡ ಸುಃಖ ದುಃಖ ಸುಖ
ಹೊಟ್ಯಾಗಿನೆರಡ ಸುಖ ದುಃಖ ಕೇಳಾಕ
ಹಡದವ್ವ ಇರಬೇಕ ಜಲ್ಮಾಕ ಸೋಬಾನವೇ ॥೧॥
ತನ್ನಂಗ ನೋಡಿದರ । ಭಿನ್ನಿಲ್ಲ ಭೇದಿಲ್ಲ ॥
ತನ್ನಂಗ ತನ್ನ ಮಗಳಂಗ
ತನ್ನಂಗ ತನ್ನ ಮಗಳಂಗ ನೋಡಿದರ।
ಕಣ್ಣಮುಂದೆ ಕೈಲಾಸ।ಸೋಬಾನವೇ ॥೨॥
ಎಂಬುದು ಯಾರ ಮಡ್ಯಾರ ಗುರುವೆ
ಲೋಕದೊಡೆಯ ಬಸವಣ್ಣ ಸೊಗಲಾದ
ಸೋಮಯ್ಯ
ಮಾಡ್ಯಾನ ಮದವೀಯ
*ಹಾಲೂಡ ತವರಿಗೆ ಎನ್ನೆಮದು ಹಾಡಲಿ
ಹೋಳಿಯ ದಂಡಿಯ ಮ್ಯಾಲಿರುವ ಕರಕಿಯ
ಕೊಡಿಯಂಗ್ಯ ಹಬ್ಬಲಿ ಅವರ ರಸಬಳ್ಳಿ
ಸೋ ಎನ್ನಿರೇ ಸೋಬಾನ ಎನ್ನಿರೇ ॥

**೧೨) ಐರಾಣಿ ಹಾಡು**

ಏಳ ಸುತ್ತನ ಕ್ವಾಟಿ ತಿರವುತೆ ನಾಬಂದ ।
ಎಲ್ಲ್ಯಾದ ನಿನ್ನರಮನಿ-ಸೋ
ಅರಮನಿ ಎಲ್ಲ್ಯಾದ ಗುಂಡಯ್ಯಾ ನಿನ್ನರಮನಿ
ಸೋ ॥೧॥
ಕುಂಬಾರ ಗುಂಡಯ್ಯನ ಹೆಂಡ್ತಿ ಖಡಗದ
ಕೈಯಾದಕಿ ।
ಕೊಡವಾ ಮ್ಯಾಲೇನ ಬರದಾಳೆ-ಸೋ ॥ ೨ ॥
ಕೊಡದ ಮ್ಯಾಲೇನ ಬರದಾಳೆ ಗುಂಡಮ್ಮ ।
ಬಾಳಿಯ ಘೊಲ್ಲೆ ಇಳಿಸ್ಯಾಳೆ – ಸೋ ॥ ೨ ॥
ತೊಂಬಿಕೊಡರಿ ನಮ್ಮ ಐರ‍್ಯಾಣಿ-ಸೋ ॥ ೨ ॥

**೧೩) ಎಣ್ಣೆ ಹಚ್ಚುವ ಹಾಡು**

ಕಂಚೆಣ್ಣಿ ಬಡಲಾಗ ಏಂಚೆಣ್ಣಿ ಹಾಯಿಕೊಂಡು
ರಂಬೇರೈಗೋಳೆ ।
ರಂಬೇರೈಗೋಳೆ । ರಂಬಿನೀಲಮ್ಮಗ
ಎಣ್ಣೆ ಹಚ್ಚೋಣ ಬನ್ನರೇ ॥ ೧ ॥

**೧೪) ಸುರಗಿ ಹಾಡು**

ಸುರಗಿಯ ಸುತ್ತಳೆ ಸಿರಿಬಾಗಿಲಿಗಿ ಬಿಸಲ ಬಂದೆ ।
ನಾಲತ್ತು ತೋಟದ ಎಲಿಬಂದೆ । ಹರ ಹರ ನಮ
ಶಿವಗೆ ನೈಎಣ್ಣೆ ॥
ನಾಲತ್ತು ತೋಟದ ಎಲಿಬಂದೆ । ಕಾಶೆಣ್ಣ ॥
ಭಾಷಿಂಗ ಕಟ್ಟಲಿ ಬಲ ಬಂದೆ ॥ ಹರ ಹರ
ನಮಶಿವಗೆ ನೈಎಣ್ಣೆ ॥

**೧೫) ಬೀಗರ ಹಾಡು**

ಸರಕ್ಕನ ಸರಿತಲ್ಲ ಬಿಗರ ಸ್ವರೂಪ ತಿಳಿತಲ್ಲ ।
ಸೋ ಎನ್ನಿರೆ ಸೋಬಾನ ಎನ್ನಿರಿ ।
ಎಲ್ಲಾರು ಕಟ್ಯಾರ ಮಲ್ಲಿಗೂವಿನ ದಂಡಿ
ಬೇಗುತಿ ಕಟ್ಯಾಳ ಹುವ್ವಿನ ದಂಡಿ
ಸರಕ್ಕನ ಸರಿತಲ್ಲ ಬೀಗರ ಸ್ವರೂಪ ತಿಳಿತಲ್ಲ ।

**೧೬) ಜೋಕುಮಾರ ಹಾಡು**

ಅಡ್ಡಾಡ ಮಳೆಯಾಗಿ ದೊಡ್ಡ ದೊಡ್ಡ ತೆನಿಯಾಗಿ
ಗುಡಗೋಳ ಎಲ್ಲಾ ಹೈನಾಗಿ ಜೋಕುಮಾರ ॥೧॥
ಗೊಂಜಾಳ ಹೊನ್ನ ಕೆಸರಾಗೋಗ್ಯಾನ
ಜೋಕುಮಾರ

### ೧೭) ಮಟ್ಟಿ ಹಾಡು

ಬಬಲಾದಿಯ ಸದಾಶಿವ ಮಟ್ಟಿಯ ಹೂಡ್ಯಾನ
ಮಟ್ಟಿಯ ಹೂಡ್ಯಾನ ಮೂರು ಲೋಕದ
ಸುದ್ದಿಯನ್ನು ತೇರದಾಳ ತುಕಾರಾಮನೀಗೆ
ತಿಳಿಸ್ಯಾನ ॥
ಹಳ್ಳದ ದಂಡೇಲಿ । ಬೆಳ್ಳನ ಬಿಳಿಜೋಳ ॥
ಮೆಲ್ಲಗೆ ಮೇಯೋ ಗಿಳಿರಾಮ ॥ ನನ್ನತಮ್ಮ ॥
ಕಲ್ಲು ಬರುತಾವ ಕಡೆಗಾಗೋ ॥ ಹಯ್ಯಾ ॥

### ೧೮) ಹೋಳಿ ಹಾಡು

*ಹೋಳಿ ಹುಣ್ಣಿಮೆ ಬಂತ್ಯಂದ್ದು ಬೋರ್‍ಯಾಡಿ
ಹಾಡ್ಯಾನ. ಬೋರ್‍ಯಾಡಿ ಹಾಡ್ಯಾನ ಅರಿಷ್ಯಡ್ಡ
ವರ್ಗಗಳನ್ನು ತೇರದಾಳ ಅಲ್ಲಮನಿಗೆ ಮುಟ್ಟಿಸಿ
ಹಿಂಗ ತೇರದಾಳ ಊರಿನ ಕೀರ್ತಿ ಗಳಿಸ್ಯಾನ
ಹಿಂಗ ಹೋಳಿಯ ನಾಮ ಉಳಿಸ್ಯಾನ
ಕಾಮಣ್ಣ ಸತ್ತ ಅಂತ ಭೀಮಣ್ಣ ಅಳತಾನ
ಮನೆಗೆ ಐದು ಕೊಳ್ಳ ಕೋಡರೆವ್ವಾ
ಮನೆಗೆ ಐದು ಕೊಳ್ಳು ಕೊಡರೆವ್ವಾ ಬಾಲೆಯರ
ಕಾಮಣ್ಣನ ಸುಟ್ಟ ಬರಲಾಕ ॥

### ೧೯) ಡಪ್ಪಿನಾಟವ ಹಾಡು

ನಾ ಮಾಡುವೇ ನಿಮ್ಮ ಸ್ತೂತಿ । ಗಜವದನ
ಮೂರು ಲೋಕವ ಸುತ್ತಿ ತಿಳಿಸಿ ಬಾ ನಿನಗೆ
ನಮ್ಮ ಸುತ್ತಿ ಗೀಯ್ಯಗಾ ಗೀಯ್ಯ ಗೀಯ್ಯಗಾ ॥

### ೨೦) ಲಾವಣಿ ಹಾಡು

ಆಕಾಶ ಎನ್ನಬೇಕು ಆಕಾರ ಭ್ರಮ್ಮ!
ಊಕಾರ ವಿಷ್ಣು, ಗಾಳಿಯ ಆಟ ।
ಮಕಾರ ಬೆಂಕಿ ಸಿಕಾರ ನೀರಾ
ಡಕಾರ ಭೂಮಿ ಮಾಡಿಟ್ಟ॥

### ೨೧) ಭಜನೆ ಪದ

ಈಸಿ ಈಸಿ ನಾ ದನಿದುಕೊಂಡೆ
ಶಂಭು ಸಮೀಪ ಬರವಲ್ಲದು ಆಚೆ ದಂಡೆ
ಇಚೆ ದಂಡೆತಲ್ಲಿ ಬಾಳ ಹುದಲ
ಆಚೆ ದಂಡೆಯಲ್ಲಿ ಐತ್ತಿ ಬಾಳ ಗಂದಲ್ಲ
ತೇರದಾಳ ತುಕಾರಮ ಮಹಾದೀರ ಅವ್ವಾ
ದಣಿವಿಲ್ಲದೆ ಪಾರಾದಾ॥

### ೨೨) ವಗ್ಗೇರ ಹಾಡು

ವಾಗಮಲ್ಲ ವಾಗಮಲ್ಲ । ಎಲ್ಲಿಂದ ಬಂದಿ
ವಾಗಮಲ್ಲ ॥
ಯಾವೂರು ಏನ್ ಸುದ್ದಿ ॥ ಹಿಂದ ಮುಂದ
ನೋಡಲಾರ್ದಂಗ ॥
ಒಂದೇ ದಮ್ಮಗಿ ಕೇಳೆಬಿಟ್ಟ । ಮೈಲಾರ ಮಲ್ಲಣ್ಣ
ಮುತ್ಯಾ ॥
ಅವರ ಕಂಡ ಅವರಂಗ ಹಾಡಿ । ಇವರ ಕಂಡ
ಇವರಂಗ ಹಾಡಿ ॥
ಅವರೆದುರ ಇವರಿಗೆ ಬೈದು । ಇವರೆದುರು
ಅವರಿಗೆ ಬೈದು ॥
ಊರ ಹೊರಗ ಎಲ್ಲರಿಗೂ ಬೈ ಎಂದ ಮೈಲಾರ
ಮಲ್ಲಣ್ಣ ಮುತ್ಯಾ ॥

### ೨೩) ಭೂತೇರ ಹಾಡು

ಹಸಿರೊಂದು ತೊಟ್ಟಾಳೆ । ಹಸಿರೊಂದು ಉಟ್ಟಾಳೆ ॥
ರಾಮರಾಮ ॥
ಹಸಿರೊಂದು ಶಲ್ಯಾ ತಾಯಿ ಹೆಗಲಿಗಿ ॥
ರಾಮರಾಮ ॥

### ೨೪) ಒಡಪು (ಗಂಡನ ಹೆಸರು ಹೇಳುವುದು)

*ಉದುರು ಉದುರು ಉಪ್ಪಟ್ಟು
ಪದರ ಪದರ ಚಪಾತಿ
ಪಾಟ್ಲಿ ಮಾಡ್ಸಂದರ ಪಗಾರ ಬರಲಂತಾರೆ........
* ಸಣ್ಣನ್ನ ಶಾವಿಗೆ
ಏಣ್ಣೇಯ ಹೋಳಿಗೆ
ಬಣ್ಣದ ದೂರಡಿ ಎಡಿಮಾಡಿ
ಬಣ್ಣದ ದೂರಡಿ ಎಡಿಮಾಡಿ ತೇರದಾಳ
ಪಲ್ಲಕ್ಯಾಗಿರುವ ಅಲ್ಲಮ ಪ್ರಭು ದೇವರು

### ೨೫) ಹಂತಿ ಹಾಡು

ಬಾಗೇವಾಡಿ ಬಸವಣ್ಣ ಜೋಳವ ಬತ್ತಿ ಬಂಗಾರದ
ಬೇಳಿಯ ಕೋಟ್ಟಾಣ
ಬಂಗಾರದ ಬೇಳಿಯ ಕೋಟ್ಟಾನ ತೇರದಾಳ
ಬಕ್ತರನ್ನ ಅಲ್ಲಮ ಉದ್ದಾರ ಮಾಡ್ಯಾನ ॥ ೨॥

## ಕ್ರೀಡಾ ಪರಂಪರೆ

ತೇರದಾಳ ಪರಿಸರದ ನಮ್ಮ ಜನಪದರು ತಮ್ಮ ಬೇಸರವನ್ನು ಕಳೆದುಕೊಳ್ಳಲು ಹಲವು ಬಗೆಯ ವಿನೋದಾವಳಿಗಳು, ಕ್ರೀಡೆ ಮತ್ತು ಜಾನಪದ ಆಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವುಗಳನ್ನು ನಾವು ಒಳಾಂಗಣ ಮತ್ತು ಹೊರಾಂಗಣ ಕ್ರೀಡೆಗಳೆಂದು ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದು. ಏತ್ತಿನ ಓಟದ ಸ್ಪರ್ಧೆ ಕರ್ನಾಟಕದ ಇತರೆಡೆಯಂತೆ ಸಂಕ್ರಾತಿ ಹಬ್ಬದಲ್ಲಿ ತೇರದಾಳ ಪರಿಸರದಲ್ಲಿ ಈ ಸ್ಪರ್ಧೆಯನ್ನು ಏರ್ಪಡಿಸುತ್ತಾರೆ. ಅಂದು ಏತ್ತುಗಳನ್ನು ಶುಚಿಗೊಳಸಿ ಅವುಗಳನ್ನು ಅಲಂಕಾರ ಮಾಡಿ ಅವುಗಳ ಕೊಡಿಗೆ ಹಣದ ಚೀಲವನ್ನು ಕಟ್ಟಲಾಗಿರುತ್ತದೆ. ಎಲ್ಲಾ ಸ್ಪರ್ಧೆಗಳಿಂದ ಎತ್ತುಗಳನ್ನು ನಿರ್ದಿಷ್ಟ ಜಾಗದಲ್ಲಿ ಆಣಿಗೊಳಿಸಿ ಅವುಗಳನ್ನು ಓಡಿಸುತ್ತಾರೆ. ಮೊದಲು ಗುರಿ ಮುಟ್ಟುವ ಹೋರಿ ಆ ಸ್ಪರ್ಧೆಯಲ್ಲಿ ಗೆದ್ದಂತೆ. ಈ ಹೋರಿಗಳು ಮೊದಲ ಸ್ಥಾನದಲ್ಲಿ ಬಂದ ಹೋರಿಗಳನ್ನು ವಿಶೇಷವಾಗಿ ಗಮನಿಸುತ್ತಾರೆ. ಹೋರಿಗಳು ಓಡುತ್ತಿರುವಾಗ ಯುವಕರ ಗುಂಪು ಓಡಿ ಹೋಗಿ ಅದನ್ನು ಹಿಡಿದರೆ ಅವರಿಗೆ ಹಣದ ಚೀಲ ಅವರದಾಗುತ್ತದೆ.

ಈ ಭಾಗದಲ್ಲಿ ಈ ಮೇಲಿನ ಕ್ರೀಡೆಗಳಲ್ಲದೇ ಗಾಡಿ ಓಡಿಸುವ ಸ್ಪರ್ಧೆ, ಗುಂಡು ಎತ್ತುವ ಸ್ಪರ್ಧೆ, ಕಾಯಿ ಗುದ್ದುವ ಸ್ಪರ್ಧೆ, ನಿಂಬೆ ಹಣ್ಣು ಹೊಗೆಯುವ ಸ್ಪರ್ಧೆ, ಕುಸ್ತಿ, ಕಬ್ಬಡಿ, ಖೋಖೋ, ಕಣ್ಣು ಮುಚ್ಚಾಟ, ಗಡಿಗೆ ಹೊಡೆಯುವ ಸ್ಪರ್ಧೆ, ಚಂಡಾಟ, ಲಗೋರಿ ಆಟ, ಗಿಲ್ಲಿದಾಂಡು, ಉಪ್ಪಿನ ಮಡಿ, ಹುಲಿಕಟ್ಟು, ಕಣ್ಣು ಮುಚ್ಚಾಲೆ, ಕುಂಟಪಿಲ್ಲೆ, ಚಿತ್ತಪಟ್ಟ, ಮುಟ್ಟಾಟ, ಧಪನ್ ಧುಪ್ಪಿ ಮೊದಲಾದ ಆಟ ಮತ್ತು ಕ್ರೀಡೆಗಳನ್ನು ಈ ಭಾಗದ ಜನರು ಅಳವಡಿಸಿಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ಇವುಗಳನ್ನು ನಮ್ಮ ಅನುಕೂಲಕ್ಕಾಗಿ ಮಕ್ಕಳ ಆಟಗಳು ಮತ್ತು ಕ್ರೀಡೆಗಳು ಹಾಗು ವಯಸ್ಕರ ಆಟಗಳು ಮತ್ತು ಕ್ರೀಡೆಗಳೆಂದು ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದು.

ಜಗದಾಳ, ತೇರದಾಳ ನಾವಲಗಿ, ಮದರಖಂಡಿ, ಕಾಲತಿಪ್ಪಿ, ಕಲ್ಲೋಳ್ಳಿ, ಹನಂಗಡಿ ಮುಂತಾದೆಡೆ ಹಲವಾರು ಕುಸ್ತಿ ಪರಿಣಿತರಿದ್ದು, ಅವರಲ್ಲಿ ಕೆಲವರ ಸಾಧನೆಯನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ. ಅವರಲ್ಲಿ ತೇರದಾಳದ ಶ್ರೀ ರಮೇಶ ಮುಕರಿಯವರು ಒಬ್ಬರಾಗಿದ್ದಾರೆ. ಇವರ ತಂದೆ ಬಸಪ್ಪ, ತಾಯಿ ನಿಂಬೆವ್ವ ಇವರಿಗೆ ೧೨-೦೭-೧೯೭೫ರಲ್ಲಿ ಜನಿಸಿದರು. ಇವರು ಪಿಯುಸಿವರೆಗೆ ಶಿಕ್ಷಣವನ್ನು ಪಡೆದು ಇವರು ಪ್ರಾರಂಭದಿಂದಲೂ ಕೃಷಿ ಕ್ಷೇತ್ರದಲ್ಲಿ ತೊಡಗಿದ್ದು, ಇವುಗಳ ಜೊತೆಗೆ ಕುಸ್ತಿಯಲ್ಲಿ ತಮ್ಮನ್ನು ೧೫ನೇ ವರ್ಷದಲ್ಲಿ ಗ್ರಾಮೀಣ ಕ್ರೀಡೆಯಾದ ಕುಸ್ತಿಯಲ್ಲಿ ತೊಡಗಿದರು. ೧೯೯೭ ದಸರಾ ಕ್ರೀಡಾಕೂಟದಲ್ಲಿ ಶ್ರೀ ದಾದಾಪೀರ ಪೈಲಾನ್ವರನ್ನು ೮೨ ಕೆ.ಜಿಯಲ್ಲಿ ದಸರಾಕೇಸರಿಯಲ್ಲಿ ಸೋಲಿಸಿ ೩ನೇ ಸ್ಥಾನವನ್ನು ಪಡೆದಿದ್ದಾರೆ. ೨೦೦೦ರಲ್ಲಿ ಅತಿ ದೊಡ್ಡ ಪೈಲ್ವಾನರಾದ ಮೈಸೂರಿನ ದಸರಾದಲ್ಲಿ ಶಂಕರ ಚಕ್ರವರ್ತಿಯವರನ್ನು ಸೋಲಿಸಿದರು. ಜಮಖಂಡಿಯಲ್ಲಿ ಅಖಿಲ ಭಾರತ ಮಟ್ಟದ (ರಾಜ್ಯ ಮಟ್ಟದ ಕುಸ್ತಿ) ಪೈಂಟ ಕುಸ್ತಿಯಲ್ಲಿ ಒಪನ್ ಶ್ರೀ ದಸರಥ ಗುಲಬರ್ಗಾ ಇವರನ್ನು ಸೋಲಿಸಿ ೩ನೇ ಸ್ಥಾನವನ್ನು ಪಡೆದಿದ್ದಾರೆ. ಅದೇ ರೀತಿ ಶ್ರೀ ಹಣಮಂತ ಪುರಾಣಿಕರವರು ಖ್ಯಾತ ಕುಸ್ತಿಪಟುವಾಗಿದ್ದಾರೆ. ಇವರು ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡರು. ಇವರಿಗೆ ಅವರ ತಂದೆ ಪ್ರೇರಣೆಯಾಗಿದ್ದರು. ಗ್ರಾಮದ ಶ್ರೀ ದುರ್ಗಪ್ಪ ದಾಸರ ಹಾಗೂ ಪರಪ್ಪ ಅಸ್ಕಿಯವರು "ನಿಮ್ಮ ತಂದೆಯಂತೆ ನೀನೂ ಬಹುದೊಡ್ಡ ಪೈಲ್ವಾನ ಅಗಿ ಊರಿಗೆ ಕೀರ್ತಿ ತರಬೇಕು

ಎಂದರಂತೆ" ಅದರಿಂದ ಪ್ರೇರಣೆ ಪಡೆದ ತನ್ನ ೧೫ (೧೯೮೨)ವಯಸ್ಸಿನಲ್ಲಿ ಸೊಂಟಕ್ಕೆ ಲಾಂಗ್‌ಕಟ್ಟ ಊರಿನ ಗರಡಿ ಮನೆಗಿಳಿದು ವ್ಯಾಯಾಮ ಆರಂಭಿಸಿದರು[೫೨]. ೧೯೯೦ರಲ್ಲಿ ಕೋಲಾಪೂರದಲ್ಲಿ ತಾಲಿಂ ಪಡೆದು ಕರ್ನಾಟಕ ಹಾಗೂ ಮಹಾರಾಷ್ಟ್ರದ ಅನೇಕ ಸ್ಥಳಗಳಲ್ಲಿ ಕುಸ್ತಿಯನ್ನು ಆಡಿ ಹಲವಾರು ಹೆಸರಾಂತ ಕುಸ್ತಿ ಪಟುಗಳ ಜೊತೆ ಸ್ವರ್ಧಿಸಿದ್ದಾರೆ. ಅದೇ ರೀತಿ ಈ ಭಾಗದ ಮತ್ತೊಬ್ಬ ಖ್ಯಾತ ಕುಸ್ತಿಪಟುವೆಂದರೆ ಶ್ರೀ ಬೀರಪ್ಪ ಭರಮಪ್ಪ ಜಿಡ್ಡಿಮನಿ ಇವರು ಬನಹಟ್ಟಿ ಗ್ರಾಮದವರು. ಶ್ರೀ ಭೀರಪ್ಪ ಭ ಜಿಡ್ಡಿಮನಿ, ಶ್ರೀ ನಾಗಪ್ಪ ಭ ಜಿಡ್ಡಿಮನಿ, ಕಾಡಪ್ಪ ಭ ಜಿಡ್ಡಿಮನಿ, ರಮೇಶ ಜಿಡ್ಡಿಮನಿ ಈ ಮನೆತನವು ಕುಸ್ತಿ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆ ಅಪಾರವಾದದು. ಈ ಮನೆತನದಲ್ಲಿ ದಿವಂಗತ ಶ್ರೀ ಕೆಂಚಪ್ಪ ಜಿಡ್ಡಿಮನಿಯವರು ೧೫೦ ವರ್ಷಗಳ ಹಿಂದಿನಿಂದ ಬನಹಟ್ಟಿಯಲ್ಲಿ ಕೆಂಚಪ್ಪನ ಕಲ್ಲು ಎಂದು ಹೆಸರು ಪಡೆದ ಒಂದು ಬಂಡೆಗಲ್ಲು ಇದೆ. ಬನಹಟ್ಟಿಯಲ್ಲಿ ಕೆಂಚಪ್ಪನ ಕಲ್ಲು ಎಂದೇ ಹೆಸರು ಪಡೆದ ದೊಡ್ಡ ಒಂದು ಬಂಡೆಗಲ್ಲು ಇದೆ. ಅದನ್ನು ಕಮತಗಿ ಗುಡ್ಡದಿಂದ ಬನಹಟ್ಟಿಗೆ ತಂದು ಹಾಕಿದವರೇ ಶ್ರೀ ಕೆಂಚಪ್ಪನವರು. ಇವರು ಕರ್ನಾಟಕ ಹಾಗು ಮಹಾರಾಷ್ಟ ಸುತ್ತಮುತಲಿನ ಕುಸ್ತಿ ಪಟ್ಟುಗಳ ಜೊತೆಗೆ ಹೋರಾಡಿ ವಿಜಯಶಾಲಿಗಳಾಗಿದ್ದಾರೆ. ಆಕಾಶ ಕುಂಬಾರ ಇನ್ನು ಹಲವಾರು ಪೈಲ್ವಾನರು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿದ್ದಾರೆ. ಅದೇ ರೀತಿ ಬಾರ ಎತ್ತುವ ಸ್ಪರ್ಧೆಯಲ್ಲಿ  ಬಸಪ್ಪ ಸದಾಶಿವ ಕರಿಗಾರ, ರಾಜು ಸದಾಶಿವ ಕರಿಗಾರ ಕಲ್ಲಿನ ಗುಂಡು ಎತ್ತುವ ಸ್ಪರ್ದೆಯಲ್ಲಿ ೧೮೦ ರಿಂದ ೨೦೦ ಕೆ.ಜಿ, ಹನಂಗಡಿಯ ಮಲ್ಲಯ್ಯ ಇನಾಮದಾರೆ ಎನ್ನುವವರು ೧೫೦ ಕೆ,ಜಿ. ಕಲ್ಲಿನ ಗುಂಡು ಹಾಗೂ ಬಂಡಿಗಾಲಿ ಹಾಗೂ ಏತ್ತುವ ಸ್ಪರ್ಧೆಯಲ್ಲಿ ರಾಜ್ಯ ಮಟ್ಟದಲ್ಲಿ ಹೆಸರು ಮಾಡಿದ್ದು, ಅದಕ್ಕಾಗಿ ಅವರು ಅನೇಕ ಪ್ರಶಸ್ತಿಗಳನ್ನು ಪಡೆದು ಈ ಭಾಗದಲ್ಲಿ ಸಾಕಷ್ಟು ಹೆಸರುವಾಸಿಯಾಗಿದ್ದಾರೆ. ಇದೇ ರೀತಿ ಇನ್ನು ಹಲವಾರು ಜನರು ಕ್ರೀಡೆಗಳಲ್ಲಿ ತಮ್ಮ ಪ್ರತಿಭೆಯನ್ನು ಅನಾವರಣಗೊಳಿಸಿಕೊಂಡು ಜನಮನದಲ್ಲಿ ಹೆಸರಾಗಿದ್ದಾರೆ. ಇಂದಿನ ಯುವಕರು ವಿಶೇಷವಾಗಿ ಆಧುನಿಕ ಕ್ರೀಡೆಗಳಾದ ಕ್ರಿಕೆಟ್, ಕಂಪ್ಯೂಟರ್ ಗೇಮ್‌ನಂತಹ ಆಟಗಳ ಮೇಲೆ ಆಕರ್ಷಿತರಾಗುತ್ತಿದ್ದು, ನಮ್ಮ ಪರಂಪರೆಯಿಂದ ಬಂದ ಅನೇಕ ಜಾನಪದ ಆಟಗಳು ಮತ್ತು ಕ್ರೀಡೆಗಳು ಕಣ್ಮರೆಯಾಗುವ ಹಂತವನ್ನು ತಲುಪಿವೆ.

### ೩.೫. ಶೈಕ್ಷಣಿಕ ವ್ಯವಸ್ಥೆ

ದೇಶವೊಂದರ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಶಿಕ್ಷಣ ಮತ್ತು ರಾಜಕೀಯ ವ್ಯವಸ್ಥೆಗಳು ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಎಲ್ಲಿ ಸುಶಿಕ್ಷಿತ ಸಮಾಜವಿರುತ್ತದೆಯೋ ಅಲ್ಲಿ ನೆಮ್ಮದಿ ನೆಲೆಸಿರುತ್ತದೆ. ಶಿಕ್ಷಣ ಮಾನವನನ್ನು ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಕೊಂಡೊಯ್ಯುವ ಒಂದು ಮಾಧ್ಯಮವಾಗಿದೆ. ಪ್ರಾಚೀನ ಕಾಲದಲ್ಲಿ ಗುರುಕುಲ ಪದ್ಧತಿ ಜಾರಿಯಲ್ಲಿದ್ದರೂ ಶೈಕ್ಷಣಿಕ ಚಟುವಟಿಕೆಗಳು ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ ಮತ್ತು ದೇವಸ್ಥಾನಗಳಲ್ಲಿಯೂ ನಡೆಯುತ್ತಿದ್ದವು[೫೩]. ಈ ಹಿನ್ನೆಲೆಯಲ್ಲಿ ತೇರದಾಳ ಪರಿಸರದ ಪ್ರಾಚೀನ ಮತ್ತು ಸಮಕಾಲೀನ ಶೈಕ್ಷಣಿಕ ವ್ಯವಸ್ಥೆ ಮತ್ತು ಸ್ಥಿತಿಗತಿಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಪ್ರಾಚೀನ ಶೈಕ್ಷಣಿಕ ವ್ಯವಸ್ಥೆ

ಹಿಂದಿನ ಶಿಕ್ಷಣಕ್ಕೆ ಧರ್ಮವೇ ಮೂಲವಾಗಿತ್ತು. ಗುರುಗಳು ಶಿಷ್ಯರಿಗೆ ವೇದ, ಉಪನಿಷತ್ತು, ಪುರಾಣ, ತರ್ಕ, ತತ್ವಶಾಸ್ತ್ರ, ಲೆಕ್ಕಶಾಸ್ತ್ರ, ಭಾಷೆ, ಸಾಹಿತ್ಯ ಮೊದಲಾದವುಗಳನ್ನು ಬೋಧಿಸುತ್ತಿದ್ದರು. ಇಲ್ಲಿಯವರೆಗೂ ನಮಗೆ ದೊರೆತಿರುವ ಶಾಸನಗಳು ಅಂದು ವಿದ್ಯಾಭ್ಯಾಸಕ್ಕೆ

ದೊರೆಯುತ್ತಿದ್ದ ಪ್ರೋತ್ಸಾಹ, ವಿದ್ಯಾಸಂಸ್ಥೆಗಳು, ಉಪಾಧ್ಯಾಯರು ಮತ್ತು ಶಿಕ್ಷಕರು, ಶಿಕ್ಷಣ ಕೇಂದ್ರಗಳ ಕುರಿತ ಅನೇಕ ವಿಷಯಗಳನ್ನು ನಿರೂಪಿಸುತ್ತವೆ. ಇವುಗಳೊಂದಿಗೆ ಉಪನಿಷತ್ತುಗಳು ಕೂಡ ನಮ್ಮ ಅಂದಿನ ಶಿಕ್ಷಣ ವ್ಯವಸ್ಥೆಯ ಬಗ್ಗೆ ಬೆಳಕು ಚೆಲ್ಲುತ್ತವೆ.

ತೇರದಾಳದಲ್ಲಿ ಹಿಂದೆ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ, ದೇವಾಲಯಗಳ ಮೂಲಕ ಶಿಕ್ಷಣ ನೀಡಲಾಗುತ್ತಿತ್ತು. ಈ ಪರಿಸರದಲ್ಲಿ ಗುರುಕುಲ ಶಿಕ್ಷಣ ವ್ಯವಸ್ಥೆ ಜಾರಿಯಲ್ಲಿದ್ದರೂ, ಸಹ ಪ್ರತ್ಯೇಕವಾಗಿ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿದ್ದಕ್ಕೆ ಶಾಸನಗಳಲ್ಲಿ ನಮಗೆ ಪುರಾವೆಗಳಿವೆ. ಆ ಕುರಿತ ವಿವರ ಈ ಮುಂದಿನಂತಿದೆ.

**ದೇವಾಲಯಗಳು**

ಇಲ್ಲಿನ ಪ್ರಾಚೀನ ಕಾಲದ ವ್ಯವಸ್ಥಿತ ವಿದ್ಯಾಕೇಂದ್ರಗಳೆಂದರೆ ದೇವಾಲಯಗಳು, ದೇವಸ್ಥಾನಗಳಲ್ಲಿ ಲಾಕುಳೀಶ, ಪಾಶುಪಥದವರು ಸ್ಥಾನಾಪತಿಗಳಾಗಿದ್ದು ಅವರಿಂದ ೮ ಅಥವಾ ೯ನೇ ಶತಮಾನದಲ್ಲಿ ದೇವಸ್ಥಾನಗಳು ವಿದ್ಯಾ ಕೇಂದ್ರಗಳಾಗಿ ಪರಿಣಮಿಸಿದವು. ಈ ಕಾಲದಲ್ಲಿ ಲಾಕುಳ, ಕಾಳಾಮುಖ ಶೈವ ಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿತ್ತು[೫೪]. ಚೀನಾ ಪ್ರವಾಸಿ ಹ್ಯೂ-ಯೆನ್-ತ್ಸಾಂಗನ ಹೇಳಿಕೆ ಇದನ್ನು ಸಮರ್ಥಿಸುತ್ತದೆ. ಆ ಕಾಲದ ವಿದ್ಯಾರ್ಥಿಗಳು ಗುರುವಿನ ಮನೆಯಲ್ಲಿ ಇದ್ದುಕೊಂಡು ಅಭ್ಯಸಿಸುತ್ತಿದ್ದರು. ಮಧ್ಯಾಹ್ನ ಭಿಕ್ಷೆಗೆ ಬಂದ ವಿದ್ಯಾರ್ಥಿಯನ್ನು ಹಾಗೆಯೇ ಕಳುಹಿಸಿದರೆ ಆ ಗೃಹಸ್ಥನ ಸಕಲ ಪುಣ್ಯರಾಶಿಯು ನಾಶವಾಗುತ್ತದೆಂದು 'ಅಪಸ್ತಂಬ ಗೃಹಸೂತ್ರ'ವೂ ಹೇಳುತ್ತದೆ. ಶಾಸನಗಳಲ್ಲಿ ಸಿಗುತ್ತದೆ. ಜೈನ ಶಾಸನಗಳಲ್ಲಿ 'ಅಂತೇವಾಸಿ' ಎಂಬ ಪದ ಹೆಚ್ಚಾಗಿ ಕಾಣಿಸುತ್ತದೆ. ಈ ಪದಕ್ಕೆ 'ಶಿಷ್ಯ' ಎಂಬ ಅರ್ಥವನ್ನು ಇಟ್ಟುಕೊಳ್ಳಬಹುದು. ಶಿಷ್ಯನಾದವನು ಗುರುವಿನ ಮನೆಯಲ್ಲಿಯೇ ಗುರುಸೇವೆ ಮಾಡಿಕೊಂಡು ವಿದ್ಯೆಯನ್ನು ಕಲಿಯುತ್ತಿದ್ದವರನ್ನು ಈ ಹೆಸರಿನಿಂದ ಅಂದು ಸಂಭೋದಿಸಲಾಗುತ್ತಿತ್ತು. ಈ ಪದ್ಧತಿ ಇತ್ತೀಚಿನವರೆಗೂ ಈ ಭಾಗದಲ್ಲಿತ್ತು. ಇದರಿಂದ ಪ್ರಾಚೀನ ಕಾಲದಲ್ಲಿಯೂ ಈ ಪದ್ಧತಿ ಇದ್ದಿರಬೇಕು ಎಂದು ಅರ್ಥೈಸಿಕೊಳ್ಳಬಹುದು[೫೫.]

ಪ್ರಾಚೀನ ಕರ್ನಾಟಕದ ದೇವಾಲಯಗಳು ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ವದ ಕಾರ್ಯನಿರ್ವಹಿಸಿವೆ. ದೇವಸ್ಥಾನಗಳು ಸಾರ್ವಜನಿಕವಾಗಿದ್ದು, ಆರಂಭದಿಂದಲೇ ಪ್ರಾಥಮಿಕ ಹಂತದ ಶಿಕ್ಷಣವನ್ನು ಒದಗಿಸುತ್ತಿದ್ದವು. ಈ ಎಲ್ಲಾ ವಿಷಯಗಳನ್ನು ಅವಲೋಕಿಸಿದಾಗ ಮೂಲತಃ ಶಿಕ್ಷಣದ ಅವಕಾಶಕ್ಕೆ ತಳಹದಿ ಹಾಕಿದ ಶ್ರೇಯಸ್ಸು ದೇವಾಲಯಗಳಿಗೆ ಸಲ್ಲುತ್ತದೆ. ಲಾಕುಳೀಶ ಶೈವ, ಪಾಶುಪಥ ಪಂಥದ ಸ್ಥಾನಾಚಾರ್ಯರು ಕರ್ನಾಟಕಕ್ಕೆ ಬರುವ ಮೂಲಕ ದೇವಸ್ಥಾನ, ಮಠಗಳನ್ನು ಕಟ್ಟಿಸಿ ಅಲ್ಲಿಯೇ ವಾಸಿಸುತ್ತಾ, ಧಾರ್ಮಿಕ ಶಿಕ್ಷಣವನ್ನು ಆರಂಭಿಸಿದರು. ಭಕ್ತರು ದೇವಾಲಯಗಳಿಗೆ ದತ್ತಿ ಕೊಡುವಾಗ, ಶಿಕ್ಷಣಕ್ಕೂ ದಾನ-ದತ್ತಿ ಕೊಡಲಾರಂಭಿಸಿದರು[೫೬.] ಈ ಭಾಗದ ದೇವಾಲಯಗಳು ಅಂದು ಶಿಕ್ಷಣ ಪ್ರಸಾರಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ತೇರದಾಳದ ಜಿನಾಲಯದಲ್ಲಿ ಶಿಕ್ಷಣ ನಡೆಯುತ್ತಿತ್ತು. ಘಟಿಕಾಸ್ಥಾನದ ಆಚಾರ್ಯರು ಮತ್ತು ಅನುಯಾಯಿಗಳು ತೇರದಾಳದಲ್ಲಿ ಸಭೆ ಸೇರಿ ಚರ್ಚಿಸಿದ ವಿಷಯ ತೇರದಾಳ ಶಾಸನದಲ್ಲಿ ಉಲ್ಲೇಖಗೊಂಡಿದೆ.

ರಟ್ಟರ ಕಾಲದ ಸೊಗಲದ 'ಸುವರ್ಣಾಕ್ಷಿ' ತಪೋವನದ ವರ್ಣನೆ ಅಲ್ಲಿಯ ಶಾಸನದಿಂದ ತಿಳಿಯುತ್ತದೆ. 'ಪುಲಿಗಳ್ಧರ್ಮಶ್ರವಣಮ್‌ನೆಲೆ ಮಿಡುಕದೆ ಕೇಳುತಿರ್ಪ್ಪುವರ್‌ಗಿಳಿಗಳ್ ನಿರ್ಮಳ್ ಮುನಪರೋದುವೋಂದಂ ಚಳವಾದೆಡೆಯರದು

ಪೇಳ್ವುವಿರುಳುಂ ಪಗಲುಂ' ಎಂದು ವರ್ಣಿಸಿದೆ. ಇದನ್ನು ನೋಡಿದರೆ ಈ ಪ್ರದೇಶ ನಿರ್ಜನವಾಗಿದ್ದು, ಋಷಿ-ಮುನಿಗಳಿಗೆ ಧ್ಯಾನ ಮಾಡಲು, ವಿದ್ಯಾರ್ಥಿಗಳ ಶಿಕ್ಷಣಕ್ಕೆ ಯೋಗ್ಯ ಸ್ಥಳವಾಗಿತ್ತು. ಮೇಲಿನ ವಿಷಯದಿಂದ ರಟ್ಟರು ಶಿಕ್ಷಣ ಕೇಂದ್ರಗಳಿಗೆ ದಾನವನ್ನು ಕೊಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅಲ್ಲಿಯ ಗುರುಗಳಾದ 'ಶ್ರೀಕನಕಪ್ರಭ ಪಂಡಿತ' ದೇವರಿಗೆ ಇವರ ಶಿಷ್ಯನಾದ 'ಶ್ರೀಮನ್ಮಹಾಪ್ರಭು ಮೂಲಗರ ಮುರಿಯಮಗಾವುಂಡ'ನು ಶಿಕ್ಷಣ ಕೇಂದ್ರಕ್ಕೆ ಭೂಮಿಯನ್ನು ದಾನ ಮಾಡಿದ್ದಾನೆ[೫೭]

**ಅಗ್ರಹಾರಗಳು**

'ಅಗ್ರಹಾರ' ಎಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು. ಇಲ್ಲಿಯ ಶ್ರೇಷ್ಠರೆಂದರೆ ಚಾತುರ್ವರ್ಣಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರು. ಇವರು ವಾಸಿಸುವ ಸ್ಥಳಕ್ಕೆ ಅಗ್ರಹಾರವೆಂದು ಕರೆಯುತ್ತಿದ್ದರು. ಅಗ್ರಹಾರ ಇದರ ಮೂಲ ರೂಪ 'ಅಗ್ರಾಹಾರ' ಎಂದಿರಬೇಕೆಂದು, ಅದು 'ಅಗ್ರ+ಆಹಾರ' ಎಂಬ ಎರಡು ಪದಗಳ ಸಮಾಸವೆಂದು ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಅಭಿಪ್ರಾಯಪಟ್ಟಿದ್ದಾರೆ. ಅಗ್ರಹಾರಗಳಲ್ಲಿ ಬ್ರಾಹ್ಮಣರೇ ಇರಬೇಕೆಂದಿಲ್ಲ[೫೮]. ಬೇರೆ ಜಾತಿಯ ಜನರು ಇರಬಹುದು. ಅಗ್ರಹಾರಗಳು ಪ್ರಾಚೀನ ಕಾಲದಲ್ಲಿ ಶಿಕ್ಷಣ ಕೇಂದ್ರಗಳಾಗಿ ಬಹು ಮುಖ್ಯವಾದ ಕಾರ್ಯನಿರ್ವಹಿಸಿವೆ.

ಕರ್ನಾಟಕದಲ್ಲಿ ಅಗ್ರಹಾರಗಳ ಪದ್ಧತಿ ಪ್ರಾರಂಭವಾದದ್ದು ಕದಂಬರ ಕಾಲದಲ್ಲಿ. 'ಕರ್ನಾಟಕದ ಇತ್ತೀಚಿನ ಶಾಸನಗಳಲ್ಲಿ ಅಗ್ರಹಾರಗಳ ವಿಷಯ ಬಂದಿದ್ದರೂ ಕ್ರಿ.ಶ. ೫ನೇ ಶತಮಾನದಲ್ಲಿಯೇ ಅಗ್ರಹಾರಗಳು ಉದಯಿಸಿದ್ದವು ಎಂದು ನಂಬಲು ಆಧಾರಗಳಿವೆ'[೫೯]. ವಿದ್ಯಾಭ್ಯಾಸ ಮುಗಿಸಿಕೊಂಡು ಗುರುಕುಲದಿಂದ ಹಿಂದಿರುಗಿದ ಬ್ರಾಹ್ಮಣರು ಗೃಹಸ್ಥರಾಗಿ ನೆಲೆಗೊಳ್ಳಲು ಊರನ್ನು ದಾನವಾಗಿ ಕೊಡುತ್ತಿದ್ದರು. ಈ ಹೇಳಿಕೆಯನ್ನು 'ಕನ್ನಡದ ಶಾಸನಗಳು ಸಮರ್ಥಿಸುವುದಿಲ್ಲ' ಎನ್ನುತ್ತಾರೆ ಡಾ.ಎಂ.ಚಿದಾನಂದ ಮೂರ್ತಿಯವರು. ಅಗ್ರಹಾರಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣ ವಿದ್ವಾಂಸರು ಅಲ್ಲಿಯ ಮಹಾಜನರು ಎನಿಸಿದ್ದರು. ಶಾಸನಗಳಲ್ಲಿ ಇವರನ್ನು 'ವಿಪ್ರರು' ಎಂದು ಕರೆಯಲಾಗಿದೆ. ಮಹಾಜನರು ಅಗ್ರಹಾರಗಳ ಒಡೆಯರಾಗಿದ್ದರಿಂದ ಅವರಿಗೆ ಅಗ್ರಹಾರಗಳ ಮೇಲೆ ಪ್ರಭುತ್ವವಿತ್ತು. ವಿದ್ಯೆ ತಪಸ್ಸುಗಳ ಸಂಗಮ ಮಹಾಜನರ ವ್ಯಕ್ತಿತ್ವಕ್ಕೆ ಕಾರಣವಾಗಿತ್ತು[೬೦].

ಇಂದಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ತೇರದಾಳ ರಟ್ಟರ ಕಾಲದ ಐತಿಹಾಸಿಕ ಜೈನ ಕೇಂದ್ರವಾಗಿತ್ತು. ಇದು ಅಗ್ರಹಾರವಾಗಿ ಶಿಕ್ಷಣಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಇದು ಅಗ್ರಹಾರವಾಗಿದ್ದ ವಿಷಯ 'ಪ್ರಸಾದ ದೇವಾಲಯತನಂಗಳಿಂದ ಮೊಪ್ಪುವಗ್ರಹಾರ ಪಟ್ಟಣಗಳಿಂದ ಅತಿಶಯವಪ್ಪ ಶ್ರೀಮತ್‌ಕೊಂಡಿಮೂರುಸಾಸಿರದೊಳೆಗೆ ಹನ್ನೆರಡಕ್ಕಂ ಮೊದಲ ಬಾಡಂಬಣಂಜು ವಟ್ಟಣಂನಡವೆಯ ಮನೆ ತೇರದಾಳದೊಳು' ಎನ್ನುವ ಶಾಸನೋಕ್ತಿಯಿಂದ ತೇರದಾಳ ಅಂದು ಅಗ್ರಹಾರವಾಗಿ, ಅಂದಿನ ಕಾಲದ ಶಿಕ್ಷಣ ಕೇಂದ್ರವಾಗಿತ್ತು ಎಂದು ಹೇಳಬಹುದು[೬೧].

**ಬ್ರಹ್ಮಪುರಿಗಳು**

ಅಗ್ರಹಾರಗಳಂತೆ ಬ್ರಹ್ಮಪುರಿಗಳೂ ಸಹ ಪ್ರಾಚೀನ ಶಿಕ್ಷಣ ಕೇಂದ್ರಗಳಾಗಿದ್ದವು. 'ನಗರ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೇ ಬ್ರಹ್ಮಪುರಿ'. ಅಗ್ರಹಾರ ಮತ್ತು ಬ್ರಹ್ಮಪುರಿಗಳೆರಡು ಬ್ರಾಹ್ಮಣರ ಪ್ರದೇಶಗಳಾದರೂ ಎರಡರಲ್ಲಿಯೂ ಅಂತರವಿದೆ. ಅಗ್ರಹಾರಗಳು ಊರುಗಳಾದರೆ, ಬ್ರಹ್ಮಪುರಿಗಳು ಪಟ್ಟಣದ ಅಥವಾ ನಗರದ ಭಾಗಗಳಾಗಿವೆ.

ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಿಮೆ. ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು. ನಗರಗಳ ಸಂಖ್ಯೆ ಕಡಿಮೆ. ಅಗ್ರಹಾರದ ಬ್ರಾಹ್ಮಣರು ಆ ಊರಿನ ಒಡೆಯರು. ಆದರೆ ಬ್ರಹ್ಮಪುರಿಗಳಲ್ಲಿನ ಬ್ರಾಹ್ಮಣರು ಇತರ ಪಂಗಡಗಳ ಜನರಿದ್ದಂತೆ ಅಷ್ಟೇ. ಅಗ್ರಹಾರಗಳ ಬ್ರಾಹ್ಮಣರಿಗಿದ್ದ ಅಧಿಕಾರ ಇವರಿಗಿರಲಿಲ್ಲ. ಅನೇಕ ರಾಜರೂ, ದಂಡನಾಯಕರು ಬ್ರಹ್ಮಪುರಿಗಳನ್ನು ಸ್ಥಾಪಿಸಿ ರಾಜ್ಯದ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಿದ್ದರ ಕುರಿತು ಹಲವು ಶಾಸನಗಳ ಉಲ್ಲೇಖಿಸಿವೆ. ಅಗ್ರಹಾರಗಳಲ್ಲಿ ಬ್ರಾಹ್ಮಣರು ವಾಸಿಸುತ್ತಿದ್ದ ಭಾಗಗಳನ್ನು ಬ್ರಹ್ಮಪುರಿಗಳೆಂದೇ ಶಾಸನಗಳು ಕರೆದಿವೆ. ಪಂಪ 'ಪಂಪಭಾರತ'ವನ್ನು ರಚಿಸಿ ಅರಿಕೇಸರಿಯಿಂದ 'ಬಜ್ಜೆಸಾವಿರದೊಳಗಿದ್ದ ಧರ್ಮಪುರ' ಎಂಬ ಅಗ್ರಹಾರವನ್ನು ಸಂಭಾವನೆಯ ರೂಪದಲ್ಲಿ ಪಡೆಯುತ್ತಾನೆ. ಬ್ರಹ್ಮಪ್ಮರಿಗಳು ಬಹುಮಟ್ಟಿಗೆ ಅಗ್ರಹಾರಗಳನ್ನೇ ಹೋಲುತ್ತವೆ. ಬ್ರಹ್ಮಪುರಿಗಳು ಬ್ರಾಹ್ಮಣರಿಗೆ ಬಿಟ್ಟ ದಾನಗಳಾಗಿದ್ದವು. ಇವು ಶಿಕ್ಷಣ ಕೇಂದ್ರಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದವು. ಅವುಗಳ ಆಡಳಿತವನ್ನು ಅಲ್ಲಿಯ ಬ್ರಾಹ್ಮಣರೇ ನಿರ್ವಹಿಸುತ್ತಿದ್ದರು[೬೨]. ಹನಂಗಡಿ ಮತ್ತು ರಬಕವಿಗಳಲ್ಲಿ ಅಂದು ಬ್ರಹ್ಮಪುರಿಗಳಿದ್ದವೆಂದು ತಿಳಿದು ಬರುತ್ತದೆ.

**ಘಟಿಕಾಸ್ಥಾನಗಳು**

ತೇರದಾಳ ಭಾಗದಲ್ಲಿ ಅಗ್ರಹಾರ, ದೇವಾಲಯ ಹಾಗೂ ಬ್ರಹ್ಮಪುರಿಗಳಂತೆ ಘಟಿಕಾಸ್ಥಾನಗಳು ಸಹ ಪ್ರಾಚೀನ ವಿದ್ಯಾಕೇಂದ್ರಗಳಾಗಿದ್ದವು. ಇವು ಇಂದಿನ ವಿಶ್ವವಿದ್ಯಾಲಯಗಳಂತೆ ಕಾರ್ಯನಿರ್ವಹಿಸುತ್ತಿದ್ದವು. 'ಘಟಿಕಾ' ಎಂದರೆ ಕಾಲವನ್ನು ಅಳೆಯಲು ಉಪಯೋಗಿಸುತ್ತಿದ್ದ 'ಮಣ್ಣಿನ ಪಾತ್ರೆ' ಎನ್ನುವ ಅರ್ಥವಿದೆ. 'ಘಟಿಕಾಸ್ಥಾನ ಎಂದರೆ ಧಾರ್ಮಿಕ ಕೇಂದ್ರ' ಎಂದು ಕೆ.ಬಿ.ಪಾಠಕ ಅವರು ವಾದಿಸುತ್ತಾರೆ. ಬಿ.ಎಲ್.ರೈಸ್ ಅವರು 'ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ ಸಾರ್ವಜನಿಕ ಮಂದಿರವಿರಬಹುದೆಂದು' ಊಹಿಸಿದ್ದಾರೆ. ಎಸ್.ವ್ಹಿ. ವೆಂಕಟೇಶ್ವರ ಉಪಾಧ್ಯಾಯರು 'ವಿದ್ಯಾರ್ಥಿಗಳು ಕೂಡಿ ಚರ್ಚೆ ನಡೆಸುತ್ತಿದ್ದ ಹಾಗೂ ಮಹಾ ವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠೋತ್ತಮ ಸಂಸ್ಥೆಯೇ ಘಟಿಕಾಸ್ಥಾನ' ಎಂದಿದ್ದಾರೆ. ಪ್ರೊ.ಎಸ್.ವಿ.ವೆಂಕಟೇಶ್ವರ ಅವರು ಗಮನಿಸಿದಂತೆ, ಕದಂಬರ ಶಾಸನಗಳಿಂದ ಘಟಿಕಾಸ್ಥಾನಗಳು ಉಚ್ಚ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು. ಇಂಥ ಘಟಿಕಾಸ್ಥಾನದಲ್ಲಿ ವಿದ್ವತ್ತನ್ನು ಮೆರೆದವರಿಗೆ 'ಘಟಿಕಾಸಾಹಸಿ' ಎಂದು ಬಿರುದು ನೀಡಿ ಗೌರವಿಸುತ್ತಿದ್ದರು[೬೩]. ತೇರದಾಳ ಶಾಸನದಲ್ಲಿ 'ಅರವತ್ನಾಲ್ಕು ಘಟಿಕಾಸ್ಥಾನದ' ಉಲ್ಲೇಖ ಬರುತ್ತದೆ. ಘಟಿಕಾಸ್ಥಾನದ ಮೇಲ್ವಿಚಾರಣೆ ನೋಡಿಕೊಳ್ಳಲು ಆಚಾರ್ಯರು ಇರುತ್ತಿದ್ದರು. ಸದರಿ ಶಾಸನ ಮುಂದುವರೆದು 'ಯೀನ್ತೇಘಟಿಕಾಸ್ಥಾನದಾಚಾರ್ಯರು' ಎಂದು ಹೇಳಿರುವುದರಿಂದ ೬೪ ಘಟಿಕಾಸ್ಥಾನದ ಮೇಲ್ವಿಚಾರಣೆಯನ್ನು ಇವರೇ ನೋಡಿಕೊಳ್ಳುತ್ತಿದ್ದರಬಹುದು. ಆ ಅರವತ್ನಾಲ್ಕು ಘಟಿಕಾಸ್ಥಾನಗಳ ಹೆಸರು ಉಲ್ಲೇಖಗೊಳ್ಳದ್ದರಿಂದ ಅವುಗಳ ಬಗ್ಗೆ ಮಾಹಿತಿ ದೊರಕುವುದಿಲ್ಲ. ಆದರೂ ಅವು ಶೈಕ್ಷಣಿಕ ಕೇಂದ್ರಗಳಾಗಿದ್ದವೆಂದು ನಿರ್ಧರಿಸಬಹುದಾಗಿದೆ.

ಈ ಮೇಲಿನ ಶಿಕ್ಷಣ ಕೇಂದ್ರಗಳಲ್ಲಿನ ವಿದ್ಯಾಭ್ಯಾಸ ಪದ್ಧತಿಯಲ್ಲಿ ಗುರುಕುಲ ಶಿಕ್ಷಣ ವ್ಯವಸ್ಥೆಯಿತ್ತು. ವೈದಿಕ ಶಿಕ್ಷಣವನ್ನು ಬಾಲಕರ ೫ನೇ ವಯಸ್ಸಿನಲ್ಲಿ ಪ್ರಾರಂಭವಾಗುತಿತ್ತು. ಇವರಿಗೆ ೧೪ ವರ್ಷಗಳಾದ ನಂತರ ಗುರುವಿನ ಹತ್ತಿರ ಕರೆದೊಯ್ದು ಉಪನಯನ ಮಾಡಿಸಿ ಅಲ್ಲಿಯೇ ಗುರುವಿನ ಬಳಿ ಶಿಕ್ಷಣ ಕಲಿಕೆಗಾಗಿ ಕರೆದೊಯ್ದು ಅಕ್ಷರವನ್ನು ಕಲಿಸುತ್ತಿದ್ದರು.

ಪ್ರಾರಂಭದಲ್ಲಿ ವೇದಗಳ ಕಂಠಪಾಠ ಮಾಡಿಸುತ್ತಿದ್ದರು. ಅಂದರೆ ಮೌಖಿಕ ಶಿಕ್ಷಣ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಪ್ರೌಢ ಶಿಕ್ಷಣ ವಿಷಯಗಳಾದ ವೇದ, ವ್ಯಾಕರಣ, ಮೀಮಾಂಸೆ, ಷಟ್‌ದರ್ಶನಗಳು, ಆಗಮಗಳು, ಜ್ಯೋತಿಷ್ಯ, ಪುರಾಣ, ಕಾವ್ಯ, ನಾಟಕ, ಅಲಂಕಾರಶಾಸ್ತ್ರ, ೧೮ ಸ್ಮೃತಿಗಳು ಹಾಗೂ ೧೮ ಪುರಾಣಗಳನ್ನು ಅಧ್ಯಯನ ಮಾಡಿದ ಉಲ್ಲೇಖ ಕರ್ನಾಟಕದ ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಅದರಂತೆ ಇಲ್ಲಿನ ಶಿಕ್ಷಣ ಕೇಂದ್ರಗಳೂ ಸಹ ಇದಕ್ಕೆ ಹೊರತಾಗಿಲ್ಲ. ಈ ನಾಡಿನ ಪ್ರಯಾಗವೆನಿಸಿದ ರಾಯಬಾಗದ ಮಹಾ ಅಗ್ರಹಾರದಲ್ಲಿ 'ಸ್ವಸ್ತಿಯಮ, ನಯಮ, ಸ್ವಾಧ್ಯಾಯ, ಧ್ಯಾನಧಾರಣ, ಸಂಪನ್ನರಪ್ಪ'ರಾಗಿದ್ದ ಬ್ರಾಹ್ಮಣರಿದ್ದರು. ಇಲ್ಲಿಯ ಬ್ರಾಹ್ಮಣರು ವೇದಾಧ್ಯಯನ, ಕಾವ್ಯಶಾಸ್ತ್ರಗಳಲ್ಲಿ ಪರಿಣಿತರಾಗಿದ್ದರು. ಮತ್ತೊಂದು ಶಾಸನ 'ವ್ಯಾಕರಣ, ತೀಕ್ಷ್ಣ, ದಂಷ್ಟ್ರ, ಸಿದ್ಧಾಂತನಖಪ್ರಮಾಣ ಕೇಸರಭಾರ, ವೇದಾಗಮಶಾಸ್ತ್ರ' ಮುಂತಾದ ವಿಷಯಗಳನ್ನು ಬೋಧಿಸುತ್ತಿದ್ದ ವಿಷಯ ಉಲ್ಲೇಖಗೊಂಡಿದೆ[೬೪].

ಹಣ್ಣಿಕೇರಿಯ ಶಿಕ್ಷಣ ಕೇಂದ್ರದಲ್ಲಿ ಜೋತಿಷ್ಯಶಾಸ್ತ್ರವನ್ನು ಬೋಧಿಸಲಾಗುತ್ತಿತ್ತು. ಇದೇ ಶಾಸನ ಕನಕಪ್ರಭಪಂಡಿತರನ್ನು ವರ್ಣಿಸುವಾಗ 'ಕನಕಪ್ರಭ ನಾಮಯುತಂ ಆನಯಿಸಿ ದಂಜಾತರೂಪಧರ ವಿಖ್ಯಾತಂತನ್ಮನೇಶ್ವರ ಪ್ರಿಯಶಿಷ್ಯಾಗ್ರೇಸರನೆಂತೆನೆವರ ಮೀಮಾಂಸಕಕುಂ ಜಕುಂಜರನಭಂಚಾರ್ವಾಕ ವಾಧೀಭಕೇಶರಿ ವೈಶೇಷಿಕಲೇ ಲಿಹಾನವಿತಾಪತ್ಯ ಸುಸಾಂ ಖ್ಯಾವನೇಧರ ವಜ್ರಾಧನುಗ್ರ ಬೌದ್ಧ ಬುದ್ಧಜೀಮೂತಾಳಿಝುಂ' ಎಂದು ವರ್ಣಿಸಲಾಗಿದೆ. ಕನಕಪ್ರಭರು ಮೀಮಾಂಸೆ, ವೈಶೇಷಿಕ ವಿಷಯಗಳನ್ನು ಕಲಿತು ಅವುಗಳಲ್ಲಿ ಪಾಂಡಿತ್ಯ ಪಡೆದಿದ್ದರು. ಕನಕಪ್ರಭ ಪಂಡಿತರನ್ನು 'ಬುದ್ಧಜೀಮೂತಾಳಿಝುಂ' ಎಂದಿರುವುದರಿಂದ ಇವರು ಬೌದ್ಧ ಮುನಿಗಳನ್ನು ವಾದದಲ್ಲಿ ಸೋಲಿಸಿರಬಹುದು. ಈ ವಿವರಗಳಿಂದ ಇಲ್ಲಿ ಮೇಲ್ಕಾಣಿಸಿದ ವಿಷಯಗಳನ್ನು ಬೋಧಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅದರಂತೆ ಇನ್ನುಳಿದ ಪ್ರದೇಶದಲ್ಲಿರುವ ಅಗ್ರಹಾರ, ಬ್ರಹ್ಮ ಪುರಿ, ಘಟಿಕಾಸ್ಥಾನ ಹಾಗೂ ದೇವಾಲಯಗಳಲ್ಲಿಯೂ ಈ ವಿಷಯಗಳನ್ನೇ ಬೋಧಿಸಿರುವ ಸಾಧ್ಯತೆ ಇದೆ ಎನ್ನುವುದನ್ನು ಇತರೆ ಆಕರಗಳ ಸಹಾಯದಿಂದ ಹೇಳಬಹುದಾಗಿದೆ.

ಈ ನಾಡಿನ ಶಿಕ್ಷಣದ ಪ್ರಾಚೀನತೆಯನ್ನು ಗುರುತಿಸಲು ಸಾಹಿತ್ಯವು ಒಂದು ಸಮಕಾಲೀನ ಆಕರವಾಗುತ್ತದೆ. ಒಂದು ರಾಜ್ಯ, ಒಂದು ಪ್ರದೇಶದಲ್ಲಿ ರಚನೆಗೊಂಡ ಸಾಹಿತ್ಯ ಆ ರಾಜ್ಯ ಮತ್ತು ಪ್ರದೇಶದ ಸಾಂಸ್ಕೃತಿಕ ಶ್ರೀಮಂತಿಕೆಯ ಪ್ರತೀಕ. ಜನರ ಜೀವನದ ಪ್ರತಿಬಿಂಬವೇ ಸಾಹಿತ್ಯ. ಆ ಕಾಲದ ಜನಜೀವನವನ್ನು ಅರಿತುಕೊಳ್ಳಲು ಆ ಕಾಲದ ಸಾಹಿತ್ಯವನ್ನು ಅಭ್ಯಾಸಿಸಬೇಕು. ಅದರಂತೆ ತೇರದಾಳ ಪರಿಸರದ ಅನೇಕ ಕವಿಗಳು, ವಿದ್ವಾಂಸರು, ಸಾಹಿತಿಗಳು ಹಾಗೂ ಇವರಿಗೆ ಆಶ್ರಯದಾತರಾಗಿ ರಾಜಾಶ್ರಯ ನೀಡಿ ಸಾಹಿತ್ಯದ ಬೆಳವಣಿಗೆಗೆ ಕಾರಣರಾದ ಅರಸರು ಈ ನಾಡಿನ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆ ಅಪಾರ. ಕನ್ನಡದ ಪ್ರಥಮ ಗಣಿತಶಾಸ್ತ್ರಜ್ಞನಾದ ರಾಜಾದಿತ್ಯ ಕವಿ ಈ ನಾಡಿನವನೇ. ಕಮಲಾದಿತ್ಯ, ಜಿನವರ್ಮ, ಸೋರಿಗಾಂಕ, ಶೃತ, ಪಾರ್ಶ್ವಪಂಡಿತ ಕವಿಗಳೂ ಈ ನಾಡಿನ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ[೬೫]. ಆದೇ ರೀತಿ ಕ್ರಿ.ಶ. ಸುಮಾರು ೧೦ನೇ ಶತಮಾನದಿಂದ ಜೈನರು ಕನ್ನಡ ಸಾಹಿತ್ಯವನ್ನು ಉಳಿಸಿ ಬೆಳೆಸುವಲ್ಲಿ ಪ್ರಧಾನ ಪಾತ್ರ ವಹಿಸಿದ್ದಾರೆ. ಸವದತ್ತಿ ರಟ್ಟರು ಕನ್ನಡ ಸಾಹಿತ್ಯಕ್ಕೆ ಹಾಗೂ ಕವಿಗಳಿಗೆ ಆಶ್ರಯ ಕೊಟ್ಟು ಗೌರವಿಸಿ ಸಾಹಿತ್ಯ ಬೆಳವಣಿಗೆಗೆ ಪ್ರೋತ್ಸಾಹಿಸಿದ್ದಾರೆ. ಇವರ ಕಾಲದಲ್ಲಿ ಧಾರ್ಮಿಕ ಸಾಹಿತ್ಯ ಹೆಚ್ಚಿಗೆ ರೂಪುಗೊಂಡಿತು.

ಇವರ ಕಾಲದ ಕನ್ನಡ ಹಾಗೂ ಸಂಸ್ಕೃತ ಮಿಶ್ರ ಭಾಷೆಯ ಗದ್ಯ ಪದ್ಯಗಳಿಂದ ಕೂಡಿದ ಶಾಸನಗಳು ಹೆಚ್ಚಾಗಿ ದೊರಕುತ್ತವೆ. ಇವುಗಳ ಸಹಾಯದಿಂದ ಅಂದಿನ ಸಾಹಿತ್ಯದ ಬೆಳವಣಿಗೆಯನ್ನು ಮತ್ತು ಅಂದಿನ ಶೈಕ್ಷಣಿಕ ವ್ಯವಸ್ಥೆಯನ್ನು ಅರಿಯಬಹುದಾಗಿದೆ.

ಕಲ್ಲೋಳಿ, ಹನಗಂಡಿ, ಮದನಮಟ್ಟಿ, ಹಳಿಂಗಳಿ, ಕೊಣ್ಣೂರ, ಮುಂತಾದ ಶಾಸನಗಳು ಜೈನ ಶಾಸನಗಳಾದರೆ, ಅಸ್ಕಿ, ನೇಸರಗಿ, ಹೂಲಿ ಶಾಸನಗಳು ಶೈವ ಶಾಸನಗಳು. ಕಲ್ಲೋಳ್ಳಿ, ನೇಸರಗಿ ಹಾಗೂ ಹನಗಂಡಿ ಶಾಸನಗಳು ವೈಷ್ಣವ ಶಾಸನಗಳಾಗಿವೆ. ಈ ಶಾಸನಗಳಲ್ಲಿ ಅಂದಿನ ಶಿಕ್ಷಣ ವ್ಯವಸ್ಥೆಯ ಉಲ್ಲೇಖಿಗಳಿವೆ.

ರುದ್ರಭಟ್ಟ ರಟ್ಟರ ಕಾಲದ ಹೆಸರಾಂತ ಕವಿಯಾಗಿದ್ದನು. ಸವದತ್ತಿ ಶಾಸನದಲ್ಲಿ 'ವಂಜಶರ್ಕ್ಕಳರುದಿಂಗಳೊಳುದ್ಧ ಕವೀಶರಪ್ಪ ವ್ಯಾಕೋಂನತಿಯಂ ಸರಸ್ವತಿಯಿನೂರ್ಪ್ಪದಿನೆಂಟುರೊಳಂ ಪ್ರಭುತ್ವಮಂ ಕಂನರನಂದವಂದು ಪಡೆದಂದೊರೆಯಾ ಕವಿತಾ ವಿಳಾಸದೊಂದುಂ ನತೊಯೊಳ್ ಪ್ರಭುತ್ವದ ನೆಗರ್ತ್ತೆಯೊಳಾವಿಭು ರುದ್ರಭಟ್ಟನೊಳ್ ಆಸುಕವಿ ರುದ್ರಭಟ್ಟನನಾ ಸೋಮಕುಲಾಂಖ್ಯವೆನಸುವತ್ರಿಕು(ಲಂ) ಸಾಮಾಸಿಗಕುಲವೆನಸಿದನ್ತಾ ಸತ್ಕುಲದೊಳಗೆ ಪುಟ್ಟಿತ ಮಳಚರಿತ್ರಂ' ಎಂದಿದೆ. ರುದ್ರಭಟ್ಟ ಕವಿಯು ತನ್ನ ಕವಿತಾ ಶಕ್ತಿಯಿಂದ ಬನಹಟ್ಟಿಯ ಹದಿನೆಂಟು ಹಳ್ಳಿಗಳನ್ನು ರಾಜನಿಂದ ಪಡೆದು ಅದರ ಮೇಲೆ ಪ್ರಭುತ್ವ ಹೊಂದಿದ ಉಲ್ಲೇಖವಿದೆ. ಶಾಸನದಲ್ಲಿ ಇವನನ್ನು 'ಆಸುಕವಿ'ಯಾಗಿದ್ದ ವಿಷಯವನ್ನು ತಿಳಿಸುತ್ತದೆ. ಹೀಗೆ ತೇರದಾಳ ಭಾಗದ ಅನೇಕ ಶಾಸನಸ್ಥ ಕವಿಗಳು ಕನ್ನಡವನ್ನು ಉಳಿಸಿ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಿಂಚಿ ಈ ನಾಡಿನ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

**ಸಮಕಾಲೀನ ಶೈಕ್ಷಣಿಕ ವ್ಯವಸ್ಥೆ**

ಸರ್ಕಾರದ ವಿಶೇಷ ಕಾಳಜಿ ಮತ್ತು ಅನುಷ್ಠಾನಗೊಳಿಸಿದ ಆಕರ್ಷಕ ಯೋಜನೆಗಳ ಪರಿಣಾಮವಾಗಿ ಇಂದು ತೇರದಾಳ ಪರಿಸರದ ಪ್ರತಿ ಮಕ್ಕಳು ಶಿಕ್ಷಣ ಪಡೆಯುವ ಹಕ್ಕನ್ನು ಪಡೆದು ಕೊಂಡಿದ್ದಾರೆ. ಇಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲಾ, ಪದವಿಪೂರ್ವ, ಸ್ನಾತಕ, ಸ್ನಾತಕೋತ್ತರ ಹಾಗೂ ಡಾಕ್ಟರೇಟ್ ಹಂತದಲ್ಲಿ ಕಲಿತು ಪದವಿ ಪಡೆಯಲು ಅನುಕೂಲಗಳಿವೆ. ಈ ಪರಿಸರದಲ್ಲಿ ಪ್ರಾಥಮಿಕ ಶಾಲೆಗಳು, ಮಾಧ್ಯಮಿಕ ಶಾಲೆಗಳು, ಹೈಸ್ಕೂಲುಗಳು, ಪದವಿಪೂರ್ವ ಕಾಲೇಜುಗಳು, ಪದವಿ ಕಾಲೇಜುಗಳಿದ್ದು, ಅವು ಶಿಕ್ಷಣ ನೀಡುವ ಕಾರ್ಯದಲ್ಲಿ ತಲ್ಲೀನವಾಗಿವೆ. ಇಲ್ಲಿ ೯ ಕೈಗಾರಿಕಾ ತರಬೇತಿ ಸಂಸ್ಥೆಗಳು, ನರ್ಸಿಂಗ್ ಕಾಲೇಜು, ಆರ್ಯುವೇದಿಕ್ ಮೆಡಿಕಲ್ ಕಾಲೇಜುಗಳಿದ್ದು, ಪಾಲಿಟೆಕ್ನಿಕ್ ಮತ್ತು ವೈದ್ಯಕೀಯ ಶಿಕ್ಷಣ ಪಡೆಯಲು ಸಹಾಯಕವಾಗಿವೆ. ಪ್ರಸಕ್ತ ಇಲ್ಲಿ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ನೀತಿಯನ್ನು ಅನುಷ್ಠಾನಗೊಳಿಸಿಕೊಳ್ಳಲಾಗಿದೆ. ಸರ್ಕಾರದೊಂದಿಗೆ ಇಲ್ಲಿನ ಕೆಲ ಖಾಸಗಿ ಸಂಸ್ಥೆಗಳು ಸಹ ಇಲ್ಲಿನ ಮಕ್ಕಳಿಗೆ ಶಿಕ್ಷಣ ಸೇವೆ ನೀಡಿ ತಮ್ಮನ್ನು ಸಾರ್ಥಕಪಡಿಸಿಕೊಂಡಿವೆ. ಅವರಲ್ಲಿ ಕೆಲವರನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

ತೆರದಾಳ ಪರಿಸರದಲ್ಲಿ ಉತ್ತಮ ಶೈಕ್ಷಣಿಕ ಸೇವೆ ಸಲ್ಲಿಸುತ್ತಿರುವ ಹಲವು ಶಿಕ್ಷಣ ಪ್ರೇಮಿಗಳಿದ್ದಾರೆ. ಅವರಲ್ಲಿ ಪ್ರೊ.ಬಸವರಾಜ ಕೊಣ್ಣೂರು ಒಬ್ಬರಾಗಿದ್ದಾರೆ. ಅವರು ಅತ್ಯಂತ ಶೈಕ್ಷಣಿಕವಾಗಿ ಹಿಂದುಳಿದ ಯಲ್ಲಟ್ಟಿ ಎನ್ನುವ ಕುಗ್ರಾಮದಲ್ಲಿ ೨೦-೦೯-೧೯೬೦ರಲ್ಲಿ ಜನಿಸಿದರು. ಇವರು ತಮ್ಮ ಸ್ವಗ್ರಾಮದಲ್ಲಿಯೇ ಕೊಣ್ಣೂರ ವಿಜ್ಞಾನ ಪದವಿ ಪೂರ್ವ ಮಹಾವಿದ್ಯಾಲಯವನ್ನು ಪ್ರಾರಂಭಿಸಿ ಬಡ ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಾ ಅವರ ಪಾಲಿಗೆ ಆಶಾಕಿರಣವಾಗಿದ್ದಾರೆ.

ಇವರು ಜಿ.ಎಸ್‌ಸಿ. ಪದವಿಯನ್ನು ಜಮಖಂಡಿಯ ಪ್ರತಿಷ್ಠಿತ ಜಿ.ಎಲ್.ಡಿ.ಇ ಮಹಾವಿದ್ಯಾಲಯದಲ್ಲಿ ಮತ್ತು ಎಮ್.ಎಸ್‌ಸಿ.(ಸಸ್ಯಶಾಸ್ತ್ರ) ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಪೂರ್ಣಗೊಳಿಸಿದರು. ೧೯ ವರ್ಷಗಳ ಕಾಲ ಅರೆಕಾಲಿಕ ಉಪನ್ಯಾಸಕರಾಗಿ ನೇಮಕಗೊಂಡು ಹಲವಾರು ವರ್ಷಗಳ ಕಾಲ ಸಾವಿರಾರು ವಿದ್ಯಾರ್ಥಿಗಳಿಗೆ ಮನೆ ಪಾಠ ಮಾಡಿದ ಇವರು ೨೦೧೦ರಲ್ಲಿ ಸಸ್ಯಶಾಸ್ತ್ರ ಉಪನ್ಯಾಸಕ ಹುದ್ದೆಗೆ ರಾಜಿನಾಮೆ ನೀಡಿ, ಸಿದ್ಧಲಿಂಗ ಶಿಕ್ಷಣ ಮತ್ತು ಗ್ರಾಮೀಣಾಭಿವೃದ್ಧಿ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಕೊಣ್ಣೂರು ವಿಜ್ಞಾನ ಪದವಿ ಪೂರ್ವ ಮಹಾವಿದ್ಯಾಲಯವನ್ನು ಯಲ್ಲಟ್ಟಿಯಲ್ಲಿ ಪ್ರಾರಂಭಿಸಿ ಅದರ ಸಂಸ್ಥಾಪಕ ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸಿದರು. ಅಮೇರಿಕಾದ ಡಲಾಸದಲ್ಲಿ ದಿ ೩೧-೦೮-೨೦೧೮ ರಿಂದ ೧೦ ದಿನಗಳ ಕಾಲ ನಡೆದ "ಅಕ್ಕ ವಿಶ್ವ ಕನ್ನಡ" ಸಮ್ಮೇಳನದಲ್ಲಿ ಶ್ರೀಯುತರು ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಚ್.ಡಿ.ಕುಮಾರಸ್ವಾಮಿಯವರೊಂದಿಗೆ ಭಾಗವಹಿಸಿ ಅಲ್ಲಿನ ಕನ್ನಡಿಗರನ್ನು ಬೆಂಬಲಿಸಿದ್ದಾರೆ.

ಅದೇ ರೀತಿ ಮತ್ತೊಬ್ಬ ಶಿಕ್ಷಣ ಪ್ರೇಮಿ ಡಾ.ಸಿದ್ದು ಪಿ. ಅಲಗೂರುರವರು ತೇರದಾಳದವರಾಗಿದ್ದು, ನಾಡಿನ ಶಿಕ್ಷಣ ತಜ್ಞರೆಂದು ಖ್ಯಾತರಾಗಿದ್ದಾರೆ. ತೇರದಾಳದ ಹೆಮ್ಮೆಯ ಪುತ್ರ ಮತ್ತು ಇಡೀ ಜಿಲ್ಲೆಯಲ್ಲಿಯೇ ಪ್ರಪ್ರಥಮಬಾರಿಗೆ ಉನ್ನತ ಪದವಿ ಪಡೆದ ಹೆಗ್ಗಳಿಕೆಗೆ ಪಾತ್ರವಾದ ಇವರು ಶಿಕ್ಷಣ ಕ್ಷೇತ್ರದಲ್ಲೇ ಮಾದರಿ ವ್ಯಕ್ತಿಯೆಂದು ಹೆಸರಾಗಿದ್ದಾರೆ. ಇವರು ಮೈಸೂರು ವಿಶ್ವವಿದ್ಯಾಲಯದಲ್ಲಿ ಎಂಜಿನೀಯರ್ ಪದವಿ, ಅಲಹಾಬಾದ್ ಮೋತಿಲಾಲ್ ನೆಹರೂ ರಾಷ್ಟ್ರೀಯ ತಾಂತ್ರಿಕ ಶಿಕ್ಷಣ ಸಂಸ್ಥೆಯಿಂದ ಸ್ನಾತಕೋತ್ತರ ಪದವಿಯನ್ನು ಹಾಗೂ ಕಲ್ಬುರ್ಗಿ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ತರುವಾಯ ಧಾರವಾಡದ ಎಸ್.ಡಿ.ಎಂ ಇಂಜನೀಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಪಕರಾಗಿ, ಬೆಳಗಾವಿ ರಾಣಿಚೆನ್ನಮ್ಮ ವಿಶ್ವವಿದ್ಯಾಲಯದಲ್ಲಿ ಗಣಕಯಂತ್ರ ವಿಭಾಗದ ಮುಖ್ಯಸ್ಥರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುವುದರೊಂದಿಗೆ ಅಲ್ಲಿನ ಆಡಳಿತಾಂಗದ ಕುಲಸಚಿವರಾಗಿ ಸೇವೆ ಸಲ್ಲಿಸಿರುವ ಇವರು ಪ್ರಸಕ್ತ ಬಳ್ಳಾರಿಯ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಆಯ್ಕೆಯಾಗಿ ದಿನಾಂಕ ೨-೮-೨೦೧೯ರಿಂದ ನಿಸ್ವಾರ್ಥ ಸೇವೆಯಲ್ಲಿ ತೊಡಗಿದ್ದಾರೆ. ಅಲ್ಲದೇ ಶ್ರೀ ರಮೇಶ ದುಂಡಪ್ಪ ಕುಂಬಾರ, ಶ್ರೀ ಬಾಳೇಶ ರಾಯಪ್ಪ ಕುಂಬಾರ ಮತ್ತು ರಾಯಪ್ಪ ಸಂಗಪ್ಪ ಕುಂಬಾರ ಡಾ. ವಿಜಯಕುಮಾರ ಎಸ್ ಶೇಕದಾರ, ಡಾ.ತಿಪ್ಪೇಸ್ವಾಮಿ, ಪ್ರಭಾಕರ ಶಂಭುಲಿಂಗ ಬಾಗಿ, ಸಂಜಯ ವಿದ್ಯಾವಂತ ಶಿವಪೂಜಿ, ಕೆ ಬಿ ಬನ್ನಿ, ಸುರೇಶ ಹಟ್ಟಿ, ಸುಂದರೇಶ್ ಹೊಳೆನ್ನವರ್, ಸಿದ್ದು ಆಲಗೂರ, ಇವರ ಮಾರ್ಗದರ್ಶನ ಮತ್ತು ನೇತೃತ್ವದಲ್ಲಿ ತೇರದಾಳದ "ಜ್ಞಾನದೀಪ ಸಂಸ್ಥೆ"ಯವರು ಇಲ್ಲಿ ಬಡ ಮಕ್ಕಳಿಗೆ ಗಣಕಯಂತ್ರ ತರಬೇತಿ, ಉಚಿತ ಶಿಕ್ಷಣ ಮತ್ತು ಸ್ಪರ್ಧಾತ್ಮಕ ಪರೀಕ್ಷಾ ತರಬೇತಿಯನ್ನು ಕಳೆದ ಮೂರು ವರ್ಷಗಳಿಂದ ಉಚಿತವಾಗಿ ನಡೆಸಿಕೊಂಡು ಬರುತ್ತಿರುವುದು ಶ್ಲಾಘನೀಯವೆ ಸರಿ. ಈ ಭಾಗದ ಶಾಲಾ/ಕಾಲೇಜುಗಳ ಮಾಹಿತಿ ಈ ಮುಂದಿನಂತಿದೆ.

## ಪ್ರಾಥಮಿಕ ಹಾಗೂ ಹೈಸ್ಕೂಲುಗಳ ಶಾಲೆಗಳ ವಿವರ
## (೧ನೇ ತರಗತಿಯಿಂದ ೧೦ನೇ ತರಗತಿಯ ವರೆಗೆ ಓದುತ್ತಿರುವ ಮಕ್ಕಳ ಸಂಖ್ಯೆ)

| ಕ್ರ.ಸಂ. | ಸ್ಥಳ | ವಿಭಾಗ | ಸರ್ಕಾರಿ/ ಅನುದಾನಿತ/ರಹಿತ | ಗಂಡು | ಹೆಣ್ಣು | ಒಟ್ಟು |
|---|---|---|---|---|---|---|
| ೧ | ಬನಹಟ್ಟಿ | ಪೂರ್ವ | ಸರ್ಕಾರಿ | ೧೧೭೭ | ೧೨೨೨ | ೨೩೯೯ |
| ೨ | ಬನಹಟ್ಟಿ | ಪೂರ್ವ | ಅನುದಾನಿತ | ೪೧೦ | ೩೩೪ | ೭೪೪ |
| ೩ | ಬನಹಟ್ಟಿ | ಪೂರ್ವ | ಅನುದಾನರಹಿತ | ೬೧೮ | ೩೨೮ | ೯೪೫ |
| ೪ | ಬನಹಟ್ಟಿ | ಪಶ್ಚಿಮ | ಸರ್ಕಾರಿ | ೯೯೯ | ೧೦೭೬ | ೨೦೭೫ |
| ೫ | ಬನಹಟ್ಟಿ | ಪಶ್ಚಿಮ | ಅನುದಾನಿತ | ೭೮೭ | ೭೨೯ | ೧೫೧೬ |
| ೬ | ಬನಹಟ್ಟಿ | ಪಶ್ಚಿಮ | ಅನುದಾನರಹಿತ | ೫೨೧ | ೩೦೧ | ೮೨೨ |
| ೭ | ಚಿಮ್ಮಡ | ವಿಭಾಗ | ಸರ್ಕಾರಿ | ೫೨೧ | ೬೯೪ | ೧೨೧೫ |
| ೮ | ಚಿಮ್ಮಡ | ವಿಭಾಗ | ಅನುದಾನಿತ | ೩೧೦ | ೨೧೪ | ೫೨೪ |
| ೯ | ಚಿಮ್ಮಡ | ವಿಭಾಗ | ಅನುದಾನರಹಿತ | ೯೦ | ೬೪ | ೧೫೪ |
| ೧೦ | ಗೋಲಬಾಂವಿ | ಗೋಲಬಾಂವಿ/ಕಾಲತಿಪ್ಪಿ/ ಸಸಾಲಟ್ಟಿ | ಸರ್ಕಾರಿ | ೫೮೮ | ೬೫೧ | ೧೨೩೯ |
| ೧೧ | ಗೋಲಬಾಂವಿ | ಗೋಲಬಾಂವಿ/ಕಾಲತಿಪ್ಪಿ/ ಸಸಾಲಟ್ಟಿ | ಅನುದಾನಿತ | ೪೩೬ | ೩೨೦ | ೭೫೬ |
| ೧೨ | ಗೋಲಬಾಂವಿ | ಗೋಲಬಾಂವಿ/ಕಾಲತಿಪ್ಪಿ/ ಸಸಾಲಟ್ಟಿ | ಅನುದಾನರಹಿತ | ೧೩೨ | ೪೯ | ೧೮೧ |
| ೧೩ | ಹಿಪ್ಪರಗಿ | ಕುಲಹಳ್ಳಿ/ಹಿಪ್ಪರಗಿ | ಸರ್ಕಾರಿ | ೬೩೯ | ೬೪೮ | ೧೨೮೭ |
| ೧೫ | ಹಿಪ್ಪರಗಿ | ಕುಲಹಳ್ಳಿ/ಹಿಪ್ಪರಗಿ | ಅನುದಾನ ರಹಿತ | ೬೨೭ | ೪೪೧ | ೧೦೬ |
| ೧೬ | ರಬಕವಿ | ರಬಕವಿ | ಸರ್ಕಾರಿ | ೭೯೪ | ೭೭೩ | ೧೫೬೭ |
| ೧೮ | ರಬಕವಿ | ರಬಕವಿ | ಅನುದಾನ ರಹಿತ | ೬೬೭ | ೪೫೯ | ೧೧೨೬ |
| ೧೯ | ರಾಂಪುರ. | ರಾಂಪುರ/ಜಗದಾಳ/ ಹೊಸುರ ತೋಟ/ಯಲ್ಲಟ್ಟಿ ತೋಟ | ಸರ್ಕಾರಿ | ೧೧೯೫ | ೧೨೧೪ | ೨೪೦೯ |
| ೨೦ | ರಾಂಪುರ | ರಾಂಪುರ/ಜಗದಾಳ/ ಹೊಸುರ ತೋಟ/ಯಲ್ಲಟ್ಟಿ ತೋಟ | ಅನುದಾನಿತ | ೪೬೮ | ೩೭೯ | ೮೪೭ |
| ೨೧ | ರಾಂಪುರ | ರಾಂಪುರ/ಜಗದಾಳ/ ಹೊಸುರ ತೋಟ/ಯಲ್ಲಟ್ಟಿ ತೋಟ | ಅನುದಾನ ರಹಿತ | ೨೧೨೦ | ೧೧೫೦ | ೩೨೭೦ |
| ೨೨ | ತೇರದಾಳ ಪೂರ್ವ | ತೇರದಾಳ/ಹಳಿಗಂಳಿ/ತಮದಡ್ಡಿ | ಸರ್ಕಾರಿ | ೩೩೯ | ೪೪೭ | ೭೮೬ |
| ೨೩ | ತೇರದಾಳ ಪೂರ್ವ | ತೇರದಾಳ/ಹಳಿಗಂಳಿ/ತಮದಡ್ಡಿ | ಅನುದಾಸಿತ | ೯೦೬ | ೬೫೭ | ೧೫೬೩ |
| ೨೪ | ತೇರದಾಳ ಪೂರ್ವ | ತೇರದಾಳ/ಹಳಿಗಂಳಿ/ ತಮದಡ್ಡಿ | ಅನುದಾನ ರಹಿತ | ೭೬೦ | ೩೨೯ | ೧೦೮೯ |
| ೨೫ | ತೇರದಾಳ ಪಶ್ಚಿಮ | ತೇರದಾಳ | ಸರ್ಕಾರಿ | ೧೫೧ | ೧೨೯ | ೨೮೦ |
| ೨೬ | ತೇರದಾಳ ಪಶ್ಚಿಮ | ತೇರದಾಳ | ಅನುದಾನಿತ | ೪೦೧ | ೩೭೫ | ೭೭೬ |
| ೨೭ | ತೇರದಾಳ ಪಶ್ಚಿಮ | ತೇರದಾಳ | ಅನದಾನರಹಿತ | ೮೭೩ | ೫೩೮ | ೧೪೧೧ |
| ೨೮ | ರಬಕವಿ ಉರ್ದು | ಚಿಮ್ಮಡ,ತೇರದಾಳ, ಬನಹಟ್ಟಿ,ಹೋಸುರು, ಆಸಂಗಿ, ರವಕವಿ,ಹಳಿಂಗಳಿ, ಹನಗಂಡಿ, ರಾಮಪೂರ | ಸರ್ಕಾರಿ | ೭೧೬ | ೧೫೬೯ | ೨೨೮೫ |
| ೨೯ | ರಬಕವಿ ಉರ್ದು | ರಬಕವಿ, ಬನಹಟ್ಟಿ, ತೇರದಾಳ | ಅನುದಾನರಹಿತ | ೧೬೫ | ೨೬೧ | ೪೨೬ |

ಇಲ್ಲಿಗೆ ಸಮೀಪದ ಬೆಳಗಾವಿ, ಬಿಜಾಪುರಗಳಲ್ಲಿ ವಿಶ್ವವಿದ್ಯಾಲಯ ಮಟ್ಟದ ತಾಂತ್ರಿಕ, ವೈದ್ಯಕೀಯ ಹಾಗೂ ಎಂ.ಎ, ಎಂ.ಎಸ್ಸಿ, ಎಂ.ಕಾಂ., ಎಂ.ಬಿ.ಎ ಮತ್ತು ಇತರೆ ಸ್ನಾತಕೋತ್ತರ ಶಿಕ್ಷಣ ಪಡೆಯಲು ಅವಕಾಶಗಳಿವೆ. ಇವುಗಳಲ್ಲಿಯೇ ಎಂ.ಫಿಲ್, ಪಿ.ಎಚ್.ಡಿ, ಅಧ್ಯಯನ ಮಾಡಲು ಅವಕಾಶಗಳಿವೆ. ಅಲ್ಲದೇ ಹಾರೂಗೇರಿಯಲ್ಲಿ ಶ್ರೀ.ಬಿ.ಆರ್.ದರೂರ ಸಂಶೋಧನಾ ಕನ್ನಡ ವಿಶ್ವವಿದ್ಯಾಲಯದ ವಿಸ್ತರಣಾ ಕೇಂದ್ರವೊಂದಿದ್ದು, ಅದು ಉನ್ನತ ಶಿಕ್ಷಣ ಪಡೆಯುವವರ ಪಾಲಿಗೆ ಒಂದು ವರದಾನವಾಗಿದೆ. ಇದರ ನಿರ್ದೇಶಕರಾದ ಡಾ.ವ್ಹಿ.ಎಸ್. ಮಾಳಿ ಇವರು ಈ ಭಾಗದಲ್ಲಿ ವಿಶೇಷ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೆ ಆದ ಕೊಡಿಗೆಯನ್ನು ನಿಡಿದ್ದಾರೆ. ಹಾಗೂ ಉನ್ನತ ಶಿಕ್ಷಣವನ್ನು ಪಡೆಯಲು ಸ್ಫೂರ್ತಿ, ಎಲ್ಲಾ ರೀತಿಯ ಮಾರ್ಗದರ್ಶವನ್ನು ನಿಡ್ಡುತ್ತಿದ್ದಾರೆ. ಒಟ್ಟಾರೆ ಈ ಭಾಗದಲ್ಲಿ ಶೇ.೬೭% ರಷ್ಟು ಶೈಕ್ಷಣಿಕ ಗುರಿ ಸಾಧಿಸಲಾಗಿದ್ದು, ಮುಂಬರಲಿರುವ ಕೆಲವೇ ದಿನಗಳಲ್ಲಿ ಈ ಭಾಗ ಸಂಪೂರ್ಣ ಸಾಕ್ಷರರ ನಾಡಾಗುವುದರಲ್ಲಿ ಯಾವುದೇ ಸಂಶಯಗಳಿಲ್ಲ.

**ಕೊನೆ ಟಿಪ್ಪಣಿಗಳು**

೧. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಪು. ಸಂ. ೪೪೮–೪೫೨.

೨. ಅದೇ.,

೩. ಅದೇ.,

೪. ತಿಪ್ಪೇಸ್ವಾಮಿ ಎಚ್., ೨೦೧೪, ಆದಿಮ, ಪು. ಸಂ. ೧೫೨–೫೭

೫. ಅದೇ.,

೬. ಅದೇ.,

೭. ಫಾಲಾಕ್ಷ, ೨೦೦೦, ಸಮಗ್ರ ಭಾರತದ ಇತಿಹಾಸ, ಭಾಗ–೩, ಪು. ಸಂ. ೨೯೨

೮. ತಿಪ್ಪೇಸ್ವಾಮಿ ಎಚ್., ೨೦೧೪, ತಳಮುಖಿ, ಪು. ಸಂ. ೧೨೯

೯. ಅದೇ.,

೧೦. ಅದೇ.,

೧೧. ಬಾಗಲಕೋಟೆ ಜಿಲ್ಲಾ ಮಾಹಿತಿ ದಾಖಲೆ. ಪು. ಸಂ. ೧೨

೧೨. ಶ್ರೀ.ಹರೀಶ್ ಕುಲಕರ್ಣಿ (೪೫) ತೇರದಾಳ ಇವರು ನೀಡಿದ ಮಾಹಿತಿ

೧೩. ಶ್ರೀ ಗುರುಲಿಂಗಪ್ಪ ಪಟ್ಟಣಶೆಟ್ಟಿ (೬೦) ತೇರದಾಳ ಇವರು ನೀಡಿದ ಮಾಹಿತಿ

೧೪. ಬಾಗಲಕೋಟೆ ಜಿಲ್ಲಾ ಸೂಚಿ, ೨೦೧೧, ಪು. ಸಂ. ೧೯

೧೫. ಅಪ್ಪಣ್ಣ ಹಂಜೆ, ೨೦೧೨, ಜೈನರ ವಾಸ್ತುಶಿಲ್ಪ, ಪು. ಸಂ. ೩೯–೪೬

೧೬. ತಿಪ್ಪೇಸ್ವಾಮಿ ಎಚ್., ೨೦೧೭, ಜೈನಕಾಶಿ, ಪು. ಸಂ. ೪೮

೧೭. ಕುಂಬಾರ ರಮೇಶ, ೨೦೧೨, ತೇರದಾಳ ಪರಿಸರದ ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ಪ್ರಬಂಧ) ಪು. ಸಂ. ೫೩

೧೮. ಮಹಾಂತಪ್ಪ ಮಠಪತಿ (೪೬), ತೇರದಾಳ ಇವರು ನೀಡಿದ ಮಾಹಿತಿ

೧೯. ಕಲ್ಲಪ್ಪ ಮಲಕಪ್ಪ ಕುಂಬಾರ (೭೮), ತೇರದಾಳ ಇವರು ನೀಡಿದ ಮಾಹಿತಿ

೨೦. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೦, ಮ್ಯಾಸಬೇಡರು, ಪು. ಸಂ. ೨೭

೨೧. ಆನಂದ ಹೂಗಾರ್, (೪೭) ಉಪನ್ಯಾಸಕರು, ರಬಕವಿ ಇವರು ನೀಡಿದ ಮಾಹಿತಿ

೨೨. ಪರಪ್ಪ ಮಾದರ (೭೯), ರಬಕವಿ ಇವರು ನೀಡಿದ ಮಾಹಿತಿ

೨೩. ವಿಜಯ ವಾಜಂತ್ರಿ (೬೮), ತೇರದಾಳ ಇವರು ನೀಡಿದ ಮಾಹಿತಿ

೨೪. ಸೋಹನ್‌ಪಾಲ್ ಸುಮನಾಕ್ಷರ್(ಮೂ), ಡಾ.ಪ್ರಮೀಳಾ ಮಾಧವ್(ಅನು), ೨೦೧೦, ಆದಿಮಜಾತಿ ಚಮರ್ ಇತಿಹಾಸ ಧರ್ಮ ಮತ್ತು ಸಂಸ್ಕೃತಿ, ಪು. ಸಂ. ೩೧–೭೧

೨೫. ಪ್ರಭುಲಿಂಗ ಹಚಡದ್(೪೮), ತೇರದಾಳ ಇವರು ನೀಡಿದ ಮಾಹಿತಿ

೨೬. ರಮೇಶ್ ಹರಿಜನ (೭೧), ಬನಹಟ್ಟಿ ಇವರು ನೀಡಿದ ಮಾಹಿತಿ

೨೭. ರಾಜು ಬುರಡ(೫೭) ಶಿಕ್ಷಕರು, ಹನಗಂಡಿ ಇವರು ನೀಡಿದ ಮಾಹಿತಿ

೨೮. ಇಬ್ರಾಹಿಂ ಸುತಾರ (೭೬), ಪದ್ಮಭೂಷಣ ಪ್ರಶಸ್ತಿ ವಿಜೇತರು, ಮಹಾಲಿಂಗಪುರ ಇವರು ನೀಡಿದ ಮಾಹಿತಿ

೨೯. ತಿಪ್ಪೇಸ್ವಾಮಿ.ಎಚ್., ಪೂರ್ವೋಕ್ತ, ಪು. ಸಂ. ೫೭

೩೦. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಪೂರ್ವೋಕ್ತ.

೩೧. ನಾಯಕ ಹಾ.ಮ., ೧೯೭೬, ಕರ್ನಾಟಕ ವಿಷಯ ವಿಶ್ವಕೋಶ. ಪು. ಸಂ. ೧೭೬

೩೨. ಅದೇ.,

೩೩. ಅದೇ.,

೩೪. ಅದೇ.,

೩೫. ನಾಯಕ ಹಾ.ಮ., ಪೂರ್ವೊಕ್ತ., ಪು. ಸಂ. ೨೨

೩೬. ಅಸ್ಕಿ ಎನ್.ವಿ., ಜಮಖಂಡಿ ಇವರು ನೀಡಿದ ಮಾಹಿತಿ

೩೭. ವೆಂಕಟೇಶ್ವರ ಮಹಿಮೆ, ೨೦೧೭, ಪು. ಸಂ. ೩೨

೩೮. ರಂಗಪ್ಪ., ೨೦೧೬, ಕರ್ನಾಟಕದ ಹಬ್ಬಗಳು, ಪು. ಸಂ. ೭೯

೩೯. ಅದೇ.,

೪೦. ಈರಣ್ಣ ಲಟ್ಟಿ., (೩೫) ಶಿಕ್ಷಕರು, ಕಾಲತಿಪ್ಪಿ ಇವರು ನೀಡಿದ ಮಾಹಿತಿ

೪೧. ಬುದ್ದಯ್ಯ ಪುರಾಣಿಕ., ೧೯೨೬, ಅಲ್ಲಮಪ್ರಭು ಚರಿತ್ರೆ, ಪು. ಸಂ. ೨೭

೪೨. ಪ್ರಜಾವಾಣಿ ದಿನಪತ್ರಿಕೆಯ ವರದಿ ದಿನಾಂಕ ೮-೧೦-೧೬ ಪು. ಸಂ. ೨

೪೩. ತೇರದಾಳ್ ಎನ್.ಎಲ್., (೫೮) ಪ್ರಾಚಾರ್ಯರು, ಮುಧೋಳ ಇವರು ನೀಡಿದ ಮಾಹಿತಿ

೪೪. ಸುರೇಶ ಹಟ್ಟಿ., ರಾಂಪುರ (೫೩), ಇವರು ನೀಡಿದ ಮಾಹಿತಿ

೪೫. ಮಹಮದ್ ಸೇತ್ ಅಬ್ದುಲ್ ಖಾಜಿ., (೭೬), ರಬಕವಿ-ಬನಹಟ್ಟಿ, ಇವರು ನೀಡಿದ ಮಾಹಿತಿ

೪೬. ವಾಸುದೇವ ವೆಂಕಟೇಶ ಅರುಟಗಿ., (೬೭), ಹನಗಂಡಿ ಇವರು ನೀಡಿದ ಮಾಹಿತಿ

೪೭. ಯಾಕೂಬ ಅಲ್ಲಾಸ್., (೪೫), ಹಳಂಗಳಿ ಇವರು ನೀಡಿದ ಮಾಹಿತಿ

೪೮. ಬೋರಲಿಂಗಯ್ಯ ಹಿ.ಚಿ., ೧೯೯೭, ಕರ್ನಾಟಕ ಜಾನಪದ ಕಲೆಗಳ ಕೋಶ, ಪು. ಸಂ. ೧೨೦

೪೯. ಅದೇ.,

೫೦. ಶ್ರೀಶೈಲ ಪಟ್ಟಣಶೆಟ್ಟಿ., (೬೯) ಮತ್ತು ಮಲ್ಲಪ್ಪ ಗಣಿ., (೭೦) ನವಲಗಿ ಇವರು ಮಾಡಿದ ಮಾಹಿತಿ

೫೧. ಶ್ರೀ ರಾಯಪ್ಪ ಸಂಗಪ್ಪ ಕುಂಬಾರ., (೬೮), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ವಿಜೇತರು, ತೇರದಾಳ ಇವರು ನೀಡಿದ ಮಾಹಿತಿ

೫೨. ಮಟೋಳಿ., ೨೦೧೩, ಕರ್ನಾಟಕದ ಕುಸ್ತಿಪಟುಗಳು, ಪು. ಸಂ.೫೬

೫೩. ಅಲ್ತೇಕರ ಎ.ಎಸ್., ಎಜುಕೇಷನ್ ಇನ್ ಎನ್ಸಿಯೆಂಟ್ ಇಂಡಿಯಾ, ಪು. ಸಂ. ೩೧೨

೫೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ಸಂ. ೨೦೭

೫೫. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ಸಂ. ೨೦೮

೫೬. ಪಾಟೀಲ ಶಿ.ಬಾ., ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪು. ಸಂ. ೧೧೧.
ಅದೇ.,

೫೭. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ಸಂ. ೨೦೯

೫೮. ಕುಂಬಾರ ರಮೇಶ., ೨೦೧೨, ತೇರದಾಳ ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್
ಪ್ರಬಂಧ, ಪು. ಸಂ. ೧೭೦

೫೯. ಅದೇ.,

೬೦. ಅದೇ.,

೬೧. ಕೆ.ಆಯ್., ಸಂ. ೬, ಪು. ಸಂ. ೩೧೩

೬೨. ಅದೇ., ಶಾ.ಸಂ.೭೩, ಪು. ಸಂ. ೨೦೧-೨೧೫

೬೩. ಬಸವರಾಜ ಅಮ್ಮಣಗಿ., ಶಾಸನದಲ್ಲಿ ರಾಯಬಾಗ, ವಾರ್ಷಿಕ ಸಂಚಿಕೆ, ಪು. ಸಂ. ೮೨-೮೩. ಮತ್ತು ಎ.ಆರ್.ಎಸ್.ಆಯ್.ಇ. ೧೯೬೧-೬೨, ಪು. ಸಂ. ೯೭

೬೪. ಮರಿಯಪ್ಪಭಟ್ಟ ಎಂ. (ಸಂ), ರಾಜಾದಿತ್ಯನ ವ್ಯವಹಾರ ಗಣಿತ (೧೯೫೫), ಪು. ಸಂ. ೨

೬೫. ಅದೇ.,

# ಅಧ್ಯಾಯ–೪
# ಆರ್ಥಿಕ ಜನಜೀವನ

**ಅಧ್ಯಾಯ ೪ : ಆರ್ಥಿಕ ಜನಜೀವನ**


೪.೧. ಕೃಷಿ–ನೀರಾವರಿ ವ್ಯವಸ್ಥೆ

೪.೨. ಪಶುಪಾಲನೆ ವ್ಯವಸ್ಥೆ

೪.೩. ಇತರೆ ಉಪ ವೃತ್ತಿಗಳು ಮತ್ತು ಆಯಗಾರ ಪದ್ಧತಿ

೪.೪. ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು

೪.೫. ತೆರಿಗೆ ಮತ್ತು ಕಂದಾಯ ವ್ಯವಸ್ಥೆ

ಒಂದು ದೇಶದ ಪ್ರಗತಿಯು ಅಲ್ಲಿನ ಅರ್ಥವ್ಯವಸ್ಥೆಯನ್ನು ಅವಲಂಭಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಮಾನವನ ಪ್ರಗತಿಯು ಯಾವಾಗಲೂ ಅವನು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳ ಮೇಲೆ ಆಧಾರಿತವಾಗಿರುತ್ತದೆ. ಅಂದರೆ ಆರ್ಥಿಕ ಚಟುವಟಿಕೆಯು ಯಾವಾಗಲೂ ಸಮಾಜದ ಅಭಿವೃದ್ಧಿಯ ನಿಜವಾದ ಅಳತೆಗೋಲಾಗಿದೆ. ಒಂದು ಪ್ರದೇಶದ ವಸ್ತುಗಳ ಮತ್ತು ಸೇವೆಗಳ ಉತ್ಪಾದನೆ, ವಿತರಣೆ, ವಿನಿಮಯ ಮತ್ತು ಬಳಕೆಯ ಅನುಭೋಗಗಳನ್ನು ಸರಳವಾಗಿ ಆರ್ಥಿಕ ಚಟುವಟಿಕೆಗಳೆಂದು ಕರೆಯುತ್ತಾರೆ. ಯಾವುದೇ ಪ್ರದೇಶ ಆರ್ಥಿಕವಾಗಿ ಸಂಪದ್ಭರಿತವಾದಾಗ ಮಾತ್ರ ಅದು ಸಮೃದ್ಧವಾಗಿ ಹಾಗೂ ತನ್ನ ಸ್ವಾಭಿಮಾನದ ಬದುಕನ್ನು ನಡೆಸಲು ಸಾಧ್ಯವಾಗುತ್ತದೆ. ಅರ್ಥವ್ಯವಸ್ಥೆಯಲ್ಲಿ ಪ್ರಮುಖವಾಗಿ ಅಲ್ಲಿರುವ ನೈಸರ್ಗಿಕ ಸಂಪನ್ಮೂಲಗಳ ಹಂಚಿಕೆಯ ಜೊತೆಗೆ ಅವುಗಳನ್ನು ಸರಿಯಾಗಿ ಸದುಪಯೋಗ ಪಡಿಸಿಕೊಳ್ಳುವಲ್ಲಿ ಅಲ್ಲಿರುವ ಜನರ ಸಂಘಟನಾ ಮನೋಭಾವ ಮತ್ತು ಪರಿಶ್ರಮದ ದುಡಿಮೆಯು ಸಹ ಅತ್ಯಂತ ಪ್ರಮುಖವಾದದ್ದು. ಆರ್ಥಿಕ ಅಭಿವೃದ್ಧಿಯು ಆ ಪ್ರದೇಶದ ನೈಸರ್ಗಿಕ ಸಂಪನ್ಮೂಲಗಳ ಪ್ರಮಾಣ, ಅವುಗಳ ಗುಣಮಟ್ಟ ಹಾಗೂ ಅಲ್ಲಿರುವ ಜನರು ಅವುಗಳನ್ನು ಬಳಸಿಕೊಳ್ಳುವ ಸಾಮರ್ಥ್ಯಗಳಿಗೆ ಅನುಗುಣವಾಗಿ ನಿರ್ಧರಿತವಾಗುತ್ತದೆ.

ಇಲ್ಲಿ ಚಾರಿತ್ರಿಕ ಕಾಲಘಟ್ಟದಲ್ಲಿ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಸೌದತ್ತಿಯ ರಟ್ಟರು, ಶಿಲಾಹಾರರು, ದೇವಗಿರಿಯ ಯಾದವರು ಮತ್ತು ಇತರೆ ಅರಸು ಮನೆತನಗಳು ಐತಿಹಾಸಿಕ ತೇರದಾಳವನ್ನು ಕಂಪಣವಾಗಿ (ಆಡಳಿತ ಒಂದು ವಿಭಾಗವನ್ನಾಗಿ) ಮಾಡಿಕೊಂಡು ಅಂದಿನ ವ್ಯವಸ್ಥೆಗನುಗುಣವಾಗಿ ಅರ್ಥವ್ಯವಸ್ಥೆಯನ್ನೇ ಮುಂದುವರಿಸಿಕೊಂಡು ಬಂದರು. ಅಂದು ವ್ಯವಸಾಯ ಜನರ ಪ್ರಮುಖವಾದ ವೃತ್ತಿಯಾಗಿದ್ದು, ನೇಕಾರಿಕೆ, ಕಮ್ಮಾರಿಕೆ, ಕುಂಬಾರಿಕೆ, ಪಶುಪಾಲನೆ, ವಾಣಿಜ್ಯ-ವ್ಯಾಪಾರ, ವರ್ತಕ ಶ್ರೇಣಿ (ಸಂಘಗಳು) ಮೊದಲಾದವು ಅಂದಿನ ಉಪ ವೃತ್ತಿಗಳಾಗಿದ್ದವು. ಅವುಗಳಿಂದ ಬರುವ ತೆರಿಗೆಗಳು ರಾಜ್ಯದ ಆದಾಯದ ಮೂಲಗಳಾಗಿದ್ದವು. ತೇರದಾಳ ಮತ್ತು ಅದರ ಸುತ್ತಲಿನ ಗ್ರಾಮಗಳಲ್ಲಿ ದೊರೆತ ಹಲವಾರು ಶಾಸನಗಳು ಅಂದಿನ ಆರ್ಥಿಕ ವ್ಯವಸ್ಥೆಯ ಮೇಲೆ ಬೆಳಕನ್ನು ಚೆಲ್ಲುತ್ತವೆ. ಇವುಗಳನ್ನು ಆಧರಿಸಿ ಐತಿಹಾಸಿಕ ತೇರದಾಳ ಪರಿಸರದ ಅರ್ಥವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

## ೪.೧ ಕೃಷಿ-ನೀರಾವರಿ ವ್ಯವಸ್ಥೆ

ಭಾರತವು ಮೂಲತಃ ಕೃಷಿ ಪ್ರಧಾನವಾದ ದೇಶ ಹಾಗೂ ವ್ಯವಸಾಯವು ಭಾರತದ ಅರ್ಥವ್ಯವಸ್ಥೆಯ ಬೆನ್ನೆಲುಬಾಗಿದೆ. ಇತಿಹಾಸ ಪೂರ್ವ ಕಾಲದಲ್ಲಿ ಕೃಷಿಯು ಈ ಪ್ರದೇಶದ ಜನರ ಪ್ರಮುಖವಾದ ಉದ್ಯೋಗವಾಗಿತ್ತು. ಬೇಟೆಗಾರಿಕೆ ಮೂಲಕ ಪ್ರಾಣಿ ಪಕ್ಷಿಗಳನ್ನು ಕೊಂದು ಅವುಗಳ ಮಾಂಸವನ್ನು ತಿನ್ನುತ್ತ ವನ್ಯಜೀವಿಯಾಗಿ, ಗುಹಾವಾಸಿಯಾಗಿ ಬದುಕುತ್ತಿದ್ದ ಆದಿಮಾನವ ಕಾಲಾನುಕ್ರಮದಲ್ಲಿ ನಾಗರಿಕತೆಯತ್ತ ಮುಖ ಮಾಡಿದಾಗ ಅವನ ಬದುಕಿನ ಶೈಲಿಯಲ್ಲಿ ಮಹತ್ತರ ಬದಲಾವಣೆಗಳಾದವು. ಅವುಗಳಲ್ಲಿ ಕೃಷಿ ಮತ್ತು ನೀರಾವರಿ ವ್ಯವಸ್ಥೆಯ ಆವಿಷ್ಕಾರಗಳು ಅತಿ ಮುಖ್ಯವಾಗಿವೆ. ಪ್ರಾಯಶಃ ಆಗಾಗ್ಗೆ ತಲೆದೋರುತ್ತಿದ್ದ ಅನಾವೃಷ್ಟಿಯಿಂದ ಕಂಗಾಲಾಗುತ್ತಿದ್ದ ಅವನು ನಿಧಾನವಾಗಿ ಕಂಡುಕೊಂಡ ನೀರಿನ ನಿರಂತರ ಪೂರೈಕೆಯ ವ್ಯವಸ್ಥೆ, ಬೆಳೆಗಳನ್ನು ಕಾಪಾಡಿಕೊಳ್ಳಲು ಸಾಧ್ಯವಾಯಿತಲ್ಲದೆ, ಅದರ ಉತ್ಪನ್ನಗಳನ್ನು ನಿಶ್ಚಿತವಾಗಿ

ಪಡೆಯಬಹುದೆಂಬ ಭರವಸೆಯನ್ನು ಅವನಲ್ಲಿ ಹುಟ್ಟಿಸಿತು. ಈ ಸುರಕ್ಷಿತತೆಯ ಭಾವನೆ ಮನುಷ್ಯನ ಆತ್ಮವಿಶ್ವಾಸವನ್ನು ಹೆಚ್ಚಿಸಿರಬೇಕು. ಇದೇ ಕಾರಣಕ್ಕಾಗಿಯೇ ಜಗತ್ತಿನಲ್ಲೆಡೆ ಜಲ ಸಂಗ್ರಹಣೆಗೆ ಆದ್ಯತೆ ನೀಡಿ ಕೆರೆ, ಕುಂಟೆ, ಕಟ್ಟೆ, ಕಾಲುವೆ, ಹೊಂಡ, ಬಾವಿ ಮುಂತಾದವುಗಳನ್ನು ಬಹು ಹಿಂದಿನಿಂದ ನಿರ್ಮಿಸಿ ಕೊಂಡಿರುವುದು ಕಾಣಬರುತ್ತದೆ. ಅದೇ ರೀತಿ ಪ್ರಾಚೀನ ಕಾಲದಿಂದಲೂ ಸಹ ತೇರದಾಳ ಪ್ರದೇಶದಲ್ಲಿಯೂ ವ್ಯವಸ್ಥಿತವಾದ ಹಾಗೂ ಗಣನೀಯವಾದ ನೀರಾವರಿ ವ್ಯವಸ್ಥೆ ಇದ್ದುದ್ದನ್ನು ಗುರುತಿಸಬಹುದು.

ಕೃಷಿಯ ಉಗಮ ಮತ್ತು ವಿಕಾಸ ಅತ್ಯಂತ ಪ್ರಾಚೀನವಾದದ್ದು. ಸುಮಾರು ೭೦೦೦ ವರ್ಷಗಳ ಹಿಂದೆ ಮಾನವನು ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಒಂದು ಸ್ಥಳದಲ್ಲಿ ಸ್ಥಿರವಾಗಿ ನೆಲೆ ನಿಂತು ವ್ಯವಸ್ಥಿತ ಕೃಷಿಯನ್ನು ಪ್ರಾರಂಭಿಸಿದನು. ಈ ಕಾಲಘಟ್ಟವನ್ನು ಮಾನವ ಇತಿಹಾಸದಲ್ಲಿ ನವಶಿಲಾಯುಗವೆಂದು ಗುರುತಿಸಲ್ಪಟ್ಟಿದೆ. ಇದನ್ನು ಕ್ರಾಂತಿಕಾರಕ ಕಾಲಘಟ್ಟ ಎಂದೂ ಸಹ ಕರೆಯಲಾಗಿದೆ. ಈ ಅವಧಿಯಲ್ಲಿ ಮಾನವ ತನ್ನ ಆಯುಧಗಳಲ್ಲಿ ಬಹಳಷ್ಟು ಸುಧಾರಣೆಗಳನ್ನು ಮಾಡಿಕೊಂಡು ಕೃಷಿಕ ಜೀವನವನ್ನು ಆರಂಭಿಸಿದನು. ಮಾನವ ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲುವ ಅವಶ್ಯಕತೆ ಅವನ ಜೀವನದಲ್ಲಿ ಬಂದದ್ದು ವ್ಯವಸಾಯದಿಂದಲೇ ಅವರ ಸರ್ವತೋಮುಖ ಅಭಿವೃದ್ಧಿ ಮತ್ತು ವಾಣಿಜ್ಯ ವ್ಯವಹಾರಗಳೆಲ್ಲವೂ ವ್ಯವಸಾಯದ ಅವಿಷ್ಕಾರದಿಂದಲೇ ಪ್ರಾರಂಭಗೊಂಡು ಒಂದು ನಿರ್ದಿಷ್ಟ ಸಂಸ್ಕೃತಿ ಮತ್ತು ವಿಕಾಸಕ್ಕೆ ತಳಹದಿಯಾಯಿತು.

ಮಾನವ ವ್ಯವಸಾಯವನ್ನು ಪ್ರಾರಂಭಿಸಿದಾಗ ಅದಕ್ಕಾಗಿ ಅವನು ಮಳೆ ಮತ್ತು ನದಿಯನ್ನು ಆಶ್ರಯಿಸಿದ್ದನು. ಆದರೆ ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಗಳು ಮತ್ತು ಸಕಾಲದ ಮಳೆಯ ವೈಫಲ್ಯತೆ, ಜನಸಂಖ್ಯೆಯ ಹೆಚ್ಚಳದ ಪರಿಣಾಮವಾಗಿ ಹೆಚ್ಚಿನ ಆಹಾರವನ್ನು ಉತ್ಪಾದಿಸಬೇಕಾಯಿತು. ಅದರ ಸಲುವಾಗಿ ಹೆಚ್ಚುವರಿ ಪ್ರದೇಶವನ್ನು ವ್ಯವಸಾಯಕ್ಕೆ ಒಳಪಡಿಸಬೇಕಾಯಿತು. ಆಗ ನದಿ ಪ್ರದೇಶಗಳಿಂದ ಬಯಲು ಪ್ರದೇಶಕ್ಕೆ ಕೃಷಿ ಭೂಮಿಯನ್ನು ವಿಸ್ತಾರಗೊಳಿಸಬೇಕಾಯಿತು. ಇದರಿಂದ ಅವನು ನೀರನ್ನು ಕೃತಕವಾಗಿ ಸಂಗ್ರಹಿಸಿ ತನ್ನ ಹತೋಟಿಯಲ್ಲಿಟ್ಟುಕೊಂಡು ತನಗೆ ಬೇಕಾದಾಗ ಬಳಸಿಕೊಳ್ಳಲು ಪ್ರಾರಂಭಿಸಿದನು. ಇದರ ಫಲವಾಗಿ ಕೃತಕ ಜಲಸಂಗ್ರಹಣೆಗಳು ರಚನೆಯಾದವು. (ಕೆರೆಗಳು, ಕುಂಟೆಗಳು ಇತ್ಯಾದಿ) ಮಳೆಗಾಲವು ವರ್ಷದ ಕೆಲವೇ ತಿಂಗಳು ಮಾತ್ರವಿದ್ದರೂ ಸಹ, ತನ್ನ ಕೃತಕ ಜಲ ಸಂಗ್ರಾಹಕಾರಗಳಲ್ಲಿದ್ದ ನೀರನ್ನು ಬಳಸಿ ವ್ಯವಸಾಯ ಮಾಡಲು ಯಾವುದೇ ಅಡೆ ತಡೆಗಳಿಲ್ಲದಾಯಿತು. ಇದೇ ಅಂಶ ಮುಂದೆ ಅಸಂಖ್ಯಾತ ಕೆರೆ-ಕುಂಟೆಗಳ ನಿರ್ಮಾಣಕ್ಕೆ ಪ್ರೇರಪಣೆಯನ್ನು ನೀಡಿತು. ಇಲ್ಲಿ ಕಾಲುವೆ, ಕೆರೆ, ನದಿ, ಕೊಳವೆ ಬಾವಿ ಮತ್ತು ತೆರದ ಬಾವಿಗಳು ನೀರಾವರಿಯ ಮೂಲಗಳಾಗಿದ್ದು ಕೃಷಿಗೆ ಉತ್ತೇಜನಕಾರಿಯಾಗಿವೆ.

ಕೃಷಿಯು ತೇರದಾಳ ಪ್ರದೇಶದ ಜೀವನಾಡಿಯಾಗಿದ್ದು ಅದು ಬಹುಜನರ ಮುಖ್ಯ ಕಸುಬಾಗಿದೆ. ಇದನ್ನು ಆಧರಿಸಿಯೇ ಇತರೇ ಉದ್ಯೋಗಗಳು, ವ್ಯಾಪಾರ ಮತ್ತು ಕೈಗಾರಿಕೆಗಳು ಅಭಿವೃದ್ಧಿಯಾಗಿವೆ. ದೇಶದ ಸಮಸ್ತ ಆದಾಯಕ್ಕೆಲ್ಲ ಕೃಷಿಯೇ ಮೂಲ ಕೇಂದ್ರ ಬಿಂದುವಾಗಿದ್ದಿತು. ಅದನ್ನು ಅವಲಂಬಿಸಿಯೇ ಇಲ್ಲಿ ಕೆಲ ವರ್ತಕ ಶ್ರೇಣಿಗಳಿದ್ದವೆಂಬುದನ್ನು ತೇರದಾಳದ ಕ್ರಿ. ಶ. ೧೧೨೩ರ ಕಾಲದ ಶಾಸನವೊಂದು ದಾಖಲಿಸಿದೆ. ಅದರಲ್ಲಿನ "ಆರವತ್ತೊಕ್ಕಲುಂ ಹನ್ನ ದಾನ್ಯಕ್ಕೆ ರಾಸಿಗೊಳಗವಂ ಬಿಟ್ಟರು"[೧] ಎನ್ನುವ ಉಲ್ಲೇಖದಿಂದ ಅರವತ್ತು ಕುಟುಂಬಗಳಿಂದ ಕೂಡಿದ ಒಕ್ಕಲುತನದ ಸಂಘವೊಂದು ಇತ್ತು ಎಂದು

ಅರ್ಥವಾಗುತ್ತದೆ. ಅಲ್ಲದೇ ಪ್ರಾಚೀನ ಐತಿಹಾಸಿಕ ತೇರದಾಳ ಗ್ರಾಮದಲ್ಲಿ ವ್ಯವಸಾಯವನ್ನು ಆಧರಿಸಿಯೇ ಹಲವಾರು ವೃತ್ತಿಗಳಿದ್ದವು. ಉದಾ: ಕುಂಬಾರಿಕೆ, ಕಂಬಾರಿಕೆ, ಬಡಿಗತನ, ಚಮ್ಮಾರಿಕೆ ಹಾಗೂ ಹಲವಾರು ವೃತ್ತಿಗಳು ಅಸ್ಥಿತ್ವದಲ್ಲಿದ್ದವು.

ಈ ಪರಿಸರದಲ್ಲಿ ಬೆಳೆಯುವ ಬೆಳೆ ಮತ್ತು ಭೂ–ಫಲವತ್ತತೆಯ ಆಧಾರದ ಮೇಲೆ ಭೂಮಿಯನ್ನು ಒಣ ಭೂಮಿ, ತೋಟದ ಭೂಮಿ ಎನ್ನುವ ಎರಡು ಪ್ರಕಾರಗಳಾಗಿ ವಿಂಗಡಿಸಬಹುದು. ಹಿಂದೆಯೂ ಇದೇ ರೀತಿಯ ವಿಂಗಡಣೆ ಇತ್ತು ಎಂಬುದನ್ನು ಇಲ್ಲಿನ ಶಾಸನಗಳು ಧೃಡಪಡಿಸಿವೆ. ನೀರಾವರಿಯ ಸಹಾಯವಿಲ್ಲದೇ ಮಳೆಯನ್ನೇ ಅವಲಂಬಿಸಿ ವ್ಯವಸಾಯವನ್ನು ಮಾಡುವ ಭೂಮಿಯೇ ಒಣ ಭೂಮಿ ಅಥವಾ ಹೆಕ್ಕಲು ಭೂಮಿಯಾಗಿದೆ. ಅದೇ ರೀತಿ ಭಾವಿ, ಕೆರೆ, ನದಿಗಳನ್ನು ಆಶ್ರಯಿಸಿ ಏತದ ಸಹಯದಿಂದ ನೀರು ಉಣಿಸುವ ಭೂಮಿಯನ್ನು ತೋಟದ ಭೂಮಿ ಎಂದು ಹೆಸರಿಸಲಾಗಿದೆ. ಐತಿಹಾಸಿಕ ತೇರದಾಳ ಪ್ರದೇಶದಲ್ಲಿ ತೋಟದ ಭೂಮಿಯಲ್ಲಿ ಹಲವಾರು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದರು[೨] ತೇರದಾಳದಲ್ಲಿ ದೊರೆತ ಕ್ರಿ.ಶ. ೧೧೨೩ ಕಾಲದ ಶಾಸನವೊಂದು ವಿವಿಧ ರೀತಿಯಾದ ಭೂಮಿ ಹಿಂದೆ ಇತ್ತು ಎಂಬುದನ್ನು ಉಲ್ಲೇಖಿಸಿದೆ.

**ಗುತ್ತ ಮುಖ್ಯ ಸಮಸ್ತ ನಕರಂಗಳುಮಂ ಬರಸಿ ನೇಮಿತೀ**
**ರ್ಥೇಶ್ವರನ ಬಸದಿಯ ರಿಷಿಯ**
**ರಾಹರದಾನಕ್ಕಂ ದೇವರಷ್ಟವಿಧಾರ್ಚನೆಗಂ ಖಂಡಪ್ಪು(ಸು)ಟಿತ ಜೀರ್ಣೋದ್ಧಾರಕ್ಕೆ**
**ಪೆಸಗ್ಗೊಂಡು ತನುಮುನೀಶ್ವರ ದಿವ್ಯಶ್ರೀ ಪಾದಪದ್ಮಂ**
**ಗಳಂ ದಿವ್ಯತೀರ್ಥ ಜಳಂಗಳಿಂ ತೊಳೆದು ಶಾತಕುಂಭ ಕುಂಭಸಂಭೃತ ಜಳಂಗಳಿಂ**
**ಧಾರಾಪೂರ್ಬಕಂ ಮಾಡಿ ತೇರಿದಾಳದ ಪಶ್ಚಿಮ ಭಾಗದೊಳು ಹಾರುಗೇರಿಯ**
**ಬಟ್ಟೆಯಿಂ ಬಡಗಲು ಯಿಪ್ಪತ್ತನಾಲ್ಗೇಣ ಕೋಲೊಳು**
**ಕೊಟ್ಟ ಮತ್ತರ್ ಅ(ಎ)ಪ್ಪತ್ತೆರಡು ದೇವಿಯಣ ಬಾವಿಯಂ ತೆಂಕಲಾ ಕೋಲಲು ಕೊಟ್ಟ**
**ತೋಂಟ ಮತ್ತರೊನ್ದು ಅನ್ತು ಮತ್ತರು ೭೨ ತೊಂಟ ಮತ್ತ ೧ ಅಲ್ಲಿಯ ಪನ್ನರ್ವ್ವ**
**ರ್ಗಾವುಣ್ಡಗಳುಂ ಅಭಿವತ್ತೊಕ್ಕಲುಂ ಹನ್ನಿಧಾನ್ಯಕ್ಕ ರಾಸಿಗೊಳಗವಂ ಬಿಟ್ಟ**[೩].

ಅಂದರೆ ಗೊಂಕದೇವನು ತನ್ನ ರಾಜಧಾನಿ ತೇರದಾಳದಲ್ಲಿ ಗೊಂಕ ಜಿನಾಲಯವನ್ನು ನಿರ್ಮಿಸಿ, ನೇಮಿಜಿನನನ್ನು ಪ್ರತಿಷ್ಠೆ ಮಾಡಿಸಿದನು. ಆಗ ಕೊಲ್ಹಾಪುರದ ರೂಪಾನಾರಾಯಣ ಬಸದಿಯ ಆಚಾರ್ಯನಾದ ಮಾಘನಂದಿಯನ್ನು ಕರೆಯಿಸಿ ಬಸದಿಯ ರಿಸಿಯರಾಹಾರ ದಾನಕ್ಕೆ ದೇವರ ಪೂಜೆ ಮುಂತಾದವಕ್ಕೆ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಮುನಿಯ ಕಾಲನ್ನು ತೊಳೆದು ೨೪ ಗೇಣ ಕೋಲನಲ್ಲಿ ೭೨ ಮತ್ತರು ಭೂಮಿ ಒಂದು ಮತ್ತರು ತೋಟ ಭೂದಾನ ನೀಡುತ್ತಾನೆ. ಅಲ್ಲಿಯ ಗಾವುಂಡಗಳು ಸೆಟ್ಟರು ಮುಂತಾದವರು ಬೇರೆ ಬೇರೆ ದಾನ ನೀಡುತ್ತಾರೆ. ಉಲ್ಲೇಖವನ್ನು ನೋಡಿ ಒಣ ಭೂಮಿ ಅಥವಾ ಹಕ್ಕಲು ಭೂಮಿಯ ಮತ್ತು ತೋಟದ ಭೂಮಿಯು ಸಾಗುವಳಿಯಲ್ಲಿ ಇತ್ತು ಎಂಬುವುದು ಮನವರಿಕೆಯಾಗುತ್ತದೆ.

ಲಭ್ಯ ಶಾಸನಗಳ ಸಹಾಯದಿಂದ ತೇರದಾಳ ಪ್ರದೇಶದಲ್ಲಿ ಹಿಂದೆಯೂ ಹಲವಾರು ರೀತಿಯ ಬೆಳೆಗಳನ್ನು ಬೆಳೆಯಲಿಕ್ಕೆ ಅನುಕೂಲಕರವಾದ ಭೂಮಿಯನ್ನು ಹೊಂದಿತ್ತು ಮತ್ತು ಅಲ್ಲಿ ಹಲವು ಬೆಳೆಗಳನ್ನು ಬೆಳಯಲಾಗುತ್ತಿತ್ತು ಎಂಬುದನ್ನು ಗುರುತಿಸಬಹುದು. ಕ್ರಿ.ಶ. ೧೧೨೩ರ ಕಾಲದ ತೇರದಾಳದ ಶಾಸನವೊಂದು ಅಲ್ಲಿಯ ೧೨ ಜನ ಗೌಡರು ಮತ್ತು ೬೦

ಒಕ್ಕಲ ಜನರು ಅಲ್ಲಿನ ನೇಮಿನಾಥ ಜಿನಾಲಯದ ಶ್ರೀ ನೇಮಿನಾಥೇಶ್ವರ ದೇವರಿಗೆ ಹಲವು ಬಗೆಯ ಕೃಷಿ ಉತ್ಪನ್ನಗಳನ್ನು ದತ್ತಿ ಬಿಟ್ಟ ಉಲ್ಲೇಖವನ್ನು ನೀಡುತ್ತದೆ.

**"ಅಳಿವತ್ತೊಕ್ಕಲುಂ ಹನ್ನಿಧಾನ್ಯಕ್ಕ ರಾಸಿಗೊಳಗವಂ ಬಿಟ್ಟ**
**ರು ಅಲ್ಲಿಯ ಸೆಟ್ಟಿಗುತ್ತ ಮುಖ್ಯನಗರಂಗಳು ತಾವು ಮಾಳಿಕೊಣ್ದ ಭಣ್ದ ಮಾಣಿಕ ಪಟ್ಟ**
**ಸೂತ್ರವಾದಡಂ ಹೊ[ಂ]ಗೆ ವೀಸ ಲಾಭಾಯದ ಅಡಕೆ ಹೊಗೆ ಹನ್ನೊಂದು ತಾವು**
**ತೆಗೆದ ಯೆಲೆಯ ಹೇಳಿಗಂ ಅಗದ"**
**"ನ್ತರುವತ್ತಿಗರು ತೆಗೆದ ಹೇಳಿಗಂ ನೂಳೆಲೆ ಯಿನ್ತಿನಿತುವಂ ಬಿಟ್ಟರು ತೆಲ್ಲಿಗರು ಮಾನ್ಯ**
**ಸಾಮ್ಯವೆನ್ನದೆ ದೇವರ ಸಂಜೆ ಸೊಡರಿಂಗಂ ಧೂಪಾರತಿಗಂ ಗಾಣಕ್ಕೆ ಸೊಲ್ಲಗೆ**
**ಹೊಳಿಗನಿಂ ಬಂದ ಎಣ್ಣೆಯ ಕೊಡಕ್ಕೆ ಸೊಲ್ಲಗೆ ಯಿನ್ತವಂ"**
**"ಬಿಟ್ಟರು ಗಣ ಕುಂಭಾಳಿರು ದೇವರ ಅಷ್ಟವಿಧಾರ್ಚನೆ ಆಹಾರದಾನ ನಡವನ್ತಾಗಿ**
**ದಾನಶಾಲೆಗೆ**
**ಆವಗೆ ಗಳನ ಬಿಟ್ಟರು ಹಲಸಿಗೆ ಹನ್ನಿರ್ಚ್ಛಾಸಿರದ ಹೆಬ್ಬಟ್ಟೆಯಲು ನಡೆದ ಗಾತ್ರಿಗರು**
**ದೇವರಿಗೆ ಅಷ್ಠವಿದಾರ್ಚನೆ ನಡೆವನ್ತಾಗಿ ಹೇಳಿಂಗೆ ನೂಳುವೊ"**.

ಐತಿಹಾಸಿಕ ತೇರದಾಳ ಗ್ರಾಮದಲ್ಲಿ ಎಲೆ, ಅಡಿಕೆ, ಬಾಳೆ ಮುಂತಾದವುಗಳನ್ನೂ ಬೆಳೆಯುತ್ತಿದ್ದರು. ಅಲ್ಲದೇ ಎಣ್ಣೆ ಉತ್ಪಾದನೆಯಾಗುವ ಬೆಳೆಗಳನ್ನೂ ಸಹ ಇಲ್ಲಿ ಬೆಳೆಯುತ್ತಿದ್ದರು. ಇವುಗಳ ಜೊತೆಗೆ ಹಲವಾರು ಧವಸ ಧಾನ್ಯಗಳನ್ನು ಬೆಳೆಯುತ್ತಿದ್ದರು ಎಂಬುದನ್ನು ಈ ಶಾಸನದಿಂದ ಗುರುತಿಸಬಹುದಾಗಿದೆ.

ಇಂದು ಈ ಪ್ರದೇಶವು ಕೃಷ್ಣ ಜಲಾಯನ ಪ್ರದೇಶದ ಮಲಪ್ರಭಾ ನದಿಯ ನೀರಾವರಿ ಚೌಕಟ್ಟಿನೊಳಗೆ ಬರುವುದರಿಂದ ಇಲ್ಲಿ ಶೇ.೮೫% ಭೂಮಿ ನೀರಾವರಿ ಕ್ಷೇತ್ರವಾಗಿ ಮಾರ್ಪಟ್ಟಿದೆ. ಇದರಿಂದಾಗಿ ಭತ್ತ, ಕಬ್ಬು, ಬಾಳೆ, ಜೋಳ, ಗೋಧಿ, ಅರಿಷಿಣ, ಆಲೂಗಡ್ಡೆ, ದಾಳಿಂಬೆ, ಸಪೋಟ, ಹಾಗೂ ವಿವಿಧ ತರಕಾರಿಗಳನ್ನು ಹೆಚ್ಚಾಗಿ ರೈತರು ಬೆಳೆಯುತ್ತಾರೆ. ಆದರೆ ಅಧಿಕವಾದ ಔಷಧಿ ಸಿಂಪಡಣೆಯಿಂದ ತೇರದಾಳ ಭಾಗದ ರೈತರು ಹಲವಾರು ದುಷ್ಪರಿಣಾಮಗಳನ್ನು ಎದುರಿಸುತ್ತಿದ್ದಾರೆ. ಅಲ್ಲದೇ ಅವರು ಅತೀವ ನಷ್ಟದಲ್ಲಿ ಸಿಲುಕಿದ್ದಾರೆ. ಇದಕ್ಕೆ ಪರಿಹಾರವನ್ನು ಕಂಡುಕೊಳ್ಳಲು ಈ ಭಾಗದ ಹಲವಾರು ಕೃಷಿಕರು ಸಾವಯವ ಕೃಷಿಯತ್ತ ತಮ್ಮ ಗಮನವನ್ನು ಹರಿಸಿ ಕೃಷಿ ಅಭಿವೃದ್ಧಿಗೆ ತಮ್ಮ ಕೊಡುಗೆಯನ್ನು ನೀಡುತ್ತಿದ್ದಾರೆ. ಅವರಲ್ಲಿ ಶ್ರೀ ದರೇಪ್ಪ ಕಿತ್ತೂರ ಒಬ್ಬರು.

ಶ್ರೀಯುತರು ತೇರದಾಳ ಗ್ರಾಮದಲ್ಲಿ ೦೧-೦೮-೧೯೬೮ ರಲ್ಲಿ ತಂದೆ ಪರಪ್ಪ, ತಾಯಿ ಶಿವಲಿಂಗವ್ವಾ ಎನ್ನುವ ದಂಪತಿಗಳ ಮಗನಾಗಿ ಜನಿಸಿದರು. ಇವರು ೮ನೇ ತರಗತಿಯವರೆಗೆ ಅಧ್ಯಯನವನ್ನು ಮಾಡಿ ತಮ್ಮ ಸ್ವಂತ ಅನುಭವಳೊಂದಿಗೆ ಕೃಷಿಯಲ್ಲಿ ಹಲವಾರು ವಿನೂತನ ಪ್ರಯೋಗಗಳನ್ನು ಮಾಡುತ್ತಾ ಸಾವಯವ ಕೃಷಿಯಲ್ಲಿ ಅತಿ ಕಡಿಮೆ ವೆಚ್ಚದಲ್ಲಿ ಲಾಭವನ್ನು ಗಳಿಸುವುದರ ಮೂಲಕ ಅವರು ಇತರರಿಗೆ ಸಹಾ ಮಾದರಿಯಾಗಿದ್ದಾರೆ. ಇವರು ೧೯೯೧ ರಿಂದ ಸಾವಯವ ಕೃಷಿಗೆ ಮೊರೆ ಹೋಗಿ ತಮ್ಮ ಜಮೀನಿನಲ್ಲಿ ಯಾವುದೇ ತರಹದ ರಾಸಾಯನಿಕ ಔಷಧಿಗಳನ್ನು ಬಳಸದೇ ಬೆಳೆಗಳನ್ನು ಬೆಳೆದು ಉತ್ತಮ ಲಾಭವನ್ನು ಪಡೆಯುತ್ತಿದ್ದಾರೆ.

ಕೇಂದ್ರ ಸರ್ಕಾರ ಕೊಡುವ ೨೦೧೬ ನೇ ಸಾಲಿನ "ಜಗಜೀವನರಾಂ ಅಭಿನವ ಕಿಸಾನ್ ಪುರಸ್ಕಾರ"ವನ್ನು ಪಡೆದಿರುವುದು ನಿಜಕ್ಕೂ ಹೆಮ್ಮೆಯ ಸಂಗತಿ. ಈ ರಾಷ್ಟ್ರೀಯ ಪ್ರಶಸ್ತಿಗೆ ಆಯ್ಕೆಯಾದ ದಕ್ಷಿಣ ಭಾರತದ (ಕರ್ನಾಟಕದ) ಏಕೈಕ ಮೊದಲ ವ್ಯಕ್ತಿ ಇವರು. ಕರ್ನಾಟಕ ಮತ್ತು ಕೇರಳ ರಾಜ್ಯಗಳ ಕೃಷಿ ವಿಜ್ಞಾನ ಕೇಂದ್ರಗಳ ವತಿಯಿಂದ ಕೃಷಿಯಲ್ಲಿ ಹೊಸ ಅನ್ವೇಷಣೆ ಮತ್ತು ಸಾಧನೆ ಮಾಡಿದ ಕಾರಣಕ್ಕೆ ಈ ಪ್ರಶಸ್ತಿ ಇವರಿಗೆ ಲಭಿಸಿದೆ. ಇವರು ಈ ಪ್ರಶಸ್ತಿಗೆ ಭಾಜನರಾಗುವ ಮೂಲಕ ರಾಷ್ಟಮಟ್ಟದಲ್ಲಿ ಕರ್ನಾಟಕದ ಕೀರ್ತಿ ಹೆಚ್ಚಿಸಿದ್ದಾರೆ. ಇದರೊಂದಿಗೆ ರಾಷ್ಟ್ರಮಟ್ಟದ ಫಾರ್ಮರ ಫೆಲೋ ಪ್ರಶಸ್ತಿ, ರಾಜ್ಯ ಸರಕಾರ ನೀಡುವ ಕೃಷಿ ಪಂಡಿತ, ಕೃಷಿ ಪ್ರಶಸ್ತಿ ಜಿಲ್ಲಾ ಶ್ರೇಷ್ಠ ತೋಟಗಾರಿಕಾ ಪ್ರಶಸ್ತಿ, ಜಿಲ್ಲಾ ಶ್ರೇಷ್ಠ ತೋಟಗಾರಿಕಾ ಪ್ರಶಸ್ತಿ, ಜಿಲ್ಲಾ ಆಡಳಿತದಿಂದ ಸ್ವಾತಂತ್ರ್ಯೋತ್ಸವ ಪ್ರಶಸ್ತಿ ಸೇರಿದಂತೆ ಇತರೆ ಹಲವು ಪ್ರಶಸ್ತಿಗಳನ್ನು ಪಡೆದಿರುವ ಇವರು ರಾಜ್ಯ ಸರ್ಕಾರದ ವತಿಯಿಂದ ಕೃಷಿ ಅಧ್ಯಯನಕ್ಕಾಗಿ ಚೀನಾ ಪ್ರವಾಸವನ್ನು ಮಾಡಿದ್ದಾರೆ. ಸಾವಯವ ಕೃಷಿಗೆ ಮೂಲಾಧಾರವಾಗಿರುವ ಹೈನುಗಾರಿಕೆಯನ್ನು ಮಾಡಿಕೊಂಡಿರುವ ಇವರು ಹಾಲು ಮಾರಿ ಲಾಭಗಳಿಸುತ್ತಾರೆ. ಇದರೊಂದಿಗೆ ಆಕಳ ಸಗಣಿ, ಮೂತ್ರ(ಗಂಜಲು)ವನ್ನು ಸಾವಯವ ಗೊಬ್ಬರಕ್ಕೆ ಬಳಸುತ್ತಿದ್ದಾರೆ. ಅಲ್ಲದೇ ಹಸುಗಳಿಗಾಗಿ ಹಸಿರು ಪಾಚಿ(ಅಜೋಲ್)ಯನ್ನು ಬಳಸಿ ಅವುಗಳಿಗೆ ನೀಡುತ್ತಿರುವುದರಿಂದ ಹಾಲಿನ ಪ್ರಮಾಣ ಹೆಚ್ಚಿಗೆ ದೊರಕುತ್ತದೆ ಎನ್ನುತ್ತಾರೆ. ಧರೆಪ್ಪ ಅಲ್ಲದೇ ಇದರ ಜೊತೆ ಜೇನು ಸಾಕಣೆ, ಮೊಲ ಸಾಕಣೆಯನ್ನೂ ಮಾಡಿಕೊಂಡಿದ್ದಾರೆ. ಧರೆಪ್ಪ ಕಿತ್ತೂರ ಅವರ ಸಾಧನೆ ಕೇಳಿ ಯು.ಎಸ್.ಎ ದಿಂದ ಕರ್ನಾಟಕ್ಕೆ ಆಗಮಿಸಿದ "ಟೈಮೋಥೀ ರೆಬರ್" ಅವರು ಇವರ ತೋಟಕ್ಕೆ ಭೇಟಿ ನೀಡಿ ಇವರ ಸಾಧನೆಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ವಿಜಯಪುರದ ಪೂಜ್ಯ "ಶ್ರೀ ಸಿದ್ದೇಶ್ವರಶ್ರೀ"ಗಳು ಕೂಡಾ ಇಲ್ಲಿ ಭೇಟ್ಟಿ ನೀಡಿದ್ದಾರೆ. ಇವರ ಕೃಷಿ ಭೂಮಿಯನ್ನು ನೋಡಿದರೆ ಒಂದು ಕೃಷಿ ವಿಶ್ವವಿದ್ಯಾಲಯವನ್ನೆ ನೆನಪಿಸುತ್ತದೆ. ನಿಜವಾಗಲೂ ಅವರ ಈ ಪ್ರಯತ್ನ ಮೆಚ್ಚುವಂತಹುದು.

**೪.೨. ಪಶುಪಾಲನೆ ವ್ಯವಸ್ಥೆ**

ಪಶುಪಾಲನೆ ಜನರ ಮತ್ತೊಂದು ಆದಾಯದ ಮೂಲವಾಗಿದ್ದು, ಹಸು, ಕುರಿ, ಮೇಕೆ, ಹಂದಿ, ಕೋಳಿ, ಎಮ್ಮೆ ಮೊದಲಾದ ಪ್ರಾಣಿಗಳ ಸಾಕಾಣಿಕೆಯನ್ನು ಸರಳವಾಗಿ ಪಶುಪಾಲನೆ ಎಂದು ಕರೆಯಲಾಗುತ್ತದೆ. ಅವರಿಗೆ ಆದಾಯ ತರುವ ಉಪವೃತ್ತಿಗಳಲ್ಲಿ ಪಶುಪಾಲನೆ ಪ್ರಮುಖ ಉದ್ಯೋಗವಾಗಿದೆ. ಈ ಪರಿಸರದಲ್ಲಿ ಉತ್ತಮ ನೀರಾವರಿ ಸೌಲಭ್ಯ ಇರುವುದರಿಂದ ಅನೇಕ ಕೃಷಿಕರು ಮತ್ತು ಇತರೆ ಜನರು ಪಶುಪಾಲನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತೇರದಾಳ ಪರಿಸರದಲ್ಲಿ ಪ್ರಸಕ್ತ ಶೇ.೪೫% ರಷ್ಟು ಜನರು ಪಶುಪಾಲನೆಯಲ್ಲಿ ತೊಡಗಿದ್ದಾರೆ. ಅಸ್ಕಿ, ತೇರದಾಳ ಮೊದಲಾದ ಕಡೆಗೆ ಹಾಲಿನ ಡೈರಿಗಳಿದ್ದು, ಜನರು ಹಾಲು-ಹೈನದ ಉತ್ಪಾದನೆಗೆ ಸಹಾಯವಾಗಿವೆ. ೨೦೧೧ರ ಅಂಕಿ ಅಂಶದ ಪ್ರಕಾರ ತೇರದಾಳ ಪರಿಸರದ ಪಶುಪಾಲನೆಯ ಅಂಕಿ ಸಂಖ್ಯೆಗಳ ನೋಟ ಇಲ್ಲಿದೆ.

| ಸಾಕಲಾದ ಪ್ರಾಣಿಗಳ ಹೆಸರು | ೨೦೧೧ರ ಪ್ರಾಣಿ ಗಣತಿಯ ಪ್ರಕಾರ ವಿವಿಧ ಗ್ರಾಮಗಳಲ್ಲಿ ಸಾಕಲಾದ ಪ್ರಾಣಿಗಳ ಒಟ್ಟು ಸಂಖ್ಯೆ[೫] | | | | |
|---|---|---|---|---|---|
| | ತೇರದಾಳ | ತಮದಡ್ಡಿ | ಹನಗಂಡಿ | ಕಾಲತಿಪ್ಪಿ | ರಬಕವಿ |
| ಹಸು | ೧೨೭೮ | ೯೭೨ | ೨೭೯ | ೬೭೫ | ೧೨೦೧ |
| ಎಮ್ಮೆ | ೯೮೭ | ೮೯೭ | ೫೩೮ | ೪೫೩ | ೪೮೭ |
| ಕುರಿ | ೮೬೭೪ | ೯೬೭೪ | ೧೭೮೬ | ೪೭೫೬ | ೧೭೦೪೯ |
| ಮೇಕೆ | ೬೯೦೯ | ೧೨೪೫೩ | ೧೬೯೩೨ | ೧೩೯೦೭ | ೧೯೭೩೨ |
| ಕೋಳಿ | ೮೦೦ | ೧೫೨೩ | ೬೭೮೧ | ೩೪೦೦ | ೬೭೦೦ |
| ಹಂದಿ | ೨೯೮೭ | ೦೦೦ | ೨೦೦ | ೫೬೪೩ | ೩೪೫೨ |
| ಕತ್ತೆ | ೪೫೦ | ೧೩೪ | ೦೦೦ | ೩೪೫ | ೨೬೨ |
| ಕುದುರೆ | ೦೨೩ | ೧೮ | ೮೯ | ೨೧ | ೦೦೦ |
| ಮೊಲ | ೦೫೪ | ೦೩೧ | ೦೦೦ | ೦೧೫ | ೦೧೮ |

ಪ್ರಾಚೀನ ಕಾಲದಲ್ಲಿ ಮಾನವ ಕೃಷಿಯ ನಂತರ ತನ್ನ ಅನುಕೂಲಕ್ಕಾಗಿ ಕಂಡುಕೊಂಡ ಉಪ ವೃತ್ತಿಗಳಲ್ಲಿ ಪಶುಪಾಲನೆ ಒಂದಾಗಿದೆ. ಮಾನವ ಸಂಸ್ಕೃತಿಯ ವಿಕಾಸಕ್ಕೆ ಪಶುಪಾಲನೆಯೂ ಸಹ ತನ್ನದೇ ಆದ ವಿಶೇಷ ಕೊಡುಗೆಯನ್ನು ನೀಡಿದೆ. ಶಿಲಾಯುಗ ಕಾಲದಲ್ಲಿ ಮಾನವ ಪ್ರಕೃತಿಯ ಮಡಿಲಲ್ಲಿ ಬದುಕುತ್ತಿದ್ದನು. ಕಾಡಿನಲ್ಲಿದ್ದ ಪ್ರಾಣಿಗಳನ್ನು ಪಳಗಿಸಿ ಸಾಕಬೇಕೆಂಬ ಇಚ್ಛಿಸಿದನು. ಇದರಿಂದಾಗಿ ಅವನು ಮಧ್ಯ ಶಿಲಾಯುಗ ಕಾಲದಲ್ಲಿ ಕಾಡಿನಲ್ಲಿದ್ದ ಪ್ರಾಣಿಗಳನ್ನು ಆಹಾರ್, ಇನಾಂಗಾವ್, ನೆವಾಸ ಮೊದಲಾದೆಡೆ ಪ್ರಥಮವಾಗಿ ಸಾಕಿದ್ದಕ್ಕೆ ನಮಗೆ ಸಾಕ್ಷ್ಯಗಳು ದೊರಕಿವೆ. ನಂತರ ಅಂದರೆ ನವ ಶಿಲಾಯುಗ ಕಾಲದಲ್ಲಿ ವ್ಯವಸ್ಥಿತವಾಗಿ ಪ್ರಾಣಿಗಳನ್ನು ಸಾಕಿದ್ದಕ್ಕೆ ಮತ್ತು ಅವುಗಳನ್ನು ತನ್ನ ಆಹಾರಕ್ಕಾಗಿ ಬಳಸಿಕೊಂಡಿದ್ದಕ್ಕೆ ಉದಾಹರಣೆಗಳು ದೊರೆತಿವೆ. ಹೇರಳವಾಗಿ ಆ ಕಾಲದ ಮನುಷ್ಯ ಪ್ರಾಣಿಗಳನ್ನು ಸಾಕಿದ್ದಕ್ಕೆ ದೊರೆತಿರುವ ಅಸಂಖ್ಯಾತ ಬೂದಿ ದಿಬ್ಬಗಳೇ ಸಾಕ್ಷಿಗಳಾಗಿವೆ. ತೇರದಾಳ ಹನಂಗಡಿ, ಮದನಮಟ್ಟಿ, ತಮದಡ್ಡಿ ಮೊದಲಾದೆಡೆ ಈ ಕಾಲದ ಬೂದಿ ದಿಬ್ಬಗಳಿದ್ದು, ಇವುಗಳ ಆಧಾರದ ಮೇಲೆ ಅಂದು ಈ ಭಾಗದಲ್ಲಿ ಪಶುಪಾಲನೆ ಜನಪ್ರಿಯವಾಗಿತ್ತೆಂದು ಹೇಳಬಹುದಾಗಿದೆ. ಪರಪ್ಪ ಕಾಲತಿಪ್ಪಿ ಇವರ ಮಕ್ಕಳಾದ ರವೀಂದ್ರ ಹಾಗೂ ಮಲ್ಲಿಕಾರ್ಜುನ ಕೃಷಿ ಕಾರ್ಯದಲ್ಲಿ ತೊಡಗುವುರೊಂದಿಗೆ ಇವರು ಮುರಾ, ಜವಾರಿ ಎಮ್ಮೆ ಹಾಗೂ ಗೀರು ತಳಿಯ ಆಕಳುಗಳನ್ನು ಪೋಷಿಸಿ ಕೃಷಿಯ ಜೊತೆಗೆ ಹೈನುಗಾರಿಕೆಯಲ್ಲಿ ವಿಶೇಷವಾದ ಸಾಧನೆಯನ್ನು ಗೈದಿದ್ದಾರೆ.

ಮನುಷ್ಯ ಹಣವನ್ನು ಪ್ರಾಯೋಗಿಕವಾಗಿ ಆಸ್ತಿತ್ವಕ್ಕೆ ತಂದುಕೊಳ್ಳುವವರೆಗೆ ಹಸು ವಿನಿಮಯದ ಮತ್ತು ಸಂಪತ್ತಿನ ಸಾಧನವಾಗಿತ್ತು. ವೇದಗಳ ಕಾಲದಲ್ಲಿ ಹಸು ಸಂಪತ್ತಿನ ಮೂಲ ಮತ್ತು ಪ್ರತೀಕವೆಂದು ಪರಿಗಣಿಸಲಾಗುತ್ತಿತ್ತು. ಅದಕ್ಕಾಗಿಯೇ ಪಶುಗಳ ಕಳ್ಳತನ, ಯುದ್ಧ ಪರಿಹಾರವಾಗಿ ಇಲ್ಲವೇ ಮದುವೆಗಳಲ್ಲಿ ವರನಿಗೆ ಬಳುವಳಿಯಾಗಿ ಹಸುಗಳನ್ನು ನೀಡಲಾಗುತ್ತಿತ್ತು. ವೇದಗಳ ಕಾಲದಲ್ಲಿನ ಗೋಗ್ರಹಣ ಪ್ರಸಂಗಗಳು ಮತ್ತು ತುರುಕಾಳಗಗಳು ಪ್ರಾಯಶಃ ಇದೇ ಹಿನ್ನೆಲೆಯಲ್ಲಿ ನಡೆಯುತ್ತಿದ್ದನ್ನು ಗುರುತಿಸಬಹುದು.

ವ್ಯವಸಾಯದಲ್ಲಿ ದನಕರುಗಳ ಪಾತ್ರವು ಮುಖ್ಯವಾಗಿರುವಂತೆ ಜನರ ಆಹಾರದ ಭಾಗವಾಗಿರುವ ಹಾಲು ಹೈನುಗಳ ಪೂರೈಕೆಯಲ್ಲಿಯೂ ಅವು ಅತ್ಯಂತ

ಮಹತ್ವಪೂರ್ಣವಾಗಿವೆ. ಪಶುಗಳು ಮಾನವನ ಆರ್ಥಿಕ ಅಭಿವೃದ್ಧಿಗೆ ಸಹಾಯಕಾರಿಯಾಗಿವೆ. ಅವು ಭೂಮಿಯನ್ನು ಹದ (ಸಾಗುವಳಿ) ಮಾಡಲು ಹಾಗೂ ಭೂಮಿಯಲ್ಲಿರುವ ಬಾವಿಯಿಂದ ನೀರೆತ್ತಲು ಹಾಗೂ ಸಾರಿಗೆ ಸಾಧನಗಳಾಗಿ ಸಂಪರ್ಕ ಕಲ್ಪಿಸುವಲ್ಲಿ ಸಹಾಯಕವಾಗಿವೆ. ಎತ್ತು ಮತ್ತು ಇತರೆ ಪ್ರಾಣಿಗಳನ್ನು ವ್ಯಾಪಾರದ ಸಾಧನಗಳಾಗಿ ಉಪಯೋಗಿಸುತ್ತಿದ್ದರೆಂದು ಕ್ರಿ.ಶ. ೧೧೮೧ರ ಕಾಲದ ತೇರದಾಳದ ಈ ಮುಂದಿನ ಶಾಸನದಿಂದ ಸ್ಪಷ್ಟವಾಗುತ್ತದೆ.

> **"ದೇವರಷ್ಟವಿಧಾರ್ಚನೆ ಚಂದ್ರಾರ್ಕ್ಕ ತಾರಂಬರಂ ನಡೆವಂತಾ**
> **ಗಿ ಕೊಟ್ಟ ಶಾಸನ ಮರ್ಯ್ಯಾದೆ ಯೆನ್ತೆಂದೆಡೆ ಚತುಸ್ಸಮುದ್ರ ಪರ್ಯ್ಯನ್ತಂಬರಂ**
> **ನಡವನ್ತಾಗಿ ೧೨೦ ನೊಳಿಪ್ಪತ್ತೆತ್ತು ಕತ್ತೆ, ಕೋಣ, ಭಂಡಿ ಭೈತ್ರ ದೋಣಿ ದುರ್ಗ್ಗಿಗಳ**
> **ಪಥಮೆಂಬಿವಳೊಳು ಆನೆ ಮಾಣಿಕ ವಸ್ತುವೇನಾದಡಂ ಪೇಳೆ ಜಳಸ್ಥಳ ಯಾ**
> **ತ್ರೆಯಲು ನಡೆವಡಂ ಸುಂಕಪರಿಹಾರವಾಗಿ ಕೊಟ್ಟರು"**[೬].

### ೪.೩. ಇತರೆ ವೃತ್ತಿಗಳು ಮತ್ತು ಆಯಾಗಾರ ಪದ್ಧತಿ

ತೇರದಾಳ ಪರಿಸರದಲ್ಲಿ ಕೃಷಿ, ವಾಣಿಜ್ಯ, ಪಶುಪಾಲನೆಯಂತಹ ಮುಖ್ಯ ವೃತ್ತಿಗಳಲ್ಲದೆ ತಮ್ಮ ಜೀವನ ನಿರ್ವಹಣೆ ಉತ್ತಮವಾಗಿ ಸಾಗಬೇಕೆಂಬ ಸದಾಶಯದಿಂದ ಹಲವಾರು ಉಪವೃತ್ತಿಗಳನ್ನು ಕೈಗೊಂಡಿದ್ದಾರೆ. ಅವುಗಳಲ್ಲಿ ಕುಂಬಾರಿಕೆ, ನೇಕಾರಿಕೆ, ಚಮ್ಮಾರಿಕೆ, ಬುಟ್ಟಿ ತಯಾರಿಕೆ, ಲೋಹಗಾರಿಕೆ, ಗುಡಿಗಾರಿಕೆ ಮೊದಲಾದವು ಪ್ರಮುಖವಾಗಿದ್ದು, ಈ ವೃತ್ತಿಗಳು ಸ್ವಾವಲಂಬನೆ ಸಾಧಿಸಲು ಕಾರಣೀಭೂತವಾಗಿದ್ದವು. ಪ್ರಾಚೀನ ಐತಿಹಾಸಿಕ ತೇರದಾಳ ಗ್ರಾಮದಲ್ಲಿ ವ್ಯವಸಾಯವನ್ನು ಆಧರಿಸಿಯೇ ಹಲವಾರು ವೃತ್ತಿಗಳಿದ್ದವು. ಉದಾ: ಕುಂಬಾರಿಕೆ, ಕಂಬಾರಿಕೆ, ಬಡಿಗತನ, ಚಮ್ಮಾರಿಕೆ ಹಾಗೂ ಹಲವಾರು ವೃತ್ತಿಗಳು ಅಸ್ಥಿತ್ವದಲ್ಲಿದ್ದವು. ಇವುಗಳನ್ನು ಆಯಾಗಾರ ವೃತ್ತಿಗಳೆಂದು ಪರಿಗಣಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಉತ್ತರ ಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಗುಜರಾತ್ ಮತ್ತು ಮಹಾರಾಷ್ಟ್ರದಲ್ಲಿನ ಗ್ರಾಮಗಳು ಜಾಜಮನಿ ಪದ್ಧತಿಯನ್ನು ಅನುಸರಿಸುತ್ತಿದ್ದವು. ಆ ಪ್ರಕಾರ ಗ್ರಾಮವೊಂದರಲ್ಲಿದ್ದ ಭೂರಹಿತ ಕೃಷಿ ಕಾರ್ಮಿಕರು ತಾವು ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಭೂ ಒಡೆಯರಿಂದ ಪಡೆಯುತ್ತಿದ್ದ ಧವಸ ಧಾನ್ಯ ಇಲ್ಲವೇ ವಸ್ತುಗಳನ್ನು ಪಡೆಯುವುದಕ್ಕೆ ಜಾಜಮನಿ ಪದ್ಧತಿಯೆಂದು ಕರೆಯುತ್ತಿದ್ದರು. ಇದರೊಂದಿಗೆ ವಿವಿಧ ಕುಶಲಕರ್ಮಿಗಳು ತಮ್ಮ ಉತ್ಪಾದಿತ ವಸ್ತುಗಳನ್ನು ಆ ಗ್ರಾಮದಲ್ಲಿ ಉತ್ಪಾದಿತವಾಗುತ್ತಿದ್ದ ಕೃಷಿ ವಸ್ತುಗಳಿಗೆ ಕೊಟ್ಟು ವಸ್ತು ವಿನಿಮಯ ಮಾಡಿಕೊಳ್ಳುತ್ತಿದ್ದ ಪದ್ಧತಿಯಾಗಿದೆ. ಅಲ್ಲದೇ ಆ ಮೂಲಕ ಬಂದ ಆದಾಯದಿಂದ ಆ ಗ್ರಾಮದ ಆಡಳಿತ ಮತ್ತು ಇತರೆ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿತ್ತು. ಈ ಪದ್ಧತಿಯನ್ನೇ ಜಾಜಮನಿ ಪದ್ಧತಿಯೆಂದು ಗುರುತಿಸಲಾಗಿದೆ. ಇದೇ ಪದ್ಧತಿಯೇ ಮುಂದೆ ದಕ್ಷಿಣ ಭಾರತದಲ್ಲಿ ಮಧ್ಯಯುಗದಲ್ಲಿ "ಬಾರಾಬಲೂತಿ ಅಥವಾ ಆಯಗಾರ" ಪದ್ಧತಿಯೆಂದು ಹೆಸರಾಯಿತು[೭].

ಗ್ರಾಮಾಡಳಿತದ ಅನುಕೂಲಕ್ಕಾಗಿ ಕರ್ನಾಟಕದಲ್ಲಿಯೂ ಹಿಂದಿನಿಂದಲೂ ಆಯಗಾರ ಪದ್ಧತಿ ಅಲಿಖಿತವಾಗಿ ಉಳಿದುಕೊಂಡು ಬಂದಿದ್ದು ಅದು ಇಂದಿಗೂ ಗ್ರಾಮೀಣ ಪರಿಸರದಲ್ಲಿ ಉಳಿದುಕೊಂಡು ಬಂದಿದೆ. ಇದನ್ನು ಆ ಗ್ರಾಮದ ಶ್ರೇಣಿಕರಣ ವ್ಯವಸ್ಥೆ ಮತ್ತು ಸಾಮಾಜಿಕ

ಚೌಕಟ್ಟಿನ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ. ಆಯಗಾರರು ಎಂದರೆ ಆ ಗ್ರಾಮದ ಗ್ರಾಮಾಧಿಕಾರಿಗಳು ಎಂದು ಸರಳವಾಗಿ ಅರ್ಥೈಸಬಹುದು. ಇವರನ್ನು ಕೈವಾಡದವರು ಎಂದೂ ಸಹ ಗುರುತಿಸಲಾಗಿದೆ. ಅವರು ಹನ್ನೆರಡು ಜನರಿದ್ದು, ಅಂದು ಗ್ರಾಮದ ಆಡಳಿತಕ್ಕೆ ಮತ್ತು ಅಭಿವೃದ್ಧಿಗೆ ಕಾರಣರಾಗಿದ್ದರು. ಅವರೇ ಗೌಡ, ಶ್ಯಾನುಭೋಗ, ಪಂಚಾಂಗಿ, ತಳವಾರ, ತೋಟಿ, ನೀರುಗಂಟಿ, ಅಗಸ, ನಾಯಿಂದ, ಕುಂಬಾರ, ಲೋಹಗಾರ, ಬಡಗಿ ಮತ್ತು ಅಕ್ಕಸಾಲಿಗಳು. ಇವರಲ್ಲಿ ಅಧಿಕಾರಿ ವರ್ಗದವರು ಮತ್ತು ಸೇವಾ ವರ್ಗದವರೆಂದು ಎರಡು ಭಾಗ ಮಾಡಬಹುದಾಗಿದೆ. ಅಧಿಕಾರಿ ವರ್ಗಕ್ಕೆ ಸೇರಿದ ಗೌಡ, ಶ್ಯಾನುಭೋಗ ಸ್ಥಳೀಯರ ರಕ್ಷಣೆ, ಶಾಂತಿ, ನ್ಯಾಯಪಾಲನೆ ಮೊದಲಾದ ಆಡಳಿತಾತ್ಮಕ ಕಾರ್ಯಗಳನ್ನು ನೋಡಿಕೊಂಡರೆ ಉಳಿದವರು ಗ್ರಾಮದಲ್ಲಿನ ಶ್ರೀಮಂತರಿಗೆ ಇಲ್ಲವೇ ಜಮೀನುದಾರರಿಗೆ ತಮ್ಮ ಶ್ರಮದ ಸೇವೆಯನ್ನು ಒದಗಿಸಿ ಆ ಮೂಲಕ ಜನರ ವಿವಿಧ ಸೇವಾಕಾರ್ಯಗಳನ್ನು ಮಾಡಿ ಅದಕ್ಕಾಗಿ ನಿರ್ದಿಷ್ಟ ಪ್ರತಿಫಲವನ್ನು ಧವಸ ಧಾನ್ಯಗಳ ರೂಪದಲ್ಲಿ ವರ್ಷಕ್ಕೊಮ್ಮೆ ಇಲ್ಲವೇ ನಿಗದಿತ ಅವಧಿಗಾಗಿ ಜನರಿಂದ ಪಡೆಯುತ್ತಿದ್ದರು. ಉದಾಹರಣೆ ಒಬ್ಬ ಜಮೀನ್ದಾರನಿಗೆ ಬೇಕಾದ ಕುಂಬಗಳನ್ನು ಕುಂಬಾರರು, ಅವನಿಗೆ ಬೇಕಾದ ವ್ಯವಸಾಯದ ಸಾಧನಗಳನ್ನು ಬಡಿಗಿ ಮತ್ತು ಅವನಿಗೆ ಬೇಕಾದ ಬಾನಿ, ಪಾದರಕ್ಷೆ, ಹಗ್ಗ, ಮೊದಲಾದವುಗಳನ್ನು ತೋಟಿ(ಮಣೆಗಾರ) ಉಚಿತವಾಗಿ ಮಾಡಿಕೊಟ್ಟು ಅದಕ್ಕೆ ಪ್ರತಿಫಲವಾಗಿ ಸುಗ್ಗಿಯ ವೇಳೆ ಆ ಜಮೀನುದಾರರಿಂದ ಧವಸ ಧಾನ್ಯಗಳನ್ನು ಪಡೆಯುವ ವ್ಯವಸ್ಥೆಯನ್ನು ಆಯಗಾರ ಪದ್ಧತಿಯೆಂದು ಕರೆಯಲಾಗಿದೆ[೮]. ತೇರದಾಳ ಪರಿಸರದಲ್ಲಿ ಈ ಆಯಗಾರರು ಸ್ಥಳೀಯ ಮಟ್ಟದಲ್ಲಿ ಹಿಂದಿನಿಂದಲೂ ಪ್ರಮುಖ ಪಾತ್ರ ವಹಿಸಿರುವುದನ್ನು ನಾವು ಗುರುತಿಬಹುದಾಗಿದೆ. ಅವರಲ್ಲಿ ಪ್ರಮುಖವಾದ ಕೆಲವು ಆಯಗಾರರು ಮತ್ತು ಉಪ ವೃತ್ತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಕುಂಬಾರಿಕೆ**

ಕುಂಬಾರ ಎಂದರೆ ಸಾಮಾನ್ಯವಾಗಿ ಮಡಿಕೆ ಮಾಡುವವರು ಎಂದು ಜನಸಾಮಾನ್ಯರು ಅರ್ಥ ಮಾಡಿಕೊಳ್ಳುತ್ತಾರೆ. ಕುಂಬಾರ ಸಂಸ್ಕೃತದ ಪದ 'ಕುಂಭಕಾರ' ಎಂಬುದರ ಅಪಭ್ರಂಶವಾಗಿದೆ. ಮಣ್ಣಿನಿಂದ ಉಪಯುಕ್ತವಾದ ವಸ್ತುಗಳನ್ನು ತಯಾರಿಸುವ ಒಂದು ಜನಾಂಗವೇ ಕುಂಬಾರ, ವೈದಿಕ ವಾಙ್ಮಯದಲ್ಲಿ ಹೇಳುವ ನಾಯಿಂದ ಕಮ್ಮಾರ, ಕಥೆಗಾರ, ಸೂತ, ವೈಶ್ಯ ಮುಂತಾದ ವೃತ್ತಿಗಳಲ್ಲಿ ಕುಂಬಾರನು ಒಬ್ಬನು. ಇವರಿಗೆ ಆಯಗಾರರಲ್ಲಿ ಇರುವ ಸ್ಥಾನಮಾನ ಅತ್ಯಂತ ಮಹತ್ವವಾಗಿದೆ. ಯಾವುದೇ ಊರಿನಲ್ಲಿ ಕುಂಬಾರ ಮತ್ತು ಕುಂಬಾರಿಕೆ ಇಲ್ಲದೆ ಪರಿಪೂರ್ಣವಲ್ಲ ಎನ್ನುವುದು ನಮ್ಮ ಜನಪದ ಕವಿ ಸರ್ವಜ್ಞನ ಅಭಿಪ್ರಾಯ. 'ಕುಂಬಾರ' ಎನ್ನುವುದು 'ಕುಂಭಕಾರ' ಎಂಬ ಶಬ್ಧದ ತದ್ಭವ ರೂಪವಗಿದೆ. ಕುಂಬಾರನನ್ನು ವಿವಿಧ ಭಾಗಗಳಲ್ಲಿ ವಿವಿಧ ಹೆಸರಿನಿಂದ ಕರೆಯುವರು[೯].

ಪ್ರಾಚೀನ ಕಾಲದಲ್ಲಿ ಕುಂಬಾರರು ಚಕ್ರದ ಸಹಯದಿಂದ ಮಣ್ಣಿನ ಮಡಿಕೆಗಳನ್ನು ಮಾಡುತ್ತಿದ್ದರು. ಅಂದಿನ ಕಾಲದಲ್ಲಿ ಆಹಾರವನ್ನು ಬೇಯಿಸಲು ಹಾಗೂ ನೀರನ್ನು ಸಂಗ್ರಹಿಸಲು ಹಾಗೂ ಆಹಾರ ಧಾನ್ಯವನ್ನು ಸಂಗ್ರಹಿಸಲು ಗಡಿಗೆ, ಮಡಿಕೆಗಳನ್ನು ಬಳಕೆ ಮಾಡುತ್ತಿದ್ದರು. ಆದ್ದರಿಂದ ಮಣ್ಣಿನ ಗಡಿಗೆ, ಹರವಿ, ಕೊಡ, ಮಗಿ ಹಾಗೂ ಪ್ರಾಚೀನ ತೇರದಾಳ ಗ್ರಾಮದಲ್ಲಿ ಮಡಿಕೆಗಳಿಗೆ ಭಾರೀ ಬೇಡಿಕೆ ಇದ್ದಿತ್ತು. ತೇರದಾಳ ಗ್ರಾಮದ ಶ್ರೀ

ನೇಮಿನಾಥ ಬಸದಿಯ ಮಂಟಪದ ಗೋಡೆಯ ಮೇಲೆ ದೊರೆತ ಕ್ರಿ.ಶ. ೧೧೨೪ರ ಕಾಲದ ಶಾಸನವೊಂದರಲ್ಲಿ ಕುಂಬಾರರ ಬಗ್ಗೆ ಉಲ್ಲೇಖವಿದೆ.

> **ನರುವತ್ತಿಗರು ತೆಗೆದ ಹೇಳೆಗಂ ನೊಳೆಲೆ ಯಿನ್ತಿನಿತುವಂ ಬಿಟ್ಟರು ತೆಲ್ಲಿಗರು ಮಾನ್ಯ**
> **ಸಾಮ್ಯವೆನ್ನದೆ ದೇವರ ಸಂಜೆ ಸೊಡರಿಂಗಂ ಧೂಪಾರತಿಗಂ ಗಾಣಕ್ಕೆ ಸೊಲ್ಲಗೆ**
> **ಹೋಳಿಗನಿಂ ಬಂದ ಎಣ್ಣೆಯ ಕೊಡಕ್ಕೆ ಸೊಲ್ಲಗೆ ಯಿನ್ತವಂ**
> **ಬಿಟ್ಟರು ಗಣ ಕಂಭಾಳಿರು ದೇವರ ಅಷ್ಟವಿಧಾರ್ಚನೆ ಆಹಾರದಾನ ನಡವನ್ತಾಗಿ**
> **ದಾನಶಾಲೆಗೆ ಅವಗೆ ಗಳನ ಬಿಟ್ಟರು**[೧೦].

**ಮಡಿಕೆ ತಯಾರಿಕಾ ವಿಧಾನ**

ಕುಂಬಾರಿಕೆಗೆ ಬೇಕಾದ ಮೊದಲು ಕಚ್ಚಾವಸ್ತು ಎಂದರೆ "ಜೇಡಿ ಮಣ್ಣು". ಮಳೆಗಾಲಕ್ಕೆ ಮುನ್ನ ವರ್ಷವಿಡಿ ಬೇಕಾಗಬಹುದಾದ ಮಣ್ಣನ್ನು ಮನೆಗೆ ತಂದು, ಕಲ್ಲು ಕಸ-ಕಡ್ಡಿ ತೆಗೆದು ನೀರುಹಾಕಿ, ಚೆನ್ನಾಗಿ ಮುದ್ದೆಮಾಡಿ, ರಾಸಿ ಹಾಕಿಟ್ಟು ಅದಕ್ಕೆ ಗೋಣಿ ತಟ್ಟು ಮುಚ್ಚಿ ದಿನಂಪ್ರತಿ ಬೇಕಾದಷ್ಟು ನೀರು ಹಾಕುತ್ತಾ ಆರದಂತೆ ನೋಡಿಕೊಳ್ಳುವರು. ಇದಕ್ಕೆ ಸಾಣಿಸಿದ ಮರಳನ್ನು ಬೂದಿಯನ್ನು ಬೆರೆಸಿ ಕಾಲಿನಿಂದ ತುಳಿದು, ಕೈಯಿಂದ ನಾದಿ ಮುದ್ದೆಮಾಡಿ, ತಿಗುರಿಗೆ ಹಾಕಲು ಸಿದ್ದಮಾಡಿ ಇಡುವರು. ಮಡಿಕೆ ಮಾಡಲು ಬೇಕಾದಾಗ, ಆ ರಾಶಿಯಿಂದ ಮಣ್ಣನ್ನು ತೆಗೆದು, ನಾದಿ, ಮಡಿಕೆ ಮಾಡಲು ಉಪಯೋಗಿಸುವರು. ಅದನ್ನು ತಿಗುರಿಯ ಮೇಲೆ ಹಾಕಿ ಬೇಕಾದ ಆಕಾರದ ಮಡಿಕೆ ಕುಡಿಕೆಗಳನ್ನು ತಯಾರಿಸುತ್ತಾರೆ.

ತಿಗುರಿಯನ್ನು ಮೆಲ್ಲಗೆ ತಿಗುರಿಯ ಕೋಲಿನಿಂದ ತಿರುಗಿಸಿ ಅದರ ಹಣೆಯ ಮೇಲೆ ಹದಮಾಡಿದ ಮಣ್ಣನ್ನು ಹಾಕಿ ನೀರನ್ನು ಚಿಮುಕಿಸುತ್ತಾ ಮಣ್ಣನ್ನು ತೇವಗೊಳಿಸಿ, ನಂತರ ಬಲಗೈಯನ್ನು ಮಣ್ಣಿನ ಮೇಲೂ, ಎಡಗೈಯನ್ನು ತಿಗುರಿಯ ಹಣೆಯ ಕುಂಭದ ಮಣ್ಣಿನ ತಳಭಾಗದಲ್ಲಿರಿಸಿಕೊಂಡು, ಅದನ್ನು ಮೇಲಕ್ಕೆ ಗೋಪುರದಂತೆ ಎತ್ತುವರು. ಹೀಗೆ ಮಾಡುವಾಗ ತಿಗುರಿಯನ್ನು ವೇಗವಾಗಿ ತಿರುಗಿಸುವರು. ತಯಾರಿಸಬೇಕಾದ ಮಡಿಕೆಗನುಗುಣವಾಗಿ ಮಣ್ಣನ್ನು ಬಳಸಲಾಗುತ್ತದೆ. ಹೊಳವು ತಯಾರಿಸಿಕೊಂಡ ಮೇಲೆ ತೆರೆ ಎತ್ತುವರು ತೆರೆ ಎತ್ತಿದ ಮೇಲೆ ಬಲಗೈ ಒಳಗಿರುತ್ತದೆ. ಎಡಗೈ ಹೊರಗಿರುತ್ತದೆ. ನಂತರ ಮಣ್ಣಿಗೆ ರೂಪ ಕೊಡುವ ಸಲುವಾಗಿ ಎಡಗೈಯನ್ನು ಒಳಗಿರಿಸಿ ಬಲಗೈಯನ್ನು ಹೊರಗಿರಿಸಿಕೊಂಡು ಹೆಬ್ಬೆಟ್ಟು ಕೆಳಗಿರಿಸಿ, ಬೆರಳುಗಳನ್ನು ತಳಮುಖವಾಗಿರಿಸಿಕೊಂಡು ತೆರೆ ಎತ್ತುವರು. ತೆರೆ ಎತ್ತಿಕೊಂಡು ಮೇಲೆ ಕಂಠ ನಿರ್ಮಾಣ ಮಾಡುವರು. ಕೈಗೆ ಅಂಟಿದ ತಿಳಿ ಮಣ್ಣನ್ನು ಪಕ್ಕದಲ್ಲಿಟ್ಟುಕೊಂಡಿರುವ ಕವಳಿ ಚಟಗಿಯಲ್ಲಿನ ನೀರಿಗೆ ಹಾಕುವರು. ಕಂಠಸಮೇತ ತಯಾರಾದ ಹೊಳವಿಗೆ ಕೆಲವು ಕಡೆ ನೇಲ ಎಂದು ಕರೆಯುವರು. ಈ ಎಲ್ಲ ಕೆಲಸ ಆಗುವಾಗ ಆಗಾಗ್ಗೆ ತಿಗುರಿ ಕೋಲಿನಿಂದ ತಿಗುರಿಯನ್ನು ತಿರುಗಿಸಬೇಕಾಗುತ್ತದೆ. ಈ ನೆಲವನ್ನು ಅಡಿಕೆ ಅಥವಾ ಬಿದುರಿನ ಆರು ಅಂಗಲ ಉದ್ದ ಇರಬಹುದಾದ ಡಬ್ಬೆಯನ್ನು ಬಳಿಸಿಕೊಂಡು ಟೊಳ್ಳಾದ ಹೊಳವಿನ ತಳವನ್ನು ದಾರದಿಂದ ಕೊಯ್ದು ತಿಗುರಿಯಿಂದ ಬೇರ್ಪಡಿಸಿ ಒಣಗಲು ಇಡುವರು. ತಿಗುರಿಯಿಂದ ಮಾಡುವ ಮಡಿಕೆಗಳನ್ನು ಗಂಡಸರೆ ಹೆಚ್ಚಾಗಿ ಮಾಡುವರು.

ತಿರುಗುತ್ತಿರುವ ತಿಗರಿಯಿಂದ ಸಿದ್ದವಸ್ತುವಿನ ರೂಪವನ್ನು ಪಡೆದುಕೊಂಡು ಮಡಿಕೆಯನ್ನು ಬಹಳ ಹಿಂದೆ ಜಿಂಕೆ ಚರ್ಮ ಹಾಕಿಕೊಂಡು ಅದರ ಮೇಲೆ ಕುಳಿತುಕೊಂಡು

ಮುಂದೆ ತಲೆದಿಂಬರಿಸಿಕೊಂಡು ಮಡಿಕೆಗಳನ್ನು ತಟ್ಟುತ್ತಿದ್ದರು. ಕಾಲ ಧರ್ಮಕ್ಕೆ ತಕ್ಕಂತೆ ಈಗ ಕೆಳಕ್ಕೆ ಗೋಣಿಚೀಲ ಹಾಕಿಕೊಂಡು. ಗೋಣಿಚೀಲದಿಂದ ಮಾಡಿದ ತಲೆದಿಂಬಿಟ್ಟುಕೊಂಡು ಬಲಗಾಲಿನ ಪಾದವನ್ನು ಮುಂದಿಟ್ಟುಕೊಂಡು ಎಡಗಾಲಿನ ಪಾದವನ್ನು ಹಿಂದಿರಿಸಿಕೊಂಡು ಎಡಗಾಲಿನ ಮೊಣಕಾಲಿನ ಮೇಲೆ ಮಡಿಕೆ ಕಂಠವನ್ನು ತಿರುಗಿಸಿಕೊಂಡು ಮಡಿಕೆಯ ತಳಭಾಗವನ್ನು ಮೇಲುಮುಖ ಅಂದರೆ ಅರ್ಧಭಾಗಕ್ಕೆ ಓರೆಮಾಡಿಕೊಂಡು ತಳವನ್ನು ಎಡಗೈಯಿಂದ "ಗುಂಡಪ್ಪ"(ಲಿಂಗದಾಕಾರದ ಕಲ್ಲು)ನನ್ನು ಒಳಗಿರಿಸಿಕೊಂಡು ಅದೇ ಜಾಗದಲ್ಲಿ 'ಸೊಳ'(ಜಾಲಿ ಅಥವಾ ತುಗ್ಗಲಿ ಮರದಿಂದ ಮಾಡಿದ ಬಡಿಗೆ ಹಿಂದೆ ಇದನ್ನು ಗಂಧದಕಡ್ಡಿಯಿಂದ ಮಾಡುತಿದ್ದರಂತೆ) ತಿಂದ ಗಟ್ಟಸಬೇಕು ಮಡಿಕೆಯನ್ನು ತಟ್ಟುವಾಗ 'ಮುಬುಪರ' ಯಾದರೆ (ಮಣ್ಣಿನೊಳಗೆ ಗಾಳಿ ಸೇರಿದ್ದರೆ) ಸುಡುವಾಗ ಆ ಭಾಗದಲ್ಲೆ ಸಿಡಿಯುತ್ತದೆ. ಅದ್ದರಿಂದ ಒಳಗೆ ಸೇರಿರುವ ಆ ಗಾಳಿಯನ್ನು ತಟ್ಟುವಾಗಲೇ ಹೊರ ಹೊರಡಿಸಬೇಕು. ಮಡಿಕೆಯನ್ನು ಗಟಿಸುತ್ತಿರುವಾಗ ಸೊಳವನ್ನು ಆಗಾಗ ತೇವವಿರುವ ಬಟ್ಟೆಯ ಮೇಲೆ ಒತ್ತುತ್ತಿರಬೇಕು. ಹೀಗೆ ಮಾಡುವುದರಿಂದ ಮಡಿಕೆ (ಬಿರುಕು) ಬೀಲು ಬರುವುದಿಲ್ಲ.

ಕುಂಬಾರರು ಮಡಿಕೆಗಳಿಗೆ ಚಿತ್ತಾರ ಬಿಡಿಸುವುದರಿಂದ ಶೋಭೆಯ ಜೊತೆಗೆ ಆಕರ್ಷಣಿಯವಾದ ಮನರಂಜನೆಯನ್ನು ನೀಡುತ್ತವೆ. ಚಿತ್ತಾರವನ್ನು ಗಟ್ಟಿಗೆ ಮಾಡುವ ಸಂದರ್ಭದಲ್ಲಿಯೇ ಸಿಡಿದಚ್ಚಿನಿಂದಲೇ ಚಿತ್ತಾರ ಬಿಡಿಸುತ್ತಾರೆ. ಕಬ್ಬಿಣದ ರೇಕಿನ (ತೆಳುವಾದ ಹಾಳೆ) ಮೇಲೆ ಒಂದು ಎರಡು ಮೂರು ರಂಧ್ರ ಮಾಡಿಕೊಂಡು ತಗಡಿನಿಂದ ನಿಧಾನವಾಗಿ ಬಡಿಯುತ್ತಾ ಕೈ ಚಳಕದಿಂದ ಬಗೆಬಗೆಯ ಚಿತ್ತಾರ ಮೂಡಿಸುತ್ತಾರೆ. ಸಿಡಿದಬ್ಬೆಯನ್ನು ಎತ್ತಿನ ಕೊಂಬಿನಲ್ಲೂ ಮಾಡಿಸುತ್ತಾರೆ. ಎತ್ತಿನ ಕೊಂಬಿನ ಮೇಲೆ ಬೇರೆಯವರಿಂದ ಕೊರಿಸಿ ಬೆಂಡಕಾಯಿ ಅಚ್ಚು ಕುಂಬಳಕಾಯಿ ಅಚ್ಚು ಮೊದಲಾದ ಅಚ್ಚುಗಳನ್ನು ಸಿದ್ದಪಡಿಸಿಕೊಂಡಿರುತ್ತಾರೆ. ಇದರಿಂದಲೂ ಹಸಿ ಮಡಿಕೆಯ ಮೇಲೆ ನಿಧಾನವಾಗಿ ಒತ್ತಿ ಇಲ್ಲವೇ ಬಡಿದು ಚಿತ್ತಾರ ಬಿಡಿಸಬಹುದು. ಹೀಗೆ ತಯಾರು ಮಾಡಿದ ಮಣ್ಣಿನ ವಸ್ತುಗಳನ್ನು ಒಂದೆರಡು ದಿನ ಒಣಗಿಸಿದ ನಂತರ ಆವಿಗೆಯಲ್ಲಿ ಜೊಡಿಸಬೇಕು. ತಿಗರಿಯಿಂದ ಸಿದ್ದವಾದ ಪಾತ್ರೆಗಳನ್ನು ಬೂದಿಯ ಹಾಸಿಗೆ ಮೇಲಿಟ್ಟು ಬಿಸಿಲಲ್ಲಿ ಅದರ ಮೇಲ್ಮೈ ತೇವ ಅರುವಷ್ಟು ಮಟ್ಟಿಗೆ ಒಣಗಿಸಿ ಆ ಬಳಿಕ ಆವಿಗೆಯು ಒಳಬದಿ ಅಲ್ಲಲ್ಲಿ ಒಣಗಿದ ಹುಲ್ಲು ಸೀಳಿದ ಚಕ್ಕೆಗಳನ್ನು ಪಾತ್ರೆಗೆ ತಾಕದಂತೆ ಪಾತ್ರೆಗಳ ಗೂಡುಗಳನ್ನು ಸಾಲು ಸಾಲಾಗಿ ಜೋಡಿಸಲಾಗುತ್ತದೆ. ಹೀಗೆ ಜೋಡಿಸಿದಾಗ ತಳದಿಂದ ಮೇಲ್ಭಾಗದವರೆಗೂ ಕಿಂಡಿ ಬಿಟ್ಟಿರಲಾಗುತ್ತದೆ. ಹೀಗೆ ತಳಭಾಗದಲ್ಲಿ ಉರಿ ಮಾಡಿದಾಗ ಪಾತ್ರೆಗಳಿಗೆ ವ್ಯಾಪಕ ಮತ್ತು ಸಮಾನ ಮಂದೋಷ್ಣ ಪೂರೈಕೆಯಾಗಿ ಪಾತ್ರೆಗಳಲ್ಲಿರುವ ತೇವಾಂಶ ನಿವಾರಣೆಗೊಂಡ ಸುಟ್ಟ ಮಡಿಕೆ ಗಡಸು, ನಿಶ್ಚಿತ ಗಾತ್ರ ಗಟ್ಟಿ ಆಕಾರಗಳನ್ನು ಹೊಂದಿ ಸಿದ್ಧವಾಗುತ್ತದೆ.

**ಮಡಿಕೆ ತಯಾರಿಕೆಗೆ ಬೇಕಾದ ಸಾಮಗ್ರಿಗಳು**

ಮಡಿಕೆ ತಯಾರಿಕೆಗಾಗಿ ಕುಂಬಾರರು ಹಲವಾರು ಕಚ್ಚಾ ಸಾಮಾಗ್ರಿಗಳನ್ನು ಬಳಸುತ್ತಾರೆ. ಅವುಗಳಲ್ಲಿ ಅವೆಮಣ್ಣು ಮುಖ್ಯವಾದದು. ಇದು ವಿಶೇಷವಾಗಿ ಭೂಮಿಯ ೪ ರಿಂದ ೫ ಅಡಿ ಆಳದಲ್ಲಿ ದೂರೆಯುತ್ತದೆ. ಈ ಮಣ್ಣಿನ ವಿಶೇಷ ಗುಣಲಕ್ಷಣವಿರುವ ಒಳ್ಳೆಯ ಅಂಟಾಗಿರುವ ಕಾರಣಕ್ಕೆ ಇದನ್ನು ಅವೆಮಣ್ಣು ಎಂದು ಕರೆಯುವರು. ಇದು ಕೆರೆ ಇಲ್ಲವೇ ಹೊಳೆಯ ದಡದಲ್ಲಿ ಮತ್ತು ಬಂಜರು ಬಿಟ್ಟ ಗದ್ದೆಗಳಲ್ಲಿ ಮಾತ್ರ ಸಿಗುತ್ತದೆ. ಕುಂಬಾರಿಕೆಗೆ

ಬೇಕಾದ ಮತ್ತೊಂದು ಕಚ್ಚಾ ಸಾಮಾಗ್ರಿ ಕಟ್ಟಿಗೆ. ಕುಡಿಕೆಗಳನ್ನು ಸರಿಯಾದ ವಿನ್ಯಾಸಕ್ಕೆ ತಂದ ಮೇಲೆ ಬೇಯಿಸಲು ಕಟ್ಟಿಗೆಯ ಅಗತ್ಯವಿದೆ. ಸಾಮಾನ್ಯವಾಗಿ ಮಣ್ಣಿನ ಪಾತ್ರೆಗಳು ಬೇಯಲು ೪ ರಿಂದ ೬ ಘಂಟೆಗಳು ಸಮಯ ತಗಲುತ್ತದೆ. ಅದಕ್ಕಾಗಿ ಹೆಚ್ಚಾಗಿ ದೂಡ್ಡ ಮರದ ದಿಮ್ಮೆಗಳನ್ನು ಅಗತ್ಯವಿರುವ ಕಡೆಗೆ ರವದಿ(ಚಗಳ)ವನ್ನು ಬಳಸುತ್ತಾರೆ.

ಮಣ್ಣಿನ ಪಾತ್ರೆಗಳನ್ನು ಸುಡಬೇಕಾದರೆ ಒಡೆದ ಮಡಿಕೆಗಳನ್ನು ತಳದಿಂದ ಆವಿಗೆಯಲ್ಲಿ ಜೋಡಿಸಿ ಚೆನ್ನಾಗಿರುವ ಮಡಿಕೆಗಳನ್ನು ಬಿಸಿಲಿಗೆ ಒಣಗಿಸಿ ಜೋಡಿಸುವಾಗ ಮಣ್ಣಿನ ಮಡಿಕೆಗಳು ಒಂದಕ್ಕೊಂದು ತಾಗಿ ಒಡೆದು ಹೋಗದಂತೆ ಕಾಪಾಡುತ್ತಾರೆ. ಅದೇ ರೀತಿ ಕುಂಬಾರರು ಮಡಿಕೆಗಳನ್ನು ಮಾಡುವಾಗ ಮಡಿಕೆಗಳನ್ನು ನಯವಾಗಿರಲು ಮತ್ತು ಬಿರುಕು ಬಿಡದಿರಲು ಮಣ್ಣಿನ ಜೊತೆಗೆ ಉಸುಕು ಮತ್ತು ಜೇಡಿಮಣ್ಣನ್ನು ಬೆರೆಸುತ್ತಾರೆ. ಕೆಲವು ದೊಡ್ಡ ಗಾತ್ರದ ಅದರಲ್ಲಿಯೂ ತುಂಬ ದಪ್ಪನಾಗಿ ರಚಿಸಬೇಕಾದ ಸಂದರ್ಭದಲ್ಲಿ ಮಾತ್ರ ಇದನ್ನು ಬಳಸುತ್ತಾರೆ. ಉದಾ: "ತಂದೂರಿ ರೊಟ್ಟಿಗೂಡು" ತಯಾರಿಸಬೇಕಾದರೆ ಇದನ್ನು ಬಳಕೆ ಮಾಡಿಕೊಳ್ಳುತ್ತಾರೆ.

**ಕುಂಬಾರಿಕೆಯಲ್ಲಿ ಬಳಸುವ ಸಾಧನ ಸಲಕರಣೆಗಳು**

ಪ್ರತಿಯೊಂದು ಕುಲಕಸುಬಿನ ವೃತ್ತಿಯನ್ನು ಆರಂಭಿಸುವಾಗ ಅಲ್ಲಿಯ ಕಚ್ಚಾ ಸಾಮಾಗ್ರಿಗಳ ಜೊತೆಗೆ ಬಳಸುವ ಸಾಧನಗಳು ಅಷ್ಟೇ ಮುಖ್ಯವಾಗಿರುತ್ತವೆ. ಹಾಗೆಯೇ ಕುಂಬಾರಿಕೆಯ ವೃತ್ತಿಯಲ್ಲಿಯು ಮಡಿಕೆ, ಕುಡಿಕೆ ಹಾಗು ಇನ್ನಿತರೆ ವಸ್ತುಗಳನ್ನು ತಯಾರಿಸುವಾಗ ಕುಂಬಾರರು ಅನೇಕ ಸಾಧನ ಸಾಮಾಗ್ರಿಗಳನ್ನು ಬಳಸುತ್ತಾರೆ. ಅವುಗಳಲ್ಲಿ ಕುಂಬಾರಿಕೆಯ ಸಲಕರಣೆಗಳಲ್ಲಿ ಚಕ್ರ ಬಹಳ ಮುಖ್ಯವಾದದ್ದು ಇದನ್ನು ತಿಗುರಿ ಎಂದು ಕರೆಯುವರು. ದೇಶದ ಎಲ್ಲಾ ಕಡೆಗಳಲ್ಲಿಯೂ ಕುಂಬಾರಿಕೆಯಲ್ಲಿ ಬಳಕೆಯಾಗಿರುವ ಏಕೈಕ ಸಾಧನವಾಗಿದೆ. ಈ ತಿಗುರಿ ಪ್ರಾಚೀನ ಕಾಲದಿಂದಲೂ ಈ ಚಕ್ರವನ್ನು ಬಳಸುತ್ತಾರೆ. ಇದರಲ್ಲಿ ಮುಖ್ಯವಾಗಿ ಎರಡು ರೀತಿಯ ಚಕ್ರಗಳನ್ನು ಕಾಣಬಹುದು. ಮಣ್ಣಿನ ಚಕ್ರ ಮತ್ತು ಮರದ ಚಕ್ರ ಆದುದರಿಂದ ಕುಂಬಾರರಿಗೆ ಪ್ರಾಚೀನ ಕಾಲದಿಂದಲೂ ಈ ಚಕ್ರವನ್ನು ಕುಂಬಾರಿಕೆಯಲ್ಲಿ ಬಳಸುತ್ತಿದ್ದರಿಂದ ಕುಂಬಾರರಿಗೆ ಚಕ್ರಸಾಲಿಗರು ಎಂದು ಕೂಡ ಕರೆಯುವರು. ಇಂದು ಮರದ ಚಕ್ರದ ಬದಲು ವಿದ್ಯುತ್ ಚಾಲಿತ ಕಬ್ಬಿಣದ ಚಕ್ರಗಳು ಕಂಡುಬರುತ್ತವೆ. ಆದರೆ ಇದರ ಬಳಕೆ ಬಹಳ ವಿರಳ. ಮಡಿಕೆ ತಯಾರಿಕೆಯಲ್ಲಿ ಬಳಸುವ ಮತ್ತೊಂದು ಸಲಕರಣೆ ಎಂದರೆ ತಟ್ಟುವಕಲ್ಲು. ಚಕ್ರದಲ್ಲಿ ರಚಿಸಿದ ಮಡಿಕೆಗಳು ಟೊಳ್ಳಗಿರುತ್ತವೆ. ಅವು ಸ್ವಲ್ಪ ಆರಿದ ನಂತರ ಕಲ್ಲನ್ನು ಎಡಗೈಯಲ್ಲಿ ಹಿಡಿದು ಬಲಗೈಯಿಂದ ಸೊಳ ಹಿಡಿದು ತಟ್ಟುವರು. ಗಡಿಗೆ ತಟ್ಟುವ ಕಲ್ಲು ಹಾಗೂ ಸ್ವಾರಿ ತಟ್ಟುವ ಕಲ್ಲು ಇದು ಲಿಂಗಾಕೃತಿಯಲ್ಲಿದ್ದು ಸುಮಾರು ೫೦೦ ಗ್ರಾಂ ನಷ್ಟು ತೂಕವಿರುತ್ತದೆ. ಕೆಲವೆಡೆ ಹೊಳೆಯಲ್ಲಿ ಸಿಗುವ ದುಂಡನೆಯ ಬೆಣಚು ಕಲ್ಲನ್ನು ಬಳಸುವರು.

ಕುಂಬಾರಿಕೆಯಲ್ಲಿ ಬಳಸುವ ಇನ್ನೊಂದು ಸಲಕರಣೆ ಎಂದರೆ ಸೊಳ. ಇದನ್ನು ತೇಗ, ಬೇವು ಹಲಸು ಮುಂತಾದ ಮರದಿಂದ ಮಾಡುವರು. ಇದು ಪೇಂಟ್ ಬಳೆಯುವ ಬ್ರಷ್ ಆಕೃತಿಯಲ್ಲಿರುತ್ತದೆ. ಸೊಳದ ಮೇಲೆ ಕಲ್ಲನ್ನು ಇರಿಸಿದಾಗ ಲಿಂಗಾಕಾರವಿರುತ್ತದೆ. ಇದನ್ನು (ಕುಂಬಾರ) ಲಿಂಗಾಯಿತ ಕುಂಬಾರರು ಬಳಸುವ ಸೊಳ ಮತ್ತು ಕಲ್ಲು ಇಟ್ಟು ಪೂಜಿಸುವರು

ಇದನ್ನು ಮಡಿಕೆ ತಟ್ಟಲು ಬಳಸುವರು. ಕೆಲಸಕ್ಕನುಗುಣವಾಗಿ ಮಾಡುವ ಸೊಳ, ಗಟ್ಟಿಸುವ ಸೊಳ, ನುಣುಪುಗೊಳಿಸುವ ಸೊಳ ಅಚ್ಚು ಹಾಕುವ ಸೊಳ ಎಂದು ಕರೆಯುವರು. ಆಕಾರ ಒಂದೆ ಇದ್ದರು, ಗಾತ್ರದಲ್ಲಿ ಬೇರೆ ಬೇರೆಯಾಗಿರುತ್ತವೆ. ಅದೇ ರೀತಿ ಜಜ್ಜುವ ಕಲ್ಲನ್ನು ಕುಂಬಾರಗಿತ್ತಿಯರು ಬೋಸಿಯನ್ನು ತೀಡಲು, ರಗಟೆಯನ್ನು ಉಪಯೋಗಿಸುವರು. ಇದು ಗಂಡಸರು ಬಳಸುವ ತಟ್ಟುವ ಕಲ್ಲಿಗಿಂತ ದೊಡ್ಡದಾಗಿರುತ್ತದೆ. ಬೆಳಗಾವಿ ತೇರದಾಳ ಬಳ್ಳಾರಿ ಧಾರವಾಡ ಹಾವೇರಿ ದಾವಣಗೆರೆ ಚಿತ್ರದುರ್ಗ ಶಿವಮೊಗ್ಗ ಜಿಲ್ಲೆಗಳಲ್ಲಿ ಈ ತರಹದ ಜಜ್ಜುವ ಕಲ್ಲಿನ ಬಳಕೆ ಇರುವುದು ಕಂಡುಬರುತ್ತದೆ. ಅದೇ ರೀತಿ ಕುಂಬಾರಿಕೆಯ ಮತ್ತೊಂದು ಮುಖ್ಯ ಸಾಧನವೆಂದರೆ ಮಡಿಕೆ ಸುಡುವ ಆವಿಗೆ ಇದನ್ನು ಮಡಿಕೆ ಭಟ್ಟಾ ಎಂತಲೂ ಕರೆಯುವರು. ತಟ್ಟುವ ಹಸಿ ಮಡಿಕೆಗಳನ್ನು ಒಣಗಿದ ಮೇಲೆ ಆವಿಗೆಯಲ್ಲಿಟ್ಟು ಸುಡುವರು. ಆವಿಗೆಯಲ್ಲಿ ಒಂದು ಬಾಯಿ, ಎರಡು ಬಾಯಿ, ಮೂರು ಬಾಯಿ ಸಣ್ಣ ದೊಡ್ಡ ಆವಿಗೆಗಳಿವೆ. ಈ ಆವಿಗೆಯ ಬಾಯಿಂದ ಉರುವಲುಗಳನ್ನು (ಕಟ್ಟಿಗೆಗಳನ್ನು) ಹಾಕುವರು. ಇತ್ತೀಚೆಗೆ ಹೆಚ್ಚಾಗಿ ಒಂದೆ ಬಾಯಿ ಇರುವ ಆವಿಗೆಯನ್ನು ಕಟ್ಟುವರು. ಗ್ರಾಮೀಣ ಪ್ರದೇಶಗಳಲ್ಲಿ ಆವಿಗೆಯನ್ನು ಸ್ಥಳೀಯವಾಗಿ ದೊರೆಯುವ ಮಣ್ಣು ಕಲ್ಲುಗಳಿಂದ ಕಟ್ಟುವರು. ನಗರಗಳಲ್ಲಾದರೆ ಇಟ್ಟಿಗೆಯನ್ನು ಬಳಸುವರು ಈ ಆವಿಗೆಗಳನ್ನು ಎರಡು ರೀತಿಯಾಗಿ ಕಾಣಬಹುದಾಗಿದೆ. ಆಯತಾಕಾರದ ಅವಿಗೆ ಮತ್ತು ವೃತ್ತಾಕಾರದ ಆವಿಗೆ ಎಂದು ಎರಡು ಬಗೆಯಾಗಿ ವಿಂಗಡಿಸುವರು.

ತೇರದಾಳ ಪರಿಸರದ ಕುಂಬಾರ ಸಮುದಾಯದಲ್ಲಿ ಶೇ.೯೫% ರಷ್ಟು ಜನರಿಗೆ ಈ ಕಾಯಕವೇ ಪ್ರಧಾನ ಕಾಯಕವಾಗಿದೆ. ಉಳಿದ ೫% ರಷ್ಟು ಜನರಿಗೆ ಉಪವೃತ್ತಿಯಾಗಿದೆ. ಸಂತೆ, ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಇವುಗಳನ್ನು ಬೇರೆ ಬೇರೆ ಸ್ಥಳಗಳಿಗೆ ತೆಗದುಕೊಂಡು ಹೋಗಿ ಮಾರಾಟ ಮಾಡುತ್ತಾರೆ. ವಾರಕ್ಕೆ ೫೦೦-೧೦೦೦/- ರೂಪಾಯಿಗಳನ್ನು ಗಳಿಸಿ ಅದನ್ನು ತಮ್ಮ ಕುಟುಂಬ ನಿರ್ವಹಣೆಗೆ ಬಳಸುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿನ ಕುಂಬಾರರು ಇಂದಿಗೂ ಆಯಗಾರ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ವರ್ಷಪೂರ್ತಿ ಊರಿನ ಪ್ರಮುಖರಿಗೆ ಅವರಿಗೆ ಬೇಕಾದ ಮಡಿಕೆಗಳನ್ನು ಕೊಟ್ಟು ಸುಗ್ಗಿಯ ಕಾಲದಲ್ಲಿ ೧ ಚೀಲ ಭತ್ತ ಮತ್ತು ೫೦ಕೆ.ಜಿ. ಗೋಧಿಯನ್ನು ಹಾಗೂ ಇತರೆ ಧವಸ ಧಾನ್ಯಗಳನ್ನು ತಮ್ಮ ಜೀವನಕ್ಕಾಗಿ ಪಡೆಯುತ್ತಾರೆ. ಇಂದಿನ ಆಧುನಿಕ ಯುಗದಲ್ಲಿ ಇವರು ಸಾಕಷ್ಟು ಸಂಕಟದಲ್ಲಿ ಬದುಕುತ್ತಿದ್ದಾರೆ.

**ನೇಕಾರಿಕೆ**

ತೇರದಾಳ ಪರಿಸರದಲ್ಲಿ ವಾಸಿಸುವ ದೇವಾಂಗ ಶೆಟ್ಟಿ/ನೇಕಾರರು/ಮಗ್ಗದ ಶೆಟ್ಟರು ಮುಖ್ಯವಾಗಿ ತಮ್ಮನ್ನು ನೇಕಾರಿಕೆಯೊಂದಿಗೆ ಗುರುತಿಸಿಕೊಂಡಿದ್ದಾರೆ. ಪ್ರಾಚೀನ ಕಾಲದಿಂದಲೂ ಇವರು ನೇಯುವ ಮತ್ತು ನೂಲುವ ಕಾಯಕ ಮಾಡುತ್ತ ಬರುತ್ತಿದ್ದಾರೆ. ರಬಕವಿ, ಬನಹಟ್ಟಿ, ತಮ್ಮದಂಡಿ ಮೊದಲಾದ ಊರುಗಳಲ್ಲಿ ಹೆಚ್ಚಾಗಿ ವಾಸಿಸುವ ಇವರು ಕೈಮಗ್ಗಗಳನ್ನು ನಂಬಿ ಬದಕುತ್ತಿದ್ದಾರೆ. ರಬಕವಿ, ಬನಹಟ್ಟಿ, ತೇರದಾಳ ಇನ್ನು ಇತರೆಡೆ ಇಂದು ವಿದ್ಯುತ್ ಚಾಲಿತ ಮಗ್ಗಗಳು ಇವೆ. ಪ್ರಧಾನವಾಗಿ ಈ ಭಾಗದಲ್ಲಿ ರೇಷ್ಮೆ ಸೀರೆ, ಹತ್ತಿ ಸೀರೆಗಳನ್ನು ಹೆಚ್ಚಾಗಿ ನೇಯುತ್ತಾರೆ. ರಬಕವಿ, ಬನಹಟ್ಟಿಗಳು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತವಾಗಿದ್ದು, ಸಾಕಷ್ಟು ಜನಪ್ರಿಯವಾಗಿವೆ. ದಿನಕ್ಕೆ ೫೦೦-೧೦೦೦/-ಸಂಪಾದಿಸುವ ಇವರು ಸಂತೆ ಮತ್ತು ಉತ್ಸವಗಳಲ್ಲಿ ಮಳಿಗೆಗಳನ್ನು ಹಾಕಿ ಮಾರಾಟ ಮಾಡುತ್ತಾರೆ. ಹಿಂದೆ ಈ

ಸಮುದಾಯವರು ಆಯಗಾರರಲ್ಲಿ ಒಬ್ಬರಾಗಿದ್ದು ಊರಿನ ಪ್ರಮುಖರಿಗೆ ನಿಗದಿತ ವಸ್ತ್ರಗಳನ್ನು ನೇಯ್ದುಕೊಟ್ಟು ಅದಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವ ಪರಿಪಾಠವಿತ್ತು. ಆದರೆ ಈಗ ಈ ಪದ್ಧತಿ ಮಾಯವಾಗಿದೆ. ಆಧುನಿಕತೆಯ ಭರಾಟೆಗೆ ಸಿಲುಕಿದ ಈ ಸಮುದಾಯ ಇಂದು ಹಲವಾರು ಸಂಕಟಗಳಲ್ಲಿ ಜೀವಿಸುತ್ತಿದ್ದಾರೆ.

**ಕಂಚುಗಾರಿಕೆ**

ತೇರದಾಳ ಪರಿಸರದಲ್ಲಿ ವಾಸಿಸುವ ಕಂಚುಗಾರರು ಮುಖ್ಯವಾಗಿ ತಮ್ಮನ್ನು ಕಂಚಿನ ಮೂರ್ತಿ ತಯಾರಿಕೆಯೊಂದಿಗೆ ಗುರುತಿಸಿಕೊಂಡಿದ್ದಾರೆ. ಪ್ರಾಚೀನ ಕಾಲದಿಂದಲೂ ಇವರು ಈ ಕಾಯಕ ಮಾಡುತ್ತ ಬರುತ್ತಿದ್ದಾರೆ. ಹನಗಂಡಿ ಮೊದಲಾದ ಊರುಗಳಲ್ಲಿ ಹೆಚ್ಚಾಗಿ ವಾಸಿಸುವ ಇವರು ದೇವತಾ ವಿಗ್ರಹಗಳನ್ನು, ಪೂಜಾ ಸಾಮಗ್ರಿಗಳನ್ನು ಮತ್ತು ಅಲಂಕಾರಿಕ ವಸ್ತುಗಳನ್ನು ಮತ್ತು ರಾಷ್ಟ್ರ ನಾಯಕರ ಪ್ರತಿಮೆಗಳನ್ನು ಮಾಡುವುದರಲ್ಲಿ ಸಿದ್ಧಹಸ್ಥರಾಗಿದ್ದಾರೆ. ಇವರು ತಯಾರಿಸುವ ವಸ್ತುಗಳು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತವಾಗಿದ್ದು ಸಾಕಷ್ಟು ಜನಪ್ರಿಯವಾಗಿವೆ. ದಿನಕ್ಕೆ ೧೦೦೦/–ಸಂಪಾದಿಸುವ ಇವರು ಸಂತೆ ಮತ್ತು ಉತ್ಸವಗಳಲ್ಲಿ ಮಳಿಗೆಗಳನ್ನು ಹಾಕಿ ಮಾರಾಟ ಮಾಡುತ್ತಾರೆ. ಹಿಂದೆ ಈ ಸಮುದಾಯವರು ಆಯಗಾರರಲ್ಲಿ ಒಬ್ಬರಾಗಿದ್ದು, ಊರಿನ ಪ್ರಮುಖರಿಗೆ ನಿಗದಿತ ವಸ್ತುಗಳನ್ನು ತಯಾರಿಸಿ ಕೊಟ್ಟು ಅದಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವ ಪರಿಪಾಠವಿತ್ತು. ಇಂದಿಗೂ ಈ ಪದ್ಧತಿ ಅಲ್ಲಲ್ಲಿ ಉಳಿದುಕೊಂಡಿದೆ. ಆಧುನಿಕತೆಯ ಭರಾಟೆಗೆ ಸಿಲುಕಿದ ಈ ಸಮುದಾಯ ಇಂದು ಹಲವಾರು ಸಂಕಟಗಳಲ್ಲಿ ಜೀವಿಸುತ್ತಿದ್ದಾರೆ.

**ಚಮ್ಮಾರಿಕೆ**

ತೇರದಾಳ ಪರಿಸರದಲ್ಲಿ ವಾಸಿಸುವ ಚಮ್ಮಾರರು ಮುಖ್ಯವಾಗಿ ತಮ್ಮನ್ನು ಚರ್ಮವಸ್ತುಗಳ ತಯಾರಿಕೆಯೊಂದಿಗೆ ಗುರುತಿಸಿಕೊಂಡಿದ್ದಾರೆ. ಇವರಲ್ಲಿ ಅನೇಕ ಉಪ ಪಂಗಡಗಳಿವೆ. ಪ್ರಾಚೀನ ಕಾಲದಿಂದಲೂ ಇವರು ಪಾದರಕ್ಷೆ, ಬೂಟು, ವ್ಯವಸಾಯಕ್ಕೆ ಅನುಕೂಲವಾದ ಏತ ಮತ್ತು ಇತರೆ ಚರ್ಮದ ವಸ್ತುಗಳನ್ನು ತಯಾರಿಸುವ ಕಾಯಕ ಮಾಡುತ್ತ ಬರುತ್ತಿದ್ದಾರೆ. ತೇರದಾಳ, ತಮದಡ್ಡಿ, ಹನಗಂಡಿ, ರಬಕವಿ, ಬನಹಟ್ಟಿ, ಹೊಸೂರು, ಕಲ್ಲಳ್ಳಿ ಮೊದಲಾದ ಊರುಗಳಲ್ಲಿ ಹೆಚ್ಚಾಗಿ ವಾಸಿಸುವ ಇವರು ಪಾದರಕ್ಷೆ, ಪಾಪೂಸು, ಬೂಟುಗಳನ್ನು ಮಾಡುವುದರಲ್ಲಿ ಸಿದ್ಧಹಸ್ತರಾಗಿದ್ದಾರೆ. ಶೇ. ೧೦% ರಷ್ಟು ಜನರಿಗೆ ಇದು ಮುಖ್ಯ ಕಸುಬು ಆಗಿದ್ದು, ಉಳಿದ ಶೇ. ೧೫% ರಷ್ಟು ಜನರು ಉಪವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇವರು ತಯಾರಿಸುವ ವಸ್ತುಗಳು ಸಾಕಷ್ಟು ಜನಪ್ರಿಯವಾಗಿದ್ದು, ಸಾಕಷ್ಟು ಬೇಡಿಕೆ ಇದೆ. ಚಪ್ಪಲಿ ರಿಪೇರಿ ಮಾಡುವ ಬಿಡಿ ಕೆಲಸಗಾರರು ದಿನಕ್ಕೆ ೧೦೦–೨೦೦/– ಸಂಪಾದಿಸುವ ಇವರು ಸಂತೆ ಮತ್ತು ಪ್ರತಿನಿತ್ಯ ಆಯ್ದ ಸ್ಥಳಗಳಲ್ಲಿ ಇಲ್ಲವೇ ಅಂಗಡಿಗಳಲ್ಲಿಟ್ಟು ಮಾರಾಟ ಮಾಡುತ್ತಾರೆ. ಆದರೆ ಚಪ್ಪಲಿ ತಯಾರು ಮಾಡುವವರು ೧೦೦೦ ಕ್ಕಿಂತಲೂ ಅಧಿಕವಾಗಿ ಸಂಪಾದಿಸುತ್ತಾರೆ. ಹಿಂದೆ ಈ ಸಮುದಾಯವರು ಆಯಗಾರರಲ್ಲಿ ಒಬ್ಬರಾಗಿದ್ದು, ಊರಿನ ಪ್ರಮುಖರಿಗೆ ಪಾದರಕ್ಷೆ, ಏತ ಮತ್ತು ವ್ಯವಸಾಯದ ಮಿಣೆ, ಬಾರಕೋಲು, ನೊಗಸುತ್ತು, ಪಟಗಣೆಗಳನ್ನು ತಯಾರಿಸಿ ಕೊಟ್ಟು ಅದಕ್ಕೆ ತಕ್ಕ ಪ್ರತಿಫಲವನ್ನು ಧವಸ ಧಾನ್ಯಗಳನ್ನು ಪಡೆಯುವ ಪರಿಪಾಠವಿತ್ತು[೧೧]. ಇಂದಿಗೂ ಈ ಪದ್ಧತಿ ಅಲ್ಲಲ್ಲಿ

ಉಳಿದುಕೊಂಡಿದೆ. ಆಧುನಿಕತೆಯ ಭರಾಟೆಗೆ ಸಿಲುಕಿದ ಈ ಸಮುದಾಯ ಇಂದು ಹಲವಾರು ಸಂಕಟಗಳಲ್ಲಿ ಜೀವಿಸುತ್ತಿದ್ದಾರೆ. ಕೈಯಿಂದ ಪಾದರಕ್ಷೆ ತಯಾರಿಕೆ ಇಂದು ಅತಿ ಕಣ್ಮರೆಯಾಗುತ್ತಿದ್ದು ಅವರ ಸ್ಥಾನನ್ನು ಆಧುನಿಕ ಕೈಗಾರಿಕೆಗಳು ಪಡೆದುಕೊಂಡಿವೆ.

ಈ ಮೇಲಿನ ವೃತ್ತಿಗಳಲ್ಲದೆ ಈ ಭಾಗದಲ್ಲಿ ಚಾಪೆ ತಯಾರಿಕೆ, ಬುಟ್ಟಿ ತಯಾರಿಕೆ, ಬಡಿಗತನ ಮೊದಲಾದ ಉಪವೃತ್ತಿಗಳನ್ನು ಕೈಗೊಂಡು ತಮ್ಮ ಜೀವನಕ್ಕೆ ಆಧಾರ ಮಾಡಿಕೊಂಡಿದ್ದಾರೆ. ಇವೆಲ್ಲವು ಹಿಂದೆ ಆಯಗಾರರ ಗುಂಪಿನಲ್ಲಿ ಗುರುತಿಸಿಕೊಂಡಿದ್ದವು.

### ೪.೪. ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು

ಪ್ರಾಚೀನ ಭಾರತದಲ್ಲಿ ಗ್ರಾಮಗಳು ಸ್ವಾವಲಂಬನೆ ಸಾಧಿಸಿದ್ದವು. ಅದರಂತೆ ಅವುಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಮತ್ತು ಗ್ರಾಮಾಡಳಿತದ ಅನುಕೂಲಕ್ಕಾಗಿ ಕೆಲ ಸ್ಥಳೀಯ ಆಡಳಿತ ಸಂಸ್ಥೆಗಳನ್ನು ಇಲ್ಲವೇ ಸಂಘ ಸಂಸ್ಥೆಗಳನ್ನು ರೂಪಿಸಿಕೊಂಡಿದ್ದವು. ಅವುಗಳಲ್ಲಿ 'ಮಣಿಗ್ರಾಮಂ' ಮತ್ತು ವರ್ತಕ ಸಂಘಗಳು, ಜಾಜಮನಿ ವ್ಯವಸ್ಥೆ ಮುಂತಾದವುಗಳನ್ನು ಉಲ್ಲೇಖಿಸಬಹುದು. ವಾಣಿಜ್ಯ ವೃತ್ತಿ ಪ್ರಮುಖವಾಗಿ ಕೈಗಾರಿಕೆಗಳ ಉತ್ಪಾದನೆಯನ್ನು ವಿತರಿಸುವ ಪ್ರಮುಖ ಮಾಧ್ಯಮವಾಗಿದೆ. ಸಾಮಾನ್ಯವಾಗಿ ರಾಜಧಾನಿ, ಉಪವಿಭಾಗಗಳು, ಮುಖ್ಯ ಪಟ್ಟಣಗಳು, ಪ್ರಮುಖ ಸ್ಥಳಗಳು, ಸುತ್ತುಮುತ್ತಲಿನ ಸ್ಥಳಗಳು ಇವು ಪ್ರಮುಖ ವ್ಯಾಪಾರಿ ಕೇಂದ್ರಗಳು ಆಗಿದ್ದವು[೧೨]. ತೇರದಾಳ ಮತ್ತು ಅದರ ಸುತ್ತಲಿನ ಪರಿಸರ ಬೆಲ್ಲ ಸಕ್ಕರೆಯ ಸವಿನಾಡು ಅಷ್ಟೇ ಅಲ್ಲದೇ ಅಂದು ತೇರದಾಳ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು. ತೇರದಾಳ ಗ್ರಾಮದ ಶಾಸನವೊಂದು ಅದು ಪ್ರಮುಖ ವಾಪಾರಿ ಕೇಂದ್ರವಾಗಿತ್ತೆಂದು ದಾಖಲಿಸಿದೆ.

> **"ಶ್ರೀಮಂತ ಕೊಂಡಿ ಮೂಛುಸಾಸಿರದೊಳಗೆ ಹನ್ನರಡಕ್ಕಂ**
> **ಮೊದಲಬಾಡಂ ಬಣಂಜು ಪಟ್ಟನಂ ನಡವೆಯ ಮನೆ ತೇರಿದಾಳಲು ಎಂಬ**
> **ವಿಷಯ ನಿರಪಿತವಾಗಿದೆ"**[೧೩].

ಅಂದರೆ ತೇರದಾಳ ಗ್ರಾಮವು ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತೆಂದು ಭಾವಿಸಿಕೊಳ್ಳಬಹುದಾಗಿದೆ. ಇಲ್ಲಿನ ಮಾರ್ಗಗಳು ವ್ಯಾಪಾರ ವಹಿವಾಟಿಗಾಗಿ ಮತ್ತು ವಿವಿಧ ಪ್ರದೇಶದ ಜನರ ಸಂಪರ್ಕಕ್ಕಾಗಿ ಅತ್ಯಂತ ಪ್ರಮುಖವಾದ ಪಾತ್ರ ವಹಿಸಿವೆ. ಹಿಂದೆ ತೇರದಾಳ ಪ್ರದೇಶದಲ್ಲಿ ಭೂಮಾರ್ಗ, ಜಲಮಾರ್ಗಗಳಿದ್ದು, ಅಂದು ವ್ಯಾಪಾರ ವಹಿವಾಟಿಗೆ ಸಹಕಾರಿಯಾಗಿತ್ತು. ಅಂದಿನ ಕಾಲದಲ್ಲಿ ಭೂಮಾರ್ಗದ ಸಾರಿಗೆಗಾಗಿ ಎತ್ತು, ಕತ್ತೆ, ಕೋಣ ಮತ್ತು ಬಂಡಿಗಳನ್ನು ಬಳಸುತ್ತಿದ್ದರು. ಅದರಂತಯೇ ಜಲಮಾರ್ಗದ ಸಂಪರ್ಕವಾಗಿ ದೋಣಿ ಮತ್ತು ಹಡಗುಗಳನ್ನು ಬಳಸುತ್ತಿದ್ದರು. ಕ್ರಿ.ಶ. ೧೧೮೧ರ ಶಾಸನವು ಅಂದು ವ್ಯಾಪಾರದ ಸಾಧನಗಳಾಗಿ ಬಳಸುತ್ತಿದ್ದ ಸಾಧನ ಮತ್ತು ಪ್ರಾಣಿಗಳನ್ನು ಈ ಮುಂದಿನಂತೆ ದಾಖಲಿಸಿದೆ.

> **ಕತ್ತೆ, ಕೋಣ, ಬಂಡಿ ಭೈತ್ರ, ದೋಣಿ, ದುರ್ಗ್ಗಿಗಳ**
> **ಪಥಮೆಂಬಿವಳೊಳು ಆನೆ ಮಾಣಿಕ ವಸ್ತುವೇನಾದಡಂ ಫೇಳಿ ಜಳಸ್ಥಳ ಯಾ**
> **ತ್ರೆಯಲು ನಡೆವಡಂ ಸುಂಕ ಪರಿಹಾರವಾಗಿ ಕೊಟ್ಟರು**[೧೪].

ಅಂದರೆ ವ್ಯಾಪಾರದಲ್ಲಿ ಅಂದು ಎತ್ತು, ಕತ್ತೆ, ಕೋಣ, ಭಂಡಿ, ದುರ್ಗ್ಗಿ, ಛೈತ್ರ, ದೋಣಿಗಳ ವ್ಯಾಪಾರದ ಸಲುವಾಗಿ ಭೂಮಾರ್ಗ ಮತ್ತು ಜಲಮಾರ್ಗದಲ್ಲಿ ಬಳಸುತ್ತಿದ್ದರು. ಅದರಂತೆ ಪ್ರಾಚೀನ ಐತಿಹಾಸಿಕ ತೇರದಾಳ ಗ್ರಾಮದಲ್ಲಿ ಹಲವಾರು ವರ್ತಕರ ಗುಂಪುಗಳು ಅಸ್ತಿತ್ವದಲ್ಲಿ ಇದ್ದವು. ಇವರು ವ್ಯಾಪಾರವನ್ನೇ ತಮ್ಮ ಪ್ರಮುಖ ವೃತ್ತಿಯಾಗಿಸಿಕೊಂಡಿದ್ದರು. ತೇರದಾಳ ಗ್ರಾಮದ ಶಾಸನೋಲ್ಲೇಖಿತ ವರ್ತಕರು-ಸೆಟ್ಟಿ, ಸೆಟ್ಟಿಗುತ್ತರು, ನಖರರು, ಗವರೆ, ಗಾತ್ರಿಗರು ಮೊದಲಾದವರು ಈ ಪ್ರದೇಶದಲ್ಲಿ ವ್ಯಾಪಾರವನ್ನು ವೃತ್ತಿಯಾಗಿಸಿಕೊಂಡು ಬಾಳಿ ಬೆಳಗಿದ ವರ್ತಕರ ಗುಂಪುಗಳಾಗಿದ್ದವು. ಅವುಗಳಲ್ಲಿ ಪ್ರಮುಖವಾದದ್ದನ್ನು ಈ ಕೆಳಗಿನಂತೆ ಹೆಸರಿಸಿ ವಿವರಿಸಲಾಗಿದೆ.

**ಸೆಟ್ಟಿ**

ಪ್ರಾಚೀನ ಕಾಲದಲ್ಲಿ ಇದು ಪ್ರಮುಖವಾಗಿ ವ್ಯಾಪಾರವನ್ನು ಸೂಚಕವಾಗಿ ಇತ್ತು. ಆನಂತರ ಕ್ರಮೇಣವಾಗಿ ಜಾತಿ ಸೂಚಕವಾಗಿ ಬೆಳೆಯಿತು.

**ಸೆಟ್ಟಿ ಇದರ : ಸಂಸ್ಕೃತ ಪದ – ಶ್ರೇಷ್ಠಿನ್**

**ಶ್ರೇಷ್ಠಿನ ಪದದ : ಕನ್ನಡ ರೂಪ – ಸೆಟ್ಟಿ**

**ಶ್ರೇಷ್ಠಿನ ಮೂಲದಲ್ಲಿ ಪ್ರತಿಷ್ಠಾಸೂಚಿ ಪದವಾಗಿದ್ದನು ಕಾಣುತ್ತೇವೆ**[೧೫].

ಪ್ರಾಚೀನ ಕನ್ನಡ ನಾಡಿನಲ್ಲಿ ಅನೇಕ ಶಾಸನಗಳಲ್ಲಿ ಇಂತಹ ಸೆಟ್ಟಿಯರ ಉಲ್ಲೇಖವು ಕಂಡು ಬರುತ್ತದೆ. ಕ್ರಿ.ಶ. ೧೧೮೧ರ ಕಾಲದ ತೇರದಾಳ ಶಾಸನದಲ್ಲಿ ಈ ರೀತಿ ವಿವರಣೆಯನ್ನು ನಾವು ಕಾಣುತ್ತೇವೆ.

"ನಾನಾ ದೇಶಾಭ್ಯನ್ತರದ ಗವರೆಗಾತ್ರಿಗರಂ ಸೆಟ್ಟಿಗುತ್ತರುಂ ಮಹಾನಾಡಾಗಿ
ನೆರೆದ ಸ್ಥಳದಲು"[೧೬].

ಎಂದು ಈ ರೀತಿಯಾಗಿ ಶಾಸನಗಳಲ್ಲಿ ಸೆಟ್ಟಿಯರ ಉಲ್ಲೇಖವಿದೆ. ಇವರು ಪ್ರಮುಖವಾಗಿ ವ್ಯಾಪಾರ ವೃತ್ತಿಯನ್ನೇ ಜೀವನೋಪಾಯವನ್ನಾಗಿಸಿಕೊಂಡಿದ್ದರು. ಈ ಸೆಟ್ಟಿಗಳು ಸರಕುಗಳನ್ನು ಎತ್ತು, ಕತ್ತೆ, ಕೋಣದ ಮೇಲೆ ಕೆಲವೊಂದು ಭಾರವನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗಿ ವ್ಯಾಪಾರವನ್ನು ನಿರ್ವಹಿಸುತ್ತಿದ್ದರೆಂಬ ಅಂಶ ಶಾಸನಗಳಿಂದ ಮನವರಿಕೆಯಾಗುತ್ತದೆ.

**ಸೆಟ್ಟಿಗುತ್ತರು**

ಐತಿಹಾಸಿಕ ತೇರದಾಳ ಶಾಸನಗಳಲ್ಲಿ ಕಾಣಬರುವ ವರ್ತಕರ ಪ್ರಕಾರಗಳಲ್ಲಿ ಸೆಟ್ಟಿಗುತ್ತವು ಪ್ರಮುಖವಾದದ್ದು. ಸೆಟ್ಟಿಗುತ್ತರ ಪೂರ್ವ ಪದ : 'ಸೆಟ್ಟಿ' ಅಂದರೆ 'ವರ್ತಕ' ಅರ್ಥವುಳ್ಳದ್ದು. ಉತ್ತರಪದ : 'ಗುತ್ತ' ಅಂದರೆ 'ಎತ್ತರವಾದ ಸ್ಥಳ' ಎಂಬರ್ಥದಲ್ಲಿ ಬಳಕೆಯಾಗುತ್ತದೆ. ಗುತ್ತ ಶಬ್ಧದ ಅರ್ಥ : ಉನ್ನತವಾದ, ಶ್ರೇಷ್ಠವಾದ, ಹಿರಿಯ ಎಂದಾಗುತ್ತದೆ. ಇದರಿಂದ ಸೆಟ್ಟಿಗುತ್ತ ಹಿರಿಯ ವರ್ತಕ ಅಥವಾ ವರ್ತಕರಲ್ಲಿ ಉಚ್ಚ ಶ್ರೇಣಿಯವನೆಂದಾಗುತ್ತದೆ. ಒಟ್ಟಿನಲ್ಲಿ 'ಸೆಟ್ಟಿ' ಯರಲ್ಲಿಯೇ "ಉನ್ನತ ವರ್ಗ" ಸೂಚಕ ಪದ ಸೆಟ್ಟಿಗುತ್ತವಾಗಿರುತ್ತದೆ[೧೭].

ಆದ್ದರಿಂದ ಪ್ರಾಚೀನ ಐತಿಹಾಸಿಕ ತೇರದಾಳದ ಕ್ರಿ.ಶ. ೧೧೨೩ರ ಕಾಲದ ಶಾಸನದಲ್ಲಿ ಸೆಟ್ಟಿಗುತ್ತ ಪದದ ಹೆಸರನ್ನು ಸೂಚಿಸುತ್ತಿದ್ದು,[೧೮] ಇವರು ಸರಕು ಸೇವೆಗಳನ್ನು ಪ್ರಾಣಿಗಳ ಮೇಲೆ

ಹೇರಿಕೊಂಡು ಗ್ರಾಮ ಪ್ರಮುಖವಾದ ಪಟ್ಟಣಗಳಿಗೆ ಹೋಗಿ ವ್ಯಾಪಾರವನ್ನು ಕೈಗೊಳ್ಳುವವರಾಗಿದ್ದ ವರ್ತಕರ ಪ್ರಕಾರಗಳಲ್ಲಿ ಒಬ್ಬರಾಗಿದ್ದಾರೆ.

**ನಕರರು**

ಪ್ರಾಚೀನ ಕನ್ನಡ ನಾಡಿನಲ್ಲಿ ಇದೊಂದು ಪ್ರಮುಖವಾದ ವರ್ತಕ ಪ್ರಕಾರ ನಕರ ಎಂಬ ಪದವು ಶಾಸನಗಳಲ್ಲಿ ಪ್ರಸ್ತಾಪವಿದೆ. ನಕರ ವೆಂದರೆ-ಅಂಗಡಿಯ ಸೆಟ್ಟಿಯರೆಂದು ಕರೆದಿರುವುದರಿಂದ ಸಂತೆ ಪಟ್ಟಣಗಳಲ್ಲಿ ಸ್ಥಿರವಾದ ಅಂಗಡಿ ವ್ಯಾಪಾರಿಗಳಿರುವರೆಂದು ಹೇಳಬಹುದು. ಇವರು ವಿವಿಧ ಸಂತೆ ಪೇಟೆಗಳಿಗೆ ಹೋಗಿ ಅಲ್ಲಿಂದ ವಿವಿಧ ಬಗೆಯ ಸರಕುಗಳನ್ನು ಖರೀದಿಸಿ ಬಯಲು ಅಂಗಡಿ ಹಾಗೂ ಮಳಿಗೆಗಳಲ್ಲಿಟ್ಟು ಮಾರಾಟ ಮಾಡುತ್ತಿದ್ದರು[೧೯]. ಇದೇ ರೀತಿಯ ಅರ್ಥ ನಕರ, ನಗರ, ಸಮಸ್ತ ನಕರ ಪದಗಳು ಶಾಸನಗಳಲ್ಲಿ ಕಂಡು ಬರುತ್ತದೆ.

ಕ್ರಿ.ಶ. ೧೧೨೩ರ ಕಾಲದ ತೇರದಾಳ ಶಾಸನವು ಈ ಕೆಳಗಿನಂತೆ ತಿಳಿಯಪಡಿಸುತ್ತದೆ.

**"ಸಕವಷ(ರ್ಷ) ೧೦೪೬ನೆಯ ಶುಭಕ್ರತ್ಸಂವತ್ಸರದ ವೈಶಾಖದ ಪುಣ್ಣಮಿ ಬ್ರಹಸ್ಪತಿ ವಾದಲು ಗೊಂಕ ಜಿನಾಲಯಕ್ಕೆ ಪನ್ನಿರ್ವ್ವಗ್ಗಾವುಂಡುಗಳುಮಂ ಸಮತ್ತ ಪರಿವಾರ ಪ್ರಜೆಗಳಮಂ ಆ ಸ್ಥಳದ ಸೆಟ್ಟಿ"**
**ಗುತ್ತ ಮುಖ್ಯ ಸಮಸ್ತ ನಕರಂಗಳುಮಂ ಬರಿಸಿ ನೇಮಿತೀರ್ತ್ಥೇಶ್ವರನ ಬಸದಿಯ ರಿಷಿಯ ರಾಹಾರದಾನಕ್ಕಂ ದೇವರಷ್ಟವಿಧಾರ್ಚನೆಗಂ ಖಡಪ್ಪು(ಸು)ಟಿತ ಜೀರ್ಣ್ಣೋದ್ಧಾರಕ್ಕೆ ಪೆಸರ್ಗ್ಗೊಂಡು ಎಂದಿದೆ**[೨೦].

ಹೀಗೆ ನಕರರು ಪಟ್ಟಣ ಪ್ರದೇಶಗಳಲ್ಲಿ ಇದ್ದುಕೊಂಡು ಸತತ ಪರಿಶ್ರಮ ಪ್ರಯತ್ನಗಳ ಮೂಲಕ ವ್ಯವಹಾರ ಕಾರ್ಯಗಳಿಗೆ ಜೀವ ತುಂಬುವುದರೊಂದಿಗೆ ದಾನ-ದತ್ತಿಗಳನ್ನು ನೀಡುವುದರ ಮೂಲಕ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವುದರ ಮೂಲಕ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ.

**ಗವರೆ**

ಪ್ರಾಚೀನ ಕಾಲದಲ್ಲಿ ವ್ಯಾಪಾರ ಮಾಡುವ ಪ್ರಮುಖ ವರ್ತಕರ ಪ್ರಕಾರ ಪ್ರಾಚೀನ ಐತಿಹಾಸಿಕ ತೇರದಾಳ ಗ್ರಾಮದ ಸುತ್ತಮುತ್ತಲಿನಲ್ಲಿ ಹೆಚ್ಚಾಗಿ ವೀಳ್ಯೆದೆಲೆಯನ್ನು ಬೆಳೆಯುತ್ತಿದ್ದರು. ಇವರು ಕತ್ತೆ ಮೊದಲಾದ ಪ್ರಮುಖ ಪ್ರಾಣಿಗಳ ಮೇಲೆ ವೀಳ್ಯೆದೆಲೆಯನ್ನು ಹೇರಿಕೊಂಡು ಸುತ್ತಮುತ್ತಲ್ಲಿನ ಊರಿನಿಂದ ಊರಿಗೆ ಅಲೆಯುತ್ತ ವ್ಯಾಪಾರ ಮಾಡುವ ವರ್ತಕರ ಪ್ರಕಾರವಾಗಿದ್ದು[೨೧], ಪ್ರಾಚೀನ ಮಧ್ಯಕಾಲೀನ ಕನ್ನಡ ನಾಡಿನ ಅನೇಕ ಶಾಸನಗಳಲ್ಲಿ ಗವರೆ ವರ್ತಕರ ಉಲ್ಲೇಖ ಬರುತ್ತಿದ್ದು ತೇರದಾಳ ಗ್ರಾಮದ ಕ್ರಿ.ಶ. ೧೧೮೧ ರ ಕಾಲದ ಶಾಸನದಲ್ಲಿ **"ನಾನಾ ದೇಶಭ್ಯನ್ತರದ ಗವರೆ ಗಾತ್ರಿಯರುಂ"** ಎಂಬ ಉಲ್ಲೇಖವಿದೆ[೨೨].

**ಗಾತ್ರಿಯರು**

ವೀಳ್ಯೆದೆಲೆಯನ್ನು ವ್ಯವಸ್ಥಿತವಾಗಿ ಜೋಡಿಸಿ ಅದರ ಸುತ್ತಲು ಬಾಳೆಗೆಜ್ಜೆ ಸುತ್ತಿ ಅವುಗಳನ್ನು ಚೆನ್ನಾಗಿ ಕಟ್ಟಿ ತಲೆಯ ಮೇಲೆ ಹೆಗಲು ಮೇಲೆ ಹೊತ್ತು ಇಲ್ಲವೇ ಪ್ರಾಣಿಗಳ ಮೇಲೆ ಹೇರಿಕೊಂಡು ವ್ಯಾಪಾರ ಮಾಡುವವರು ಗಾತ್ರಿಗರು ಆಗಿದ್ದರು. ಶಾಸನೋಕ್ತ ಎಲೆಯ

ಗಾತ್ರಿಗರು[೨೩] ಕುರಿತು ತೇರದಾಳ ಗ್ರಾಮದ ಶಾಸನಗಳು ಪರಿಚಯಿಸುತ್ತವೆ. ಉದಾ: ಕ್ರಿ.ಶ. ೧೧೨೩ರ ಕಾಲದ ಶಾಸನದಲ್ಲಿ-

**ಹಲಸಿಗೆ ಹನ್ನಿರ್ಚ್ಚಾಸಿರದ ಹೆಬ್ಬಟ್ಟೆಯಲು ನಡೆದ ಗಾತ್ರಿಗರು**
**ದೇವರಿಗೆ ಅಷ್ಟವಿದಾರ್ಚನೆ ನಡೆವನ್ತಾಗಿ ಹೇಳೆಂಗೆ ನೂಳುವೊ**
**ಳ್ಳೆಲೆಯಂ ಬಿಟ್ಟರು**[೨೪].

ಎಂಬ ಅಂಶ ಕಂಡುಬರುತ್ತದೆ. ಒಟ್ಟನಲ್ಲಿ ವೀಳ್ಯದೆಲೆ ವ್ಯಾಪಾರವನ್ನು ನಾಡಿನ ತುಂಬ ಬೆಳೆಸಿದ ಕೀರ್ತಿ ಇವರದು. ಎಲೆಯ ಉತ್ಪಾದನೆ ಹಾಗೂ ಮಾರಾಟಗಳಲ್ಲಿ ಗಣನೀಯ ಪಾತ್ರ ಸಾಧಿಸಲು ಈ ಗವಳೆ ಗಾತ್ರಿಗರು ಅವಿರತವಾಗಿ ದುಡಿದಿರುವುದನ್ನು ಕಾಣುತ್ತೇವೆ.

ವ್ಯಾಪಾರ ವಹಿವಾಟನ್ನು ಹಿಂದಿನಿಂದಲೂ ತೇರದಾಳ ಪರಿಸರದಲ್ಲಿ ಕುಶಲಕರ್ಮಿ ಹಾಗೂ ವರ್ತಕರು ನಡೆಸಿಕೊಂಡು ಹೋಗುತ್ತಿದ್ದರು. ಅವರು ತಮ್ಮ ವೃತ್ತಿಗಳಿಗೆ ಸಂಬಂಧಿಸಿದ ವಿವಿಧ ಬಗೆಯ ವ್ಯಾಪಾರಿ ಶ್ರೇಣಿಗಳನ್ನು ರಚಿಸಿಕೊಂಡಿದ್ದರು. ಕುಶಲಕರ್ಮಿಗಳು ತಮ್ಮ ಜಾತಿಗಳಿಗೆ ಮತ್ತು ವ್ಯಕ್ತಿಗಳ ಆಧಾರದ ಮೇಲೆ ಶ್ರೇಣಿಗಳನ್ನು ರಚಿಸಿಕೊಂಡಿದ್ದರು. ಕುಶಲಕರ್ಮಿಗಳು ಹೆಚ್ಚಾಗಿ ಅಗತ್ಯ ವಸ್ತುಗಳ ಉತ್ಪಾದನೆಯಲ್ಲಿ ತೊಡಗಿದ್ದರು. ವೃತ್ತಿಗಳು ಹುಟ್ಟಿ ಬೆಳೆದ ತರುವಾಯವೇ ಸಂಘಗಳ ರಚನಾಕಾರ್ಯಗಳು ಆರಂಭಗೊಂಡವು. ಕೆಲವೊಂದು ಪ್ರಮುಖ ವೃತ್ತಿಯವರು ಮಾತ್ರ ಸಂಘಗಳನ್ನು ಸಂಯೋಜಿಸಿಕೊಂಡರು. ಅದರಲ್ಲಿ ಪ್ರಮುಖವಾಗಿ ಹೆಚ್ಚಾಗಿ ಕುಶಲಕರ್ಮಿಗಳು ಅಗತ್ಯ ವಸ್ತುಗಳ ಉತ್ಪಾದನೆಯಲ್ಲಿ ತೊಡಗಿದ್ದರೆ ವರ್ತಕ ಶ್ರೇಣಿಗಳು ಅವುಗಳ ಅಗತ್ಯ ಸಾಗಾಣಿಕೆ ಮತ್ತು ಮಾರಾಟದಲ್ಲಿ ತೊಡಗಿದ್ದರು. ಆರ್ಥಿಕವಾಗಿ ಪ್ರಬಲವಾಗಿದ್ದ ವರ್ತಕ ಶ್ರೇಣಿಗಳು ಕುಶಲಕರ್ಮಿಗಳು ಮತ್ತು ಇತರೆ ಸಂಘಗಳಿಗೆ ಸಾಲದ ಸೌಲಭ್ಯಗಳನ್ನು ಒದಗಿಸುತ್ತಿದ್ದವು[೨೫].

ವರ್ತಕ ಶ್ರೇಣಿಗಳ ಮುಖಂಡ ಅಥವಾ ಅಧ್ಯಕ್ಷನನ್ನು ಪಟ್ಟಣಶೆಟ್ಟಿ ಎಂದು ಕೆಲವು ಭಾಗಗಳಲ್ಲಿ ಪಟ್ಟಣ ಸ್ವಾಮಿ ಎಂದು ಕರೆಯಲ್ಪಡುತ್ತಿದ್ದರು. ಶ್ರೇಣಿಗಳ ಕಾರ್ಯಕಲಾಪ ಹಾಗೂ ಸಭೆಗಳು ಹೆಚ್ಚಾಗಿ ಅವರವರ ದೇವಾಲಯಗಳಲ್ಲಿ ನಡೆಯುತ್ತಿದ್ದವು. ವರ್ತಕ ಸಂಘದ ಪ್ರಕಾರಗಳಲ್ಲಿ ಒಂದಾದ ವಿನಿಮಯ ಸಂಘದಲ್ಲಿ ನೇರ ಬರುವ "ಅಯ್ಯಾವೊಳೆ ಐನೂರ್ವರ್" ಸಂಘದ ಉಲ್ಲೇಖವು ಕನ್ನಡ ನಾಡಿನ ಹಲವು ಶಾಸನಗಳಲ್ಲಿ ತೋರಿ ಬರುವಂತೆ ಕ್ರಿ.ಶ. ೧೧೮೧ರ ಕಾಲದ ತೇರದಾಳದ ಶಾಸನದಲ್ಲಿಯೂ ಕಂಡುಬರುತ್ತದೆ[೨೬].

**ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಶತವೀರ ಶಾಸನಲಬ್ಧಾನೇಕ**
**ಗುಣಗಣಾಲಂಕೃತ ಸತ್ಯ ಶೌಚಾಚಾರ ಚಾರುಚಾರಿತ್ರ ನಯವಿನಯವಿಜ್ಞಾನ ವೀರಬಣಂಜು**
**ಧರ್ಮ್ಮಪ್ರತಿಪಾಳನ ವಿಶುದ್ಧ**
**ಗುಡ್ಡಧ್ವಜ ವಿರಾಜಿತನೇಕ ಸಾಹಸಲಕ್ಷ್ಮೀ ಸಮಾಲಿಂಗಿತ ವಕ್ಷಸ್ಥಳ ಭುವನ**
**ಪ್ರಕಾರಮೋನ್ನತರುಂ**
**ಮುಖಪಟ್ಟೆ ಗುರುಪಟ್ಟೆ ಬಲದೇವ ವಾಸುದೇವ ಖಂಡಳಿ ಮೂಳಭದ್ರೆ ವಂಶೋದ್ಭವರುಂ**
**ಪದ್ಮಾವತೀದೇವಿ ಲಬ್ಧವರಪ್ರಸಾದರು.**
**ಮಪ್ಪ ಶ್ರೀಮದಯ್ಯಾವಳೆಯಯ್ನೂರ್ವ್ವಸ್ವಾಮಿಗಳು ಕುತ್ತಳ ವಿಷದೊಳು ಗ್ರಾಮ ನಗರ**

**ಖೇಡ ಕರ್ವ್ವಡ ಮಡಂಬ ದ್ರೋಣಾಮುಖ ಪಟ್ಟಣಂಗಳಿಂದೆಮನೇಕ ಮಾಟಕೂಟ**
**ಪ್ರಸಾದ ದೇವಾಯತನಂಗಳಿಂದಮೊಪ್ಪು.**
**ವಗ್ರಹಾರ ಪಟ್ಟಣಂಗಳಿಂದ ಅತಿಶಯವಪ್ಪ ಶ್ರೀಮತು ಕೂಂಡಿ ಮೂಳುಸಾಸಿರದೊಳಗೆ**
**ಹನ್ನೆರಡಕ್ಕಂ ಮೊದಲ ಬಾಡಂ ಬಣಂಜು ಪಟ್ಟಣಂ ನಡವೆಯ ಮನೆ**
**ತೇರಿದಾಲದೊಳು**[೨೭].

ಹೀಗೆ ಈ ಮೇಲಿನ ಶಾಸನ ಪಾಠದಲ್ಲಿ ಉಲ್ಲೇಖಗೊಂಡಿರುವ ಅಯ್ಯಾವೊಳೆ ಐನೂರ್ವರ್ ಸ್ವಾಮಿಗಳ ಸಂಘಗಳ ಕುರಿತು ಅವರ ವಂಶ, ದೈವ, ಚಿಹ್ನೆ, ಪ್ರಶಸ್ತಿಗಳ ಕುರಿತು ಚರ್ಚಿಸುವುದು ಅತಿ ಅಗತ್ಯವಾಗಿದೆ.

**ವಂಶ**

**ಬಲದೇವ ವಾಸುದೇವ ಖಂಡಳಿ ಮೂಳಭದ್ರ ವಂಶೋದ್ಭವರುಂ**
**ವಾಕ್ಯಗಳು ಖಂಡಳಿ ಮೂಲ ಭದ್ರ ವಂಶಜರು.**

ಈ ಸಂಘದ ಸದಸ್ಯರು ಅಂತೆಯೇ ಕ್ರಿ.ಶ. ೧೧೮೧ರ ಕಾಲದ ತೇರದಾಳ ಶಾಸನದಲ್ಲಿ ಬಲದೇವ, ವಾಸುದೇವ ಉಲ್ಲೇಖವಿದೆ[೨೮].

**ದೈವ**

ಶ್ರೇಣಿಗಳು ತಮ್ಮದೇ ಆದ ದೈವ ಹಾಗೂ ಚಿಹ್ನೆಗಳನ್ನು ಹೊಂದಿದವು ಹಿಂದೂಗಳಲ್ಲಿ ಶಕ್ತಿಯ ಆರಾಧನೆಗೆ ವಿಶೇಷವಾದ ಸ್ಥಾನವನ್ನು ನೀಡಲಾಗಿದೆ. "ಅಯ್ಯಾವೊಳೆ ಐನೂರ್ವರು ಸ್ವಾಮಿಗಳು" ಹಿಂದೂ ಪರಂಪರೆಯಲ್ಲಿ ನಡೆದು ಬಂದವರು. ಕ್ರಿ.ಶ. ೧೧೮೧ರ ಕಾಲದ ತೇರದಾಳ ಶಾಸನಗಳಲ್ಲಿ ಇವರನ್ನು ಪದ್ಮಾವತೀದೇವೀಲ್ದ ವರಪ್ರಸಾದರು ಜೈನ ವರ್ತಕರ ಶ್ರೇಣಿಗೆ ಪದ್ಮಾವತೀದೇವಿ ಆರಾಧ್ಯ ದೇವತೆಯಾಗಿದ್ದಳು[೨೯]. ಎಂದು ಕರೆದಿರುವುದರಿಂದ ಇವರು ಶಕ್ತಿಯ ಪರಮ ಆರಾಧಕರೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಧರ್ಮ ಚಕ್ರ ಅವರ ಪ್ರಮುಖ ವರ್ತಕ ಚಿಹ್ನೆಯಾಗಿದ್ದಿತು.

**ಚಿಹ್ನೆಗಳು**

ರಾಜ್ಯ ಚಿಹ್ನೆಗಳನ್ನು ಹೆಚ್ಚಾಗಿ ಪ್ರಭು ವರ್ಗಕ್ಕೆ ಮಾತ್ರ ಸೀಮಿತವಾಗಿದ್ದವು. ಕೆಲವೊಂದು ಸಲ ಚಿಹ್ನೆಗಳನ್ನು ಸೈನ್ಯದ ದಂಡನಾಯಕರುಗಳಿಗೆ, ವಿದ್ವಾಂಸರಿಗೆ, ವೀರರಿಗೆ, ಚಕ್ರವರ್ತಿಯ ಬಿರುದುಗಳನ್ನು ಮತ್ತು ರಾಜ ಚಿಹ್ನೆಗಳನ್ನು ದಯಪಾಲಿಸುತ್ತಿದ್ದರು. ಪ್ರಜಾ ವರ್ಗಕ್ಕೆ ಯಾವುದೇ ಕಾರಣಕ್ಕೆ ಸ್ವತಂತ್ರವಾಗಿ ರಾಜ ಚಿಹ್ನೆಗಳನ್ನು ಹೊಂದುವ ಅಧಿಕಾರಿವಿರಲಿಲ್ಲ. ಆದರೆ ಇವರಿಗೆ ಸಂಬಂಧಿಸಿದ "ಶ್ವೇತಪತ್ರ ಚಾಮರಾದ್ಯನೇಕ ರಾಜ್ಯಲಕ್ಷಣಾಲಕ್ಷಿತರುಂ" ವಾಕ್ಯ ಅಯ್ಯಾವೊಳೆ ಐನೂರ್ವರು (ಅತಂರ ರಾಜ ಚಿಹ್ನೆ)ಗಳನ್ನು ಹೊಂದಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ. ಕಾರಣ ರಾಜ್ಯದಲ್ಲಿ ಚಕ್ರವರ್ತಿಗೆ ಸಮಾನವಾದ ಸ್ಥಾನಮಾನ, ವಾದ್ಯ, ಧ್ವಜ, ಲಾಂಛನ, ಬಿರುದು-ಬಾವಲಿ ಮುಂತಾದ ಅಧಿಕಾರವನ್ನು ಅಯ್ಯಾವೊಳ್ಳ ಐನೂರ್ವರು ಸ್ವಾಮಿಗಳು ಅಧಿಕೃತವಾಗಿ ಪಡೆದಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ. ೧೧೮೧ರ ಕಾಲದ ತೇರದಾಳ ಶಾಸನವು ಅಯ್ಯಾವೊಳೆ ಐನಾರ್ವರ್ ಸ್ವಾಮಿಗಳುಳ್ಳ ಸಂಘವು 'ಗುಡ್ಡ-ಧ್ವಜ' ವನ್ನು ತಮ್ಮ ಚಿಹ್ನೆಯನ್ನಾಗಿ ಮಾಡಿಕೊಂಡಿರೆಂಬುದನ್ನು ತಿಳಿಯಪಡಿಸುತ್ತದೆ.

**ಪ್ರಶಸ್ತಿ**

ಪ್ರಶಸ್ತಿ ಎಂಬ ಅಂಶವು ಶಾಸನಗಳಲ್ಲಿ ಇವರನ್ನು ಕುರಿತು ಎದ್ದು ಕಾಣುವ ಭಾಗವಾಗಿದೆ. ಅಯ್ಯಾವೊಳೆ ಐನೂರ್ವರನ್ನು ಪ್ರಸ್ತಾಪಿಸುವ ಶಾಸನಗಳಲ್ಲಿ ಕೆಲವು ಪ್ರಶಸ್ತಿಯಿಂದಲೇ ಪ್ರಾರಂಭವಾಗುತ್ತವೆ. ಇದಕ್ಕೆ ಅತ್ಯುತ್ತಮ ನಿದರ್ಶನವಾಗಿ ಕ್ರಿ.ಶ.೧೧೮೧ರ ಕಾಲದ ತೇರದಾಳದ ಶಾಸನವು ಅಯ್ಯಾವೊಳೆ ಐನೂರ್ವರು ಸ್ವಾಮಿಗಳ ಬಗೆಗಿನ ಪ್ರಶಸ್ತಿಗಳ ಕುರಿತು ಸಕಲ ಸಾಮಗ್ರಿ ಒದಗಿಸುತ್ತದೆ. ಈ ವರ್ತಕ ಸಂಘಕ್ಕೆ ಇರುವ ಪ್ರಶಸ್ತಿಗಳ ಕುರಿತು ಈ ಶಾಸನವು ಇಂತು ಮಾಹಿತಿ ಒದಗಿಸುತ್ತದೆ.

**"ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಶತವೀರ ಶಾಸನಲಬ್ಧನೇಕ**
**ಗುಣಗಣಾಲಂಕೃತ ಸತ್ಯ ಶೌಚಾಚಾರ ಚಾರುಚಾರಿತ್ರ ನಯವಿನಯವಿಜ್ಞಾನ ವೀರಬಣಂಜು**
**ದರ್ಮ್ಮಪ್ರತಿಪಾಳನ ವಿಶುದ್ಧ".**

ಎಂಬ ಶಾಸನ ಉಲ್ಲೇಖಿತ ಅಂಶಗಳೆಲ್ಲವೂ ದೊರೆಗಳ ಪ್ರಶಸ್ತಿಯನ್ನು ಎತ್ತಿ ತೋರಿಸುತ್ತವೆ.

ಹೀಗೆ ಪ್ರಾಚೀನ ಐತಿಹಾಸಿಕ ತೇರದಾಳ ಶಾಸನ ಉಲ್ಲೇಖಿತ ಅಯ್ಯಾವೊಳೆ ಐನೂರ್ವರ ಸ್ವಾಮಿಗಳ ಗುಣಶೇಷತೆ, ಗುಣಶೀಲತೆ, ಗುಣ ಶ್ರೀಮಂತಿಕೆಗಳನ್ನು ಕುರಿತು ಶಾಸನಗಳು ಕೊಂಡಾಡುತ್ತವೆ.

ಅಂದು ವ್ಯವಹಾರಗಳಲ್ಲಿ ಬಳಸಲ್ಪಡಬಹುದಾದ ತೂಕ ಮತ್ತು ಅಳತೆಗಳ ವಿಷಯವಾಗಿ ಕನ್ನಡ ನಾಡಿನ ಶಾಸನಗಳ ಮುಖಾಂತರ ನಮಗೆ ಹೆಚ್ಚಿನ ಮಾಹಿತಿಗಳು ಒದಗಿ ಬರುವುದಿಲ್ಲವಾದರೂ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದಲ್ಲಿ ದೊರೆತ ಕೆಲ ಶಾಸನಗಳಲ್ಲಿ ಅಳತೆ ಮಾಪನಗಳ ಉಲ್ಲೇಖವಿದೆ. ತೇರದಾಳದ ಅಂದಿನ ಸಾಮಾಜಿಕ ಪದ್ಧತಿಯಲ್ಲಿ ಕೆಲವು ದಿನನಿತ್ಯದ ಜೀವನಕ್ಕಾಗಿ ಬಳಸಲ್ಪಡುವ ವಸ್ತುಗಳನ್ನು ಅಳತೆಯ ಸಾಧನದಿಂದ ಅಳೆಯುವ ಪದ್ಧತಿಯು ರೂಢಿಯಲ್ಲಿತ್ತು. ಉದಾ: ಎಣ್ಣೆಯನ್ನು ವ್ಯಾಪಾರಿಗಳು 'ಸೊಲ್ಲಿಗೆ' ಎಂಬ ಸಾಧನದಿಂದ ಅಳೆಯುವ ವಾಡಿಕೆ ಇತ್ತು. ಕ್ರಿ.ಶ. ೧೧೨೩ರ ಕಾಲದ ತೇರದಾಳದ ಶಾಸನವೊಂದು ಎಣ್ಣೆಯನ್ನು ಅಳೆಯುವ ಮಾಪನ ಕುರಿತು ಈ ಕೆಳಗಿನಂತೆ ಮಾಹಿತಿಯನ್ನು ನೀಡುತ್ತದೆ.

. . . . . . . **ತೆಲ್ಲಿಗರು ಮಾನ್ಯ**

**ಸಾಮ್ಯವೆನ್ನದೆ ದೇವರ ಸಂಜೆ ಸೊಡರಿಂಗಂ ಧೂಪಾರತಿಗಂ ಗಾಣಕ್ಕೆ ಸೊಲ್ಲಗೆ**

ಹೊಳಿಗನಿಂ ಬಂದ ಎಣ್ಣೆಯ ಕೊಡಕ್ಕೆ ಸೊಲ್ಲಗೆ ಯಿನ್ತವಂ ಬಿಟ್ಟರು ಗಣ[೩೦]. ಎಂಬ ಶಾಸನದ ವಿವರಣೆಯಲ್ಲಿ "ಸೊಲ್ಲಿಗೆ" ಮಾಪನದ ಪದವು ಬಳಕೆಯಲ್ಲಿದ್ದು ಇದು ಎಣ್ಣೆಯನ್ನು ಅಳೆಯುವ ಒಂದು ಸಾಧನವಾಗಿದೆ.

ಈ ಪರಿಸರದಲ್ಲಿ ಪ್ರಾಚೀನ ಕಾಲದಲ್ಲಿ ಹಣವು ಚಲಾವಣೆಗೆ ಬರುವ ಪೂರ್ವದಲ್ಲಿ ವ್ಯವಹಾರಗಳಲ್ಲಿ ವಸ್ತು ವಿನಿಮಯ ಪದ್ಧತಿ ಅಸ್ತಿತ್ವದಲ್ಲಿ ಇತ್ತು. ಪ್ರಾಚೀನ ಮಧ್ಯಕಾಲೀನ ಕರ್ನಾಟಕದ ಕೂಂಡಿನಾಡು ೩೦೦೦ ನಾಡಿನ ತೇರದಾಳ ಕಂಪಣದಲ್ಲಿಯೂ ಹಲವು ಪ್ರಕಾರದ ನಾಣ್ಯಗಳು ಬಳಕೆಯಲ್ಲಿರುವುದು ಶಾಸನಾಧಾರಗಳಿಂದಲೇ ತಿಳಿದುಬರುತ್ತದೆ. ಕ್ರಿ.ಶ. ೧೧೨೩ರ ಶಾಸನ ಮತ್ತು ಕ್ರಿ.ಶ. ೧೧೮೧ರ ಕಾಲದಲ್ಲಿ ತೇರದಾಳ ಶಾಸನಗಳು ನಾಣ್ಯಗಳ ಕುರಿತು ವಿವರಣೆ ನೀಡುತ್ತವೆ.

**ಅಲ್ಲಿಯ ಸೆಟ್ಟಿಗುತ್ತ ಮುಖ್ಯನಗರಂಗಳು ತಾವು ಮಾಳಿಕೊಣ್ಡ ಭಣ್ಡ ಮಾಣಿಕ ಪಟ್ಟ**
**ಸೂತ್ರವಾದಡಂ ಹೊ[೦]ಗೆ ವೀಸ ಲಾಭದಾಯದ ಅಡಕೆ ಹೊಗೆ ಹನ್ನೊಂದು ತಾವು**
**ತೆಗೆದದ ಯೆಲೆಯ ಹೇಳಿಗೆಂ ಅಗದ**
**ನರುವತ್ತಿಗರು ತೆಗೆದ ಹೇಳಿಗೆಂ ನೂಳಿಲೆ ಯಿನ್ತಿನಿತುವಂ ಬಿಟ್ಟರು.**
**. . . . . . . ಮತ್ತಂ ಶಾಸನ**
**ಪರಿಹಾರಿಗರೆನ್ನದೆ ವೊಕ್ಕಲೊನ್ದು ಪಣವಂ ಬಿಟ್ಟರು**[೩೧].

ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದಲ್ಲಿ ಶಾಸನಗಳ ಆಧಾರದಿಂದ 'ವೀಸ್' ಮತ್ತು 'ಪಣ' ಎಂಬ ಹೆಸರಿನ ನಾಣ್ಯಗಳ ಅಸ್ಥಿತ್ವದಲ್ಲಿರುವುದನ್ನು ಇವು ಸೂಚಿಸುತ್ತವೆ.

### ೪.೫. ತೆರಿಗೆ ಮತ್ತು ಕಂದಾಯ ವ್ಯವಸ್ಥೆ

ತೇರದಾಳ ಪ್ರದೇಶದಲ್ಲಿ ಹಿಂದಿನಿಂದಲೂ ಹಲವು ರೀತಿಯ ತೆರಗೆ ಮತ್ತು ಕಂದಾಯ ವ್ಯವಸ್ಥೆ ಇರುವದನ್ನು ಅಲ್ಲಿನ ಶಾಸನ ಮತ್ತು ಇತರೆ ಆಕರಗಳಿಂದ ಗುರುತಿಸಬಹುದು. ಆಧುನಿಕ ಸರ್ಕಾರ ವ್ಯವಸ್ಥೆ ಇಂದು ಮನೆ ತೆರಗೆ, ವ್ಯಾಪರ ತೆರಗೆ, ನಿವೇಶನ ತೆರಿಗೆ, ಭೂಕಂದಾಯ, ನೀರಿನ ತೆರಿಗೆ, ಆಮದು ಮತ್ತು ರಫ್ತುಗಳ ಮೇಲಿನ ತೆರಿಗೆ, ಸೀಮಾ ಸುಂಕ, ಟೋಲ್‌ಸುಂಕ ಮೊದಲಾದ ತೆರಿಗೆ ಮತ್ತು ಕಂದಾಯಗಳನ್ನು ಜನರಿಂದ ವಸೂಲಿ ಮಾಡುತ್ತಿದೆ. ಭಾರತ ಕೃಷಿ ಪ್ರಧಾನವಾದ ದೇಶವಾಗಿದೆ ಇಲ್ಲಿ ಬರ, ಕ್ಷಾಮ, ನೆರೆಹಾವಳಿಗಳು ಅಧಿಕ ಉಂಟಾಗುತ್ತವೆ. ಜಲ ತೆರಿಗೆಗೆ ಸಂಬಂಧಿಸಿದ ವಿಧಿ ವಿಧಾನಗಳು ಹಾಗೂ ಬಳಕೆದಾರರು ಪಾವತಿಸಬೇಕಾದ ತೆರಿಗೆ ಪ್ರಮಾಣ ಇತ್ಯಾದಿ ಅಂಶಗಳನ್ನು ರಾಜ್ಯದ ನಾಗಾವಿ, ಹಲ್ಮಿಡಿ, (ಕ್ರಿ.ಶ.ಸು.೪೫೦) ದಂಡಾಪುರ (ಕ್ರಿ.ಶ.೯೧೮), ತುರವೆಕೆರೆ (ಕ್ರಿ.ಶ.೧೩-೧೪ ಶತಮಾನ), ಹರಿಹರ (೧೪-೧೫ನೇ ಶತಮಾನ) ಇತ್ಯಾದಿ ಶಾಸನಗಳ ಹಿನ್ನೆಲೆಯಲ್ಲಿ ನಾವು ಪ್ರಧಾನವಾಗಿ ಗುರುತಿಸಬಹುದಾಗಿದೆ.

ನರಗುಂದದ ದಂಡಾಪುರದ ಕ್ರಿ.ಶ.೯೧೮ರ ಶಾಸನವು ರಾಷ್ಟ್ರಕೂಟ ರಾಜ ನಾಲ್ಕನೇ ಗೋವಿಂದನ ಕಾಲಕ್ಕೆ ಸಂಬಂಧಿಸಿದ್ದು, ಅಲ್ಲಿಯ ಕೆರೆಯ ನಿರ್ವಹಣೆಗೆ ಅಂದಿನ ಸಮಾಜದ ಪ್ರತಿಷ್ಠಿತರಿಂದ ಮೊದಲಾಗಿ ಸಮಾಜದ ಬೇರೆ ಬೇರೆ ವರ್ಗದ ಜನರು ತಮ್ಮಲ್ಲಿ ನಡೆದ ಮದುವೆಯಷ್ಟೇ ಅಲ್ಲ ತಪ್ಪು ಒಪ್ಪಿಗಾಗಿ ಪ್ರಾಯಶ್ಚಿತ್ತ ರೂಪವಾಗಿ ಎಷ್ಟೆಷ್ಟು ಹಣವನ್ನು ಕೊಡಬೇಕೆಂಬುದನ್ನು ಈ ಮುಂದಿನಂತೆ ಉಲ್ಲೇಖಿಸಿದೆ. ಪ್ರಮಾಥಿ ಸಂವತ್ಸರ ಮಕರ ಸಂಕ್ರಮಣ ದಿನದಂದು ಈ ಶಾಸನವನ್ನು ರಚಿಸಲಾಗಿದ್ದು, ಅದರಲ್ಲಿ "ಪರ್ಗ್ಗೆಳೆಗಾಯ ದೆನ್ಪೊಡಸದರು ಕೊಟ್ಪೊರೀ ದ್ವಿಜ ಮುಖ್ಯರ್" ಎಂದಿದೆ. ಅಂದರೆ ವಿಪ್ರರ (ಬ್ರಾಹ್ಮಣ) ವಿವಾಹ ಸಂದರ್ಭದಲ್ಲಿ ೨ ದ್ರಮ್ಮಗಳನ್ನೂ, ಮುಂಜಿಯ ಸಂದರ್ಭದಲ್ಲಿ ಎರಡು ದ್ರಮ್ಮಗಳನ್ನು, ಶೂದ್ರಗಣದ ಮದುವೆಯಲ್ಲಿ ಒಂದು ದ್ರಮ್ಮವನ್ನು ಅಲ್ಲಿರುವ ದೊಡ್ಡ ಕೆರೆಗೆ ಕಂದಾಯವಾಗಿ

ಕೊಟ್ಟರು ಎಂದು ಅರ್ಥವಾಗುತ್ತದೆ. ಈ ದಾನವನ್ನು ಕೆಡಿಸಿದವರು (ಪಾಲಿಸದವರು) ಪಂಚಮಹಾ ಪಾತಕಕ್ಕೆ ಹೋಗುತ್ತಾರೆ ಎಂಬುದನ್ನು ಶಾಸನದ ಕೊನೆಯಲ್ಲಿ ದಾಖಲಿಸಿದೆ[೩೨].

ಅಂದು ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆ, ಕುಂಟೆ, ಕಟ್ಟೆಗಳನ್ನು ಅವಲಂಬಿಸಿದ್ದಿತು. ರಾಜರು, ಶ್ರೀಮಂತರು ಮತ್ತು ಗ್ರಾಮ ಸಂಸ್ಥೆಗಳು, ಕೆಲವೊಮ್ಮೆ ಸಾಮಾನ್ಯರೂ, ಕೆರೆ, ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ನಂಬಿದ್ದರು. ಕಟ್ಟಿಸಿದ ಕೆರೆ ಬಾವಿಗಳನ್ನು ಯಾರೇ ಆಗಲೀ ನಾಶಪಡಿಸುವುದು ಅತ್ಯಂತ ಪಾಪಕರವೆಂಬ ಭಾವನೆ ಇದ್ದಿತು. ವರದಾ ನದಿಗೆ ಒಂದು ಮಹಾ ಸೇತುವೆ ಇದ್ದಿತು. ನದಿಗಳನ್ನು ತೆಪ್ಪಗಳಲ್ಲಿ ದಾಟುವ ಸ್ಥಳವನ್ನು 'ಕಡಹು' ಈಗಿನ (ಕಡ) ಎಂದು ಕರೆಯುತ್ತಿದ್ದರು. ಇರಾಳಿ ಎಂಬ ಹೊಳೆಯನ್ನು ದಾಟುವ ಕಡಹಿನ ಹೆಸರು ಒಂದು ಶಾಸನದಲ್ಲಿದೆ[೩೩]. ಕಡಹುಗಳಲ್ಲಿ ನಜರನ್ನು ತೆಪ್ಪಗಳ ಮೂಲಕ ಸಾಗಿಸುವ ಅಂಬಿಗನಿಗೆ ಹೊಲಗಳನ್ನು ಬಿಟ್ಟು ಕೊಡುತ್ತಿದ್ದ ಸಂಗತಿಯನ್ನು ಅಲ್ಲಿನ ಶಾಸನ ದಾಖಲಿಸಿದೆ. ಅದೇ ರೀತಿ ಈ ಗದ್ದೆಯಲ್ಲಿ ಬೆಳೆವ ಫಸಲಿನ ಹತ್ತನೇ ಒಂದು ಭಾಗದ ತೆರಿಗೆಯನ್ನು ಮನ್ನಾ ಮಾಡಿದ್ದೇವೆ ಎನ್ನುತ್ತದೆ ಕನ್ನಡದ ಮೊದಲ ಶಾಸನವಾದ ಹಲ್ಮಿಡಿ ಶಾಸನ (ಕ್ರಿ.ಶ.ಸು.೪೫೦).

ಒಂದು ರಾಜ್ಯದ ಇಲ್ಲವೇ ನಾಡಿನ ಆಡಳಿತ ವ್ಯವಸ್ಥೆ ವ್ಯವಸ್ಥಿತವಾಗಿ ನಡೆಯಬೇಕಾದರೆ ವಿವಿಧ ಮೂಲಗಳಿಂದ ಆದಾಯ ಸಂಗ್ರಹವಾಗುವುದು ಮುಖ್ಯ. ತೆರಿಗೆ ವಸೂಲಿಯನ್ನು "ಗಿಡಗಳಿಗೆ ಉನವಾಗದಂತೆ ಹೂಗಳನ್ನು ಬಿಡಿಸಿಕೊಳುವ ಕ್ರಮಕ್ಕೆ ಹೋಲಿಸಲಾಗಿದೆ." ಹಿಂದೆ ಅಂದಿನ ಸಮಾಜದಲ್ಲಿ ಅನೇಕ ರೀತಿಯ ತೆರಿಗೆಗಳು ಬಳಕೆಯಲ್ಲಿದ್ದವು. ಅಂದಿನ ತೆರಿಗೆ ಕ್ರಮವನ್ನು ಕೃಷಿ ತೆರಿಗೆ, ನೀರಾವರಿ ತೆರಿಗೆ, ಸಾರಿಗೆ ತೆರಿಗೆ ಪ್ರಮುಖವಾಗಿ ವಿಭಾಗಿಸಬಹುದು.

### ೧. ಕೃಷಿ ತೆರಿಗೆ

ರೈತರಿಗೆ ಹೊರೆಯಾಗದಂತೆ ಇರಬೇಕೆಂಬುದನ್ನು ಜೇನು ಹುಳುಗಳು ಹೂವಿನಿಂದ ಮಕರಂದವನ್ನು ಸಂಗ್ರಹಿಸುವ ಹಾಗೇ ಕೃಷಿ ತೆರಿಗೆಯನ್ನು ನಿಗದಿಪಡಿಸಿದ್ದರು. ಅಂದು ಭೂ ತೆರಿಗೆ ಉತ್ಪನ್ನಕ್ಕೆ ತಕ್ಕಂತೆ ಹಿತ ಮಿತವಾಗಿತ್ತು. ಅಂದು ಅಧಿಕಾರಿಗಳಿಗೆ ಸೇರಬೇಕಾದ ಪಾಲನ್ನು ೧/೮, ೧/೬, ೧/೪, ೧/೨ ರ ದರದಲ್ಲಿ ನಿಗದಿಗೊಳಿಸಲಾಗಿತ್ತು.

#### ಅ) ಕೃಷಿಯೇತರ ತೆರಿಗೆ

ಕೃಷಿಯೇತರ ತೆರಿಗೆಗಳ ವ್ಯಾಪ್ತಿಗೆ ಕುಶಲ ಕಲೆಯ ವಸ್ತುಗಳು, ಹತ್ತಿ ಬಟ್ಟೆ, ವಿಳ್ಯೆದೆಲೆ, ಅಡುಗೆ ಎಣ್ಣೆ, ಬೆಲ್ಲ, ಮರದ ವಸ್ತುಗಳು ಮುಂತಾದವುಗಳ ಮೇಲೆ ತೆರಿಗೆಯನ್ನು ವಿಧಿಸಿದ್ದರು. ಗೌಡ, ಶಾನುಭೋಗ ಮೊದಲಾದ ಗ್ರಾಮಾಧಿಕಾರಿಗಳು ಗ್ರಾಮ ಮಟ್ಟದಲ್ಲಿ ತೆರಿಗೆ ಸಂಗ್ರಹಿಸುತ್ತಿದ್ದರು. ಈ ಎಲ್ಲ ಬಗೆಯ ಭೂಮಿಗಳ ವಿವರವನ್ನೊಳಗೊಂಡ ದಾಖಲೆ ಅಥವಾ ಕಡತಗಳನ್ನು ಶಾನುಭೋಗರು (ಕರಣಿಕ, ಕುಲಕರ್ಣಿ) ಬರೆದಿಡುತ್ತಿದ್ದರು. ಗೌಡ ಮತ್ತು ಶಾನುಭೋಗರು ಅನುವಂಶಿಕ ಕಂದಾಯ ಅಧಿಕಾರಿಗಳಾಗಿದ್ದರು. ಒಂದು ಸೀಮೆಯ ಅಧಿಕಾರಿಯನ್ನು ನಾಡಗೌಡ ಅಥವಾ ಪಟ್ಟೆ ನಾಯಕ ಎಂದು ಕರೆಯುತ್ತಿದ್ದರು. ನಾಡಗೌಡ ಬಳಿ ಇಡೀ ಸೀಮೆ ಅಥವಾ ನಾಡಿನ ಗ್ರಾಮಗಳ ಕಂದಾಯ ಪಟ್ಟಿಗಳನ್ನು ಅಥವಾ ದಾಖಲೆಗಳನ್ನಿಡಲಾಗುತ್ತಿತ್ತು. ಅಂದು ಕಂದಾಯವನ್ನು ವಸೂಲಿ ಮಾಡುವ ನಾಡಗೌಡರ ಅನುವಂಶಿಕ ಮನೆತನ ಇಂದಿಗೂ ತೇರದಾಳದಲ್ಲಿದೆ.

**ಆ. ನೀರಾವರಿ ತೆರಿಗೆ**

ನೀರಾವರಿ ಸೌಲಭ್ಯಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗುತ್ತಿತ್ತು. ಕೃಷ್ಣ ಮತ್ತು ಘಟಪ್ರಭ ನದಿಯ ನೀರನ್ನು ನಾಲೆಗಳ ಮೂಲಕ ಹರಿಸಿ ಕೃಷಿ ಉತ್ಪನ್ನ ಸುಲಭವಾಗಿ ಸಾಧ್ಯವಾಗಿತ್ತು. ಈ ನೀರಾವರಿ ಭೂಮಿಗಳ ಮೇಲೆ ಉತ್ಪನ್ನದ ೬೦% ಭಾಗ ಮಾತ್ರ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು.

**ಇ. ಸಾರಿಗೆ ತೆರಿಗೆ**

ವರ್ತಕರು ತಮ್ಮ ಸರಕು ಸಾಗಾಣಿಕೆಗಳನ್ನು ಪ್ರಾಣಿಗಳ ಮೇಲೆ ಸಾಗಿಸುತ್ತಿದ್ದರು. ಆದರೂ ಕೂಡ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರು. ಕ್ರಿ.ಶ. ೧೧೨೩ರ ಕಾಲದ ತೇರದಾಳ ಶಾಸನವೊಂದರಲ್ಲಿ 'ಹೇವಿಂಗೆ' ಅಥವಾ 'ಹೆರ್ಜುಂಕ' ಸಾರಿಗೆ ತೆರಿಗೆ ಕುರಿತು ಉಲ್ಲೇಖವಿರುವುದನ್ನು ಕಾಣುತ್ತೇವೆ.

**ಹಲಸಿಗೆ ಹನ್ನಿರ್ಚ್ಛಾಸಿರದ ಹೆಬ್ಬಟ್ಟೆಯಲು ನಡೆವ ಗಾತ್ರಿಯರು**
**ದೇವರಿಗೆ ಅಷ್ಟವಿಧಾರ್ಚನೆ ನಡೆವನ್ತಾಗಿ ಹೇಳೆಂಗೆ ನೊಳುವೊ**
**ಳ್ಳಿಲೆಯಂ ಬಿಟ್ಟರು**[೩೪].

ಈ ರೀತಿಯಾಗಿ ಸಾರಿಗೆ ತೆರಿಗೆ ಕುರಿತು ವಿವರಣೆಯನ್ನು ಕಾಣುತ್ತೇವೆ.

ಇಲ್ಲಿ ಪ್ರಾಚೀನ ಕಾಲದಲ್ಲಿ ರಾಗಿ, ಜೋಳ, ನವಣೆ, ಹತ್ತಿ, ಎಣ್ಣೆಕಾಳು, ಹುರಳಿ, ಹರಕ ಮುಂತಾದವುಗಳನ್ನು ಒಣ ಭೂಮಿಯಲ್ಲೂ, ನೆಲ್ಲು, ವೀಳೆದೆಲೆ, ಅಡಿಕೆ, ಬಾಳೆ, ಆಲೇಕಬ್ಬು, ಮೆಣಸು, ಶುಂಠಿ ಮತ್ತು ಅರಿಶಿನ ಮುಂತಾದ ಬೆಳೆಗಳನ್ನು ನೀರಾವರಿ ಭೂಮಿಯಲ್ಲೂ ಬೆಳೆಯುತ್ತಿದ್ದರು. ಆಗಿನ ಪದ್ಧತಿಯಲ್ಲಿ ಕೃಷಿ ಉ.ತ್ಪನ್ನಗಳಿಗೆ ಸುಂಕ ನಿಗದಿ ಮಾಡುವಾಗ ಎಲೆ, ಸೇರು, ಎಣ್ಣೆ, ಮಾನ ಬೀಜದ ವರ ಇವನ್ನು ಪರಿಗಣಿಸಿ ಸುಂಕ ನಿರ್ಧಾರ ಮಾಡಲಾಗುತ್ತಿತ್ತು. ಈ ಪದ್ಧತಿ ಹೆಚ್ಚು ಕಡಿಮೆ ಕಲ್ಯಾಣದ ಚಾಲುಕ್ಯರ ಕಾಲದಿಂದ ವಿಜಯನಗರದ ಅರಸರ ಕಾಲದವರೆಗೂ ಜಾರಿಯಲ್ಲಿದ್ದು, ನೀರಾವರಿಗೊಳಪಟ್ಟ ಭೂಮಿಯ ಮೇಲೆ ಹೆಚ್ಚು ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಈ ಭಾಗದ ವಿವಿಧ ಸ್ಥಳಗಳಲ್ಲಿ ದೊರೆತ ಶಾಸನಗಳು ಪೆರ್ಗ್ಗರೆ, ಹಸಿರುವಾಣ, ಕಾಲುವೆ ಪಣ ಎನ್ನುವ ತೆರಿಗೆಗಳನ್ನು ದಾಖಲಿಸಿದ್ದು, ಅವು ಅಂದು ನೀರಾವರಿ ಭೂಮಿಗಳಿಗೆ ವಿಧಿಸುತ್ತಿದ್ದ ತೆರಿಗೆಯ ಹೆಸರುಗಳಾಗಿದ್ದು, ಅವುಗಳನ್ನು ಕೃಷಿಕರು ಖಡ್ಡಾಯವಾಗಿ ಪಾವತಿಸಬೇಕಾಗಿತ್ತು. ಅತೀ ಪ್ರಾಚೀನ ಕಾಲದಿಂದಲೂ ಭೂಮಿಯನ್ನು ಹೆಚ್ಚಾಗಿ ಕೋಲಿನಿಂದ ಅಳೆಯುವ ಪದ್ಧತಿ ನಮ್ಮ ನಾಡಿನಲ್ಲಿ ರೂಢಿಯಲ್ಲಿತ್ತು. ಅದರಂತೆ ತೇರದಾಳ ಗ್ರಾಮದ ಶಾಸನದಲ್ಲಿ ಭೂ ಮಾಪನ ವ್ಯವಸ್ಥೆಯ ವಿವರಗಳನ್ನು ದಾಖಲಿಸಲಾಗಿದೆ. ಅಂದು ವಿವಿಧ ಭೂ ಅಳತೆಯ ಕೋಲುಗಳ ಭೂಮಾಪನಕ್ಕಾಗಿ ಬಳಸಲಾಗುತಿತ್ತು. ಕ್ರಿ.ಶ. ೧೧೨೩ರ ಕಾಲದ ಪ್ರಾಚೀನ ಐತಿಹಾಸಿಕ ತೇರದಾಳ ಶಾಸನವೊಂದರಲ್ಲಿ ಭೂಮಿಯನ್ನು ಅಳೆಯುವ ಸಾಧನದ ಉಲ್ಲೇಖವನ್ನು ಈ ಮುಂದಿನಂತೆ ದಾಖಲಿಸಲಾಗಿದೆ.

**ತೇರದಾಳದ ಪಶ್ಚಿಮ ಭಾಗದೊಳು ಹಾರುನಗೇರಿಯ**
**ಬಟ್ಟೆಯಿಂ ಬಡಗಲು ಯಿಪ್ಪತ್ತನಾಲ್ಗೇಣ ಕೋಲೊಳು**
**ಕೊಟ್ಟ ಮತ್ತರ್ ಅ(ಎ)ಪ್ಪತ್ತೆರಡು ದೇವಿಯಣ ಬಾವಿಯಂ ತೆಂಕಲಾ ಕೋಲಲು ಕೊಟ್ಟ**

**ತೋಂಟ ಮತ್ತರೊನ್ದು ಅನ್ತು ಮತ್ತರು**. ಈ ಶಾಸನದಲ್ಲಿ ದಾಖಲಾಗಿರುವ ಗೇಣು, ಕೋಲು ಮತ್ತು ಮತ್ತರು ಪದದ ಉಲ್ಲೇಖವಿರುವುದರಿಂದ[೩೫.] ಅವುಗಳನ್ನು ಅಂದು ಭೂ-ಮಾಪನಗಳನ್ನಾಗಿ ಬಳಸುತ್ತಿದ್ದರೆಂದು ನಿರ್ಧರಿಸಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ದೇವರಕೊಂಡಾ ರೆಡ್ಡಿ., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೯ ಬಾಗಲಕೋಟ ಜಿಲ್ಲೆ ಪು. ಸಂ. – ೮೪
೨. ಅದೇ.,
೩. ಅದೇ.,
೪. ಅದೇ.,
೫. ಬಾಗಲಕೋಟೆ ಜಿಲ್ಲೆಯ ಪಶುಸಂಗೋಪನಾ ಇಲಾಖೆಯ ೨೦೧೧ರ ಪ್ರಾಣಿ ಗಣಿತಿಯ ವರದಿ
೬. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೪
೭. ಅರವಿಂದ್ ಪಾಟೀಲ್., ೧೯೯೭, ಜಾಜಮನಿ ಸಿಸ್ಟಮ್ ಇನ್ ಏನ್ಸಿಯಂಟ್ ಇಂಡಿಯಾ,ಪು.ಸಂ.೧೬
೮. ಶೇಕದಾರ್., ೨೦೧೨, ಆಯಾಗಾರರು, ಪು. ಸಂ. ೧೭
೯. ಗೌಡರ ರವಿಚಂದ್ರ, ಬಳ್ಳಾರಿ ನಗರದ ಕುಂಬಾರ ಸಮುದಾಯ–ಒಂದು ಅಧ್ಯಯನ, ಅಪ್ರಕಟಿತ ಎಂ.ಎ. ಪ್ರಬಂಧ., ಪು. ಸಂ. ೨೦
೧೦. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೮,೮೯
೧೧. ಪ್ರಭುಲಿಂಗ ಹಚಡದ್., (೪೬) ತೇರದಾಳ ಇವರ ಅಭಿಪ್ರಾಯ.
೧೨. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ಸಂ. ೧೨
೧೩. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೮
೧೪. ಕುಂಬಾರ ರಮೇಶ., ೨೦೧೩, ತೇರದಾಳ ಒಂದು ಚಾರಿತ್ರಿಕ ಅಧ್ಯಯನ, ಪು. ಸಂ. ೭೮.
೧೫. ಹಿರೇಮಠ ಬಿ. ಆರ್., ಪೂರ್ವೋಕ್ತ., ಪು. ಸಂ. ೩೦
೧೬. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೭, ೮೮
೧೭. ಹಿರೇಮಠ ಬಿ.ಆರ್., ಪೂರ್ವೋಕ್ತ., ಪು. ಸಂ. ೩೪
೧೮. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೮
೧೯. ಹಿರೇಮಠ ಬಿ.ಆರ್., ಪೂರ್ವೋಕ್ತ., ಪು. ಸಂ. ೬೯
೨೦. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೮
೨೧. ಹಿರೇಮಠ ಬಿ.ಆರ್., ಪೂರ್ವೋಕ್ತ., ಪು. ಸಂ. ೬೧
೨೨. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ., ಪು. ಸಂ. ೮೮
೨೩. ಹಿರೇಮಠ ಬಿ.ಆರ್., ಪೂರ್ವೋಕ್ತ., ಪು. ಸಂ. ೭೧
೨೪. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ., ಪು. ಸಂ. ೮೩
೨೫. ಅದೇ., ಪು.ಸಂ.೮೮, ಮತ್ತು ಚೆನ್ನಬಸಪ್ಪ, ಜಮಖಂಡಿ ತಾಲೂಕಿನ ಶಾಸನಗಳ ಒಂದು ಅಧ್ಯಯನ, ಅಪ್ರಕಟಿತ ಪಿಎಚ್. ಡಿ. ಪ್ರಬಂಧ ಪು. ಸಂ. ೮೭
೨೬. ಕುಂಬಾರ ರಮೇಶ, ೨೦೧೨, ಪೂರ್ವೋಕ್ತ, ಪು. ಸಂ. ೭೮
೨೭. ಅದೇ.,
೨೮. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ., ಪು. ಸಂ. ೮೩
೨೯. ಅದೇ., ಪು. ಸಂ. ೮೮

# ಅಧ್ಯಾಯ–೫

# ಧಾರ್ಮಿಕ ಜನಜೀವನ

**ಅಧ್ಯಾಯ ೫ : ಧಾರ್ಮಿಕ ಜನಜೀವನ**

೫.೧. ಹಿಂದೂ ಧರ್ಮ

೫.೨. ಜೈನ ಧರ್ಮ

೫.೩. ಶಾಕ್ತ ಧರ್ಮ

೫.೪. ಮುಸ್ಲಿಂ ಧರ್ಮ

೫.೫. ಇತರೆ ಪ್ರಮುಖ ಧರ್ಮಗಳು

ಭಾರತವು ಹಲವು ಜಾಗತಿಕ ಧರ್ಮಗಳ ತವರು ಮನೆಯಾಗಿದೆ. ಇಲ್ಲ ಹಲವಾರು ಬುಡಕಟ್ಟು, ಜನಾಂಗಗಳಿದ್ದು, ಅವುಗಳು ತಮ್ಮದೇ ಆದ ಧರ್ಮಗಳನ್ನು ಹೊಂದಿದ್ದು, ಅವುಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ. ಭಾರತವು ಅನೇಕ ಧರ್ಮಗಳ ಮತ್ತು ಜನಾಂಗಿಕ ಸಂಗ್ರಹಾಲಯವೂ ಆಗಿದೆ. ಈ ಮಾತು ಸಮಗ್ರ ಭಾರತದಂತೆ ಕರ್ನಾಟಕಕ್ಕೂ ಅನ್ವಯಿಸುತ್ತದೆ. ಪ್ರಾಚೀನ ಕಾಲದಿಂದಲೂ ಕನ್ನಡ ನಾಡಿನ ಭವ್ಯ ಸಂಸ್ಕೃತಿಯನ್ನು ಹಲವಾರು ಅರಸು ಮನೆತನಗಳು ಇಲ್ಲಿನ ಮತ ಧರ್ಮಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ. ಇವುಗಳ ಒಂದು ವಿಶೇಷ ಲಕ್ಷಣವೆಂದರೆ ಕನ್ನಡ ನಾಡಿನಲ್ಲಿಯೇ ಹುಟ್ಟಿ ಬೆಳೆದ ಅನೇಕ ಮತ ಪಂಥಗಳು ಭಾರತ ಹಾಗೂ ಇತರ ಎಲ್ಲ ಕಡೆಗಳಿಗೂ ಬೆಳೆಯಲು ಅವಕಾಶ ಮಾಡಿದನ್ನು ಕಾಣುತ್ತೇವೆ.

ಆದಿ ಮಾನವರ 'ಪೂರ್ವಿಕರ ಸಮಾಧಿಗಳ ಪೂಜೆ' ದೈವರಾಧನೆಗೆ ಮೂಲ ಎನ್ನಬಹುದು. ನವ ಶಿಲಾಯುಗದ ಭಾರತದ ಬಹುತೇಕ ನೆಲೆಗಳಲ್ಲಿ ಈ ಸಮಾಧಿ ಪೂಜೆಯ ಕುರುಹುಗಳು ಕಂಡುಬಂದಿದೆ. ಈ ಸಮಾಧಿಗಳಲ್ಲಿ ಕಲ್ಲು, ಮಣ್ಣು ಮತ್ತು ತಾಮ್ರದ ದೀಪದ ಕುಡಿಕೆಗಳು ಹಾಗೂ ಪೂರ್ವಿಕರ ಮಣ್ಣಿನ ಗೊಂಬೆಗಳು ಕಂಡುಬಂದಿವೆ. ಭಾರತದಲ್ಲಿ ಮುಂದಿನ ಹಂತದಲ್ಲಿ ಕಲ್ಲಿನ ನಾಗರಗಳ ಆರಾಧನೆಯನ್ನು ಕಾಣುತ್ತೆವೆ. ಕ್ರಮೇಣ ಇಲ್ಲಿ ಶಿವಲಿಂಗದ ಪವಿತ್ರ ಕಲ್ಪನೆ ಅಸ್ತಿತ್ವಕ್ಕೆ ಬಂತು.

ಕೂಂಡಿನಾಡು ೩೦೦೦ ನಾಡು ಸೇರಿದಂತೆ ಈ ನಾಡಿನ ಹಲವಾರು ಕಂಪಣಗಳಲ್ಲಿ ಒಂದಾದ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮವು ಸಹ ಧಾರ್ಮಿಕ ಕ್ಷೇತ್ರದಲ್ಲಿ ತನ್ನದೇ ಆದ ವಿಶೇಷ ಪ್ರಭಾವವನ್ನು ಬೀರಿತ್ತೆಂಬುದಕ್ಕೆ ಈ ಗ್ರಾಮದಲ್ಲಿ ದೊರೆತ ಶಾಸನಗಳೇ ಜೀವಂತ ಸಾಕ್ಷಿಯಾಗಿವೆ. ಇಲ್ಲಿನ ಕ್ರಿ.ಶ.೧೧೨೩ರ ಕಾಲದ ಶಾಸನದಲ್ಲಿ ಉಕ್ತವಾಗಿರುವ 'ಚತುಸ್ಸಮಯ'[೧] ಎಂಬ ಪದವು ಶೈವ, ವೈಷ್ಣವ, ಬೌದ್ಧ ಮತ್ತು ಜೈನ ಧರ್ಮಗಳು ಇಲ್ಲಿ ಆಶ್ರಯ ಪಡೆದಿರುವುದನ್ನು ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಭಾಗದ ಧಾರ್ಮಿಕ ಪರಿಸ್ಥಿತಿಯನ್ನು ವಿಶ್ಲೇಷಿಸಲಾಗಿದೆ.

## ೫.೧ ಹಿಂದೂ ಧರ್ಮ

ದೇಶದ ಇತರೆಡೆಯಂತೆ ತೇರದಾಳ ಪರಿಸರದಲ್ಲಿಯೂ ಹಲವು ಧರ್ಮಗಳು ತನ್ನ ಅಸ್ತಿತ್ವ ಪಡೆದುಕೊಂಡಿವೆ. ಅವುಗಳಲ್ಲಿ ಹಿಂದೂ ಧರ್ಮ ಒಂದಾಗಿದ್ದು, ಅದರಲ್ಲಿ ಅನೇಕ ಪಂಥಗಳಿವೆ. ಪ್ರಾಚೀನ ಕಾಲಘಟ್ಟದಲ್ಲಿ ಇಲ್ಲಿ ಶೈವ ಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ಅದರಲ್ಲಿ ಕಾಪಾಲಿಕ, ಪಾಶುಪತವೂ, ಸಹ ಈ ಭಾಗದಲ್ಲಿ ಅಸ್ತಿತ್ವದಲ್ಲಿತ್ತು. ಅದೇ ರೀತಿ ವೈಷ್ಣವ ಮತ್ತು ಜೈನ-ಬೌದ್ಧ ಧರ್ಮಗಳು ಸಹ ಕ್ರಮೇಣ ತಮ್ಮ ನೆಲೆಯನ್ನು ಕಂಡು ಕೊಂಡವು. ಅದೇ ರೀತಿ ಮಧ್ಯಯುಗದಲ್ಲಿ ಮುಸ್ಲಿಂ, ಕ್ರೈಸ್ತ, ಶಾಕ್ತ ಧರ್ಮಗಳು ಇಲ್ಲಿ ಅಂಕುರವಾದವು. ಇವುಗಳಿಗೆ ಇಲ್ಲಿನ ಜನತೆ ಯಾವ ರೀತಿ ಬೆಂಬಲಿಸಿದರು ಮತ್ತು ಅವು ಹೇಗೆ ಜನಮನದಲ್ಲಿ ತಮ್ಮ ಸ್ಥಾನವನ್ನು ಪಡೆದುಕೊಂಡವು ಎಂಬುದನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

## ಶೈವ ಧರ್ಮ

ಭಾರತದಲ್ಲಿ ಪ್ರಚಲಿತದಲ್ಲಿರುವ ಆರಾಧನಾ ಪದ್ಧತಿಗಳಲ್ಲಿ ಶಿವನ ಆರಾಧಾನೆಯು ಪ್ರಮುಖವಾಗಿದೆ[೩]. ಹಿಂದೂ ಪರಂಪರೆಯ ಆರಾಧನಾ ಪದ್ಧತಿಯಲ್ಲಿ ಶಿವನ ಪ್ರತಿರೂಪಗಳಾದ ಲಿಂಗ, ನಂದಿಯನ್ನು ಹೆಚ್ಚಾಗಿ ಪೂಜಿಸಲಾಗುತ್ತದೆ. ಹಾಗೂ ಲಿಂಗೋದ್ಭವ ಮೂರ್ತಿ, ಕೇವಲ ಮೂರ್ತಿ, ಭಿಕ್ಷಾಟನಾ ಮೂರ್ತಿ, ಕಂಕಾಲಮೂರ್ತಿ, ಭೈರವ, ವೀರಭದ್ರ, ಗಣೇಶ, ಸ್ಕಂದ, ಅರ್ಧನಾರೀಶ್ವರ, ಉಮಾ ಮಹೇಶ್ವರ ಮೂರ್ತಿಗಳೆಲ್ಲವನ್ನು ಶೈವ ಪಂಥದ ಮೂರ್ತಿಗಳೆಂದು ಪರಿಗಣಿಸಲಾಗಿದೆ. ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲಿ ಶೈವ ಧರ್ಮವು ಕೂಡಾ ಒಂದು. ಇದರ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ ಮೊಹೆಂಜೋದಾರಗಳ ಕಾಲದ ಸಂಸ್ಕೃತಿಯಲ್ಲಿ (ಕಾಲ ಸುಮಾರು ಕ್ರಿ.ಶ. ಪೂರ್ವ ೩೨೫೦ ರಿಂದ ೨೭೫೦) ಕಾಲದಲ್ಲಿ ಅಂದು ಸಮಾಜದಲ್ಲಿ ಶೈವ ಧರ್ಮದ ಉಲ್ಲೇಖಗಳಿರುವುದು ದೊರೆತ ಕುರುಹುಗಳಿಂದ ಸ್ಪಷ್ಟಪಡಿಸಿಕೊಳ್ಳಬಹುದು[೪]. ಉತ್ತರ ಭಾರತದ ಬಹುತೇಕ ಭಾಗವನ್ನು ಆಳಿದ ಕುಶಾನರ ದೊರೆ ವಿಮಾಕಡ್‌ಫೀಸಸ್ ತನ್ನ ನಾಣ್ಯಗಳ ಮೇಲೆ ಶಿವನ ಚಿತ್ರ ಬಿಡಿಸಿ ತಾನು "ಮಹೇಶ್ವರನ ಭಕ್ತ"ನೆಂಬ ನೆಂದು ಹೇಳಿಕೊಳ್ಳುತ್ತಾನೆ[೫]. ಇದರಿಂದ ಈ ಧರ್ಮದ ಪ್ರಾಚೀನತೆಯು ಐತಿಹಾಸಿಕವಾಗಿ ಕ್ರಿ.ಶ. ೩ನೆಯ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ. ಸಾಮಾನ್ಯವಾಗಿ ಶೈವ ಮತದ ಎಲ್ಲಾ ಅನುಯಾಯಿಗಳೆಲ್ಲರೂ ಸಂಪೂರ್ಣವಾಗಿ ಲಿಂಗೋಪಾಸಕರು ಆಗಿದ್ದರು. ಶೈವ ಮತದ ಪ್ರಮುಖವಾದ ಹೆಗ್ಗುರುತು ಲಿಂಗವು ಆಗಿತ್ತು[೬]. ಕರ್ನಾಟಕದಲ್ಲಿ ಹೆಚ್ಚಾಗಿ ಪ್ರಾಚೀನ ಕಾಲದಿಂದಲೂ 'ಶಿವ' ಮತ್ತು 'ಲಿಂಗ'ಗಳನ್ನು ಆರಾಧಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಇಲ್ಲಿ ದೊರೆತ ಶೈವ ಮೂರ್ತಿಗಳಿಗೆ ಸಂಬಂಧಿಸಿದಂತೆ, ಶಿವಲಿಂಗದ ಹೊರತಾಗಿರುವ ಸ್ಥಾನಿಕ, ಆಸೀನ ಮೂರ್ತಿಗಳು ಇಲ್ಲಿ ಪ್ರಧಾನವಾಗಿವೆ. ಶಿವನ ಪ್ರತಿರೂಪವೆಂದು ಭಾವಿಸಲಾಗಿರುವ ಲಿಂಗ ಸಹಾ ಆತನ ವಾಹನವಾದ ನಂದಿ (ವೃಷಭ)ಗಳು ಪ್ರತಿಯೊಂದು ಶೈವ ದೇವಾಲಯದಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಹಾಗೆ ಉಮಾಮಹೇಶ್ವರ, ಶೈವ ದ್ವಾರಪಾಲ, ಭೈರವ, ವೀರಭದ್ರ, ಗಣೇಶ, ಸ್ಕಂದ ಮೂರ್ತಿಗಳು ಈ ಭಾಗದ ದೇವಾಲಯಗಳಲ್ಲಿ ಕಂಡುಬರುತ್ತಿವೆ.

ಶಿವನನ್ನು ಲಿಂಗ ರೂಪದಲ್ಲಿ ಪೂಜಿಸುವುದು. ಸರ್ವೆಸಾಮಾನ್ಯ ಈ ಭಾಗದಲ್ಲಿಯೂ ಕೂಡ ಹೆಚ್ಚಿನ ಮಟ್ಟಿಗೆ ಶಿವನನ್ನು ಲಿಂಗ ರೂಪದಲ್ಲಿ ಪೂಜಿಸಲಾಗುತ್ತಿದೆ. ಉಳಿದ ಕಡೆಯಂತೆ ಇಲ್ಲಿಯೂ ಶಿವಲಿಂಗದಲ್ಲಿ ಚಲ ಲಿಂಗ ಮತ್ತು ಅಚಲ ಲಿಂಗವೆಂಬ ಎರಡು ವಿಧಗಳಿದ್ದು, ಸುಪ್ರಭೇದಾಗಮದ ಪ್ರಕಾರ ಅಚಲ ಲಿಂಗದಲ್ಲಿ ಒಂಭತ್ತು ನಮೂನೆಯ ಲಿಂಗಗಳಿವೆ. ಅವುಗಳೆಂದರೆ. ಸ್ವಯಂಭವ, ಪುರವ, ದೈವತ, ಗಾಣಪತ್ಯ, ಅಸುರ, ಸುರ, ರಾಕ್ಷಸ, ಮಾನುಸ, ಬಾಣ ಲಿಂಗಗಳಾಗಿವೆ. ಅಚಲ ಲಿಂಗದಲ್ಲಿ ಮೂರು ಭಾಗಗಳಿದ್ದು, ಕೆಳಗಿನ ಭಾಗದಲ್ಲಿ ಬ್ರಹ್ಮನನ್ನು ಪ್ರತಿನಿಧಿಸುವ ಅಷ್ಟಕೋನಾಕಾರದ ವಿಷ್ಣು ಭಾಗವಿರುತ್ತದೆ. ಇವರೆಡು ಭಾಗಗಳೂ ಸಹ ಪಾಣಿಪೀಠದಲ್ಲಿ ಸೇರಿರುತ್ತವೆ. ರುದ್ರಭಾಗವು ಕೊಳವೆ ಆಕೃತಿಯಲ್ಲಿದ್ದು, ಪಾಣಿ ಪೀಠದ ಮೇಲಿನ ಈ ಭಾಗವು ಪೂಜೆಗೊಳಪಡುತ್ತದೆ[೭]. ಶಿವಲಿಂಗಗಳಲ್ಲಿ ಮೊಟ್ಟೆಯಾಕಾರದ (ಅಂಡಾಕಾರ) ಅರ್ಧಚಂದ್ರಾಕೃತಿಯ. ವೃತ್ತಾಕಾದ ಹಾಗೂ ಬಾಣಾಕಾರದ ಲಿಂಗಗಳು ಈ ಭಾಗದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಹಾಗೂ ಮುಖ ರೂಪದ ಲಿಂಗಗಳೂ ಅಲ್ಲಲ್ಲಿ

ಕಂಡುಬಂದಿವೆ. ಪೀಠದಲ್ಲಿ ವೃತ್ತಾಕಾರದ, ಆಯತಾಕಾರದ ಪೀಠಗಳೂ ಈ ಪ್ರದೇಶದ ವಿವಿಧ ಭಾಗಗಳಲ್ಲಿ ಕಂಡುಬರುತ್ತವೆ.

ಪ್ರಾಚೀನ ಕರ್ನಾಟಕದಲ್ಲಿ ಪ್ರಸಿದ್ಧ ಧರ್ಮಗಳಲ್ಲಿ ಒಂದಾದ ಶೈವ ಧರ್ಮವು ಕನ್ನಡ ನಾಡಿನ ತುಂಬಾ ಹರಡಿದಂತೆ ತೇರದಾಳ ಪ್ರದೇಶದಲ್ಲಿಯೂ ಹರಡಿತ್ತೆಂಬುದಕ್ಕೆ ಕ್ರಿ.ಶ.೧೧೮೭ರ ಶಾಸನಾಧಾರಿತ ಉಲ್ಲೇಖವಿದೆ. ಈ ಶಾಸನವು ಈ ಕೆಳಗಿನಂತೆ ವಿವರಿಸುತ್ತದೆ.

**ಸ್ವಸ್ತಿ ಶ್ರೀಮತು ಕೊಣ್ಣಕುನ್ದಾಚಾರ್ಯ್ಯಾನ್ವನದ**
**ಶ್ರೀ ಮೂಲಸಂಘದ ದೇಶಿಯಗಣದ ಪೊಸ್ತಕಗಚ್ಛದ ಶ್ರೀ ಕೊಲ್ಲಾಪುರದ ನಿಂಬದೇವ**
**ಸಾಮನ್ತ ಮಾಡಿಸಿದ ಶ್ರೀ ರೂಪನಾರಾ**
**ಯಣದೇವರ ಬಸದಿಯ ಪ್ರತಿಬದ್ಧಮಪ್ಪ ತೇರಿದಾಳದ ಗೊಂಕ ಜಿನೇಂದ್ರ ಮಂದಿರಕ್ಕೆ**
**ಕೊಲ್ಲಾಪುರದಗಸ್ತ್ಯೇಶ್ವರದ ಕಣಗಿಲೇಶ್ವರದ ಮಾಹಾಲಕ್ಷ್ಮೀದೇವಿಯ ಗೋಕಾಗೆಯ**
**ಮಾಹಾಲಿಂಗದೇವರ ಯಿನ್ತೀ ಘಟಿಕಸ್ಥಾನದಾ**
**ಚ್ಚಾರ್ಯ್ಯರು ಮುಖ್ಯ ಏಳ್ಕೋಟಿಯ ಸಂಖ್ಯಾ ತಗಣಗಳು ಮಹಾಮಂಡಳಿಯಾಗಿ**
**ತೇರಿದಾಳದ ಮೂಲಸ್ಥಾನದ ಕಲಿದೇವಸ್ವಾಮಿಗೆ ಪ್ರತಿಬದ್ಧಂ ಮಾಡಿ ಆ**
**ನೇಮಿನಾಥಸ್ವಾಮಿಯ ಪ್ರತಿಷ್ಠಾ ಕಾಲದಾಲಾ ಗೊಂಕ ಜಿನಾಲಯದಾ**
**ಜಿನಾಯದಾಚಾರ್ಯ್ಯರಪ್ಪ ಪ್ರಭಾಚನ್ದ್ರ ಪಂಡಿತದೇವರ್ಗ್ಗಿದೆಮ್ಮ ಜೋಗವಟ್ಟಿಗೆಯ**
**ಸ್ಥಾನಮೆನ್ದು ಜೋಗವಟ್ಟಿಗೆಯನಿಕ್ಕಿದರು ॥ ಬಸದಿಯ ಮೇಲೆ ಶೂದ್ರಕನ ಸಿಂಹದ**
**ಚಕ್ರದ ಚಿಹ್ನೆಮೆವಿಂಬಿನ ತಿಸುಳದ ಘಂಟೆ**
**ಯಂ ಪಳೆಯೆಯನಾಗದೆನಿಪ್ಪವನೇಳುಕೋಟಿ ತಾಪಸರ್ಗ್ಗೆ ಮಹಾವಿರೋಧಿಯವನೀಶ್ವರ**
**ವೈರಿಯೆನುತ್ತವಿಕ್ಕಿದರ್ಮ್ಮಿಸುಗುವ ಜೋಗವಟ್ಟಿಗೆಯನಾ ಮುನಿಸಂಕೆಯ ಕೋಟಿತಾಪಸರು**
**ಮತ್ತಂ**[೭].

ತೇರದಾಳದ ನೇಮಿತೀಥೇಶ್ವರ (ಗೊಂಕ ಜಿನಾಲಯ) ಜೈನ ಬಸದಿಗೆ ಶೈವರ ರಕ್ಷೆಯನ್ನು ಬೇಡಿದ ಒಂದು ಸಂದರ್ಭವನ್ನು ಕುರಿತು ವಿವರಣೆಯನ್ನು ನೀಡುವ ಈ ಶಾಸನ ೧೨ನೇ ಶತಮಾನದ ಉತ್ತರಾರ್ಧದಲ್ಲಿ ಜೈನ ಧರ್ಮದ ಸ್ಥಿತಿ ಹಾಗೇ ಶೈವ ಧರ್ಮವು ಹೆಚ್ಚುತ್ತಿರುವ ಪ್ರಭಾವವನ್ನು ತಿಳಿಯಪಡಿಸುವುದರೊಂದಿಗೆ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದಲ್ಲಿ ಈಗ ಪ್ರಸ್ತುತ ಕಲ್ಮೇಶ್ವರ ದೇವಾಲಯವೆಂದು ಕರೆಯಿಸಿಕೊಳ್ಳುವ ದೇವಾಲಯವೇ ಪ್ರಾಚೀನ ಶಾಸನೋಕ್ತ 'ತೇರದಾಳದ ಮೂಲಸ್ಥಾನದ ಕಲಿದೇವಿಸ್ವಾಮಿ'ಯ ದೇವಾಲಯವಾಗಿದೆ.

ಈ ನಾಡಿನ ಶೈವ ಇತಿಹಾಸದಲ್ಲಿ ಕಾಪಾಲಿಕರ ಸಂಖ್ಯೆ ಬಹಳಷ್ಟು ಕಡಿಮೆ ಇದ್ದು ಪಾಶುಪತ ಕಾಳಾಮುಖರು ಸಾಕಷ್ಟು ಪ್ರಮುಖರಾಗಿದ್ದು ತಮ್ಮ ಅತ್ಯಂತ ಪ್ರಭಾವಿ ಪಾತ್ರವಹಿಸಿರುವುದು ಸ್ಪಷ್ಟವಾಗುತ್ತದೆ. ಆಚರಣೆಗಳಿಂದ ಮಾಟ, ಮಂತ್ರ (ವಾಮಾಚಾರ) ಮತ್ತು ಪವಾಡ ಮೂಲಕ ಜನಸಾಮಾನ್ಯರ ಮೇಲಿನ ಪ್ರಭಾವದಿಂದ ಈ ಶೈವ ಪಂಥದ ಆಚಾರ್ಯರು ಅಂದಿನ ಅರಸರು ಮತ್ತು (ಮನ್ನೆಯರ) ಗೌರವವನ್ನು ಪ್ರೋತ್ಸಾಹವನ್ನು ವಿಶೇಷವಾಗಿ ಗಳಿಸಿದ್ದರು[೮].

ಧಾರ್ಮಿಕ ಶಾಸನಗಳಲ್ಲಿ ಸುಮಾರು ಅರ್ಧದಷ್ಟಾದರೂ ಶೈವ ಪಾಶುಪತಕ್ಕೆ ಸಂಬಂಧಿಸಿದವುಗಳಾಗಿವೆ. ಮೇಲೆ ಉಲ್ಲೇಖಿಸಲಾಗಿರುವ ತೇರದಾಳದ ಶಾಸನಗಳಲ್ಲಿ ಹೇಳಿರುವ

ವ್ಯವಸ್ಥೆಯು ಅಂದು ಶೈವ ಪಂಥಗಳು ಬೆಳೆಸಿರುವ ಪ್ರಭಾವಕ್ಕೆ ಒಳ್ಳೆಯ ಸೂಚನೆಯಾಗಿವೆ. ಅದೇ ರೀತಿಯಾಗಿ ಶೈವ ಧರ್ಮಕ್ಕೆ ಸೇರಿರುವ ಸೂರ್ಯ ಮತ್ತು ಶಂಕರನನ್ನು ಕುರಿತು ಕ್ರಿ.ಶ.೧೧೨೩ರ ಕಾಲದ ಶಾಸನವು ವಿವರಣೆಯನ್ನು ನೀಡುತ್ತದೆ.

**.................. ನಿರುಪಮ ಗನ್ಧಶಾಲಿ ವನದಿಂ ಬ**
**ನದಿಂ ಕೊಳದಿಂ ತಟಾಕದಿಂ ಗಿರಿವನ ತೋಯ ದುರ್ಗ ಕುಳದಿಂದಗಳಿಂ ಬುಧ**
**ಮಾಧವಾರ್ಕ್ಕ ಶಂಕರ ಜಿನ ಸದುಮದಿಂ ವಿಫ(ಪ)ಣಿ ಮಾರ್ಗದಿನೊಪ್ಪುವ**
**ತೇರಿದಾಳ ಪಂನೆರಡಟಿ ಚೆಲ್ವನೇಯ ಪೊಗಳಲುಕಜ**
**ನುಂ ನೆಳೆಯಂ ಧರಿತ್ರಿಯೊಳು॥**[೯]

ಇದರಿಂದ ತೇರದಾಳ ಗ್ರಾಮ ೧೨ ಕಂಪಣವು ಪ್ರಾಚೀನ ಕಾಲದಲ್ಲಿ ಇತರ ಧರ್ಮಗಳಂತೆ ಶೈವ ಧರ್ಮದ ಪ್ರಮುಖವಾದ ನೆಲೆಯಾಗಿ ಕಂಗೊಳಿಸಿತ್ತು ಎಂಬ ಅಂಶವು ಖಚಿತವಾಗುತ್ತದೆ. ಪ್ರಸಕ್ತ ಈ ಭಾಗದಲ್ಲಿ ಶೈವ ಧರ್ಮ ಹೆಚ್ಚು ಪ್ರಚಾರ್ಯದಲ್ಲಿದ್ದು, ಅದರ ಅನುಯಾಯಿಗಳ ಸಂಖ್ಯೆ ಹೇರಳವಾಗಿದೆ.

**ವೈಷ್ಣವ ಧರ್ಮ**

ವೈಷ್ಣವ ಧರ್ಮ ಕ್ರಿ.ಶ. ಪೂರ್ವದಲ್ಲಿಯೇ ದಕ್ಷಿಣ ಭಾರತವನ್ನು ಪ್ರವೇಶಿಸಿತು[೧೦]. ತದನಂತರ ಕ್ರಿ.ಶ. ೪ನೇ ಶತಮಾನದ ಕಾಲದಲ್ಲಿ ವೈಷ್ಣವ ಧರ್ಮ ಕರ್ನಾಟಕದಲ್ಲಿ ಸಾಕಷ್ಟು ಜನಪ್ರಿಯವಾಗಿದ್ದಿತ್ತು[೧೧]. ವೈಷ್ಣವ ಧರ್ಮದವರು ವಿಷ್ಣುವನ್ನೇ ತಮ್ಮ ಪ್ರಮುಖವಾದ ಆರಾಧ್ಯ ದೈವವೆಂದು (ದೇವರೆಂದು) ಪೂಜಿಸುತ್ತಾರೆ. ವೈಷ್ಣವ ಧರ್ಮದಲ್ಲಿ ಬೌದ್ಧಿಕವಾದ ಜ್ಞಾನಕ್ಕಿಂತ ಯಾವಾಗಲು ಭಾವರೂಪವಾದ ಭಕ್ತಿಯೇ ಅತ್ಯಂತ ಶ್ರೇಷ್ಠವಾದುದ್ದೆಂದು ಒತ್ತಿ ಹೇಳುತ್ತದೆ.

ಶೈವಧರ್ಮದಂತೆ ವೈಷ್ಣವ ಧರ್ಮವು ಕೂಡಾ ಪ್ರಾಚೀನ ಕಾಲದಿಂದಲೂ ಜನರಿಂದ ಮನ್ನಣೆ ಪಡೆದ ಧಾರ್ಮಿಕ ಪಂಥ. ಇಲ್ಲಿ ವಿಷ್ಣುವೇ ಪ್ರಧಾನವಾಗಿದ್ದು, ಇಪ್ಪತ್ತನಾಲ್ಕು ರೂಪ (ಚತುರ್ವಂಶತಿ) ಮತ್ತು ಹತ್ತು ಅವತಾರಗಳಲ್ಲಿ ಪೂಜಿಸಲಾಗುತ್ತದೆ. ಬೃಹತ್ ಸಂಹಿತೆ ಮತ್ಸಪುರಾಣ, ವಿಹಜೇಂದ್ರ ಸಂಹಿತೆ. ವಿಷ್ಣು ಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಮೊದಲಾದ ಗ್ರಂಥಗಳು ಈ ಮೂರ್ತಿ ಆರಾಧನೆ ಮತ್ತು ಹಿನ್ನೆಲೆಯನ್ನು ಉಲ್ಲೇಖಿಸುತ್ತವೆ. ಅದರಂತೆ ಅಗ್ನಿ ಪುರಾಣ, ಭಾಗವತದ ದಶಮಾಸಕಾಂಡ, ಹರಿವಂಶ, ವಿಷ್ಣು ಪುರಾಣ, ಮಹಾಭಾರತ, ಬ್ರಹ್ಮವೈವರ್ಥ ಪುರಾಣಗಳು ಕೃಷ್ಣನ ಅವತಾರ, ಆರಾಧನೆ ಕುರಿತು ವಿಶ್ಲೇಷಿಸುತ್ತವೆ[೧೨].

ಈ ಪಂಥದಲ್ಲಿ ಸ್ಥಾನಿಕ ಆಸೀನ, ಶಯನ, ವಾಹನಾರೂಡ, ದೇವಿ ಸಹಿತ ಮೂರ್ತಿ ದಶಾವತಾರ, ಚತುರ್ವಂಶತಿ ಮೂರ್ತಿಗಳೆಂಬ ವಿಧಗಳಿವೆ. ಪ್ರಸ್ತುತ ತೇರದಾಳ ಪ್ರದೇಶದಲ್ಲಿ ಸ್ಥಾನಿಕ ಮೂರ್ತಿಗಳೇ ಹೆಚ್ಚಾಗಿದ್ದು, ಅವುಗಳಲ್ಲಿ ವಿಷ್ಣು, ಕೇಶವ, ಜನಾರ್ಧನ, ಮಾದವ ಮೂರ್ತಿಗಳು ಪ್ರಮುಖವಾಗಿವೆ. ಜೊತೆಗೆ ದೇವಿ ಸಹಿತ ಆಸೀನ ಮೂರ್ತಿಗಳು ಅಲ್ಲಲ್ಲಿ ಕಂಡುಬರುತ್ತವೆ ಹಾಗೆಯೇ ಶಯನ ಮೂರ್ತಿಗಳು ದೊರೆತಿದ್ದು, ಜೊತೆಗೆ ಗರುಡ, ರತಿ–ಮನ್ಮಥ ಮೂರ್ತಿಗಳು ದೊರೆತಿವೆ.

"ಜಾತಿಯೊಳಗೆಲ್ಲಾ ಉತ್ತಮ ಜಾತಿಯು ವಿಪ್ರಕುಲಂಗೆ ನಂಬಲೆ" ಅಂದರೆ ಬ್ರಾಹ್ಮಣರಿಗೆ ಪ್ರಾಚೀನ ಕಾಲದಿಂದಲೂ ಸಮಾಜದಲ್ಲಿ ಉನ್ನತವಾದ ಸ್ಥಾನವಿತ್ತೆಂದು ತಿಳಿಯುತ್ತದೆ.

ಚಾತುರ್ವರ್ಣಗಳಲ್ಲಿ ಬ್ರಾಹ್ಮಣನೇ ಶ್ರೇಷ್ಠನೆಂದೂ ಅವನು ಬಹು ವಿದ್ವತ್ ಉಳ್ಳವನೆಂದು ಹಾಗೂ ಸಮಾಜದಲ್ಲಿ ಗೌರವಸ್ಥನೆಂದೂ ತಿಳಿದುಬರುತ್ತದೆ. ಆದಿಕವಿ ಪಂಪನು ಬ್ರಾಹ್ಮಣರು ಜಾತಿಯಲ್ಲಿ ಮೇಲ್ಮೆ (ಉನ್ನತವಾದ) ಸ್ಥಾನವನ್ನು ಹೊಂದಿರುತ್ತಾರೆ[೧೩]. ಹಾಗೂ ರಟ್ಟರ ಸಮಕಾಲೀನ ಒಂದು ಶಾಸನವು ಬ್ರಾಹ್ಮಣರೆಂದರೆ ಭೂಮಿಯ ಮೇಲಿನ ಪೂಜ್ಯನೀಯರು ಎನ್ನುತ್ತದೆ[೧೪]. ವೈಷ್ಣವ ಧರ್ಮದಲ್ಲಿ ಬ್ರಾಹ್ಮಣರು ಅಗ್ರಹಾರದ ಮಹಾಜನರೆನಿಸಿ ಅಲ್ಲಿನ ಪ್ರಮುಖವಾದ ಆಡಳಿತ ನೋಡಿಕೊಳ್ಳುವುದರೊಂದಿಗೆ ವೇದಗಳ ಅಧ್ಯಯನ ಅಧ್ಯಾಪನ, ದಾನ, ಪರಿಗ್ರಹ ಮುಂತಾದ ಷಟ್ಕರ್ಮಗಳಲ್ಲಿ ನಿರತರಾಗಿರುತ್ತಿದ್ದ ಬ್ರಾಹ್ಮಣರು ಮಾಡುವ ಪವಿತ್ರ ಕಾರ್ಯಗಳು ಇದೇ ಶಾಸನದಿಂದ ತಿಳಿದುಬರುತ್ತದೆ. ಶಾಸನವನ್ನು ನಾಶಪಡಿಸಿದವರಿಗೆ ಸಾವಿರ ಬ್ರಾಹ್ಮಣರನ್ನು ಕೊಂದ ಪಾಪ ಬರುವುದು ಮತ್ತು ಪ್ರಸಾದ ನಿಲಯದಲ್ಲಿ ಧರ್ಮ ಪ್ರತಿಷ್ಠಾಪನದಲ್ಲಿ ಬ್ರಾಹ್ಮಣರ ಹೆಣ್ಣುಮಗಳು ಅಡುಗೆಯನ್ನು ಮಾಡಿಸುವಂತವರಿಗೆ ಸುಖ ಹಾಗೂ ಭಾಗ್ಯ ದೊರೆಯುವುದು ಎಂದು ಅವರಲ್ಲಿರುವ ಗೌರವಾದರ ಅಂದಿನ ಕಾಲದ ಜನರಲ್ಲಿದ್ದುದು ತಿಳಿದುಬರುತ್ತದೆ[೧೫]. ಈ ಮೇಲಿನ ಉಕ್ತವಾದ ಪ್ರಮುಖವಾದ ಅಂಶಗಳಿಂದ ವೈಷ್ಣವ ಧರ್ಮದ ಸ್ಥಾನ ಮಾನ ಪ್ರಜೆಗಳು (ಜನರು) ಆ ಧರ್ಮಕ್ಕೆ ನೀಡುತ್ತಿದ್ದ ಗೌರವಾದರಗಳಿಂದ ತಿಳಿದುಬರುತ್ತದೆ.

ಈ ರೀತಿಯಾಗಿ ವೈಷ್ಣವ ಧರ್ಮವು ಉನ್ನತವಾದ ಸ್ಥಾನವನ್ನು ಪಡೆದಿರುವುದನ್ನು ಕಾಣುತ್ತೇವೆ. ಮುಂದೆ ಕರ್ನಾಟಕವನ್ನು ಆಳಿದ ಅನೇಕ ಅರಸು ಮನೆತನಗಳು ಈ ಧರ್ಮದ ಅನುಯಾಯಿಗಳಾಗಿ ಅನೇಕ ರೀತಿಯ ದಾನ ದತ್ತಿಗಳನ್ನು ನೀಡುವುದರ ಮೂಲಕ ದೇವಾಲಯ, ಗುಹಾಲಯಗಳನ್ನು ಕಟ್ಟಿಸುವುದರ ಜೊತೆಗೆ ಯಜ್ಞ ಯಾಗಾದಿಗಳನ್ನು ಮಾಡುವುದರಿಂದಾಗಲಿ ವೈಷ್ಣವ ಧರ್ಮವನ್ನು ಉಳಿಸಿ, ಬೆಳೆಸಿ ರಕ್ಷಿಸಿಕೊಂಡು ಬಂದಿದ್ದಾರೆ. ಉದಾ: ಬಾದಾಮಿ ಚಾಲುಕ್ಯರ ದೊರೆ ಮಂಗಳೇಶನು ಬಾದಾಮಿಯಲ್ಲಿ ಸುಪ್ರಸಿದ್ಧವಾದ ವೈಷ್ಣವ ಗುಹಾಂತರ ದೇವಾಲಯಗಳನ್ನು ಕಟ್ಟಿಸಿದನು. ಇಲ್ಲಿಂದ ಮುಂದಿನ ಕಾಲದಲ್ಲಿ ಅನೇಕ ಶಾಸನಗಳಲ್ಲಿ ವಿಷ್ಣು ದೇವಾಲಯಗಳ ರಚನೆ ಮತ್ತು ಅವುಗಳಿಗಾಗಿ ಬಿಟ್ಟ ದಾನಗಳನ್ನು ಕುರಿತು ವಿವರಣೆಯಿಂದ ತಿಳಿಯುವುದು.

ಇಲ್ಲಿನ ಶಾಸನೋಕ್ತ ಚತುಸಮಯಮನಾವಗಮೆಸೆವಾ[೧೬] ಎಂಬ ಮಾತಿನಿಂದ ಐತಿಹಾಸಿಕ ಪ್ರಾಚೀನ ತೇರದಾಳ ನಗರ ತೇರದಾಳ ೧೨ ಕಂಪಣದಲ್ಲಿ ಚತುಸಮಯಗಳು ಎಂದರೆ ನಾಲ್ಕು ಧರ್ಮಗಳು ತುಂಬಾ ಪ್ರಸಿದ್ಧವಾಗಿದ್ದು, ಇವುಗಳಲ್ಲಿ ವೈಷ್ಣವ ಧರ್ಮವೂ ಒಂದೆಂದು ಅರ್ಥೈಸಿಕೊಳ್ಳಬಹುದು.

**ನಿರುಪಮ ಗನ್ಧಶಾಲಿ ವನದಿಂ ಬ**
**ನದಿ ಕೊಳದಿಂ ತಟಾಕದಿಂ ಗಿರಿವನ ತೋಯ ದುರ್ಗ ಕುಳದಿಂದಗಳಿಂ ಬುಧ**
**ಮಾಧವಾರ್ಕ್ಕ ಶಂಕರ ಜಿನ ಸದುಮದಿಂ ವಿಫ(ಪ)ಣಿ ಮಾರ್ಗದಿನೊಪ್ಪುವ**
**ತೇರಿದಾಳ ಪಂನೆರಡಬಿ ಚೆಲ್ಪನೇಯ ಪೊಗಳಲುಕಜ**
**ನುಂ ನೆಳೆಯಂ ಧರಿತ್ರಿಯೋಳು**[೧೭]

ತೇರದಾಳ ಕಂಪಣದಲ್ಲಿ ವೈಷ್ಣವ ಧರ್ಮವೂ ತಕ್ಕ ಮಟ್ಟಿಗೆ ವಿಶೇಷವಾಗಿ ಪ್ರಸಿದ್ಧಿಯನ್ನು ಪಡೆದಿತ್ತು ಎಂಬುದಕ್ಕೆ ಇದೇ ಶಾಸನದಲ್ಲಿ ಕಂಡು ಬರುವ ಮಾಧವಾರ್ಕ್ಕ ಎಂಬ ವಾಕ್ಯ ವಿಷ್ಣು ಸೂಚಕವಾಗಿದ್ದು, ಇದು 'ಮಾಧವ' ಎಂಬುದಕ್ಕೆ ಪುಷ್ಠಿಯನ್ನು ನೀಡುತ್ತದೆ. ಈ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದ ಉಲ್ಲೇಖಗಳಿಂದ ವೈಷ್ಣವ ಧರ್ಮವು ಇಲ್ಲಿ ಹೆಚ್ಚು ಪ್ರಚಲಿತವಿತ್ತೆಂದು ತಿಳಿದುಬರುತ್ತದೆ. ಪ್ರಸಕ್ತ ಈ ಭಾಗದಲ್ಲಿ ವೈಷ್ಣವ ಧರ್ಮ ಹೆಚ್ಚು ಪ್ರಾಚುರ್ಯದಲ್ಲಿದ್ದು, ಅದರ ಅನುಯಾಯಿಗಳ ಸಂಖ್ಯೆ ಹೇರಳವಾಗಿದೆ.

**ಬೌದ್ಧ ಧರ್ಮ**

"ಅರಿವಿನ ದಾರಿ ಕಾಣದೆ ಜನ ಸಮುದಾಯ ನರಳುವಾಗ ಅರಿತು ದಾರಿ ತೋರುವ ಮಹಾಪುರುಷರು ಅವತರಿಸುತ್ತಾರೆ" ಎಂಬ ನಂಬಿಕೆ ಇದೆ. ಅಂತಹ ನಂಬಿಕೆಯನ್ನು ಧೃಡಪಡಿಸಿದ ಮಹಾನ್ ಪುರುಷರಲ್ಲಿ ಬೌದ್ಧ ಧರ್ಮ ಪ್ರವರ್ತಕನಾದ ಗೌತಮ ಬುದ್ಧನು ಒಬ್ಬ[೧೮]. ಬೌದ್ಧ ಮತವು ಮೌರ್ಯ ಚಕ್ರವರ್ತಿ ಅಶೋಕನ ಕಾಲದಿಂದ ಕರ್ನಾಟಕದಲ್ಲಿ ಹೆಚ್ಚಾಗಿ ಪ್ರಭಾವ ಬೀರ ತೊಡಗಿತು. ಇದಕ್ಕೆ ಉದಾ: ಕರ್ನಾಟಕದಲ್ಲಿ ಹಲವಾರು ಭಾಗಗಳಲ್ಲಿ ಬೌದ್ಧ ಧರ್ಮದ ವಿಹಾರಗಳ ಉಲ್ಲೇಖಗಳು ನಮಗೆ ದೊರಕುತ್ತವೆಯಾದರೂ ಇದೇ ವೇಳೆಯಲ್ಲಿ ಜೈನ ಮತವು ಕನ್ನಡದ ನೆಲದಲ್ಲಿ ಭದ್ರವಾಗಿ ಬೇರು ಬಿಟ್ಟಿದ್ದರಿಂದ ಬೌದ್ಧ ಧರ್ಮವನ್ನು ತಳ ಕೀಳುವಂತೆ ಮಾಡುವುದು ಸಾಧ್ಯವಾಗಲಿಲ್ಲ. ಆದರೂ ಕೂಡ ಮಂದವಾದ ಮಿಣುಕು ದೀಪದಂತೆಯೇ ಕ್ರಿ.ಶ. ೧೧ನೆಯ ಶತಮಾನದ ಕೊನೆಯ ಭಾಗದಿಂದ ಕ್ರಿ.ಶ. ೧೭ನೆಯ ಶತಮಾನದವರೆಗೂ ಬೌದ್ಧ ಮತವು ತೇರದಾಳ ಪ್ರದೇಶದಲ್ಲೂ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದಲ್ಲಿ ದೊರೆತ ಶಾಸನಗಳೇ ನಮಗೆ ಸಾರಿ ಹೇಳುತ್ತವೆ. ಉದಾ: ಕ್ರಿ.ಶ. ೧೧೨೩ರ ಕಾಲದ ಐತಿಹಾಸಿಕ ಪ್ರಾಚೀನ ತೇರದಾಳದ ಈ ಶಾಸನದಲ್ಲಿ ಬಂದಿರುವ 'ಬುಧ' ಪದದ ಉಲ್ಲೇಖವು[೧೯] ಇತರ ಧರ್ಮಗಳಂತೆ ಬೌದ್ಧ ಧರ್ಮವೂ ಸಹ ಈ ನೆಲದಲ್ಲಿ ಅಸಿತ್ತ್ವಸದಲ್ಲಿತ್ತು ಎಂಬುದನ್ನು ಖಚಿತಪಡಿಸುತ್ತದೆ. ಒಟ್ಟಿನಲ್ಲಿ ಇದು ಇತರ ಧರ್ಮಗಳು ತೀರಾ ಕಡೆಗಣಿಸಬಹುದಾಗಿದ್ದ ಧರ್ಮವಾಗಿರಲಿಲ್ಲ. ಬೌದ್ಧ ಧರ್ಮ ತೇರದಾಳದಲ್ಲಿ ಶಂಕರ ಜನರಿಗೆ ದೇವಾಲಯಗಳು ಇದ್ದಂತೆ ಬುದ್ಧಗೂ ಇದ್ದಿರಬಹುದೆಂದು ತಿಳಿದುಬರುತ್ತದೆ. ಇಲ್ಲಿಯ ಗಾವುಂಡರು ಚತುಸಮಯಗಳನ್ನು ರಕ್ಷಿಸುತ್ತಿದ್ದರು ಎಂದು ಅದೇ ಶಾಸನದಿಂದ ತಿಳಿದುಬರುತ್ತದೆ. ಪ್ರಸಕ್ತ ತೇರದಾಳ ಪರಿಸರದ ಅಂಬೇಡ್ಕರ್ ಅನುಯಾಯಿಗಳಾದ ಹೊಲೆಯರು ಇತ್ತೀಚಿಗೆ ಬೌದ್ಧ ಧರ್ಮಕ್ಕೆ ಹೆಚ್ಚು ಮತಾಂತರ ಗೊಂಡಿದ್ದು, ಅವರ ಸಂಖ್ಯೆ ಶೇ.೧೫-೨೦%ರಷ್ಟು ಇದೆ. ಬೌದ್ಧರಿಗೆ ಸಂಬಂಧಿಸಿದ ಪ್ರಾಚೀನ ಕಾಲದ ಭೌದ್ದ ಮಂದಿರಗಳಾಗಲಿ, ಸ್ತೂಪ, ಚೈತ್ಯ, ವಿಹಾರಗಳಾಗಲಿ ತೇರದಾಳ ಪರಿಸರದಲ್ಲಿ ಎಲ್ಲಿಯೂ ಇಲ್ಲ. ಮುಂದಿನ ದಿನಗಳಲ್ಲಿ ಇಲ್ಲಿ ಭೂ-ಶೋಧನೆಗಳಾದಲ್ಲಿ ಆ ಕುರಿತ ವಿವರಗಳು ಬೆಳಕು ಬರುವ ಸಾಧ್ಯತೆ ಇದೆ.

**೫.೨ ಜೈನ ಧರ್ಮ**

ಕ್ರಿ.ಪೂ. ೬-೪ನೆಯ ಶತಮಾನವನ್ನು ಭಾರತದ ಮತ್ತು ಜಗತ್ತಿನ ಇತಿಹಾಸದಲ್ಲಿ 'ಆಶ್ಚರ್ಯಕಾರಕ ಶತಕ' ಎಂದು ಕರೆಯಲಾಗಿದೆ. ಈ ಕಾಲದಲ್ಲಿ ಜರುಗಿದ ಧಾರ್ಮಿಕ, ಸಾಮಾಜಿಕ, ರಾಜಕೀಯ ಘಟನೆಗಳು ಬಹುತೇಕವಾಗಿ ಶಾಶ್ವತ ಪರಿಣಾಮವನ್ನುಂಟು

ಮಾಡಿದವು. ಜಿನರಿಂದ ಜೀವಿಗಳ ಕಲ್ಯಾಣಕ್ಕಾಗಿ ಬೋಧಿಸಲ್ಪಟ್ಟ ಧರ್ಮವೇ ಜಿನಧರ್ಮ, ಅದನ್ನು ಆಚರಿಸುವವರೆ ಜೈನರು. ಶಿವನಾಗಲಿ, ವಿಷ್ಣುವಾಗಲಿ ಇವರು ಯಾವ ಧರ್ಮವನ್ನು ಉಪದೇಶಿಸಿಲ್ಲ. ಇವರು ನಿರಾಕಾರ ರೂಪವಾದ ದೇವರುಗಳು ಮಾತ್ರ ಜಿನನು ಅವತಾರಿಯ ರೂಪವಲ್ಲ. ತನ್ನ ಸ್ವಂತ ಬಲದಿಂದ ಕಾಮಕ್ರೋಧಾದಿಗಳ ವಿಕಾರಗಳನ್ನು ಜಯಿಸಿ ಜಿನನಾದವನು (ಜಿನ ಎಂದರೆ ಜಯಶಾಲಿ ಆದವನು).

ಭಾರತ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಜೈನ ಧರ್ಮ ಒಂದು. ಜೈನ ಸಿದ್ಧಾಂತದ ಪ್ರಕಾರ ಈ ಧರ್ಮವನ್ನು ಯಾರು ಸ್ಥಾಪಿಸಿಲ್ಲ. ಇದು ಅನಾದಿ/ಅನಂತ ಧರ್ಮವಾಗಿದೆ. ವರ್ತಮಾನ ಕಾಲದ ಪ್ರಥಮ ತೀರ್ಥಕರನಾದ ವೃಷಭನಾಥರಿಂದ ಮೊದಲುಗೊಂಡು ಅಜಿತನಾಥ, ಚಂದ್ರಪ್ರಭು, ಶಾಂತಿನಾಥ, ೨೩ನೇ ತೀರ್ಥಂಕರನಾದ ಪಾರ್ಶನಾಥ ಹಾಗೂ ೨೪ನೇ ತೀರ್ಥಕರನಾದ ಮಹಾವೀರರು ಈ ಧರ್ಮದಲ್ಲಿ ಹೆಚ್ಚು ಖ್ಯಾತಿಯನ್ನು ಪಡೆದಿದ್ದಾರೆ. ವೈದಿಕ ಸಂಸ್ಕೃತಿಯು ಕ್ರಿ.ಪೂ.೪-೫ ನೇ ಶತಮಾನದ ವೇಳೆಗೆ ಗಣರಾಜ್ಯಗಳ ಮೇಲೆ ವಿಶೇಷವಾದ ಪ್ರಭಾವ ಬೀರಿತು. ಕೃಷಿ ಹಾಗೂ ಕೃಷಿಯ ಮೇಲೆ ಅವಲಂಬಿತವಾದ ಪರಿಸರದೊಡನೆ ಸಮಾಜವು ಬದಲಾಗುತ್ತ ನಗರಗಳು, ರಾಜ್ಯಗಳು ಹಾಗೂ ತ್ರೀವವಾಗಿ ಜನಸಂಖ್ಯೆ ಬೆಳೆದು ಲೋಹದ ತಿಳಿವವನ್ನು ಪಡೆದಿದ್ದ ಮಾನವ ಕೃಷಿಗಾಗಿ ನೇಗಿಲನ್ನು ಉಪಯೋಗಿಸಿದ. ಇದರಿಂದಾಗಿ ಪರಿಸರದ ಕಾಡನ್ನು ಕಡಿದು ಕೃಷಿ ವಿಸ್ತರಣೆ ಜೊತೆಗೆ ನಾಡುಗಳನ್ನೂ ನಿರ್ಮಿಸಿದನು. ಈ ಹಿನ್ನೆಲೆಯಲ್ಲಿ ವೈದಿಕ ಸಂಸ್ಕೃತಿಯ ಕ್ಲಿಷ್ಟತೆಯಿಂದ ಅತೀ ಹೆಚ್ಚು ಜನರನ್ನು ಪ್ರಭಾವಿಸತೊಡಗಿತು. ಸತ್ಯದ ಹಿನ್ನೆಲೆಯಲ್ಲಿ ಜನ ಆಧ್ಯಾತ್ಮಿಕವಾಗಿ ಮನ ಶಾಂತಿಗಾಗಿ ಹಾತೊರೆಯುವ ಸಂದರ್ಭದಲ್ಲಿ ಜೀವನದ ಮನಶಾಂತಿಗಾಗಿ, ಸತ್ಯದ ಶೋಧನೆ, ಅಹಿಂಸೆಯ ತತ್ವದ ಹಿನ್ನೆಲೆಯಲ್ಲಿ ಜೈನ ಧರ್ಮ ಭಾರತದಲ್ಲಿ ತನ್ನದೆ ಆದ ಛಾಪು ಮೂಡಿಸಿ ಶಾಶ್ವತವಾದ ಸ್ಥಾನವನ್ನು ಚರಿತ್ರೆಯಲ್ಲಿ ಪಡೆದಿದೆ. ಪರಮಾಧಿಕಾರ ಹಿನ್ನೆಲೆಯಲ್ಲಿ ಪುರೋಹಿತ ವರ್ಗ, ಗೊಂದಲದ ಗೂಡಾದ ವೈದಿಕ ಧರ್ಮದ ನೆಲೆ, ಪ್ರಾಣಿ ಹಿಂಸೆ, ಕಠಿಣವಾದ ಸಂಸ್ಕೃತ ಶ್ಲೋಕಗಳ ಪಠಣ, ಜಾತಿ ಪದ್ಧತಿ, ಮಹಾ ಮೇಧಾವಿಗಳ ಜನನ ಇವು ಜೈನ ಧರ್ಮ ಅಸ್ತಿತ್ವಕ್ಕೆ ಬರಲು ಕಾರಣವಾದ ಅಂಶಗಳಾದವು. ಶ್ವೇತಾಂಬರ ಹಾಗೂ ದಿಗಂಬರ ಎನ್ನುವ ಮುಖ್ಯ ಪಂಗಡಗಳು ಈ ಧರ್ಮದಲ್ಲಿದ್ದು, ಇವರಲ್ಲಿ ಅಜೀವಿಕ ಎನ್ನುವ ಮತ್ತೊಂದು ಸನ್ಯಾಸಿಗಳ ಪಂಗಡವಿದೆ. ಈ ಧರ್ಮದಲ್ಲಿ ೨೪ ಜನ ತೀರ್ಥಂಕರರು ಆಗಿ ಹೋಗಿದ್ದಾರೆ. ಅವರೆಂದರೆ.

| ಅ.ನಂ | ತೀರ್ಥಂಕರು | ಲಾಂಛನ | ಯಕ್ಷ-ಯಕ್ಷಿಯರು |
|---|---|---|---|
| ೧. | ವೃಷಭನಾಥ | ಎತ್ತು | ಗೋಮುಖ-ಚಕ್ರೇಶ್ವರಿ |
| ೨. | ಅಜಿತನಾಥ | ಆನೆ | ಮಹಾಯಕ್ಷ-ರೋಹಿಣಿ |
| ೩. | ಶಂಭನಾಥ | ಕುದರೆ | ತ್ರಿಮುಖ-ಪ್ರಜ್ಞಪ್ತಿ |
| ೪. | ಅಭಿನಂದನ | ಕಪಿ | ಯಕ್ಷೇಶ್ವರ-ವಜ್ರಶಂಖಲಾ |
| ೫. | ಸಮತಿನಾಥ | ಚಕವಾ ಪಕ್ಷಿ | ತುಂಬರು-ಪುರುಷದತ್ತೆ |
| ೬. | ಪದ್ಮಪ್ರಭ | ಕಮಲ | ಕುಸುಮಾವರ-ಮನೋವೇಗೆ |
| ೭. | ಸುಪಾರ್ಶ್ವನಾಥ | ಸ್ವಸ್ತಿಕ | ವರನಂದಿ-ಕಾಲಿ |
| ೮. | ಚಂದ್ರನಾಥ | ಚಂದ್ರ | ಶ್ಯಾಮ-ಜ್ವಾಲಾಮಾಲಿನಿ |
| ೯. | ಪುಷ್ಪದಂತ | ಮಕರ (ಮೊಸಳೆ) | ಅಜಿತ-ಮಹಾಕಾಲಿ |

| ೧೦. | ಶೀತಲನಾಥ | ಕಲ್ಪವೃಕ್ಷ | ಬ್ರಹ್ಮ–ಮಾನವಿ |
|---|---|---|---|
| ೧೧. | ಶ್ರೇಯಾಂಸ | ಗಂಡಕ(ಘೇಂಢಾ ಮೃಗ) | ಈಶ್ವರ–ಗ್ಔರಿ |
| ೧೨. | ವಾಸುಪೂಜ್ಯ | ಮಹಿಷ | ಕುಮಾರ–ಗಾಂಧಾರಿ |
| ೧೩. | ವಿಮಲನಾಥ | ವರಾಹ(ಹಂದಿ) | ಷಣ್ಮುಖ–ವೈರೂಟಿ |
| ೧೪. | ಅನಂತನಾಥ | ಭಲ್ಲೂಕ(ಮುಳ್ಳು ಹಂದಿ) | ಪಾತಾಲ–ಅನಂತಮತಿ |
| ೧೫. | ಧರ್ಮನಾಥ | ವಜ್ರದಂಡ | ಕಿನ್ನರ–ಮಾನಸಿ |
| ೧೬. | ಶಾಂತಿನಾಥ | ಹರಿಣ (ಜಿಂಕೆ) | ಗರುಡ–ಮಹಾಮಾನಸಿ |
| ೧೭. | ಕುಂಥುನಾಥ | ಮೇಷ (ಆಡು) | ಗಂಧರ್ವ–ಜಯ |
| ೧೮. | ಅರನಾಥ | ಮತ್ಸ್ಯ(ಮೀನು) | ಮಹೇಂದ್ರ–ವಿಜಯ |
| ೧೯. | ಮಲ್ಲಿನಾಥ | ಕಲಶ | ಕುಬೇರ–ಅಪರಾಜಿತ |
| ೨೦. | ಮುನಿಸೂವ್ರತ | ಕೂರ್ಮ(ಆಮೆ) | ವರುಣ–ಬಹುರೂಪಿಣಿ |
| ೨೧. | ನಮಿನಾಥ | ಇಂದೀವರ(ನಿಲಕಮಲ) | ವಿದ್ಯುತ್ಪ್ರಭ–ಚಾಮುಂಡಿ |
| ೨೨. | ನೇಮಿನಾಥ | ಶಂಖ | ಸರ್ವಾಹ–ಕೂಷ್ಮಾಂಡನಿ |
| ೨೩. | ಪಾರ್ಶ್ವನಾಥ | ಸರ್ಪ | ಧರಣೇಂದ್ರ–ಪದ್ಮಾವತಿ |
| ೨೪. | ವರ್ಧಮಾನ | ಸಿಂಹ | ಮಾತಂಗ–ಸಿದ್ಧಾಯಿನಿ |

ಕ್ರಿ.ಶ.ಪೂರ್ವ೩೦೦ರ ವೇಳೆಯಲ್ಲಿ ಮೌರ್ಯ ಸಾಮ್ರಾಜ್ಯದ ಸ್ಥಾಪಕ ಚಂದ್ರಗುಪ್ತನು ತನ್ನ ಕೊನೆಗಾಲದಲ್ಲಿ ದಕ್ಷಿಣ ಭಾರತವನ್ನು ಪ್ರವೇಶಿಸಿದ್ದ ಕಾಲದಲ್ಲಿ ಜೈನ ಧರ್ಮವು ಕರ್ನಾಟಕದ ಸಮೃದ್ಧ ನೆಲೆಯಾಗಿ ಪರಿಣಮಿಸಿತು. ಅಂದು ಕನ್ನಡ ನಾಡಿನಲ್ಲಿ ಗಂಗರು, ಹೊಯ್ಸಳರಂತಹ ರಾಜಮನೆತನಗಳು ಜೈನ ಧರ್ಮಕ್ಕೆ ವಿಶೇಷವಾಗಿ ಒಲಿದಿರುವುದನ್ನು ಕಾಣುತ್ತೇವೆ. ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರಂತಹ ಪ್ರಮುಖವಾದ ಅರಸು ಮನೆತನಗಳು ಜೈನ ಧರ್ಮವನ್ನು ಪುರಸ್ಕರಿಸಿದ್ದವು. ಕನ್ನಡ ನಾಡೆಲ್ಲವೂ ಜೈನಮಯವಾಗುತ್ತಿದ್ದಂತಹ ಕಾಲದಲ್ಲಿ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮವೂ ಸಹ ಜೈನ ಧರ್ಮದ ಪ್ರಭಾವದಿಂದ ಹೊರತಾಗಿರಲಿಲ್ಲವೆಂಬುದಕ್ಕೆ ಈ ಪ್ರದೇಶದಲ್ಲಿ ಈಗಲೂ ಕಾಣಬರುವ ಜಿನಾಲಯ ಹಾಗೂ ಬಾಳಿ ಬೆಳಗಿದ ಜೈನ ಪರಂಪರೆಗಳು ಸಾಕ್ಷಿಯಾಗಿವೆ.

ಕೂಂಡಿನಾಡು ೩೦೦೦ ನಾಡಿನ ಹಲವು ಕಂಪಣಗಳಲ್ಲಿ ಒಂದಾದ ತೇರದಾಳ ಮಧ್ಯವರ್ತಿ ಸ್ಥಳವಾಗಿ ಆಡಳಿತದ ಕಾರ್ಯ ವೈಖರಿಯನ್ನು ಹೊತ್ತು ಮೆರೆದಂತೆ ಜೈನ ಧರ್ಮದ ಪ್ರಮುಖ ಕೇಂದ್ರವಾಗಿಯೂ ಸಹ ಮೆರೆಯಿತು. ಉದಾ: ಕ್ರಿ.ಶ.೧೧೨೩ರ ಕಾಲದ ತೇರದಾಳ ಗ್ರಾಮದಲ್ಲಿ ದೊರೆತ ೫ನೇ ಶಾಸನದ ಪ್ರಾರಂಭಿಕ ಸಾಲುಗಳಿಂದ ತಿಳಿದು ಬರುವುದೇನೆಂದರೆ.

**"ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋಘ ಲಾಂಛನಂ ಜಿಯಾತ್ರೈ ಲೋಕ್ಯನಾಥಸ್ಯ ಶಾಸನಂ ಜಿನಾಶಾಸನಮ್ ॥ ಶ್ರೀಮನಮ್ನ ಸುರಾಸುರೋರಗ ಲಸನ್ಮಾಣಿಕ್ಯ ಮೌಳಿ ಪ್ರಭಾಸ್ತೋಮಾಲಂಕೃತ ಪಾದಪದ್ಮಯುಗಳಂ ಕೈವಲ್ಯುನ್ತಾಮನಃ ಪ್ರೇಮಂ ಸನ್ಮತಿ ನೇಮಿನಾಥ ಜಿನನಾಥಂ ತೇರಿದಾಳಾತಿಶಯ ಶ್ರೀಮತುಭವ್ಯಜ."**[೨೦]

ಈ ಶಾಸನಗಳಲ್ಲಿ ಐತಿಹಾಸಿಕ ಪ್ರಾಚೀನ ತೇರದಾಳದ ಜನರು ಜಯಶಾಲಿಯಾಗಲಿ ಎಂದು ಹೇಳಿ ನೇಮಿನಾಥ ಹಾಗೂ ಜಿನೇಶ್ವರನ ಆಶೀರ್ವಾದಗಳನ್ನು ಕೋರಲಾಗಿದೆ.

**ನೇಮಿನಾಥೇಶ್ವರ ಜಿನಾಲಯಕ್ಕೆ ದಾನ-ದತ್ತಿ :**

ಐತಿಹಾಸಿಕ ಪ್ರಾಚೀನ ತೇರದಾಳ-೧೩ ಕಂಪಣವನ್ನು ಗೊಂಕ ದೊರೆ ರಾಜಧಾನಿ ಮಾಡಿಕೊಂಡು ವ್ಯವಸ್ಥಿತ ರೂಪದಿಂದ ಆಡಳಿತವನ್ನು ನಡೆಸುತ್ತಿದ್ದ. ಒಮ್ಮೆ ಅಕಸ್ಮಾತ್ತಾಗಿ ಆ ದೊರೆಗೆ ವಿಷ ಸರ್ಪ ಕಡಿಯಿತು. ಆಗ ದೊರೆಯು ಮಂತ್ರ, ತಂತ್ರದ ಆಸೆಗೆ ಬಲಿ ಬೀಳದೇ ಪಂಚ ಪರಮೇಷ್ಠಿಗಳನ್ನು ಸ್ಮರಿಸಲಾಗಿ ವಿಷವೂ ದೂರವಾಯಿತಂತೆ. ಇದನ್ನು ಕ್ರಿ.ಶ.೧೧೨೩ರ ಕಾಲದ ಐತಿಹಾಸಿಕ ತೇರದಾಳ ಶಾಸನದಲ್ಲಿ ಈ ರೀತಿಯ ಉಲ್ಲೇಖಿಸಲಾಗಿದೆ.

**ಪಸಿತಾಹಿ ಸೊಂಕಿದೊಡೆ ಸಂಕಿನ ಮಂತ್ರದ ತಂತ್ರದಾಸೆ**
**ಯಿಂದಸುವಳಿಯಾಗಿ ಬಿಟ್ಟಿರದೆ ಪಂಚಪದಂಗಳನೋದಿ**
**ತದ್ವಿಶಪ್ರಸರಮನಯ್ದು ಪಿಂಗಿಸಿ ಜಿನಬ್ರತದೊಳು ದ್ರಿಡನಾದ ತಂನ**
**ಪೆಂಪೆಸೆದಿರೆ ತೇರಿದಾಳದರಸಂ ನೆಗಳ್ದಂ ಕಲಿಗೊಂಕ ಭೂಭಜನೆ ॥**[೨೧]

ಹೀಗೆ ಪಂಚಪರಮೇಷ್ಠಿಗಳ ಮಂತ್ರಗಳನ್ನು ಸ್ಮರಿಸಲು ಗೊಂಕ ಅರಸನಿಗೆ ವಿಷಬಾಧೆಯಿಂದ ಮುಕ್ತವಾಗಿ ತನಗೆ ಪುನರ್ಜನ್ಮವನ್ನು ನೀಡಿ ರಕ್ಷಿಸಿದ ಜಿನನಿಗಾಗಿ ಐತಿಹಾಸಿಕ ತೇರದಾಳದಲ್ಲಿ ಒಂದು ಜಿನಾಲಯವನ್ನು ಕಟ್ಟಿಸಿ, ಅದಕ್ಕೆ ಗೊಂಕ ಜಿನಾಲಯವೆಂದು ಹೆಸರನ್ನಿಟ್ಟು ತದನಂತರ ಕೊಲ್ಲಾಪೂರದಿಂದ ತನ್ನ ಗುರುಗಳನ್ನು ಹಾಗೂ ಕೊಲ್ಲಾಪೂರದ ರೂಪನಾರಾಯಣ ಬಸದಿಯ ಆಚಾರ್ಯರಾದ ಶ್ರೀ ಮಾಘಣಂದಿ ಸೈದ್ಧಾಂತಿಕ ದೇವರನ್ನು ಶುಭ ದಿನ, ಶುಭ ಮಹೂರ್ತದಲ್ಲಿ ಬರಮಾಡಿಕೊಂಡು ಆ ಬಸದಿಯಲ್ಲಿ ನೇಮಿನಾಥ ಜಿನೇಶ್ವರ ಮೂರ್ತಿಯನ್ನು ಪ್ರತಿಷ್ಠೆ ಮಾಡಿದುದ್ದನ್ನು ಈ ಶಾಸನವು ತಿಳಿಸಿ ಹೇಳುತ್ತದೆ.

. . . . . . . **ಶ್ರೀಮತು ಗೊಂಕದೇವರಸರು**
**ನಿಜರಾಜಧಾನಿಯಪ್ಪ ತೇರಿದಾಳದ ಮಧ್ಯಪ್ರದೇಶ**
**ದೊಳು ಗೊಂಕ ಜಿನಾಲಯಮಂ ನಿರ್ಮ್ಮಿಸಿ ಶ್ರೀ ನೇಮಿಜಿನನಾಥ ಪ್ರತಿಷ್ಠೆಯಂ**
**ರಾಷ್ಟ್ರಕೂಟಾನ್ವಯ ಶಿರ[ಃ] ಶಿಖಾಮಣಿ ಕಾರ್ತ್ತಿವೀರ್ಯ್ಯ ಮಹಾಮಂಡಳೇಶ್ವರ**
**ಮುಖ್ಯವಾಗಿ ಸಧ್ಭಕಿಯಂ ಶುಭದಿನ ಮಹೂರ್ತದೊಳು ಮಾಡಿ ತಜ್ಜಿನ**
**ಮುನಿ ಪ್ರಧಾನರಪ್ಪ ದೇಸಿಗಗಣ ಪೊಸ್ತಕಗಚ್ಛದ ಶ್ರೀ ಕೊಣ್ಣಕುನ್ದಾಚಾರ್ಯ್ಯಾನ್ವಯದ**
**ಕೊಲ್ಲಾಪೂರದ ಶ್ರೀ ರೂಪನಾರಾಯಣ ಬಸದಿಯಾಚಾರ್ಯ್ಯರು[ಂ] ಮಣ್ದಲಾಚಾರ್ಯ್ಯರು**
**ಮೆನಪ್ಪ ಶ್ರೀ ಮಾಘಣನ್ದಿ ಸೈದ್ಧಾನ್ತಿಕ**[೨೨]

ತದನಂತರ ಗೊಂಕರಸು ತನ್ನ ಗುರುಗಳಾದ ಶ್ರೀ ಮಾಘಣಂದಿ-ಸೈದ್ಧಾಂತಿಕ ದೇವರುಗಳ ಕಾಲವನ್ನು ತೊಳೆದು ತಾನು ಕಟ್ಟಿಸಿದ ಜಿನಾಲಯಕ್ಕೆ ಸಮಸ್ತ ಪ್ರಜೆಗಳ

ಸಮ್ಮುಖದಲ್ಲಿ ಎಪ್ಪತ್ತರಡು ಮತ್ತರು ಭೂಮಿಯನ್ನು ಹಾಗೂ ಒಂದು ಮತ್ತರು ತೋಟವನ್ನು ದಾನ ಮಾಡಿದನು. ಅದು ಅಲ್ಲದೇ ಅಲ್ಲಿಯ ಗೌಡರು ಮತ್ತು ರೈತರು ಕೂಡಿ ದೇವರಿಗೆ ಎಲ್ಲ ದವಸ ಧಾನ್ಯಗಳ ರಾಸಿಗೊಳಗವನ್ನು, ನಖರುಗಗಳು ಕೆಲವು ಆದಾಯವನ್ನು, ತೆಲ್ಲಗರು ನಂದಾದೀವಿಗೆಗೆ ಎಣ್ಣೆಯನ್ನು, ಕುಂಬಾರರು ಮಡಿಕೆಗಳನ್ನು ಮತ್ತು ಗಾತ್ರಿಗಳು ವೀಳ್ಯೆದೆಲೆಗಳನ್ನು ಕೊಟ್ಟರೆಂದು ಮೇಲೆ ಉಲ್ಲೇಖಿತವಾದ ಶಾಸನವು ಹೇಳಿದೆ.

ಅರವತ್ತು ವರ್ಷಗಳ ತರುವಾಯ ಕ್ರಿ.ಶ.೧೧೮೧ರ ರಚಿತವಾದ ಎರಡನೆಯ ಶಾಸನವು ಆ ಕಾಲದಲ್ಲಿ ಪ್ರಸಿದ್ಧವಾದ ವ್ಯಾಪಾರಿ ಸಂಘವಾದ ಅಯ್ಯಾವೊಳೆ ಐಯ್ನೂರು ಸಂಘದ ಸದಸ್ಯರು, ನಾನಾ ದೇಶ್ಯಾಭ್ಯನ್ತರದ ಗವರಿ ಗೌತ್ರಿಗರು, ಸೆಟ್ಟಿಯರು, ಸೆಟ್ಟಿಗುತ್ತರು, ಮಹಾನಾಡಾಗಿ[೨೩] ತೇರದಾಳದಲ್ಲಿ ಮಹಾಸಭೆ ಮಾಡಿ ಗೊಂಕ ಅರಸರು ಕಟ್ಟಿಸಿದ ನೇಮಿನಾಥ ಬಸದಿಯನ್ನು ನೋಡಿ ಸಂತೋಷ ಬರಿತವಾಗಿ ನಮಸ್ಕರಿಸಿ ಆನಂದಭರಿತರಾಗಿ ದೇವರ ಅಷ್ಟ ವಿದ್ಯಾರ್ಚನೆ ಪೂಜೆ ನಿರಂತರವಾಗಿ ನಡೆಯುವುದರ ಸಲುವಾಗಿ ದೇವಾಲಯಗಳಿಗೆ ಒಂದು ನೂರಾ ಇಪ್ಪತ್ತು ಎತ್ತು, ಕತ್ತೆ, ಕೋಣ, ದೋಣಿ ಮತ್ತು ಘಟ್ಟ ಹಾಗೂ ಗುಡ್ಡಗಾಡು ಪ್ರದೇಶದಲ್ಲಿ ಉಪಯೋಗಿಸುವ ಸಾಧನಗಳು ಇವುಗಳ ಜೊತೆಗೆ ಸಾಗಿಸುವ ಸರಕುಗಳ ಮೇಲೆ ವಿಧಿಸಲಾಗುವ ಸುಂಕ ಪರಿಹಾರವನ್ನು ದೇವರಿಗೆ ಬಿಟ್ಟ ವಿಷಯವನ್ನು ಶಾಸನವು ಈ ಕೆಳಗಿನಂತೆ ಹೇಳಿದೆ.

> **". . . . . . . ಶ್ರಿ ಮದಯ್ಯಾವಳೆಯಯ್ನೂರ್ವ್ವಸ್ವಾಮಿಗಳು ಕುನ್ತಳ ವಿಷಯದೊಳು**
> **. . . . . . . ಶ್ರೀ ಮನ್ಮಂಡಳಿಕಂ ಗೊಂಕದೇವರಸಂ ಮಾಡಿಸಿದ"**
> **ನೇಮಿತೀರ್ಥೇಶ್ವರನ ಚೈತ್ಯಾಲಯಮಂ ಕಂಡು ಬಲಗೊಂಡು ಪೊಡವಟ್ಟು ಹರ್ಷಚಿತ್ತರಾಗಿ**
> **ದೇವರಪ್ಪವಿಧಾರ್ಚ್ಚನೆ ಚಂದ್ರಾರ್ಕ್ಕ ತಾರಂಬರಂ ನಡೆವಂತಾ**
> **"ಗಿ ಕೊಟ್ಟ ಶಾಸನ ಮರ್ಯ್ಯಾದೆ ಯೆನ್ತೆಂದಡ ಚತುಸ್ಸಮುದ್ರ ಪರ್ಯ್ಯನ್ತಂಬರಂ**
> **ನಡವನ್ತಾಗಿ ೧೨೦ ನೊಭಿಪ್ಪತ್ತೆತ್ತು ಕತ್ತೆ, ಕೋಣ, ಭಂಡಿ, ಭೈತ್ರ, ದೋಣಿ ದುರ್ಗಿಗಳ**
> **ಪಥಮೆಂಬಿವಭೋಳು ಆನೆ ಮಾಣಿಕ ವಸ್ತುವೇನಾದಡಂ ಪೇಥಿ ಜಳಸ್ಥಳ ಯಾ–"**
> **"ತ್ರೆಯಲು ನಡೆವಡಂ ಸುಂ ಪರಿಹಾರವಾಗಿ ಕೊಟ್ಟರು ಮತ್ತಂ ಶಾಸನ ಪರಿಹಾರಿಗರೆನ್ನದೆ**
> **ವಕ್ಕಲಲೊನ್ದು ಪಣವಂ ಬಿಟ್ಟರು[೨೪]".**

ಕ್ರಿ.ಶ.೧೧೮೭ರಲ್ಲಿ ರಚಿತವಾದ ಮೂರನೆಯ ಶಾಸನವು ಗೊಂಕ ಜಿನಾಲಯಕ್ಕೆ ದಾನ ದತ್ತಿಗಳನ್ನು ನೀಡಿದ ವಿವರವನ್ನು ಕುರಿತು ಹೇಳಿದೆ. ಸೇವುಣ ಅಥವಾ ಯಾದವ ಅರಸ ಸಿಂಘಣನ ಸೇನಾನಿಯಾಗಿದ್ದ ತೆಜುಗಿ ಮತ್ತು ಅವನ ಮಗ ಭಾಯಿದೇವರು ಕುಂತಳ ಮಹೀವಲ್ಲಭ ಕಲ್ಯಾಣದ ಚಾಲುಕ್ಯ ನಾಲ್ಕನೇಯ ಸೋಮೆಶ್ವರನಿಂದ ಕೊಂಡಿನಾಡನ್ನು ಪಡೆದು ಅದನ್ನು ಆಳುತ್ತಿದ್ದರು. ಆಗ ತೇರದಾಳದ ಗೊಂಕ ಜಿನಾಲಯ ನೇಮಿತೀರ್ಥೇಶ್ವರ ದೇವರಿಗೆ ಕ್ರಿ.ಶ.೧೧೨೩ರ ಶಾಸನಗಳಲ್ಲಿ ಗೊಂಕರಸನು ಬಿಟ್ಟಿದ್ದ ಭೂಮಿಯನ್ನು ಪುರ್ನದತ್ತಿ ಮಾಡಿದುದ್ದೇ ಅಲ್ಲದೇ ಹೊಸದಾಗಿ ಬಸದಿಯ ಅಂಗ ರಂಗಭೋಗಕ್ಕೆ ಅಲ್ಲಿಯ ಮುನಿಗಳ ಆಹಾರಕ್ಕೆ ಬಸದಿಯ ಜೀರ್ಣೋದ್ಧಾರಕ್ಕಾಗಿ ಮೂವತ್ತಾರು ಮತ್ತರ ಭೂಮಿಯನ್ನು ಹಾಗೂ ದೇವಾಲಯಕ್ಕೆ ಒಂದು ನಿವೇಶನವನ್ನು ಬಿಟ್ಟ ವಿಷಯವನ್ನು ಕುರಿತು ಶಾಸನವು ಹೀಗೆ ಉಲ್ಲೇಖಿಸಿದೆ.

"....ಭಾಯಿದೇವ ದಂಡನಾಯಕರು ಶ್ರೀಮತ್ತೇರಿದಾಳದ ಗೊಂಕ ಜಿನಾಲಯದ ಶ್ರೀ ನೇಮಿ ತೀರ್ಥೇಶ್ವರನ ಅಂಗರಂಗಭೋಗಕ್ಕಂ ರಿಷೆಯಾಹಾರದಾನಕ್ಕಂ ಖಂಡಸ್ಫುಟೀತ ಜೀರ್ಣೋದ್ಧಾರಕ್ಕಂ ಸಕವರ್ಶಂ ೧೧೯೯ ನೆಯ ಪ್ಲವಂಗ ಸಂವತ್ಸರದ ಚೈತ್ರ ಸು ೧೦ ಬ್ರಿಹಸ್ಪತಿವಾರದನ್ದು ಮುಂನ ಗೊಂಕರಸರು ಬಿಟ್ಟ ಪೂರ್ವ್ವ ವ್ರಿತ್ತ ಯೆ ಪ್ಪತ್ತೆರಡು ಆ ೭೨ಬಿಂ ಬಡಲಾಗ ಕೋಲಲು ಸರ್ವ್ವಬಾಧ ಪರಿಹಾರವಾಗಿ ಬಿಟ್ಟ ಮತ್ತರು ಮೂವತ್ತಾಘು ೩೭ ಮತ್ತಂ ಧವಳಾರಕ್ಕೆ ಅಂಗಡಿಗೇರಿ ಪರ್ಯಂತ ನಿವೇಶನಮಂ ಬಿಟ್ಟ ಶಾಸನದ ಕಲ್ಲುಗಳಂ ಪ್ರತಿಷ್ಠೆಯಂ ಮಾಡಿದರು[೨೫].

ಇದೇ ರೀತಿಯಾಗಿ ಈ ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದ ಅರಸು, ಮನ್ನೆಯರು, ಅಧಿಕಾರಿಗಳು, ವ್ಯಾಪಾರಸ್ಥರು ಮತ್ತು ಸಮಸ್ತ ಪ್ರಜೆ ಪರಿವಾರದವರು ನೀಡಿದ ದಾನ ದತ್ತಿಗಳನ್ನು ನೋಡಿದರೆ ಅವರ ಪರಧರ್ಮ ಸಹಿಷ್ಣುತೆ, ಭಕ್ತಿ ಮತ್ತು ನಂಬಿಕೆ ಹಾಗೂ ಜಿನ ಧರ್ಮದಲ್ಲಿ ಅವರಿಗಿದ್ದ ಆಸಕ್ತಿ ಅರ್ಥವಾಗುತ್ತದೆ.

ನೇಮಿನಾಥ ಪ್ರತಿಮೆಯ ಪೀಠದ ಮೇಲೆ ಬರೆದಿರುವ ಶಾಸನದಲ್ಲಿ ಜಿನ ಮೂರ್ತಿ ಪ್ರತಿಷ್ಠಾಪಿಸಿದ್ದನ್ನು ಮುಂದಿನಂತೆ ದಾಖಲಿಸಿದೆ.

ಶ್ರೀಮನ್ನೇಮಿಜಿನೇಂದ್ರನ ಪ್ರತಿಮೆಯಂ ಸಮ್ಯಕ್ತ್ವ ಚೂಡಾಮಣಿಗಳಾದಂ
ಥಾ ಶ್ರೀಮತ್ತೇರಿದಳದ ದೇಶಾಯಿ ಸತ್ಯೌವ್ವ ತತ್ಪುತ್ರ ಜಕ್ಕಪ್ಪ ಸಹವಾಗಿ
ಮಾಡಿಸಿ ಶ್ರೀ ಗೊಂಕಜಿನಾಲಯದಲ್ಲಿ ಪ್ರತಿಷ್ಠೆಯನು ಮಾಡಿದ ಶ
ಕವರ್ಷ । ೧೭೭೦ ವಿಭವನಾಮ ಸಂವತ್ಸರದ ಮಾರ್ಗ್ಗಶಿರದ
ಶುಕ್ಲ ದಶಮಿ ಶುಕ್ರವಾರದಲ್ಲಿ ಭದ್ರಂ ಭೂಯಾತ್ ಶ್ರೀ ಶ್ರೀ ಶ್ರೀ[೨೬].

ಈ ಶಾಸನದಲ್ಲಿ ಕಾಲವನ್ನು ಶಕವರ್ಷ ೧೭೭೦ ವಿಭವ ಮಾರ್ಗಶಿರ ಶುದ್ಧಶಮಿ ಎಂದಿದ್ದು ಇದು ಕ್ರಿ.ಶ.೧೮/೧೧/೧೭೪೮ ಸರಿಹೊಂದುತ್ತದೆ.

ತೇರದಾಳದ ದೇಸಾಯಿ ಸತ್ಯವ್ವ ಮತ್ತು ಆಕೆಯ ಮಗನಾದ ಜಕ್ಕಪ್ಪ ಸೇರಿ ಗೊಂಕ ಜಿನಾಲಯದಲ್ಲಿ ನೇಮಿನಾಥಸ್ವಾಮಿ ತೀರ್ಥಂಕರನ ಪ್ರತಿಷ್ಠೆ ಮಾಡಿಸಿದುದ್ದನ್ನು ತಿಳಿಸುತ್ತದೆ. ಈ ರೀತಿಯಾಗಿ ತೇರದಾಳ ಮತ್ತು ಅದರ ಸುತ್ತಲಿನ ಪರಿಸರದಲ್ಲಿ ಜೈನ ಧರ್ಮ ಬೆಳೆದು ಬಂದ ಪರಂಪರೆಯನ್ನು ಈ ಮೇಲಿನ ಶಾಸನಗಳಿಂದ ಅರಿಯಬಹುದಾಗಿದೆ.

**ಜೈನ ಗುರು ಪರಂಪರೆ :**

ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದಲ್ಲಿ ನೇಮಿನಾಥೇಶ್ವರ (ಗೊಂಕ ಜಿನಾಲಯ) ವ್ಯವಸ್ಥಿತ ರೂಪದಲ್ಲಿ ಬಸದಿಗಳು ಕಂಡು ಬರುವಂತೆಯೇ ಸನ್ಯಾಸಿಗಳು ಕೂಡಾ ಈ ಪ್ರದೇಶದಲ್ಲಿ ಬಾಳಿ – ಬೆಳಗಿದರೆಂಬುದಕ್ಕೆ ಹಲವಾರು ಶಾಸನಾಧಾರಿತಗಳು ಜೀವಂತ ನಿದರ್ಶನಗಳುಂಟು ಆಗಿವೆ. ಉದಾ: ಕಲ್ಯಾಣದ ಚಾಲುಕ್ಯ ದೊರೆ ಆರನೇಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ. ೧೧೨೩ರ ಶಾಸನವು ಜೈನ ಗುರುಪರಂಪರೆಯನ್ನು ಕುರಿತು ಉಲ್ಲೇಖಿಸುತ್ತದೆ. ಅವರುಗಳಲ್ಲಿ ಶ್ರೀ ಮಾಘನಂದಿ ಸೈದ್ಧಾಂತಿಕ ದೇವರು ಕೊಲ್ಲಾಪೂರದ ಶ್ರೀ ರೂಪನಾರಾಯಣ ಬಸದಿಯ ಆಚಾರ್ಯರೂ ಆ ಭಾಗದ ಮಂಡಳಾಚಾರ್ಯರೂ ಆಗಿದ್ದರಲ್ಲದೇ ಪ್ರಸಿದ್ಧ ನಿಂಬ ಸಾಮಂತನ ಗುರುಗಳಾಗಿದ್ದರು. ಸಾಮಂತ ನಿಂಬದೇವನು

ರೂಪನಾರಾಯಣ ಬಸದಿಯನ್ನು ಕಟ್ಟಿಸಿದನು. 'ಪುಸ್ತಕಗ್ಛ ದೇಶಿಯಗುಣ ಕೊನ್ಡ ಕುನ್ದಾನ್ವಯಕ್ಕೆ' ಸೇರಿದ ಇವರಿಗೆ ಅನೇಕ ಪ್ರಖ್ಯಾತ ಪಂಡಿತರು ಶಿಷ್ಯರಾಗಿದ್ದರು. ಪರವಾದೀಭ ಪಂಚಾನನನೆನಿಸಿದ ಕನಕನಂದಿ ಪಂಡಿತ, ಪರವಾದಿಶಿಖರಿ ಶಿಖರನಿರ್ಬೆದಗೋಚಣ ಪಂಡಿತರೆನಿಸಿದ ಶೃತಕೀರ್ತಿತ್ರೈವಿದ್ಯ, ಪರವಾದಿಮಸ್ತಕಶೂಲ ಚಂದ್ರಕೀರ್ತಿ ಪಂಡಿತ, ಉಜ್ವಳಕೀರ್ತಿ ಮೂರ್ತಿ ಪಂಡಿತ, ಪ್ರಭಾಚಂದ್ರ ಪಂಡಿತ, ವರ್ಧಮಾನ ತ್ರೈವಿದ್ಯ ವಿದ್ಯಾಧರ ಈ ಎಲ್ಲ ಮುನಿ ಶ್ರೇಷ್ಠರು ಅವರುಗಲ ಗಣ ಶಿಷ್ಯರಾಗಿದ್ದರು. ಇವರಲ್ಲಿ ಕೊನೆಯವರಾದ ಶ್ರೀ ವರ್ಧಮಾನ ತ್ರೈವಿದ್ಯ ವಿದ್ಯಾಧರ ವಸುದೈಕ ಬಾಂಧವ ಜಿನೇಂದ್ರಾಧೀಶ್ವರರಾಗಿದ್ದರೆಂದು ಈ ವಸುಧೈಕ ಬಾಂಧವ್ಯ ಜಿನಾಲಯಲೊಕ್ಕಿ ಗುಂಡಿಯಲ್ಲಿದ್ದ ಜಿನಾಲಯಗಳಲ್ಲಿ ಒಂದಾಗಿರಬಹುದು. ಈ ಜಿನಾಲಯ ಉಲ್ಲೇಖವನ್ನು ಅಲ್ಲಿಯ ಶಾಸನವೊಂದರಲ್ಲಿದೆ.

ಇದರಿಂದ ತಿಳಿದು ಬರುವುದೇನೆಂದರೆ ಜೈನ ಧರ್ಮವು ಈ ನಾಡಿನಲ್ಲಿ ಪ್ರಭಾವಿ ಧರ್ಮವಾಗಿ ಮೆರೆದಿತ್ತು ಎಂದು ತಿಳಿಯಬಹುದು. ಅಲ್ಲದೇ ಇದಕ್ಕೆ ವ್ಯತಿರಿಕ್ತವಾಗಿ ಇದೇ ಗ್ರಾಮದ ಕ್ರಿ.ಶ. ೧೧೮೧ರ ಕಾಲದ ಶಾಸನ ಅತ್ಯಂತ ಕುತೂಹಲಕಾರಿಯಾದ ವಿಷಯವನ್ನು ದಾಖಲಿಸಿದೆ. ಆ ಊರಿನ ನೇಮಿತೀರ್ಥೇಶ್ವರ (ಗೊಂಕಜಿನಾಲಯ) ಜಿನಾಲಯದ ಈ ಹಿಂದೆ ಕೊಲ್ಲಾಪೂರದ ರೂಪನಾರಾಯಣ ಬಸದಿಯ ಆಡಳಿತ ಕಕ್ಷೆಯಲ್ಲಿತ್ತು. ಆದರೆ ಆ ಊರಿನ ಸಮಸ್ತ ನಖರರುಗಳ ಪ್ರಾರ್ಥನೆಯಂತೆ, ಕೊಲ್ಲಾಪೂರದ ಘಟಿಕಾಸ್ಥಾನದ ಆಚಾರ್ಯರು ಮತ್ತು ಏಳ್ಕೋಟೆ ಸಂಖ್ಯಾ ತಗಣಂಗಳ ಒಂದೂಗೂಡಿ ಆ ಜಿನಾಲಯವನ್ನು ಅದೇ ಊರಿನ ಕಲಿದೇವ ದೇವಾಲಯಕ್ಕೆ ಪ್ರತಿಬದ್ಧ ಮಾಡಿದರು. ಇದಕ್ಕೆ ಕಾರಣ ಆ ಶಾಸನದ ಕೊನೆಯ ವಾಕ್ಯಗಳಿಂದ ನಮಗೆ ಸ್ಪಷ್ಟವಾಗುತ್ತದೆ.

**"ಬಸದಿಯ ಮೇಲೆ ಸೂದ್ರಕನ ಸಿಂಹದ**
**ಚಕ್ರದ ಚಿಹ್ನೆಮೆವಿಂಬಿನ ತಿಸುಳದ ಘಂಟೆ**
**ಯಂ ಪಥೆಯನಾಗದೆನಿಪ್ಪವನೇಳುಕೋಟೆ ತಾಪಸರ್ಗ್ಗೆ**
**ಮಹಾವಿರೋಧಿಯವನೀಶ್ವರ ವೈರಿ .............**"[೨೭]. ಎಂಬ ವಿಷಯವು ಅಂದು ನಡೆಯುತ್ತಿದ್ದ ಧಾರ್ಮಿಕ ಆಂದೋಲನದ ಚಿತ್ರಣವನ್ನು ನೀಡುತ್ತದೆ. ಅಂತಹ ದುರ್ಘಟನೆ ತೇರದಾಳದ ಬಸದಿಯ ಆಗಬಾರದೆಂಬ ಉದ್ದೇಶದಿಂದ ಶೈವ ರಕ್ಷೆಯ ಬೇಡಿದ ಒಂದು ಸಂದರ್ಭವನ್ನು ನಿರೂಪಿಸಿರುವ ಈ ಶಾಸನ ಅತ್ಯಂತ ಮಹತ್ವದಾಗಿದೆ.

**ಜೈನ ಧರ್ಮದ ತತ್ವ ಮತ್ತು ವ್ರತಗಳು**

ಆತ್ಮವು ಸಹಜ ಶುದ್ಧತೆಯನ್ನು ಮರಳಿ ಪಡೆದುಕೊಂಡು ಕೇವಲ ಜ್ಞಾನವನ್ನು ಪಡೆಯುವುದೆ ಜೀವನದ ಪ್ರಮುಖ ಗುರಿ. ಇದೊಂದು ಅಲೌಕಿಕ ಸ್ಥಿತಿ. ಆತ್ಮವು ಕೇವಲ ಅನಂತ ಜ್ಞಾನ ಮಾತ್ರವಲ್ಲ. ಇದು ಅನಂತ ಶಾಂತಿ, ಅನಂತ ಶಕ್ತಿಯಿಂದ ಒಳಗೂಡಿದ ಎಲ್ಲ ಪೂರ್ಣತೆಯನ್ನು ಹೊಂದಿರುತ್ತದೆ. ಉಪನಿಷತ್ತಿನ ಬೋಧನೆ ಪ್ರಕಾರ– ಪಾಪ ಪುಣ್ಯಗಳೆರಡನ್ನು ಮಿರಿ ನಿಲ್ಲುವುದನ್ನು ಮೋಕ್ಷ ಎನ್ನುತ್ತಾರೆ. ಈ ಸ್ಥಿತಿಯನ್ನು ತಲುಪಲು ಐದು ಮುಖ್ಯವಾದ ಸಾಧನಗಳಾದ ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ ಅಪರಿಗ್ರಹ, ಇವುಗಳನ್ನು ಮಹಾ ವೃತಗಳೆನ್ನುವರು. ಇದೇ ಹಿನ್ನೆಲೆಯಲ್ಲಿ ಸಮ್ಯಗ್ ಜ್ಞಾನ, ಸಮ್ಯಗ್ ದರ್ಶನ, ಸಮ್ಯಗ್ ಚಾರಿತ್ರ ಇವುಗಳನ್ನು ತ್ರಿರತ್ನಗಳೆಂದು ಕರೆಯುತ್ತಾರೆ. ಇವುಗಳ ಪೋಷಕಗಳಾಗಿ ಬಂದಾಗ ಜೈನ ಧರ್ಮದಲ್ಲಿ ಮೋಕ್ಷ ಅಥವಾ ನಿರ್ವಾಣವು ಲಭಿಸುತ್ತದೆ.

ದೇಶದ ಇತರೆಡೆಯಂತೆ ತೇರದಾಳ ಪರಿಸರದ ಜಿನ ಧರ್ಮಿಯರಲ್ಲಿ ಸಲ್ಲೇಖನ ವ್ರತ ಹೆಚ್ಚು ಜನಪ್ರಿಯವಾಗಿದೆ. ಜೈನರಲ್ಲಿ ಇಚ್ಛಾ ಮರಣವನ್ನು ಸಮಾಧಿ ಮರಣ, "ಸಲ್ಲೇಖನ ವ್ರತ", "ಪಂಡಿತ ಮರಣ" ವೆಂದೂ ಕರೆಯುತ್ತಾರೆ. ಪ್ರಾಚೀನ ಕರ್ನಾಟಕದಲ್ಲಿ ಸಮಾಧಿ ಮರಣವು ಜೈನರ ಆದರ್ಶ ಮರಣವಾಗಿತ್ತು. ಇದನ್ನು ಸಮರ್ಥಿಸುತ್ತ ಭದ್ರಗಿರಿಯ ಪೂಜ್ಯ ಪಾದರಾದ ಶ್ರೀ ಶ್ರೀ ಶ್ರೀ ೧೦೮ ಕುಲರತ್ನ ಭೂಷಣ ಮಹಾರಾಜರು ದೃಷ್ಟಾಂತವೊಂದನ್ನು ನೀಡುತ್ತಾರೆ. ಮುತ್ತು ರತ್ನ ತುಂಬಿರುವ ಮನೆಗೆ ಬೆಂಕಿಬಿದ್ದರೆ ಅದನ್ನು ನಂದಿಸಲು ಮೊದಲು ಪ್ರಯತ್ನ ಪಡುತ್ತವೆ. ಅದು ಅಸಾಧ್ಯವಾದರೆ ಮುತ್ತು ರತ್ನಗಳನ್ನು ಉಳಿಸಿಕೊಳ್ಳಲು ಅನ್ಯ ಮಾರ್ಗದಲ್ಲಿ ಮನೆಯನ್ನು ಕೆಡವಿಯಾದರೂ ಮುತ್ತು ರತ್ನವನ್ನು ರಕ್ಷಿಸಿಕೊಳ್ಳುತ್ತೇವೆ. (ಇಲ್ಲಿ ಮನೆ ಯೆಂದರೆ ಮಾನವನ ಶರೀರ) ಭೂಮಿಯ ಮೇಲೆ ಎಲ್ಲದಕ್ಕೂ ಕೊನೆ ಅಥವಾ ಅಂತ್ಯ ಎಂಬುದು ಇದೆ. ಹೀಗಿರುವಾಗ ಉಪವಾಸ ಮಾಡಿ, ಹರಕೆ ಹೊತ್ತು, ನೀರಿನಲ್ಲಿ ಮುಳಗಿ ಸಾಯುವುದು, ಇರಿದುಕೊಂಡು ಸಾಯುವುದು, ಅಪಘಾತಕ್ಕೆಡಾಗಿ ಸಾಯುವುದು, ರೋಗದಿಂದ ನರಳಿ ಸಾಯುವುದು, ಮಾಡಿದ ಕರ್ಮಗಳ ಕುರಿತು ಯೋಚಿಸಿ ಪಶ್ಚಾತ್ತಾಪ ಮಾಡಿಕೊಂಡು ಸಾಯುವುದಕ್ಕಿಂತ, ವೈರಾಗ್ಯ ತಾಳಿ ಸಲ್ಲೇಖನ ಅಥವಾ ಸಮಾಧಿ ಮರಣ ವ್ರತವನ್ನು ಸ್ವೀಕರಿಸಿ ಪ್ರೀತಿ, ವೈರತ್ವ ತ್ಯಜಿಸಿ, ಆಹಾರ ಪಾನಾದಿಗಳನ್ನು ತ್ಯಜಿಸಿ, ದೇವರನ್ನು ಜ್ಞಾನಿಸುತ್ತಾ, ಜೈನ ಧರ್ಮದ ಸಿದ್ಧಾಂತಗಳಾದ ಪಂಚ ಪರಮೇಷ್ಠಿಗಳಾದ ೧) ಣಮೋ ಅರಿಯಂತಾಣಂ ೨) ಣಮೋ ಸಿದ್ಧಾಣಂ ૩) ಣಮೋ ಆಯಿರಿಯಾಣಂ ೪) ಣಮೋ ಉವಜ್ಝಾಯಾಣಂ ೫) ಣಮೋ ಲೋಏ ಸವ್ವ ಸಾಹೂಣಂ ಎಂದು ಪಠಿಸುತ್ತಾ ತಮಗೆ ಉತ್ತಮ ಸದ್ಗತಿ ಹಾಗೂ ಪರಮಗತಿ (ಮೋಕ್ಷ) ದೊರೆಯಲೆಂದು ಪಂಚ ಪರಮೇಷ್ಠಿಗಳನ್ನು ಆರಾಧಿಸುತ್ತಾ ದೇಹದಲ್ಲಿರುವ ಪ್ರಾಣವನ್ನು ತ್ಯಾಗಮಾಡುವುದು. ಸಲ್ಲೇಖನ ವತ್ರದಲ್ಲಿ ಬರುವ ಸಂಕಷ್ಟಗಳನ್ನು ಸ್ವ ಸಂತೋಷದಿಂದ ಸಹಿಸಿಕೊಳ್ಳಲು ಸದಾ ಸಿದ್ದರಾಗಿರಬೇಕು. ಅಂದರೆ ಈ ವ್ರತಾಚರಣೆ ಕೆನ್ನಾಲಿಗೆಯಂತೆ, "ಆಯುಧದ ಕತ್ತಿಯ ಅಲಗುವಿದ್ದಂತೆ, ವಿಷ ಜಂತುವಿನ ಹಲ್ಲಿನಂತೆ ಕಠಿಣವಾದದ್ದು"ವೆಂದು ತಿಳಿದು "ದೇಹ ನಶ್ವರ ಆತ್ಮನೇ ಈಶ್ವರ"ನೆಂದು ಅರಿತು ದೇಹದ ಮೇಲಿನ ಮಮತತ್ವ ತೊರೆದು ಇಂದ್ರಿಯ ಹಾಗೂ ಪ್ರಾಣಿ ಸಂಯಮದಿಂದ ಸಹಿಸಲು ಶಕ್ತವಾಗಿರಬೇಕು.

ಕವಿ ಚಕ್ರವರ್ತಿ ಜನ್ನನ ಪ್ರಕಾರ" ಪೆತ್ತ ಪರೀಷಹ ಜಯಮೆ ತಪಂ ತಪಕೆ ಕೋಡೆರಡೊಳವೇ– ಅಂದರೆ ಭವದ ಸಂಕಷ್ಟಗಳನ್ನು ತಾಳ್ಮೆಯಿಂದ ಜಯಿಸುವುದೇ ತಪಸ್ಸು. ಚರಿತ್ರೆ ಶಾಸನವೊಂದರ ಪ್ರಕಾರ "ತಪಸಾ ಸರ್ವಂ ಸುಖಂ ಪ್ರಾಪ್ಯತೇ"– ತಪಸ್ಸಿನಿಂದಲೇ ಸರ್ವ ಸುಖಗಳು. ತಪಸ್ಸು ಎಂದರೆ ತನನ್ನು ತಾನು ಅರಿಷಡ್ ವರ್ಗಗಳಿಂದ ಜಯಿಸುವುದೆಂದರ್ಥ.

ಜೈನ ಧರ್ಮದಲ್ಲಿ ಜೀವನವೆಂಬುದನ್ನು ಕುರಿತು ಪೂಜ್ಯಪಾದರಾದ ಶ್ರೀ ಶ್ರೀ ಶ್ರೀ ೧೦೮ ಕುಲರತ್ನ ಭೂಷಣ ಮಹಾರಾಜರು ಈ ಸಂಸಾರವು ಕ್ಷಣಿಕ ಆತ್ಮ ಶಾಶ್ವತ. ಹೇಗೆ ಹಾಲು ನೀರು ಬೇರೆ ಬೇರೆಯೋ ಹಾಗೆಯೇ ಆತ್ಮ ಮತ್ತು ದೇಹ ಭಿನ್ನ ಭಿನ್ನವಾಗಿವೆ. ಸುಟ್ಟ ಮಣ್ಣಿನ ಮಡಿಕೆಯ ತರ, ಕಾಮನ ಬಿಲ್ಲಿನಂತೆ, ಮಳೆಯ ಬರುವ ಸಂದರ್ಭದಲ್ಲಿ ಕಾಣಿಸುವ ಪ್ರಕಾಶಮಾನವಾದ ಮಿಂಚಿನಂತೆ, ಮಂಜಿನಂತೆ, ಸುಂದರವಾದದ್ದು, ಆದರೆ ಸುಟ್ಟ ಮಣ್ಣಿನ ಮಡಿಕೆ ಕೈಯಿಂದ ಜಾರಿ ಬಿದ್ದರೆ ಪುನ: ಜೋಡಿಸಲು ಅಸಾಧ್ಯ. ಜೀವನ ಸುಂದರವಾದರೂ

ಕ್ಷಣಿಕವಾದದು, ಸಾವು ಎಂಬುದು ದೈವಿ ಸಂಕಲ್ಪದಿಂದ ಕೂಡಿದೆ. ಈ "ನ್ನೆಲೆಯಲ್ಲಿ ಜೈನ ಧರ್ಮದಲ್ಲಿ ಮುನಿಗಳು, ಸಂಸಾರಿಗಳಾದ ಪುರುಷರೂ, ಸ್ತ್ರೀಯರು ಸಹ ಸ್ವ ಇಚ್ಛೆಯಿಂದ ಸನ್ಯಾಸಿ ಮುನಿ ಮಹಾರಾಜರ ಹತ್ತಿರದಿಂದ ದೀಕ್ಷೆಯನ್ನು ಪಡೆದು ವ್ರತಧಾರಿಗಳಾಗಿ ಮರಣವನ್ನು ಹೊಂದುವರು. ಇದೇ ಪದ್ಧತಿಯನ್ನು ಅನುಸರಿಸಿ ಇತ್ತೀಚಿಗೆ ತೇರದಾಳ ಸಮೀಪದ ಭದ್ರಗಿರಿಯಲ್ಲಿ "ಸುನಂದಾ ಮಾತಾಜಿ"ಯವರು ಸಮಾಧಿ ಮರಣ ಹೊಂದಿದ್ದು, ಆ ವ್ರತಕ್ಕಿರುವ ಮಹತ್ವವನ್ನು ತೋರಿಸುತ್ತದೆ.

**೪.೩ ಶಾಕ್ತ ಧರ್ಮ**

ಶಾಕ್ತ ಸಂಪ್ರದಾಯ ವೈದಿಕಯುಗಕ್ಕಿಂತಲೂ ಪ್ರಾಚೀನ ಎನ್ನುವುದು ನಿರ್ವಿವಾದ. ಮಾತೃ ಮರ್ಯಾದೆ ಮತ್ತು ಆಚರಣೆಯೇ ಈ ಸಂಪ್ರದಾಯದ ಮೂಲಾಧಾರ 'ಜಗತ್ ಶಕ್ತಿಮಯಂ ವಿಧ್ಯತ್', 'ಶಕ್ತಿ ಪ್ರೇರಯಿತಾ ಶಿವಃ" (ಕಾರಣಾಗಮ) ಎನ್ನುವುದು ಈ ಸಂಪ್ರದಾಯದ ಮುಖ್ಯ ನಿಲವು. ಇದರಲ್ಲಿ ದಕ್ಷಿಣಾಚಾರವೆಂದು, ವಾಮಾಚಾರವೆಂದು ಎರಡು ಬಗೆಗಳಿವೆ[೨೮]. ಮೊದಲನೆಯದು ಸಾತ್ವಿಕ. ವೇದಗಳನ್ನವಲಬಿಂಸಿ ನಿಂತ ಪಂಥವಾಗಿದ್ದು, ಪುರಾಣಗಳ ಪ್ರಭಾವ ಹೆಚ್ಚು. ಎರಡನೆಯದು ರಾಜಸ, ವೇದ ಬಾಹ್ಯವಾದುದೆಂದು ಪ್ರತೀತಿ. ಇದರಲ್ಲಿ ಶಿವನಿಗಿಂತಲೂ ಶಕ್ತಿಗೆ ಪ್ರಾಶಸ್ತ್ಯ ಹೆಚ್ಚು. ಇಲ್ಲಿ ದೇವಿ ಪ್ರಧಾನವಾಗಿದ್ದು ಭಕ್ತರಿಂದ ಆರಾಧನೆಗೊಳಪಡುವ ದೇವತಿಯಾಗಿದ್ದಾಳೆ. ಹಾಗೂ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಾಳೆಂದು 'ಬಹ್ವೃಚೋಪ ನಿಷತ್', 'ಕೇನೊಪನಿಷತ್', 'ವಾಜಸನೇಯಿ ಸಂಹಿತೆ', ಮತ್ತು 'ತೈತ್ತರೀಯ ಬ್ರಾಹ್ಮಣ', 'ಮಾರ್ಕಂಡೇಯ' ಮೊದಲಾದ ಪುರಾಣ ಗ್ರಂಥಗಳಲ್ಲಿ ಉಲ್ಲೇಖವಿದೆ[೨೯]. 'ಶಾಕ್ತರ ನಂಬಿಕೆ ಪ್ರಕಾರ ಎಲ್ಲಾ ಸ್ತ್ರೀಯರು ದೇವತಾ ಸ್ವರೂಪರು' (ಸ್ತ್ರೀಯಃ ನಮಸ್ತಾಃಸಕಲಾ ಜಗತ್ತ್ರ) (ಪ್ರಕೃತೇ ಪ್ರತಿ ವಿಶ್ವೇಷ್ಟು ದೇವ್ಯಶ್ಚ ಸರ್ವಯೋಷಿತಃ) ಇದು ನೂರಾರು ಮಾತೃ ದೇವತೆಯರ ಕಲ್ಪನೆಗೆ ಎಡೆ ಮಾಡಿಕೊಟ್ಟಿತ್ತು, ಮಾತೃ ಪರಂಪರೆಯಲ್ಲಿ ಪಾರ್ವತಿ ಶಿವನ ಹಿನ್ನೆಲೆಯಲ್ಲಿ ಪೂಜೆಗೊಳಪಟ್ಟರೆ, ಲಕ್ಷ್ಮಿ ವಿಷ್ಣುವಿನ ಜೊತೆ, ಸರಸ್ವತಿ, ಬ್ರಹ್ಮನೊಂದಿಗೆ ಗುರುತಿಸಲ್ಪಟ್ಟು ಆರಾಧನೆಗೊಳ್ಳುತ್ತಾರೆ[೩೦]. ತೇರದಾಳ ಪರಿಸರದಲ್ಲಿ ಸರಸ್ವತಿ, ಪಾರ್ವತಿ, ಲಕ್ಷ್ಮಿ, ಚಾಮುಂಡಿ (ದುರ್ಗಾ) ಮಹಾಕಾಳಿ ಮಹಿಷಾಸುರಮರ್ಧಿನಿ, ಸಪ್ತ ಮಾತೃಕೆಯರ ಪ್ರತ್ಯೇಕ ಮೂರ್ತಿಗಳು ದೊರೆತಿದ್ದು ಶಾಕ್ತ ಆರಾಧನೆಯ ದ್ಯೋತ್ಯಕಗಳಾಗಿವೆ.

ಮಾತೃದೇವತಾ ಪರಂಪರೆಯಲ್ಲಿ ಸರಸ್ವತಿಗೆ ಅಗ್ರಸ್ಥಾನವಿದೆ. ಮಂಡೋಕ ಉಪನಿಷತ್, ವಿಷ್ಣು ಪುರಾಣ ಮತ್ತು ಮಾರ್ಕಂಡೇಯ ಪುರಾಣಗಳು ಬ್ರಹ್ಮ ಮತ್ತು ಸರಸ್ವತಿಯ ಆರಾಧನೆಯನ್ನು ಉಲ್ಲೇಖಿಸುತ್ತವೆ. ಸರಸ್ವತಿ ಆರಾಧನೆ ಈ ಭಾಗದಲ್ಲಿ ಪ್ರಚಲಿತದಲ್ಲಿತ್ತೆಂದು ಹೇಳಲು ಅಲ್ಲಲ್ಲಿ ಸರಸ್ವತಿ ಮೂರ್ತಿಗಳು ದೊರಕಿವೆ. ಅದೇ ರೀತಿ ಲಕ್ಷ್ಮಿಯನ್ನು ವಿಷ್ಣುವಿನ ಪತ್ನಿಯೆಂದು ಗುರುತಿಸಲಾಗುತ್ತದೆ. ಮಹಾಭಾರತ, ಭಾಗವತ ಪದ್ಮಪುರಾಣ ಮತ್ತು ವಿಷ್ಣು ಪುರಾಣಗಳು ಲಕ್ಷ್ಮಿಯ ಮೂಲವನ್ನು ಕ್ಷೀರ ಸಮುದ್ರದಕ್ಕೆ ಒಯ್ಯುತ್ತವೆ. ಹಾಗೆಯೇ ಅವಳು ಅಲ್ಲಿಂದ ಬಂದವಳೆಂದು ಹೇಳುತ್ತವೆ. ಹಾಗೂ ಇವಳನ್ನು "ಕ್ಷಿರಾಬ್ದಿ ತನಯಳೆಂದು", ಅಂದರೆ ಕ್ಷೀರ ಸಮುದ್ರಾಧಿಪತಿಯ ಮಗಳೆಂದು ಮತ್ತು ಇವಳು ವಿಷ್ಣುವಿನ ಎದೆಯಲ್ಲಿ ವಾಸಿಸುವವಳೆಂದು, 'ವಕ್ಷಸ್ಥಳವಾಸಿನಿ'ಯೆಂದು ಕರೆಯಲ್ಪಡುತ್ತಾಳೆ[೩೧]. ಇಲ್ಲಿನ ದೇವಾಲಯಗಳ ಲಲಾಟಬಿಂಬದಲ್ಲಿ 'ಗಜಲಕ್ಷ್ಮಿ' ಶಿಲ್ಪಗಳು

ಮತ್ತು ಲಕ್ಷ್ಮಿ ವಿಗ್ರಹಗಳು ಸಹ ಸಾಮಾನ್ಯವಾಗಿ ಕಂಡುಬರುತ್ತವೆ. ಇದರಿಂದ ಈ ಪರಂಪರೆ ಈ ಭಾಗದಲ್ಲಿ ಹಿಂದೆ ಅಸ್ತಿತ್ವದಲ್ಲಿತ್ತೆಂದು ಹೇಳಬಹುದಾಗಿದೆ. ಅದೇ ರೀತಿ ಶಾಕ್ತ ಪರಂಪರೆಯಲ್ಲಿ ಗುರುತಿಸಲ್ಪಡುವ ಪಾರ್ವತಿಯನ್ನು ಶಿವನ ಪತ್ನಿಯೆಂದು, ಪರ್ವತರಾಜನ ಮಗಳೆಂದು ಗುರುತಿಸಲಾಗಿದೆ. ಈಕೆ ಶಾಕ್ತ ಧರ್ಮದಲ್ಲಿ ಆರಾಧನೆಗೊಳ್ಳುವ ದೈವಗಳಲ್ಲಿ ಪಾರ್ವತಿಯೂ ಒಬ್ಬಳಾಗಿದ್ದಾಳೆ. ಪಾರ್ವತಿಗಾಗಿ ಕಟ್ಟಿಸಿದ ಪ್ರತ್ಯೇಕ ದೇವಾಲಯಗಳು ಈ ಭಾಗದಲ್ಲಿ ಇರದಿದ್ದರೂ, ಅಲ್ಲಲ್ಲಿ ಪಾರ್ವತಿಯ ಪ್ರತ್ಯೇಕ ಮೂರ್ತಿಗಳೂ ದೊರೆತಿದ್ದು, ಈಪರಂಪರೆಯ ಸಾಕ್ಷ್ಯಗಳಾಗಿವೆ.

ಶಾಕ್ತ ಧರ್ಮದಲ್ಲಿ ಆರಾಧನೆಗೊಳ್ಳುವ ದೈವಗಳಲ್ಲಿ ಕಾಳಿಯೂ ಒಬ್ಬಳಾಗಿದ್ದಾಳೆ. ಭದ್ರಕಾಳಿಯನ್ನು ವೀರಭದ್ರನೊಡನೆ ಗುರುತಿಸಲಾಗುತ್ತದೆ. ದಕ್ಷಯಜ್ಞವನ್ನು ನಾಶಗೊಳಿಸಲು ಶಿವ ವೀರಭದ್ರನನ್ನು ಸೃಷ್ಟಿಸಿದಾಗ ಪಾರ್ವತಿ ಈಕೆಯನ್ನು ಸೃಷ್ಟಿಸಿ, ವೀರಭದ್ರನಿಗೆ ಸಹಾಯ ಮಾಡಲು ಆತನ ಜೊತೆಯಲ್ಲಿ ಕಳಿಹಿಸುತ್ತಾಳೆ. ಶ್ರೀತತ್ವ ನಿಧಿ ಗ್ರಂಥವು ಈ ದೇವತೆಯ ಆರಾಧನೆ ಮತ್ತು ಆಕೆಯ ಬಗೆಗಿನ ವಿವರಣೆಗಳನ್ನು ನೀಡುತ್ತದೆ[೩೨]. ಈ ಮೂರ್ತಿಗಳು ನಿಂತ ಇಲ್ಲವೇ ಆಸೀನಭಂಗಿಯಲ್ಲಿದ್ದು, ಕೈಗಳಲ್ಲಿ ತ್ರಿಶೂಲ, ಡಮರು, ಬಿಲ್ಲು, ಬಾಣ, ಕಪಾಲಗಳನ್ನು ತನ್ನ ಕೈಗಳಲ್ಲಿ ಆಯುಧವಾಗಿ ಹಿಡಿದಿರುತ್ತವೆ. ಈ ರೀತಿಯ ಹಲವು ಮೂರ್ತಿಗಳು ತೇರದಾಳ ಭಾಗದಲ್ಲಿ ದೊರೆತಿದ್ದು, ಈ ಆರಾಧನೆಗೆ ಸಾಕ್ಷಿಗಳಾಗಿವೆ.

ಶಕ್ತಿ ದೇವತೆಗಳಲ್ಲಿ ಮಹಿಷಾಸುರ ಮರ್ದಿನಿ ಒಬ್ಬಳಾಗಿದ್ದಾಳೆ. ಇವಳದ್ದು ಉಗ್ರರೂಪವಾಗಿದ್ದು, ಕ್ರಿಯೆಯಲ್ಲಿ ಕೊಲ್ಲುತ್ತಿರುವುದೇ ಪ್ರಮುಖವಾಗಿರುತ್ತದೆ. ಶಾಸ್ತ್ರ ಗ್ರಂಥಗಳಲ್ಲಿ ಈಕೆಯು ಕೋಪಗೊಂಡ ಯುವತಿಯಂತಿದ್ದು, ಒಂದು ಮುಖ ಹಾಗೂ ಅನೇಕ ಕೈಗಳನ್ನು ಹೊಂದಿರುತ್ತಾಳೆಂದು ವರ್ಣಿಸಿವೆ[೩೩]. ಈಕೆಯನ್ನು ದುರ್ಗ, ದೇವಿಯಂತಲೂ ಕರೆಯಲಾಗುತ್ತದೆ. ಮಹಿಷಮರ್ಧಿನಿಯ ಮುಖವು ಶಿವನ ಬೆಳಕಿನಿಂದಲೂ, ಯಮನ ಶಕ್ತಿಯಿಂದ ಕೂದಲು, ವಿಷ್ಣುವಿನ ಶಕ್ತಿಯಿಂದ ಕೈಗಳು ಚಂದ್ರನ ಬೆಳಕಿನಿಂದ ಸ್ತನಗಳು, ಇಂದ್ರನಿಂದ ನಡುವು ಹೀಗೆ ಒಂದೊಂದು ದೇವತೆಯ ಬೆಳಕಿನಿಂದ ರೂಪಿತವಾಗಿರುತ್ತವೆ[೩೪]. ಮಹಿಷನನ್ನು ಕೋಣದ ರೂಪವನ್ನು ಧರಿಸಿ ಬಂದಾಗ, ಮಹಿಷ ಮರ್ಧಿನಿಯು ಕೋಣದ ತಲೆಯನ್ನು ಕತ್ತರಿಸಿ ಕಾಲಿನಿಂದ ಅದನ್ನು ತುಳಿದಾಗ ಅಸುರ ಅದರ ಕತ್ತಿನಿಂದ ಹೊರಬರುತ್ತಾನೆ ಅನಂತರ ಅವನನ್ನು ಸಂಹರಿಸುತ್ತಾಳೆ.

ಮಹಿಷಾಸುರ ಮರ್ಧಿನಿ ಮೂರ್ತಿಗಳಲ್ಲಿ ಬಹುತೇಕ ಇದೇ ವಿವರಣೆಯನ್ನು ಕಾಣಬಹುದು. ಕರ್ನಾಟಕದಲ್ಲಿ ಇವರೆಗೆ ದೊರೆತ ಈ ಮೂರ್ತಿಗಳು ಅಲೀಢಭಂಗಿಯಲ್ಲಿದ್ದು[೩೫] ಮುಖಭಾವದಲ್ಲಿ ಮಹಿಷಾಸುರನನ್ನು ಲೀಲಾಜಾಲವಾಗಿ ಕೊಲ್ಲುತ್ತಿರುವಂತೆ ಅಥವಾ ಕೊಲ್ಲಲು ಹೋಗುತ್ತಿರುವಂತೆ ಇರುತ್ತವೆ. ಇದೇ ಲಕ್ಷಣ ಇರುವ ದೇವತಾ ಮೂರ್ತಿಗಳು ಈ ಭಾಗದ ಅನೇಕ ಕಡೆ ದೊರೆತಿದ್ದು, ಈ ಪರಂಪರೆಯನ್ನು ಅಧ್ಯಯನ ಮಾಡಲು ಆಕರಗಳಾಗಿವೆ.

ಶಾಕ್ತ ಸಂಪ್ರದಾಯದಲ್ಲಿ ಆರಾಧನೆ ಮಾಡುವ ದೇವತೆಗಳಲ್ಲಿ ಸಪ್ತಮಾತೃಕೆಯರು ಸಹ ಮುಖ್ಯರಾಗಿದ್ದಾರೆ. ಇವರು ಊರ ಹೆಸರನ್ನು ಪಡೆದ ದೇವತೆಗಳಾಗಿ ಎಲ್ಲ ವರ್ಗದ ಜನರಿಂದ ಪೂಜೆಗೊಳ್ಳುವವರಾಗಿರುತ್ತಾರೆ. ಅನೇಕ ವೇಳೆ ಶಿವ ದೇವಾಲಯದ ಪರಿವಾರ ದೇವತೆಗಳಾಗಿ ಕೆಲವೊಮ್ಮೆ ಸ್ವತಂತ್ರವಾಗಿಯೂ ಪೂಜೆಗೊಳ್ಳುತ್ತಿದ್ದಾರೆ. ಇವರನ್ನು

ಕನ್ಯೆಯರೆಂದು ಕರೆಯುವುದು ವಾಡಿಕೆ. ಈ ಮೂರ್ತಿಗಳ ಗಾತ್ರ ಮತ್ತು ಅಂಗಾಂಗಳ ವಿನ್ಯಾಸವು ಕಲ್ಲಿನ ಅಳತೆಯ ಆಕಾರವನ್ನು ಅವಲಂಬಿಸಿರುತ್ತದೆ. ಚಾಮುಂಡಿಯನ್ನುಳಿದು ಇತರ ವಿಗ್ರಹಗಳು ಒಂದು ಅಥವಾ ಒಂದೂವರೆ ಅಡಿ ಎತ್ತರದ ವಿಗ್ರಹಗಳಾಗಿರುತ್ತವೆ. ರಕ್ತ ಬೀಜಾಸುರ ಜನಿಸಿ ದೇವಿಯೊಡನೆ ಹೋರಾಟಕ್ಕಿಳಿಯುತ್ತಿದ್ದ ಆ ಸಂದರ್ಭದಲ್ಲಿ ದೇವಿಯು ತನ್ನ ಸಹಾಯಕ್ಕಾಗಿ ಏಳು ಜನ ದೇವತೆಯನ್ನು ಸೃಷ್ಟಿಸಿದಳು. ಆ ಏಳು ಜನರೇ ಸಪ್ತ ಮಾತೃಕೆಯರೆಂದು ಕರೆಯಲ್ಪಡುತ್ತಾರೆಂದು ಮಾತೃದೇವತೆಯ ಆರಾಧನೆಯನ್ನು ವಿವರಿಸುವ ಗ್ರಂಥವೊಂದರಿಂದ ತಿಳಿದು ಬರುತ್ತದೆ. ದುರ್ಗ ಸಪ್ತಾಸತಿ ಎನ್ನುವ ಗ್ರಂಥವು ಸಹ ಇದೇ ವಿವರವನ್ನೊದಗಿಸುತ್ತದೆ[೩೬]. ಈ ಮಾತೃ ದೇವತೆಯಳೆಂದರೆ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ಇಂದ್ರಾಣಿ ಮತ್ತು ಚಾಮುಂಡಿಯರಾಗಿದ್ದಾರೆ. ಇವರ ಜೊತೆಗೆ ವೀರಭದ್ರ ಅಥವಾ ಗಣೇಶ ಇರುತ್ತಾರೆ.

ಬೃಹತ್ಸಂಹಿತೆಯಲ್ಲಿ (೫೭.೫೬) ಅವರ ಹೆಸರುಗಳನ್ನು ಹೇಳದಿದ್ದರೂ ಅವರ ಪ್ರಸ್ತಾವ ಬರುತ್ತದೆ. ವ್ಯಾಖ್ಯಾನಕಾರನಾದ ಉತ್ಪಲ ಸಪ್ತ ಮಾತೃಕೆಯರ ಹೆಸರುಗಳನ್ನು ಹೇಳಿದ್ದಾರೆ. ಬ್ರಾಹ್ಮೀ, ವೈಷ್ಣವೀ, ರೌದ್ರಿ, (ಮಾಹೇಶ್ವರಿ) ಕೌಮಾರಿ. ಯಮೀ, ವಾರುಣಿ, ಕೌಬೇರಿ ಇವರು ಕ್ರಮವಾಗಿ ಬ್ರಹ್ಮ, ವಿಷ್ಣು, ಶಿವ, ಸ್ಕಂದ ಇಂದ್ರ, ಯಮ, ವರುಣ, ಕುಬೇರ, ಈ ದೇವತೆಗಳ ಶಕ್ತಿಯರು[೩೭]. ಬ್ರಾಹ್ನಿಯ ಬಲಭಾಗದಲ್ಲಿ ವೀರಭದ್ರನನ್ನು, ಚಾಮುಂಡಿಯ ಎಡಭಾಗದಲ್ಲಿ ಗಣೇಶನನ್ನು ಇರಿಸಿ, ನಡುವೆ ಮಾತೃಗಣಗಳನ್ನಿರಿಸಬೇಕೆಂದು ವಿಧಿಯಿದೆ. (ವೀರೇಶ್ವರಶ್ವ ಮಾತೃಣಾಮಗ್ರತೋ ಭವೇತ್, ಅಂತೇ ತೇಷಾಂ ವಿನಾಯಕಃ ಮಧ್ಯೇಚ ಮಾತರಃಕಾರ್ಯ). ಈ ಸಪ್ತ ಮಾತೃಕೆಯ ಪ್ರತ್ಯೇಕ ಆಲಯಗಳು ಅಲ್ಲಲ್ಲಿ ಕಾಣಬರುತ್ತವೆ. ಈ ಮೂರ್ತಿಗಳ ವಾಹನ ಮತ್ತು ಆಯುಧಗಳು ಈ ರೀತಿ ಇವೆ[೩೮].

| ಅ.ನಂ. | ದೇವತೆಯ ಹೆಸರು | ವಾಹನ | ಹಿಡಿದವರು | ಆಯುಧಗಳು |
|---|---|---|---|---|
| ೧ | ಬ್ರಾಹ್ಮಿ | ಹಂಸ | | ಶೂಲ & ಅಕ್ಷಮಾಲೆ |
| ೨ | ಮಹೇಶ್ವರಿ | ನಂದಿ | ಮಹೇಶ್ವರ | – " " – |
| ೩ | ಕೌಮರಿ | ನವಿಲು | ಕುಮಾರ | ಶಕ್ತಿ–ಕುಕ್ಕಟ |
| ೪ | ವೈಷ್ಣವಿ | ಗರುಡ | ವಿಷ್ಣು | ಚಕ್ರ_ಶಂಖ |
| ೫ | ವರಾ | ಆನೆ | ವರಾಹ | ದಂಡ_ಖಡ್ಗ |
| ೬ | ಇಂದ್ರಾಣಿ | ಆನೆ | ಇಂದ್ರ | ವಜ್ರ_ಶಕ್ತಿ |
| ೭ | ಚಾಮುಂಡಾ | ಶವ/ನರಿ | ಯಮ | ಕಪಾಲ_ಶೂಲ |

ತೇರದಾಳ ಪರಿಸರದಲ್ಲಿ ಎಲ್ಲಿಯೂ ಸಪ್ತ ಮಾತೃಕೆಯರ ಪ್ರತ್ಯೇಕ ದೇವಾಲಯಗಳು ಇಲ್ಲ. ಆದಾಗ್ಯೂ ಕೂಡ ಅಲ್ಲಲ್ಲಿ ದೊರೆತ ಮೂರ್ತಿಗಳ ಆಧಾರದ ಮೇಲೆ ಈ ಭಾಗದಲ್ಲಿ ಶಾಕ್ತ ಪರಂಪರೆ ಇತ್ತೆಂದು ಹೇಳಬಹುದಾಗಿದೆ.

## ೫.೪ ಮುಸ್ಲಿಂ ಧರ್ಮ

ಭಾರತದಲ್ಲಿ ಅಸ್ತಿತ್ವದಲ್ಲಿರುವ ಇತರೆ ಧರ್ಮಗಳಲ್ಲಿ ಮುಸ್ಲಿಂ ಧರ್ಮವೂ ಒಂದಾಗಿದ್ದು, ಅದು ತೇರದಾಳದ ಭಾಗದಲ್ಲಿಯೂ ತನ್ನ ಅಸ್ತಿತ್ವವನ್ನು ಪಡೆದುಕೊಂಡಿದೆ. ಈ ಭಾಗದಲ್ಲಿ ಶೇ.೧೯%ರಷ್ಟು ಮುಸ್ಲಿಂರಿದ್ದಾರೆ. ಇವರಿಗೆ ಸಂಬಂಧಿಸಿದ ಗಂಬಜ್, ಮಸೀದಿ, ದರ್ಗಾ ಮತ್ತು ಮಕಬರಗಳು ಪ್ರತಿ ಗ್ರಾಮಗಳಲ್ಲಿದ್ದು, ಆಸಂಗಿ, ಹನಗಂಡಿ, ತೇರದಾಳ, ಹೊಸುರು, ರಬಕವಿ, ಬನಹಟ್ಟಿಗಳಲ್ಲಿ ಇವರ ಪ್ರಾಚೀನ ಸ್ಮಾರಕಗಳಿವೆ. ಇವುಗಳ ಆಧಾರದ ಮೇಲೆ ಈ ಧರ್ಮವು ಈ ಭಾಗದಲ್ಲಿ ಮಧ್ಯಯುಗದಲ್ಲಿ ಅಸ್ತಿತ್ವ ಪಡೆದುಕೊಂಡು ಅದು ಇಂದಿಗೂ ಅಸ್ತಿತ್ವದಲ್ಲಿದೆ.

ಮುಸ್ಲಿಂ ಧರ್ಮವು ಅನ್ಯ ಧರ್ಮಗಳಿಗಿಂತ ಭಿನ್ನವಾದ ಸಂಸ್ಕೃತಿ ಮತ್ತು ಆಚಾರ-ವಿಚಾರಗಳನ್ನು ಒಳಗೊಂಡಿದೆ ಮತ್ತು ಹಲವಾರು ನೈತೀಕ ನಿಯಮಗಳು ರೂಢಿ ಸಂಪ್ರದಾಯಗಳನ್ನು ಒಳಗೊಂಡಿದೆ. ಇದರಲ್ಲಿ ಸುನ್ನಿ ಶೇಖ್, ಶಿಯಾ ಎನ್ನುವ ಪಂಗಂಡಗಳನ್ನು ಒಳಗೊಂಡಿದೆ. ಇದು ಪುರಾತನ ಕಾಲದಿಂದ ಬಂದಿದ್ದು ಇದನ್ನು ಮೊಟ್ಟ ಮೊದಲ ಬಾರಿಗೆ ಪ್ರವಾದಿ ಮಹಮ್ಮದ್ ಪೈಗಂಬರ್‌ರವರು ಇವುಗಳನ್ನು ಆಚರಣೆಗೆ ತಂದರು. ಅವರ ತತ್ವ ಮತ್ತು ಬೋಧನೆಗಳು ತನ್ನದೆಯಾದ ಮುಸ್ಲಿಂ ಸಮುದಾಯದಲ್ಲಿ ಮಹತ್ವವನ್ನು ಪಡೆದು ಕೊಂಡಿದೆ. ಮುಸ್ಲಿಂ ಜನಾಂಗವು ಕಡಿಮೆ ಜನಸಂಖ್ಯೆಯನ್ನು ಹೊಂದಿದ್ದು ಆದ ಕಾರಣ ಇದನ್ನು "ಅಲ್ಪಸಂಖ್ಯಾತರ ಸಮೂಹ" ಎಂದು ಕರೆಯಲಾಗಿದೆ. ಇತರೆಡೆಯಂತ ತೇರದಾಳ ಭಾಗದ ಮುಸ್ಲಿಂರು ಇಂದು ರಂಜಾನ್, ಬಕ್ರೀದ್, ಮೋಹರಂ, ಈದ್‌ಮೀಲಾದ್ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಅಲ್ಲದೇ ಅವರು ಪ್ರಮುಖವಾಗಿ ಅಲ್ಲಾನನ್ನು (ಏಕದೇವತೆ) ಆರಾಧನೆಯನ್ನು ಮಾಡುತ್ತಾರೆ. ದಿನಕ್ಕೆ ಐದು ಬಾರಿ ನಮಾಜವನ್ನು ಮಾಡಿ ದೇವರಲ್ಲಿ ಪ್ರಾರ್ಥಿಸುತ್ತಾರೆ. ಏಕೀಶ್ವರ ವಾದವನ್ನು ಪ್ರತಿಪಾದಿಸುವ ಮುಸ್ಲಿಂ ಸಮುದಾಯದವರು ಮೂರ್ತಿ ಪೂಜೆಯನ್ನು ನಂಬುವುದಿಲ್ಲ.

**ನಮಾಜದ ಪ್ರಾಮುಖ್ಯತೆ**

ನಮಾಜವು ಮುಸ್ಲಿಂ ಸಮುದಾಯದ ಪ್ರಮುಖ ಪ್ರಾರ್ಥನೆ ಆಗಿದೆ. ನಮಾಜವು ದಿನದಲ್ಲಿ ಐದು ಬಾರಿ ಕಡ್ಡಾಯವಾಗಿ ಮಾಡಬೇಕಾದ ಪ್ರಮುಖ ಸಂಪ್ರದಾಯವಾಗಿದೆ. ಮೊದಲನೆಯದಾಗಿ ಸೂರ್ಯ ಹುಟ್ಟುವ ಮೊದಲು ಮಾಡುವ ನಮಾಜನ್ನು 'ಫಜರ್' ಎಂದು ಹೆಸರು. ಆನಂತರದ ಮಧ್ಯಾಹ್ನ ಮಾಡುವ ನಮಾಜನ್ನು 'ಜೋಹರ್' ಎನ್ನುತ್ತಾರೆ. ಅನಂತರದ ಐದು ಗಂಟೆಗೆ ಮಾಡುವ ನಮಾಜ್‌ಗೆ 'ಅಸರ್' ಎಂದು, ನಂತರ ಸೂರ್ಯ ಮುಳುಗಿದ ನಂತರ ಮಾಡುವ ನಮಾಜಿಗೆ 'ಮೊಗರಿಬ್' ಎಂದು, ಕೊನೆಯದಾಗಿ ಎಂಟು ಗಂಟೆಗೆ ಇರುವ ನಮಾಜನ್ನು 'ಇಶಾಂಕಿ' ಎನ್ನಲಾಗುತ್ತದೆ. ಹೀಗೆ ಕಡ್ಡಾಯವಾಗಿ ಐದು ಬಾರಿ ನಮಾಜನ್ನು ಮುಸ್ಲಿಂರು ಮಾಡುತ್ತಾರೆ. ನಮಾಜನ್ನು ಪವಿತ್ರತೆಯಿಂದ ಮಾಡುವುದು ತುಂಬಾ ಅವಶ್ಯಕವಾಗಿರುವದರಿಂದ ಅದು ಹಲವಾರು ನಿಯಮ ಮತ್ತು ವಿಧಾನಗಳನ್ನು ಒಳಗೊಂಡಿದೆ[೩೯].

೧. ಮೊದಲನೆಯದಾಗಿ ವಜೂ ಅಥವಾ ಸ್ವಚ್ಛತೆಯನ್ನು ಕಾಪಾಡುವುದು.
೨. ಬಟ್ಟೆಗಳು ಶುಭ್ರವಾಗಿರಬೇಕು.
೩. ನಮಾಜ್ ಮಾಡುವ ಸ್ಥಳ ಶುಚಿತ್ವದಿಂದಾಗಿರಬೇಕು.
೪. ನಮಾಜ್ ಮಾಡುವ ಸಂದರ್ಭದಲ್ಲಿ ದೇಹವು ಸಂಪೂರ್ಣವಾಗಿ ಕಾಣಿಸ ಕೂಡದು.
೫. ಶುದ್ಧ ಮನಸ್ಸಿನಿಂದ ದೇವರಲ್ಲಿ ಪ್ರಾರ್ಥನೆ ಮಾಡುವುದು.
೬. ನಮಾಜ್ ಮಾಡಲು ಜಾನ್‌ನ್ನು ಬಳಸಬೇಕು. ಅಂದರೆ ಶುಭ್ರವಾದ ವಸ್ತ್ರವನ್ನು ಬಳಸುವುದು.

ಮೊದಲನೆಯದಾಗಿ ನಮಾಜವನ್ನು ಮಾಡುವುದು ಮತ್ತು ನಮಾಜ್ ಮುಗಿದಂತೆ ದೇವರಲ್ಲಿ ಪ್ರಾರ್ಥನೆ ಮಾಡುವುದು ಇದರ ನಡುವೆ ಯಾವುದೇ ಕಾರಣಕ್ಕಾಗಿ ಬೇರೆಯವರೊಂದಿಗೆ ಮಾತನಾಡುವಂತಿಲ್ಲ. ಆಹಾರ ಸೇವನೆ ಮಾಡುವಂತಿಲ್ಲ ನಮಾಜ ಮುಗಿದ ನಂತರ 'ತಸಪ್ಪಿ' ಒದುವುದು. ಅಂದರೆ ಸುಭಾನಲ್ಲಾ ೩೩ ಬಾರಿ, ಅಲಹಮ್ದುಲಲ್ಲಾ ೩೩ಬಾರಿ ಮತ್ತು ಅಲ್ಲಾಹೋಕ್ಬರ್ ೩೪ ಬಾರಿ ಓದುವುದಾಗಿದೆ.

ಕುರಾನ್ ಮುಸ್ಲಿಂರ ಒಂದು ಪ್ರಮುಖ ಪವಿತ್ರವಾದ ಗ್ರಂಥವಾಗಿದೆ. ಇದನ್ನು ರಚಿಸಿದವರು ಪ್ರವಾದಿ ಮಹಮ್ಮದ್ ಫೈಗಂಬರ್‌ರವರ ತತ್ವಗಳು ಮತ್ತು ಬೋಧನೆಗಳು ಅಡಗಿಕೊಂಡಿವೆ. ಅದರಲ್ಲಿ ೩೦ ಪಾಕಿಗಳು ಇರುತ್ತವೆ ಅಂದರೆ ಪಾಠಗಳು ಇರುತ್ತವೆ. ದಿನ ನಿತ್ಯ ಇದನ್ನು ಓದ ಬೇಕೆಂಬುವುದು ಮುಸ್ಲಿಂ ಸಮುದಾಯದಲ್ಲಿ ಕಡ್ಡಾಯ ನಿಯಮ. ಇದರಿಂದ ಮನೆಯಲ್ಲಿರುವ ತೊಂದರೆ ದೂರವಾಗುತ್ತವೆ ಮತ್ತು ನೆಮ್ಮದಿಯಿಂದ ಇದನ್ನು ಓದುವುದರಿಂದ ಮನಸ್ಸಿಗೆ ನೆಮ್ಮದಿ ನೀಡುತ್ತದೆ. ಮುಸ್ಲಿಂ ಸಮುದಾಯದಲ್ಲಿ ಸೇರಬೇಕೆಂದರೆ ಮೊದಲು 'ಕಲ್ಮ'ವನ್ನು ಓದಲೇಬೇಕೆಂಬ ಕಡ್ಡಾಯವಿದೆ. ಕಲಮಾ ಎಂದರೆ "ಲಾ ಇಲಹಾ ಇಲ್ಲಲ್ಲಾಹು" ಮಹಮ್ಮದ್‌ರವರ 'ರಸುಲುಲ್ಲಾಹಿ' ಎಂದರೆ ದೇವರು ಒಬ್ಬನೇ ಅವನೇ ಧರ್ಮಗುರು ಎಂದು ಅರ್ಥ[೪೦].

**ಮುಸ್ಲಿಂ ಸಮುದಾಯದ ಪ್ರಮುಖ ಘಟ್ಟಗಳು**

**ರೋಸಾ/ರೋಜಾ:** ಇದು ರಂಜಾನ್ ತಿಂಗಳಲ್ಲಿ ಮಾಡುವ ಉಪವಾಸವಾಗಿದೆ, ಇದನ್ನು ಕಡ್ಡಾಯವಾಗಿ ಮಾಡಬೇಕು. ಈ ಆಚರಣೆಯಲ್ಲಿ ೩೦ ದಿನಗಳು ಬರುತ್ತವೆ. ಇದರಲ್ಲಿ ೨೭ ರೋಜಾ ಅತೀ ದೊಡ್ಡದು.

**ನಮಾಜ:** ಇದೆಂದರೆ ಒಂದು ದಿನದಲ್ಲಿ ಐದು ಬಾರಿ ಮಾಡುವ ಕಡ್ಡಾಯ ಪ್ರಾರ್ಥನೆಯಾಗಿದೆ

**ಜಕಾತ್:** ಜಕಾತ್ ಎಂದರೆ ಬೇರೆಯವರಿಗೆ ಮತ್ತು ಬಡವರಿಗೆ ದಾನವನ್ನು ಮಾಡುವುದು ಪ್ರಮುಖವಾಗಿದೆ.

**ಹಜ್:** ಜೀವನದನದಲ್ಲಿ ಒಂದು ಬಾರಿಯಾದರು ಮೆಕ್ಕಾಕ್ಕೆ ಭೇಟಿ ನೀಡುವುದನ್ನು 'ಹಜ್' ಆಗಿದೆ. ಇದು ಸ್ವತಃ ಹಣದಿಂದ ಹೋಗುವುದು ಅಲ್ಲ 'ಕಾಬಾ' ಸಂದರ್ಶನವನ್ನು ಮಾಡುವುದು. ಇದು ತುಂಬಾನೇ ಪ್ರಮುಖವಾದದ್ದು.

**ಕಲ್ಮಾ:** ಇದು ಮುಸ್ಲಿಂಮರ ಪ್ರಮುಖ ಕಲ್ಮಾವಾಗಿದೆ, ಇದನ್ನು ಓದುವುದು ಕಡ್ಡಾಯ. ಇದನ್ನು ಓದದೇ ಇರುವವರು ಮುಸ್ಲಿಂರು ಆಗುವುದಿಲ್ಲ. ಇದನ್ನು ಜೀವನದಲ್ಲಿ ಒಮ್ಮೆಯಾದರು ಓದಲೇಬೇಕು ಅಂದಾಗ ಮಾತ್ರ ಅವನು 'ಜನ್ನತ್' ಅಂದರೆ ಸ್ವರ್ಗದಲ್ಲಿ ಹೋಗುತ್ತಾರೆ ಎನ್ನುವ ನಂಬಿಕೆ ಇದೆ[೪೧]. ಈ ಎಲ್ಲಾ ನಿಯಮಗಳನ್ನು ಈ ಭಾಗದ ಮುಸ್ಲಿಂರು ಕಡ್ಡಾಯವಾಗಿ ಆಚರಿಸುತ್ತಾರೆ. ಇವುಗಳ ಆಧಾರದ ಮೇಲೆ ಇದು ಈ ಭಾಗದ ಒಂದು ಪ್ರಾಚೀನ ಧರ್ಮವಾಗಿದೆ ಎನ್ನಬಹುದು.

**೫.೫. ಇತರೆ ಪ್ರಮುಖ ಧರ್ಮಗಳು**

ಪ್ರಧಾನ ಧಾರ್ಮಿಕ ಪಂಥಗಳಾದ ಶೈವ, ವೈಷ್ಣವ ಈ ಎರಡೂ ಧರ್ಮಗಳ ಸಮ್ಮಿಶ್ರಣ ಮೂರ್ತಿಯಾದ ಹರಿಹರೇಶ್ವರ ಹಾಗೂ ನಿರ್ದಿಷ್ಟ ಪಂಥವೊಂದಕ್ಕೆ ಸೇರಿಸಲಾಗದ ಬ್ರಹ್ಮ, ಸೂರ್ಯ ಮತ್ತು ನಾಗನಾಗಿಣಿ ಮೂರ್ತಿಗಳು ತೇರದಾಳ ಪರಿಸರದ ಕೆಲವು ಭಾಗದಲ್ಲಿ ದೊರೆತಿವೆ. ಇದರಿಂದ ಈ ಧರ್ಮದ ಆರಾಧಕರು ಸಹ ತೇರದಾಳ ಭಾಗದಲ್ಲಿ ಹಿಂದೆ ಇದ್ದರೆಂದು ಹೇಳಬಹುದು. ಅಲ್ಲದೇ ಪ್ರಸಕ್ತವು ಈ ಭಾಗದಲ್ಲಿ ಕಡಿಮೆ ಪ್ರಮಾಣದಲ್ಲಿ ಈ ಆರಾಧನಾ ಪಂಥಗಳು ಚಾಲ್ತಿಯಲ್ಲಿರುವುದನ್ನು ಗುರುತಿಸಬಹುದು. ಇವುಗಳೊಂದಿಗೆ ಈ ಭಾಗದಲ್ಲಿ ಇಂದು ಆಸ್ತಿತ್ವದಲ್ಲಿರುವ ಕ್ರೈಸ್ತ ಧರ್ಮವೂ ಆಸ್ತಿತ್ವದಲ್ಲಿದೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ವಿವರಿಸಲಾಗಿದೆ.

ಎಡ ಅರ್ಧಭಾಗದಲ್ಲಿ ವಿಷ್ಣು, ಬಲ ಅರ್ಧ ಭಾಗಕ್ಕೆ ಶಿವ ಇವರಿಬ್ಬರಿಂದ ಸೇರ್ಪಡೆಯಾದ ಮೂರ್ತಿಗಳನ್ನು ಹರಿಹರೇಶ್ವರ ಮೂರ್ತಿಗಳೆಂದು ಕರೆಯುತ್ತಾರೆ. ವಿಷ್ಣು ಧರ್ಮೋತ್ತರ ಪುರಾಣ ಮತ್ತು ದೇವತಾಮೂರ್ತಿ ಪ್ರಕರಣ ಗ್ರಂಥಗಳು ಈ ಮೂರ್ತಿಯ ಕುರಿತು ಉಲ್ಲೇಖಿಸುತ್ತವೆ. ಹರಿಹರರಲ್ಲಿ ಭೇದವಿಲ್ಲ ಅವರಿಬ್ಬರೂ ಒಂದೇ ಎಂಬುದನ್ನು ತೋರಿಸಲು ಈ ರೀತಿಯ ಪರಂಪರೆಯ ಹುಟ್ಟಿರ ಬೇಕೆನಿಸುತ್ತದೆ[೪೨]. ಹನಂಗಡಿ, ರಬಕವಿ, ಬನಹಟ್ಟಿಗಳಲ್ಲಿ ಕಂಡುಬರುವ ಹರಿಹರೇಶ್ವರ ಮೂರ್ತಿಗಳ ಆಧಾರದಿಂದ ಈ ಆರಾಧನೆ ಈ ಪರಿಸರದಲ್ಲಿ ಪ್ರಚಲಿತದಲ್ಲಿತ್ತೆಂದು ಹೇಳಬಹುದು.

ಅದೇ ರೀತಿ ಇತರೆ ಧಾರ್ಮಿಕ ಪಂಥಗಳಲ್ಲಿ ಗುರುತಿಸಬಹುದಾದ ಮತ್ತೊಂದು ಪ್ರಮುಖ ಆರಾಧನೆಯೆಂದರೆ, ಬ್ರಹ್ಮನ ಆರಾಧನೆಯಾಗಿದೆ. ಹಿಂದೂ ಸಂಪ್ರದಾಯದಲ್ಲಿ ಬ್ರಹ್ಮನನ್ನು ಪೂಜಿಸುವುದು ಸಹ ಒಂದು ಪದ್ಧತಿಯಾಗಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಮಂಡುಕ ಉಪನಿಷತ್ ಮತ್ತು ವಿಷ್ಣು ಪುರಾಣಗಳು ಹೇಳುವ ಹಾಗೆ ಬ್ರಹ್ಮ ಜಗತ್ತನ್ನು ಸೃಷ್ಠಿಸುವ ಸೃಷ್ಠಿಕರ್ತ. ಈತನನ್ನು ಪ್ರಜಾಪತಿಯೆಂದು ಸಹ ಗುರುತಿಸಲಾಗುತ್ತದೆ. ಮಾರ್ಕಂಡೇಯ ಪುರಾಣದ ಪ್ರಕಾರ ಈತ ಜಗತ್ತಿಗೆ ಮೂಲಾಧಾರ ಅಥವಾ ಜಗತ್ತಿನ ಸಂಘಟಕನಾಗಿದ್ದಾನೆ[೪೩]. ಕರ್ನಾಟಕದಲ್ಲಿ ದೇವಾಲಯಗಳ ಭಿತ್ತಿಯ ಮತ್ತು ಕಂಬದ ಭಾಗದಲ್ಲಿ ಹೆಚ್ಚಾಗಿ ಈ ಮೂರ್ತಿಗಳನ್ನು ಕಾಣಬಹುದಾಗಿದೆ. ಇವು ಸಾಮಾನ್ಯವಾಗಿ ಸ್ಥಾನಿಕ ಇಲ್ಲವೇ ಆಸೀನ ಭಂಗಿಯಲ್ಲಿವೆ. ಇದೇ ರೀತಿಯ ಕೆಲ ಶಿಲ್ಪಗಳು ಇಲ್ಲಿನ ದೇವಾಲಯಗಳ ಭಿತ್ತಿಯಲ್ಲಿ ಮತ್ತು ಕೆಲ ಬಿಡಿ ವಿಗ್ರಹಗಳು ದೊರೆತಿರುವುದರಿಂದ ಅವುಗಳ ಆಧಾರದ ಮೇಲೆ ಈ ಧಾರ್ಮಿಕ ಪಂಥ ಈ ಭಾಗದಲ್ಲಿತ್ತೆಂದು ಗುರುತಿಸಬಹುದಾಗಿದೆ.

ಸೂರ್ಯ ದೇವರು ಸೌರಮತದವರಿಂದ ಆಚರಣೆಗೊಳಪಡುವ ದೇವರಾಗಿದ್ದಾನೆ. ಈತನ ಆರಾಧನೆ ಋಗ್ವೇದ ಕಾಲದಲ್ಲಿ ಹೆಚ್ಚಾಗಿತ್ತು, ಕೂರ್ಮ ಪುರಾಣವು ಸೂರ್ಯನ

ಉಗ್ರಮ ಮತ್ತು ಹಿನ್ನೆಲೆಯನ್ನು ತಿಳಿಸುತ್ತದೆ. ವಿಶ್ವಕರ್ಮ ಶಿಲ್ಪ, ಭವಿಷ್ಯ ಪುರಾಣ, ಅಂಶುಮದ್ ಭೇದ, ಸುಪ್ರಭೇದಾಗಮಗಳು ಸೂರ್ಯ ಮೂರ್ತಿಯ ಲಕ್ಷಣಗಳನ್ನು ಹೇಳುತ್ತವೆ[೪೪].ಹನಂಗಡಿ, ತಮದಡ್ಡಿ, ಕಲ್ಲಳ್ಳಿ, ತೇರದಾಳಗಳಲ್ಲಿ ಸೂರ್ಯ ಮೂರ್ತಿಗಳು ದೊರೆತಿದ್ದು, ಸೌರಮತದ ಪ್ರಭಾವ ಮತ್ತು ಆರಾಧನೆ ಇಲ್ಲಿಯೂ ಇತ್ತೆಂದು ಹೇಳಬಹುದು.

ನಾಗರಾಧನೆಯು ಕರ್ನಾಟಕದಲ್ಲಿ ಹಿಂದಿನಿಂದಲೂ ರೂಢಿಯಲ್ಲಿದೆ. ಆದಿ ಇತಿಹಾಸ ಕಾಲಕ್ಕೆ ಸೇರಿದ ಬನವಾಸಿಯ ನಾಗಪ್ರತಿಮೆ ಪ್ರಸಿದ್ಧವಾದದ್ದುಮ[೪೫] ಮೇಲಿನ ಭಾಗ ಮಾನವ ದೇಹ, ಕೆಳಗಿನ ಭಾಗ ಸರ್ಪದ್ದಾಗಿರುವ ಮೂರ್ತಿಗಳು ಇವಾಗಿರುತ್ತವೆ. ನಾಗ-ನಾಗಿನಿ ಶಿಲ್ಪಗಳು ತೇರದಾಳ ಪರಿಸರದ ಎಲ್ಲಾ ಗ್ರಾಮಗಳಲ್ಲಿಯೂ ದೊರೆಯುತ್ತವೆ. ನಾಗರಾಧನೆಯ ಪ್ರತೀಕವಾಗಿಯೇ ಇಲ್ಲಿ ಪ್ರತಿವರ್ಷ ನಾಗರ ಪಂಚಮಿಯನ್ನು ಆಚರಿಸಲಾಗುತ್ತದೆ. ಇವುಗಳ ಆಧಾರದ ಮೇಲೆ ನಾಗಾರಾಧನೆ ಪ್ರತಿವರ್ಷ ನಾಗರಪಂಚಮಿಯಲ್ಲಿ ಜರಗುತ್ತದೆ.

ಭಾರತದಲ್ಲಿ ಅಸ್ತಿತ್ವದಲ್ಲಿರುವ ಇತರೆ ಧರ್ಮಗಳಲ್ಲಿ ಕ್ರೈಸ್ತ ಧರ್ಮವೂ ಒಂದಾಗಿದ್ದು, ಅದು ತೇರದಾಳದ ಭಾಗದಲ್ಲಿಯೂ ತನ್ನ ಅಸ್ತಿತ್ವವನ್ನು ಪಡೆದುಕೊಂಡಿದೆ. ಈ ಧರ್ಮದಲ್ಲಿ ಪ್ರಾಟೆಸ್ಟಂಟ್, ಕ್ಯಾಥಲಿಕ್ ಪಂಗಂಡಗಳಿವೆ. ಈ ಭಾಗದಲ್ಲಿ ಮೂಲದಲ್ಲಿ ಈ ಧರ್ಮಿಯರು ಶೇ.೭%ರಷ್ಟಿದ್ದಾರೆ. ಅಲ್ಲದೇ ಪ.ಜಾ/ಪ.ಪಂ.ಮತ್ತು ಹಿಂದುಳಿದವರ್ಗದವರು ಈ ಧರ್ಮದ ಕಡೆ ಆಕರ್ಷಿತರಾಗಿ ಮತಾಂತರವಾಗಿದ್ದು, ಇವರ ಪ್ರಮಾಣ ಶೇ.೧೨%ರಷ್ಟಿದೆ. ಹಿಂದೂ ಮಾದಿಗ ಸಮುದಾಯದವರು ಪ್ರಸಕ್ತ ಈ ಧರ್ಮದ ಅನುಯಾಯಿಗಳಾಗಿದ್ದು, ಮೂಲ ಕ್ರೈಸ್ತರ ಆಚಾರ ವಿಚಾರಗಳನ್ನು ರೂಢಿಸಿಕೊಳ್ಳುತ್ತಿದ್ದಾರೆ. ಇವರಲ್ಲಿ ಯೇಸುವನ್ನು(ಜೀಸಸ್) ಮತ್ತು ಅವನ ತಾಯಿ ಮೇರಿಯನ್ನು ವಿಶೇಷವಾಗಿ ತಮ್ಮ ತಮ್ಮ ಚರ್ಚುಗಳಲ್ಲಿ ವಿಶೇಷವಾಗಿ ಆರಾಧಿಸುತ್ತಾರೆ.

**ಕೊನೆ ಟಿಪ್ಪಣಿಗಳು**

೧. ದೇವರಕೊಂಡಾ ರೆಡ್ಡಿ., ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ೯., ಬಾಗಲಕೋಟೆ ಜಿಲ್ಲೆ, ಪು. ಸಂ. ೮೪
೨. ಸರ್ ಜೋನ ಮಾರ್ಶಾಲ್., ೧೯೯೬, ಮೊಹೆಂಜೊದಾರೊ ಅಂಡ್ ಇಂಡಸ್ ಸಿವಿಲೈಜೇಶನ್. ಪು. ಸಂ. ೭
೩. ತಿಪ್ಪೇರುದ್ರ ಸ್ವಾಮಿ., ೨೦೦೦, ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪು. ಸಂ. ೧೯೫
೪. ಅ ನ ಕೃ., ಭಾರತೀಯ ಸಂಸ್ಕೃತ ದರ್ಶನ. ಪು. ಸಂ. ೨೦೮
೫. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ., ಪು. ಸಂ. ೮೯
೬. ರಾಮಚಂದ್ರರಾವ್.ಎಸ್.ಕೆ., ೧೯೯೯, ಮೂರ್ತಿಶಿಲ್ಪ ನೆಲೆ–ಹಿನ್ನೆಲೆ. ಪು. ಸಂ. ೯೭
೭. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ., ಪು. ಸಂ. ೮೪
೮. ಇದಕ್ಕೆ ಸಂಬಂಧಪಟ್ಟ ನಾನಾಘಾಟ ಶಾಸನ ಉಲ್ಲೇಖ ಚಿದಾನಂದ ಮೂರ್ತಿ ಎಂ. ಕನ್ನಡ ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿದೆ. ಪು. ಸಂ. ೧೧೭
೯. ನೋಡಿ–ರಮೇಶ ಕುಂಬಾರ., ಪೂರ್ವೋಕ್ತ
೧೦. ಎನ್ ಎಸ್ ರಾಘವಾಚಾರ., ಮತ ಮತ್ತು ತತ್ವ, ಹಾಗೂ ಕರ್ನಾಟಕ ಪರಂಪರೆ ಸಂಪುಟ–೦೧ ಪು. ಸಂ. ೧೫೮
೧೧. ಎಸ್ ಕೆ ಡಿ., ಅರ್ಲಿ ಹಿಸ್ಟ್ರಿ ಆಫ್ ದಿ ವೈಷ್ಣವಾ ಪೇದ ಅಂಡ್ ಮೂಮೆಂಟೂ ಇನ್ ಬೆಂಗಾಲ ಪು. ಸಂ. ೩–೪
೧೨. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ., ಪು. ಸಂ. ೯೭
೧೩. ಪಂಪ ಭಾರತ., ಪು. ಸಂ. ೧೪–೪೮
೧೪. ಇನ್ಸ ಬೊ.ಕ., ಪು.ಸಂ. ೧, ೨ ಮತ್ತು ೧೩೩, ೧೮೭
೧೫. ಸೌ.ಇ.ಇ.ಸಂಪುಟ ೨೦ ಅಗರಖೇಡ (ತಾ) ಇಂಡಿ ಕ್ರಿ.ಶ. ೧೨೪೮ರ ಕಾಲದ ಶಾಸನ, ಪು. ಸಂ. ೨೧೫
೧೬. ಎ.ಪಿ.ಇಂ ಸಂಪುಟ ೧೩ ಸೊಗಲ ಕ್ರಿ.ಶ. ೯೮೦ರ ಕಾಲದ ಶಾಸನ ಪು. ಸಂ. ೩
೧೭. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ.,
೧೮. ಕೆ ಸದಾಶಿವ., ಸಮಗ್ರ ಭಾರತ ಇತಿಹಾಸ, ಪು. ಸಂ. ೧೨೭
೧೯. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ.,
೨೦. ಇ.ಎ. ಸಂಪುಟ ೧೪ ಕ್ರಿ.ಶ. ೧೧೨೩–೨೪ರ ಕಾಲದ ಶಾಸನ ಪು. ಸಂ. ೧೫
೨೧. ಕುಂಬಾರ ರಮೇಶ., ಪೂರ್ವೋಕ್ತ.,
೨೨. ದೇವರಕೊಂಡಾ ರೆಡ್ಡಿ., ಪೂರ್ವೋಕ್ತ.,
೨೩. ಅದೇ., ಪು.ಸಂ. ೮೭
೨೪. ಅದೇ.,
೨೫. ಅದೇ.,
೨೬. ಅದೇ.,
೨೭. ಅದೇ, ಪು.ಸಂ. ೯೦
೨೮. ಜ್ಞಾನ ಗಂಗೋತ್ರಿ ಸಂಪುಟ ೭ ಪು. ಸಂ. ೨೯೭
೨೯. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು. ಸಂ. ೧೨೨–೧೨೭

೩೦. ಅದೇ., ಪು. ಸಂ. ೯೧

೩೧. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ., ಪು. ಸಂ. ೧೩೨

೩೨. ಅದೇ., ಪು. ಸಂ. ೮೯.

೩೩. ಅದೇ.,

೩೪. ಅದೇ.,

೩೫. ಅದೇ.,

೩೬. ಅದೇ.,

೩೭. ಅದೇ.,

೩೮. ಅದೇ.,

೩೯. ನಾಯಕ ಹಾ.ಮಾ., ೧೯೭೮, ಕನ್ನಡ ವಿಷಯ ವಿಶ್ವಕೋಶ, ಪು. ಸಂ. ೧೫೮

೪೦. ಕುರಾನ್ ಉಪದೇಶಗಳು, ಶಾಂತಿವನ ಟ್ರಸ್ಟ್ ಪ್ರಕಟಿಸಿದ ಮಾಹಿತಿ ಪತ್ರ ಭಾಗ–೪

೪೧. ಅದೇ.,

೪೨. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು. ಸಂ. ೧೩೫

೪೩. ಅದೇ.,

೪೪. ಅದೇ.,

೪೫. ಅದೇ ಮತ್ತು ತಿಪ್ಪೇರುದ್ರ ಸ್ವಾಮಿ., ಪೂರ್ವೋಕ್ತ, ಪು. ಸಂ. ೨೧೨

# ಅಧ್ಯಾಯ-೬
# ವಾಸ್ತು ಶಿಲ್ಪ ಮತ್ತು ಮೂರ್ತಿ ಶಿಲ್ಪಗಳು

ಅಧ್ಯಾಯ-೬ ವಾಸ್ತು ಶಿಲ್ಪ ಮತ್ತು ಮೂರ್ತಿ ಶಿಲ್ಪಗಳು

೬.೧ ಧಾರ್ಮಿಕ ಸ್ಮಾರಕಗಳು

೬.೨ ಲೌಕಿಕ ಸ್ಮಾರಕಗಳು

೬.೩ ರಕ್ಷಣಾ ಸ್ಮಾರಕಗಳು

೬.೪ ಸ್ಮಾರಕ ಶಿಲ್ಪಗಳು

**ಅಧ್ಯಾಯ-೬ ವಾಸ್ತು ಶಿಲ್ಪ ಮತ್ತು ಮೂರ್ತಿ ಶಿಲ್ಪಗಳು**

**'ವಾಸ್ತು'** ರಚನೆ ಒಂದು ಒಳಗೊಂಡಿರುವ ವಿವಿಧ ವಾಸ್ತು ಭಾಗಗಳು ಹಾಗೂ ಅವುಗಳ ಮೇಲಿನ ಅಲಂಕರಣೆ ಮತ್ತು ಶಿಲ್ಪಗಳನ್ನು ಸ್ಥೂಲವಾಗಿ ವಾಸ್ತುಕಲೆ ಎಂದು ಕರೆಯಬಹುದು. ಭಾರತೀಯ ವಾಸ್ತುಕಲೆಯು ಇತರ ಕಲೆಗಳಂತೆಯೇ ಆಯಾಕಾಲದ ಮತ್ತು ಆಯಾ ಜನಾಂಗದ ಆಂತರಿಕ ಆಕಾಂಕ್ಷೆ ಅನುಭವಗಳಿಗೆ ಕನ್ನಡಿಯನ್ನು ಹಿಡಿಯಬಲ್ಲದು[೧].ವಾಸ್ತುಕಲೆಯು ನಾಗರೀಕತೆಯನ್ನು ರೂಪಿಸುವ ಮಾತೃಕೆ[೨]. ನಾಗರಿಕತೆಯ ಶಿಶುವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಇದು ಬೆಳೆಸುತ್ತದೆ. ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ವಾಸ್ತುಕಲೆಯ ಬೆಳವಣಿಗೆಯಲ್ಲಿ ನಾವು ಕಂಡುಕೊಳ್ಳಬಹುದು. ವಾಸ್ತುವೆಂದರೆ ವಿಶಾಲಾರ್ಥದಲ್ಲಿ ಮರ, ಕಲ್ಲು ಅಥವಾ ಮಣ್ಣು ಇತ್ಯಾದಿಗಳೆಲ್ಲವೂ ಆಗಬಹುದು. ಮಯಮತ ಗ್ರಂಥವು ವಾಸ್ತು ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ[೩]. ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎಂದು ಗುರುತಿಸಲ್ಪಡುತ್ತದೆ.

**ಅವಾಸ ವಾಸ ವೇಶ್ವಾದೌಪುರೇ ಗ್ರಾಮೇವಣಿಕ್ಷಥೇ**
**ಪ್ರಸಾದಾರಾಮ ದುರ್ಗೇಷು ದೇವಾಲಯ ಮಠೇಷುಚ.**

ಗರುಡ ಪರಾಣದ ಈ ಶ್ಲೋಕವು ಗ್ರಾಮಗಳು ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು, ಸಹ ವಾಸ್ತುಗಳೆಂದು ಹೇಳುತ್ತದೆ[೪]. ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ, ಕಲ್ಲು, ಮರ ಹಾಗೂ ಕಬ್ಬಿಣಗಳನ್ನು ಸಹ ವಿಶ್ವಕರ್ಮನ ವಾಸ್ತುಶಾಸ್ತ್ರದಲ್ಲಿ ವಾಸ್ತುಗಳೆಂದೇ ಕರೆದಿದೆ[೫]. ಪ್ರಸಾದ, ಹರ್ಮ್ಯ, ಸೌಧ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದರಿಂದ ಅವುಗಳನ್ನು ವಾಸ್ತುಗಳೆಂದೆನಿಸುತ್ತವೆ. ಆದ್ದರಿಂದ **'ವಾಸ್ತು'** ಎಂದಲ್ಲಿ ವಸತಿ ಯೋಗ್ಯ ಭೂಮಿ ಮತ್ತು ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನೂ ಒಳಗೊಳ್ಳುತ್ತದೆ. ದೇವಾಲಯ, ಅರಮನೆ ಅಥವಾ ರಾಜಗೃಹ, ಅರಮನೆ, ದೇವತಾ ಮೂರ್ತಿಗಳ ರಚನೆ, ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ ಮುಂತಾದವುಗಳನ್ನು ಶುಕ್ರನೀತಿ ಗ್ರಂಥವು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ[೬].

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸ ಪಿ.ಕೆ.ಆಚಾರ್ಯರವರು ವಾಸ್ತುಶಾಸ್ತ್ರ ಮತು ಶಿಲ್ಪಶಾಸ್ತ್ರ ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ. ಭಾರತೀಯ ವಾಸ್ತು, ಗುರುತಿಸುವುದುಂಟು. ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದಲ್ಲಿ ಮೂರ್ತಿ ಅಥವಾ ಪ್ರತಿಮಾ ರಚನೆ, ಅವುಗಳ ಲಕ್ಷಣಗಳು, ತಾಳಮಾನ ಇತ್ಯಾದಿಗಳನ್ನು ಹೆಸರಿಸಿರುವುದುಂಟು. ಪ್ರೊ.ಫಣೀಂದ್ರನಾಥ ಬೋಸ್‌ರವರು 'ಭಾರತೀಯ ಶಿಲ್ಪಶಾಸ್ತ್ರದ ಮೂಲತತ್ವಗಳನ್ನು ಗುರುತಿಸುವಾಗ ಶಿಲ್ಪಶಾಸ್ತ್ರವೆಂಬ ಪದವನ್ನು ವಾಸ್ತು ಹಾಗೂ ಪ್ರತಿಮಾ ಶಾಸ್ತ್ರ ಎರಡನ್ನೂ ಒಳಗೊಂಡಂತೆ ವಿವರಿಸಿದ್ದಾರೆ[೭].

**'ಶಿಲ್ಪ'** ಎನ್ನುವ ಪದವು ಮೂರ್ತಿ ಶಿಲ್ಪವೆಂಬ ಅರ್ಥದಲ್ಲಿ ರೂಢಿಗತವಾಗಿದ್ದರೂ, ಅದಕ್ಕೆ ತನ್ನದೇ ಆದ ಖಚಿತಾರ್ಥವಿದೆ. **"ಶಿಲ್ಪಂ ಕರ್ಮ ಕಲಾಧಿಕಂ"**[೮] ಎಂಬದು ಅಮರಸಿಂಹನ ಅಮರಕೋಶದ ವಿವರಣೆ. ಕರ್ತೃವಿನ ಅಧಿಕ ಕೌಶಲ್ಯಗಳನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು. ಇದು ತಾಂತ್ರಿಕ ಪರಿಣತಿಯನ್ನು ಅಪೇಕ್ಷಿಸುತ್ತದೆ.

"ಶಿಲ್ಪ ಶಬ್ದಸ್ತಯ ಪುನಃ ಶೀಲ ಸಮಾಧೌ ಇತಿಧಾತೋರ್ಮನಸಃ ಸಮಾಧಾನಕಾರಕಂ ವಸ್ತು ಜಾಗ ಮಿತಿ ಉತ್ಪದ್ಯತೇ". ಶಿಲ್ಪ ಶಬ್ದವು ಮನಸ್ಸಿಗೆ ಸಮಾಧಾನವನ್ನುಂಟು ಮಾಡುವ ಕ್ರಿಯೆಯಾಗಿದ್ದು, ಕಲೆಯ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಈಗ ವಾಸ್ತುಶಾಸ್ತ್ರ ಮತ್ತು ವಾಸ್ತುಶಿಲ್ಪ ಪದಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು. ವಾಸ್ತುವಿಗೆ ಸಂಬಂಧಿಸಿದ ಮೂಲ ಸಿದ್ಧಾಂತಗಳನ್ನು ಗುರುತಿಸುವುದೇ ವಾಸ್ತುಶಾಸ್ತ್ರ. ವಾಸ್ತುಶಿಲ್ಪವೆಂದಲ್ಲಿ ತಾಂತ್ರಿಕ ಪರಿಣಿತಿಯನ್ನು ಹೊಂದಿದ ಭಾವ ಸಂಬಂಧವೂ ಬೆಸೆಯಲ್ಪಟ್ಟ ಸಾಂಸ್ಕೃತಿಕ ವಾಸ್ತು ಎಂದು ಹೆಸರಿಸಬಹುದು. ದೇವಾಲಯದಲ್ಲಿನ ಪ್ರತಿಮಾ ರಚನೆ ಹಾಗೂ ಲಕ್ಷಣಗಳು, ಚಿತ್ರ ರಚನೆ ಇತ್ಯಾದಿಗಳಿಗೆ ಸಂಬಂಧಿಸಿದ್ದನ್ನು ಶಿಲ್ಪಶಾಸ್ತ್ರವೆನ್ನಬಹುದು.

ವಾಸ್ತುವಿನ ಜೊತೆ ಜೊತೆಗೆ ಶಿಲ್ಪವು ಶಿಲ್ಪಿಯ ಅಭಿರುಚಿಗೆ ಅನುಗುಣವಾಗಿ ವಾಸ್ತುವಿನ ವಿವಿಧ ಭಾಗಗಳಲ್ಲಿ ವ್ಯಕ್ತವಾಗಿರುವುದನ್ನು ನಾವು ಕಾಣುತ್ತೇವೆ. ವಾಸ್ತು ಮತ್ತು ಶಿಲ್ಪಗಳೆರಡೂ ಕಲಾ ಸೌಂದರ್ಯದ ಪ್ರತೀಕವಾಗಿವೆ. ಇವು ಆರಂಭದಿಂದಲೂ ಜೊತೆಯಾಗಿಯೇ ಬೆಳೆದು ಬಂದಿರುವುದು ಗಮನೀಯ ಅಂಶ. ತೇರದಾಳ ಪರಿಸರದ ದೇವಾಲಯಗಳ ಭಿತ್ತಿ, ಪ್ರಸ್ತರ ಹಾಗೂ ಕಂಭಗಳ ವಿಭಿನ್ನ ಭಾಗಗಳಲ್ಲಿ ಬಗೆ ಬಗೆಯ ಶಿಲ್ಪಗಳನ್ನು ಕಾಣಬಹುದು. ಇನ್ನು ಕೆಲವು ದೇವಾಲಯಗಳಲ್ಲಿ ಶಿಲ್ಪಗಳಿರದೆ, ಕೇವಲ ವಾಸ್ತು ಭಾಗವನ್ನು ಮಾತ್ರ ಒಳಗೊಂಡಿವೆ.

ಒಟ್ಟಿನಲ್ಲಿ ವಾಸ್ತವೊಂದನ್ನು ನಿವೇದಿಸುವುದು ಪ್ರಾಚೀನ ಕಾಲದಿಂದಲೂ ಕಲೆಯೋಪಾದಿಯಲ್ಲಿ ಬೆಳೆದುಬಂದಿದೆ. ಈ ಹಿನ್ನೆಲೆಯಲ್ಲಿ ವಾಸ್ತುಕಲೆ ಎನ್ನುವ ಪದ ಪ್ರಯೋಗವನ್ನು ಇಲ್ಲಿ ಮಾಡಲಾಗಿದೆ. ಭಾರತೀಯ ವಾಸ್ತು ಕಲೆಯಲ್ಲಿ ನಾವು ಆಧ್ಯಾತ್ಮಿಕ ಮನೋಧರ್ಮವನ್ನು ಕಾಣುತೇವೆ. ಇದೇ ಧಾರ್ಮಿಕ ಭಾವನೆಯನ್ನು ಮೈಗೂಡಿಸಿಕೊಂಡು ತೇರದಾಳದಲ್ಲಿ ಆಳ್ವಿಕೆ ಮಾಡಿದ ರಾಜರು, ಸಾಮಂತರು, ಅನೇಕ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಜೊತೆಗೆ ಅಲ್ಲಲ್ಲಿ ಕೋಟೆಗಳನ್ನು, ಲೌಕಿಕ ಕಟ್ಟಡಗಳನ್ನು ನಿರ್ಮಿಸಿದ್ದಾರೆ[೧೦].

ತೇರದಾಳ ಪರಿಸರದಲ್ಲಿ ಮಾನವ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಒಟ್ಟು ವಾಸ್ತುಕಲೆಯ ಸ್ಮಾರಕಗಳನ್ನು ಈ ರೀತಿ ವಿಭಾಗಿಸಬಹುದು.

**೧. ಧಾರ್ಮಿಕ ಸ್ಮಾರಕಗಳು**

**೨. ಲೌಕಿಕ ಸ್ಮಾರಕಗಳು**

**೩. ರಕ್ಷಣಾ ಸ್ಮಾರಕಗಳು**

**೪. ಸ್ಮಾರಕ ಶಿಲ್ಪಗಳು**

ಇಲ್ಲಿ ಆಳ್ವಿಕೆ ಮಾಡಿದ ರಾಜರು ಇತರೆ ಶೈಲಿಯ ಲಕ್ಷಣಗಳನ್ನು ಅಳವಡಿಸಿಕೊಂಡು ಅದರ ಜೊತೆ ಜೊತೆಗೆ ಪ್ರಾದೇಶಿಕ ಶೈಲಿಗಳ ಹೊಸ ಅಂಶಗಳನ್ನು ಅಳವಡಿಸಿಕೊಂಡು ನಿರ್ಮಿಸಿದ ಸುಮಾರು ಇಪ್ಪತ್ತಕ್ಕಿಂತಲೂ ಹೆಚ್ಚಿನ ಚಾರಿತ್ರಿಕ ದೇವಾಲಯಗಳು ಪ್ರಸ್ತುತ ತೇರದಾಳ ಪರಿಸರದಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಕೇಂದ್ರ, ರಾಜ್ಯ ಪುರಾತತ್ವ ಇಲಾಖೆಯ ಅಧೀನದಲ್ಲಿದ್ದರೆ, ಉಳಿದ ದೇವಾಲಯಗಳಲ್ಲಿ ಕೆಲವು ಮುಜರಾಯಿ ಇಲಾಖೆಯ ಅಧೀನದಲ್ಲಿವೆ. ಇನ್ನು ಕೆಲವು ಗ್ರಾಮಸ್ಥರ ಸುಪರ್ದಿಯಲ್ಲಿವೆ. ಇಲ್ಲಿ ಶೈವ ದೇವಾಲಯಗಳು ಪ್ರಧಾನವಾಗಿ ಕಂಡು ಬಂದರೂ ಸಹ ಜೈನ ಬಸದಿ, ವೈಷ್ಣವ, ಶಾಕ್ತ ಹಾಗು ಮತ್ತಿತರೆ ದೇವಾಲಯಗಳೂ ಸಹ ಈ ಪ್ರದೇಶದಲ್ಲಿರುವುದು ವಿಶೇಷವಾಗಿದೆ. ದೇವಾಲಯಗಳ ವಾಸ್ತುಕಲೆಯ ಲಕ್ಷಣಗಳು ಮತ್ತು ಶಾಸನಗಳ ಆಧಾರದ ಮೇಲೆ ಇಲ್ಲಿನ ದೇವಾಲಯಗಳನ್ನು

ಗುರುತಿಸಬಹುದು. ಅನೇಕ ವಿದ್ವಾಂಸರು ಈ ಪ್ರದೇಶದ ಕೆಲವು ದೇವಾಲಯಗಳ ಲಕ್ಷಣಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ[೧೧]. ಇಲ್ಲಿ ಪ್ರಧಾನವಾಗಿ ಬದಾಮಿ ಚಾಳುಕ್ಯ, ಕಲ್ಯಾಣಿ ಚಾಳುಕ್ಯ, ರಾಷ್ಟ್ರಕೂಟ ಮತ್ತು ವಿಜಯನಗರ ಕಾಲದ ದೇವಾಲಯಗಳು ಕಂಡುಬರುತ್ತವೆ. ತೇರದಾಳ ಪರಿಸರದಲ್ಲಿ ಹೆಚ್ಚಿನ ಉತ್ಖನನ ನಡೆದಿಲ್ಲ, ಆದುದರಿಂದ ಪ್ರಾಚೀನ ಮತ್ತು ಮಧ್ಯಯುಗೀನ ಕಾಲದ ಪೌರ(ಲೌಕಿಕ) ಕಟ್ಟಡಗಳು ಇನ್ನೂ ಹೆಚ್ಚಾಗಿ ಬೆಳಕಿಗೆ ಬಂದಿರುವುದಿಲ್ಲ. ಆದರೆ ದೇಶಗತಿ ಮನೆತನದ ಅರಮನೆಗಳು ಅಲ್ಲಲ್ಲಿ ಉಳಿದಿವೆ. ಅಂತೆಯೇ ರಕ್ಷಣಾ (ಸೈನಿಕ) ವಾಸ್ತುಶಿಲ್ಪಕ್ಕೆ ಕೆಲ ಉದಾಹರಣೆಗಳು ಈ ತೇರದಾಳ ಪರಿಸರದಲ್ಲಿ ದೊರೆಯುತ್ತವೆ. ಪ್ರಾಚೀನ ಮತ್ತು ಮಧ್ಯಯುಗೀನ ಕಾಲದಲ್ಲಿ ಕಟ್ಟಿಸಲ್ಪಟ್ಟ ಕೋಟೆ-ಕೊತ್ತಲ, ಬಕ್ಕೈರಿಗಳು, ಈ ಪರಿಸರದ ತೇರದಾಳ, ಹನಗಂಡಿ, ಜಮಖಂಡಿ ಮೊದಲಾದ ಕಡೆಗಳಲ್ಲಿ ಇವೆ. ಇಲ್ಲಿನ ಧಾರ್ಮಿಕ ವಾಸ್ತುಕಲೆಯ ಪ್ರತೀಕಗಳಾದ ಹಿಂದೂ ದೇವಾಲಯಗಳನ್ನು ಹಾಗು ಜೈನ ಬಸದಿಗಳನ್ನು ಮತ್ತು ಮುಸ್ಲೀಂ ಕಟ್ಟಡಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇಲ್ಲಿನ ಸ್ಮಾರಕ ಅವಶೇಷಗಳು ಯಾವ ಕಾಲಘಟ್ಟದಲ್ಲಿ ಯಾವ ರೀತಿಯ ಶೈಲಿಗಳನ್ನು ಅಳವಡಿಸಿಕೊಂಡು ಬೆಳವಣಿಗೆಯಾದವು ಎಂಬುದನ್ನು ಹಾಗೂ ಇವುಗಳ ವಾಸ್ತು ವೈಶಿಷ್ಠತೆಯನ್ನು ಈ ಮುಂದೆ ವಿವರಿಸಲಾಗಿದೆ.

### ೬.೧. ಧಾರ್ಮಿಕ ಸ್ಮಾರಕಗಳು

ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಲ್ಲಬೇಕೆಂದೂ, ಒಂದು ಸುರಕ್ಷಿತ ಗೂಡಿನಲ್ಲಿ ವಾಸಿಸಬೇಕೆಂದೂ ಎಂದಿನಿಂದ ಬಯಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಇದು ವಾಸ್ತುಶಿಲ್ಪದ ಪ್ರಥಮ ಹೆಜ್ಜೆಯಾಗಿತ್ತು. ಸುತ್ತಲಿರುವ ಪ್ರಕೃತಿಯ ಬಗ್ಗೆ ಮಾನವನಿಗೆ ಭಯ, ಭಕ್ತಿ, ಗೌರವಗಳು ಮೂಡಿದವು. ಈ ದೃಷ್ಟಿಯಿಂದ ಪ್ರಕೃತಿಯ ಎಲ್ಲಾ ವಸ್ತುಗಳು ಪೂಜಾರ್ಹವಾದವು. ಈ ಕಾರಣದಿಂದಲೇ ಗಿಡ, ಮರ, ನದಿ, ಇತ್ಯಾದಿಗಳು ಅವನಿಗೆ ಪೂಜ್ಯ ಸ್ಥಾನಗಳಾದವು. ಇನ್ನೂ ಮುಂದುವರೆದು ಈ ಎಲ್ಲಾ ಸೃಷ್ಟಿಯ ಹಿನ್ನೆಲೆಯಾಗಿ ನಿಂತು ತನ್ನನ್ನು ನಡೆಸುತ್ತಿರುವ ಯಾವುದೋ ಒಂದು ಅನಂತ ಶಕ್ತಿ ಇದೆ ಎಂಬ ಅರಿವು ಉಂಟಾದಾಗ, ಆ ಶಕ್ತಿಗೆ ಒಂದು ರೂಪ ಕೊಡಲು ಯತ್ನಿಸಿದ. ಹೀಗೆ ನೀಡಿದ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಪ್ರತ್ಯೇಕ ಆಲಯವನ್ನು ಕಟ್ಟಲು ಆರಂಭಿಸಿದ. ಇದು ದೇವಾಲಯ ರಚನೆಗೆ ನಾಂದಿಯಾಯಿತು.

ತನಗಾಗಿ ಕಟ್ಟಿಕೊಂಡ ಮನೆ 'ಗೃಹವಾಸ್ತು ಶಿಲ್ಪ' ಎನಿಸಿದರೆ. ತನ್ನ ದೇವರಿಗಾಗಿ ಕಟ್ಟಿದ್ದು 'ಧಾರ್ಮಿಕ ವಾಸ್ತು ಶಿಲ್ಪ' ಅಥವಾ 'ದೇವಾಲಯ ವಾಸ್ತು ಶಿಲ್ಪ'ಎನಿಸಿತು. ಅಲ್ಲದೆ ಗೃಹ ವಾಸ್ತುವಿನ ರಚನೆಯು ದೇವಾಲಯ ವಾಸ್ತು ಶಿಲ್ಪ ರಚನೆಯ ಮೇಲೆ ಪ್ರಭಾವ ಬೀರುತ್ತಾ ಹೋಯಿತು. ನೈಸರ್ಗಿಕ ಗುಹೆಗಳನ್ನೇ ಈ ಉದ್ದೇಶಕ್ಕಾಗಿ ಬಳಸಿಕೊಂಡರೂ, ನಂತರ ಅದಕ್ಕಾಗಿಯೇ ಮುಂಭಾಗದಲ್ಲಿ ನೆರೆದ ಜನರಿಗೆ ಕಾಣುವಂತೆ ವೇದಿಕೆಯನ್ನು, ಕ್ರಮೇಣ ರಕ್ಷಣೆಗೋಸ್ಕರ ಆಲಯವನ್ನು ಕಟ್ಟುವ ಪರಿಪಾಠ ಆರಂಭವಾಯಿತು. ಮೊದಲಿಗೆ ಮೂರ್ತಿ (ಪ್ರತಿಮೆ) ಯನ್ನು ಇಡಲು ಒಂದು ಸಣ್ಣ ಮಂಟಪವಷ್ಟೇ ಇದ್ದು, ಇದು ದೇವಾಲಯದ ಸೀಮಿತ ಉದ್ದೇಶವನ್ನು ಪೂರೈಸುತ್ತಿದ್ದಿತು. ಕಾಲ ಕಳೆದಂತೆ ಪೂಜಾ ವಿಧಿಗಳು ನಿರ್ದಿಷ್ಟಗೊಂಡ ಆಚರಣೆಗಳು ಹೆಚ್ಚಿದಂತೆ ಅದಕ್ಕೆ ತಕ್ಕಂತೆ ದೇವಾಲಯವೂ ವಿಸ್ತೃತಗೊಳ್ಳಲಾರಂಭಿಸಿತು. ಅವನ ಸುಸಂಸ್ಕೃತ ವಿಚಾರಗಳು ಬೆಳೆದಂತೆಲ್ಲ ದೇವಾಲಯವೂ

ಬೆಳವಣಿಗೆಯನ್ನು ಪಡೆಯಿತಲ್ಲದೆ, ಅದು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವೆನಿಸಿತು. ಅವು ಸಾರ್ವಜನಿಕ ಪೂಜಾ ಮಂದಿರಗಳಾಗುವುದರೊಂದಿಗೆ ಸಮಾಜದ ವಿವಿಧ ಕ್ಷೇತ್ರಗಳಲ್ಲೂ ಮಹತ್ತರ ಪಾತ್ರವಹಿಸಿದವು. ಹಾಗೇ ಪ್ರಮುಖ ವಿದ್ಯಾ ಕೇಂದ್ರಗಳಾಗಿ ಮೆರೆಯುವುದರೊಂದಿಗೆ ಸಂಗೀತ, ನೃತ್ಯ ಮುಂತಾದ ಕಲೆಗಳಿಗೂ ಆಸರೆಯಾದವು. ಹೀಗೆ ಸಮಾಜದ ವಿವಿಧ ಉದ್ದೇಶಗಳಿಗೆ ನೇರವಾಗಿ ನಿಂತು ಒಂದಲ್ಲಾ ಒಂದು ರೀತಿಯಲ್ಲಿ ಸಮಾಜದ ಕೇಂದ್ರ ಸ್ಥಾನವೆನಿಸಿವೆ. ಅಂತೆಯೇ ದೇವಾಲಯ ನಿರ್ಮಾಣವು ಇಡೀ ಸಮಾಜದ ಧಾರ್ಮಿಕ ಶ್ರದ್ಧೆಯ ಭಕ್ತಿಯ ಪ್ರತೀಕವೆನಿಸಿತು. ಆಯಾ ಧಾರ್ಮಿಕ ಮತಗಳಿಗೆ ಅನುಗುಣವಾಗಿ ಈ ಪೂಜಾ ಸ್ಥಾನಗಳು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತವೆ. ಅಂದರೆ, ಹಿಂದೂಗಳು 'ದೇವಾಲಯ' ಎಂದು ಕರೆದರೆ, ಜೈನರು 'ಬಸದಿ' ಎಂದು, ಬೌದ್ಧರು 'ಚೈತ್ಯ'ವೆಂದು, ಮುಸ್ಲಿಂರು, 'ಮಸೀದಿ'ಯೆಂದು, ಕ್ರೈಸ್ತರು 'ಚರ್ಚು' ಎಂದು ಕರೆದರು[೧೨]. ಧಾರ್ಮಿಕ ಸ್ಮಾರಕ ಅವಶೇಷಗಳ ಅಡಿಯಲ್ಲಿ ಇಲ್ಲಿನ ಜೈನ ಬಸದಿ, ಮಸೀದಿ, ಚರ್ಚು, ದರ್ಗಾ, ದೇವಾಲಯ, ಅವುಗಳಿಗೆ ಸಂಬಂಧಿಸಿದ ವಿವಿಧ ಶಿಲಾ, ಕಂಚಿನ ಮೂರ್ತಿಗಳನ್ನು ಈ ಮುಂದಿನಂತೆ ಅಧ್ಯಯನ ಮಾಡಲಾಗಿದೆ.

ಧಾರ್ಮಿಕ ಶ್ರದ್ಧೆಯು ಜೀವನದ ಪ್ರಮುಖ ಅಂಶ ಎನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ಕ್ರಿ.ಪೂ.೩ನೇ ಶತಮಾನದಲ್ಲಿ ಬೌದ್ಧ ಧರ್ಮದ ಸ್ತೂಪ ನಿರ್ಮಾಣವನ್ನು ಕಾಣಬಹುದು. ಬರ್ಬರಾ ಪರ್ವತ ಶ್ರೇಣಿಯ(ಬಿಹಾರ ಪ್ರಾಂತ್ಯ), ಸಾಂಚಿ, ಅಮರಾವತಿ, ಮಥುರಾ, ಸಾರಾನಾಥ್, ಬುದ್ಧಗಯಾ ಮುಂತಾದೆಡೆಗಳಲ್ಲಿ ಈ ಧಾರ್ಮಿಕ ನಿರ್ಮಿತಿಗಳ ಭಗ್ನಾವಶೇಷಗಳಿವೆ[೧೩]. ಸುಮಾರು ಕ್ರಿ.ಶ.೧-೨ನೇ ಶತಮಾನದಿಂದ ಭಾರತದ ವಿವಿಧ ಭಾಗಗಳಲ್ಲಿ ಇತರ ಧರ್ಮಗಳಿಗೆ ಸೇರಿದ ಕಟ್ಟಡಗಳು ಜೈನಮತಕ್ಕೆ ಸಂಬಂಧಪಟ್ಟಂತೆ ಈ ಕಾಲದ ಇಂಥ ಕೆಲವೇ ಸ್ಥಳಗಳು ಬೆಳಕಿಗೆ ಬಂದಿವೆ. ಉದಾ: ಮಥುರಾ, ಕೋನಕೊಂಡ್ಲ, ವಡ್ಡಮಾನು ಇತ್ಯಾದಿಗಳನ್ನು ಹೆಸರಿಸಬಹುದು. ವೈದಿಕ ಮತದ ನಿರ್ಮಿತಿಗಳು ಮಥುರಾ ಭೂಪಾಲ್ ಬಳಿಯ ಬೆಸ್ ನಗರ, ನಾಗಾರ್ಜುನ ಕೊಂಡ ಮತ್ತು ಸ್ವಲ್ಪ ನಂತರ ಕಾಲದ, ಅಂದರೆ ಗುಪ್ತ-ಕದಂಬ ಕಾಲದ ದೇವಾಲಯಗಳಿರುವ ದೇವಘಡ, ಭೂಮಾರ, ಸಾಂಚಿ ಹಾಗೂ ಪಟ್ಟದಕಲ್ಲು, ಐಹೊಳೆ, ಬನವಾಸಿ ಮುಂತಾದ ಸ್ಥಳಗಳಲ್ಲಿ ಶೋಧವಾಗಿವೆ. ಇದು ಮೊದಲನೇ ಹಂತವಾಗಿದೆ[೧೪].

ಸುಮಾರ ಕ್ರಿ.ಶ.೬ನೇ ಶತಮಾನದಿಂದ ಈ ನಿರ್ಮಿತಿಗಳಲ್ಲಿ ಒಂದು ಕ್ರಮ ಮತ್ತು ಸ್ವರೂಪವನ್ನು ತರಲು ಪ್ರಯತ್ನ ಮಾಡಿದಂತೆ ತೋರುತ್ತದೆ. ತತ್ಪರಿಣಾಮವಾಗಿ ಸುಮಾರು ಕ್ರಿ.ಶ.೭-೮ನೇ ಶತಮಾನಗಳ ಹೊತ್ತಿಗೆ ದೇವಾಲಯಗಳ ರಚನಾ ಕ್ರಮದಲ್ಲಿ ಸ್ಪಷ್ಟತೆ ಮೂಡಲಾರಂಭಿಸಿತು. ಅಷ್ಟೇ ಅಲ್ಲದೆ, ಉತ್ತರ ಮತ್ತು ದಕ್ಷಿಣ ಭಾರತದ ದೇವಾಲಯಗಳು ತಮ್ಮ ರಚನೆಯಲ್ಲಿ ವಿಭಿನ್ನ ರೂಪಗಳನ್ನು ಸ್ಪಷ್ಟವಾಗಿ ಪ್ರಕಟಿಸಲಾರಂಭಿಸಿದವು. ಇದನ್ನು ನಾವು ಪ್ರಬುದ್ಧ ಹಂತವೆಂದು ಕರೆಯಬಹುದು. ತೇರದಾಳ ಪರಿಸರದ ದೇವಾಲಯಗಳ ಶೈಲಿ ಹಾಗು ವಿವಿಧ ವಾಸ್ತು ಭಾಗಗಳು ಕರ್ನಾಟಕದ ಇತರೆ ಪ್ರದೇಶಗಳಲ್ಲಿ ಕಾಣಬರುವ ದೇವಾಲಯಗಳಿಗೆ ಹೆಚ್ಚು ಹೋಲಿಕೆಯಾಗುತ್ತವೆ. ಆದುದರಿಂದ ಕರ್ನಾಟಕದಲ್ಲಿ ದೇವಾಲಯಗಳು ಬೆಳೆಬಂದ ರೀತಿಯನ್ನು ಸ್ಥೂಲವಾಗಿ ವಿವರಿಸುವುದು ಸೂಕ್ತ ವೆನಿಸುತ್ತದೆ.

ಕರ್ನಾಟಕದಲ್ಲಿ ದೇವಾಲಯ ವಾಸ್ತುಕಲೆ ಬೆಳೆದು ಬಂದ ದಾರಿಯನ್ನು ಗುರುತಿಸಲು ಯತ್ನಿಸಿದರೆ, ಮೊದಲಿಗೆ ಶಾತವಾಹನರ ಕಾಲದ ಬೌದ್ಧ ಧರ್ಮದ ಚೈತ್ಯ, ಸ್ತೂಪ,

ವಿಹಾರಗಳು ಕಂಡುಬರುತ್ತವೆ. ಬ್ರಹ್ಮಗಿರಿ, ಬನವಾಸಿ, ಸನ್ನತಿ ಮುಂತಾದೆಡೆಗಳಲ್ಲಿದ್ದ ಪ್ರಾಚೀನ ವಾಸ್ತು ರಚನೆಗಳನ್ನಿಲ್ಲಿ ನೆನೆಯಬಹುದು. ಶಾತವಾಹನರ ಕಾಲದಲ್ಲಿ ಬೌದ್ಧ ಸ್ತೂಪ, ಚೈತ್ಯಗಳೊಂದಿಗೆ ವೈದಿಕ ಧರ್ಮದ ರಚನೆಗಳಿದ್ದವೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ[೧೫]. ಶಿಕಾರಿಪುರ ತಾಲೂಕಿನ ಮಳ್ಳಪಳ್ಳಿಯ ದೇವಾಲಯ ಅದೇ ರೀತಿ ತಾಳಗುಂದದ ಮಹಾದೇವ ಈ ದೇವರುಗಳನ್ನು ಶಾತವಾಹನರು ಪೂಜಿಸುತ್ತಿದ್ದರೆಂದು ಶಾಸನಗಳಲ್ಲಿ ಹೇಳಲಾಗಿದೆಯಾದರೂ, ಈ ದೇವಾಲಯಗಳು ಸ್ಪಷ್ಟವಾಗಿ ಕಾಣುವುದಿಲ್ಲ (ಪ್ರಾಯಶಃ ಈ ನಿವೇಶನಗಳಲ್ಲಿ ಉತ್ಖನನ ಮಾಡಿದಲ್ಲಿ ಇವುಗಳ ಭಗ್ನಾವಶೇಷಗಳು ಬೆಳಕಿಗೆ ಬರಬಹುದು). ಬಾದಾಮಿ, ಐಹೊಳೆ-ಪಟ್ಟದಕಲ್ಲುಗಳಲ್ಲಿ ಹಿಂದೆ ಇದ್ದ ಇಟ್ಟಿಗೆಯಿಂದ ನಿರ್ಮಿಸಲಾದ ಕಟ್ಟಡದ ಭಾಗಗಳು ದೊರೆತಿದ್ದು, ಅವು ಕರ್ನಾಟಕ ವಾಸ್ತುಶಿಲ್ಪದ ಪ್ರಾಚೀನ ನಿರ್ಮಿತಗಳಿಗೆ ಉದಾಹರಣೆಯಾಗಿವೆ. ಕದಂಬ, ಗಂಗರ ಕಾಲದ ಆರಂಭದ ಕಟ್ಟಡಗಳು ಹೆಚ್ಚಾಗಿ ಇಟ್ಟಿಗೆಯಿಂದ ನಿರ್ಮಿಸಲ್ಪಟ್ಟದ್ದು. ಅವು ಹೆಚ್ಚಾಗಿ ಉಳಿದುಬಂದಿಲ್ಲ.

ಬಾದಾಮಿ ಚಾಳುಕ್ಯರ ಕಾಲದಿಂದ ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣವು ಹೆಚ್ಚು ಭರದಿಂದ ಸಾಗಿತೆನ್ನಬಹುದು. ಇವುಗಳನ್ನು ಕಲ್ಲಿನಿಂದ ಕಟ್ಟಲಾಗಿದ್ದು, ಮಹಾಕೂಟ-ಬಾದಾಮಿ-ಐಹೊಳೆ-ಪಟ್ಟದಕಲ್ಲುಗಳಲ್ಲಿ ಈ ಪ್ರಾಚೀನ ನಿರ್ಮಿತಿಗಳನ್ನು ಕಾಣಬಹುದಾಗಿದೆ[೧೬]. ಬಾದಾಮಿಯ ಗುಹಾಂತರ ದೇವಾಲಯಗಳು ಶಿಲೆಯಲ್ಲಿ ಕೊರೆದು ಮಾಡಿದ ದೇವಾಲಯಗಳಿಗೆ ಹೆಸರಾಗಿದ್ದು, ಇವುಗಳಲ್ಲಿ ಶೈವ-ಜೈನ-ವೈಷ್ಣವ ಈ ಎಲ್ಲ ಧರ್ಮದ ನಿರ್ಮಾಣಗಳೂ ಇವೆ. ಐಹೊಳೆಯನ್ನು 'ದೇವಾಲಯಗಳ ಪ್ರಯೋಗಶಾಲೆ' ಎಂದು ಕರೆಯಲಾಗಿದೆ. ಹಳೇ ಮಹಾಕೂಟದಲ್ಲಿ ಪ್ರಬುದ್ಧ ಸ್ಥಿತಿಯನ್ನು ಹೊಂದಿದ ದೇವಾಲಯದ ಮುಖ್ಯ ಭಾಗ-ಅಂಗಗಳು ಆಗಲೇ ಅವತರಿಸಿದ್ದು, ಗರ್ಭಗುಡಿಯ ಮೇಲೆ ವಿವಿಧ ರೀತಿಯ ಶಿಖರ ಅಥವಾ ಮೇಲ್ಕಟ್ಟಡಗಳು ರೂಪುಗೊಂಡಿರುವುದು ಇದನ್ನು ಸ್ಪಷ್ಟಪಡಿಸುತ್ತದೆ. ಇವು 'ಷಟ್ವರ್ಗ ದೇವಾಲಯಗಳೆನಿಸಿದ್ದು", ಈ ಮಾದರಿಯನ್ನು ರಾಷ್ಟ್ರಕೂಟರ, ಗಂಗ, ನೊಳಂಬ, ವಿಜಯನಗರದ ಅರಸರ ಕಾಲದ ದೇವಾಲಯಗಳಲ್ಲೂ ಕಾಣಬಹುದಾಗಿದೆ. ಆದರೆ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳು ಆ ಹೊಸ ಜಾಡನ್ನು ಮುಂದುವರಿಸಿ, ಪರಾಕಾಷ್ಠತೆಯನ್ನು ತಲುಪಿದ್ದನ್ನು ಗುರುತಿಸಬಹುದಾಗಿದೆ. ಅವು ಬೇರೆ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ವಿವಿಧ ಮಾದರಿಯ ರಚನೆಗಳನ್ನು ಅನುಸರಿಸಿ ರಚಿಸಲ್ಪಟ್ಟಿದ್ದು, ದೇವಾಲಯ ವಾಸ್ತು ಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿವೆ ಎಂದು ಹೇಳಬಹುದು. ಇದರಿಂದಾಗಿ ಕರ್ನಾಟಕದಲ್ಲಿ ವೈವಿಧ್ಯಮಯ ದೇವಾಲಯ ರಚನೆಗಳು ಸಾಧ್ಯವಾಗಿವೆ.

ಮುಂದೆ ಕರ್ನಾಟಕದ ಹಲವು ಪ್ರದೇಶಗಳಲ್ಲಿ ಅಪರಿಮಿತ ಸಂಖ್ಯೆಯ ದೇವಾಲಯಗಳು ನಿರ್ಮಾಣಗೊಂಡವು. ಒಂದೊಂದು ಪ್ರಮುಖ ರಾಜವಂಶದ ದೇವಾಲಯಗಳು ಒಂದೊಂದು ಪ್ರದೇಶದಲ್ಲಿ ಕೇಂದ್ರೀಕೃತಗೊಂಡಂತೆಯೇ ಇತರ ಪ್ರದೇಶಗಳಲ್ಲಿ ಬಿಡಿಬಿಡಿಯಾಗಿ ನಿರ್ಮಿಸಲ್ಪಟ್ಟವು. ಅಂದರೆ ಬಾದಾಮಿ ಚಾಳುಕ್ಯರ ಕಾಲದ ದೇವಾಲಯಗಳು ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿ ಕೇಂದ್ರೀಕೃತಗೊಂಡರೆ, ರಾಷ್ಟ್ರಕೂಟರ ಕಾಲದ ದೇವಾಲಯಗಳು ವಿಶೇಷವಾಗಿ ಎಲ್ಲೋರದಲ್ಲಿಯೂ, ಅಲ್ಲಲ್ಲಿ ಚದುರಿದಂತೆ ಅಂದರೆ ಕುಕ್ಕನೂರು, ರೋಣ, ಮುಳಗುಂದ, ಸಿರಿವಾರ ಮುಂತಾದ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಕುರುವತ್ತಿ, ಗದಗ, ಲಕ್ಕುಂಡಿಯಲ್ಲಿ ಕಲ್ಯಾಣ ಚಾಳುಕ್ಯರ ದೇವಾಲಯಗಳು ಪ್ರಮುಖವಾಗಿ ಕಂಡುಬಂದರೆ, ಉತ್ತರ ಕರ್ನಾಟಕದ ಇತರೆಡೆಯಲ್ಲೂ

ಅವರ ಕಾಲದ ದೇವಾಲಯಗಳಿವೆ. ಹೊಯ್ಸಳರ ಕಾಲದ ದೇವಾಲಯಗಳಿಗೆ ಬೇಲೂರು, ಹಳೇಬೀಡು, ಸೋಮನಾಥಪುರಗಳು ಪ್ರಸಿದ್ಧವಾಗಿದ್ದರೆ. ಹಾಸನ, ತುಮಕೂರು ಜಿಲ್ಲೆಗಳಲ್ಲಿಯೂ ಆ ಕಾಲದ ಅನೇಕ ದೇವಾಲಯಗಳಿವೆ. ಗಂಗರ ಕಾಲದ ದೇವಾಲಯಗಳನ್ನು ಅವನಿ, ಹೇಮಾವತಿಯಲ್ಲೂ, ವಿಜಯನಗರ ಕಾಲದ ದೇವಾಲಯಗಳನ್ನು ಹಂಪೆಯಲ್ಲೂ ಮುಖ್ಯವಾಗಿ ಕಾಣಬಹುದಾಗಿದೆ[೧೭]. ಹೀಗೆ ಒಂದು ಕಾಲದ ರಾಜವಂಶದ ದೇವಾಲಯಗಳು ಒಂದು ಕೇಂದ್ರಿಕೃತ ಪ್ರದೇಶದಲ್ಲಿ ಮಾತ್ರವಲ್ಲದೇ, ಬೇರೆಡೆಯಲ್ಲೂ ನಿರ್ಮಾಣವಾಗಿದ್ದರೂ, ಒಂದು ಕಾಲದ ದೇವಾಲಯ ರಚನಾ ಶೈಲಿಯು ಆಯಾ ರಾಜವಂಶದ ರಾಜಧಾನಿ ಮತ್ತು ಅದರ ಸುತ್ತಲಿನ ಪ್ರದೇಶಗಳ ಪ್ರಮುಖ ದೇವಾಲಯಗಳಲ್ಲಿ ನಿಖರವಾಗಿ, ಸ್ಪಷ್ಟವಾಗಿ ಮತ್ತು ಪೂರ್ಣವಾಗಿ ಪ್ರಕಟವಾಗಿರುತ್ತದೆ. ಆದ್ದರಿಂದ ಒಂದು ಕಾಲದ ದೇವಾಲಯ ಶೈಲಿಯನ್ನು ಅರಿಯುವಲ್ಲಿ ಆ ಕೇಂದ್ರಸ್ಥಾನಗಳು ಪ್ರಮುಖ ಪಾತ್ರ ವಹಿಸುತ್ತವೆ.

ಪ್ರಾಚೀನ ಕಾಲದಿಂದಲೇ ದೇವಾಲಯದ ರಚನೆಯು ಕರ್ನಾಟಕದಲ್ಲಿ ಆರಂಭವಾಗಿದ್ದು, ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ನಿರ್ದಿಷ್ಟಗೊಳ್ಳುತ್ತಾ, ತನ್ನದೇ ಆದ ಶೈಲಿ-ಪ್ರಭೇದಗಳನ್ನು ಪ್ರಕಟಗೊಳಿಸುತ್ತಾ ನಡೆದು, ಪ್ರತಿಯೊಂದು ಪ್ರದೇಶದ ದೇವಾಲಯಗಳು ಕರ್ನಾಟಕ ವಾಸ್ತು ಶಿಲ್ಪಕ್ಕೆ ವೈಶಿಷ್ಟ್ಯಪೂರ್ಣ ಕೊಡುಗೆ ಎನಿಸಿವೆ. ಒಂದೊಂದು ಕಾಲದಲ್ಲಿ ಒಂದೊಂದು ರಚನೆಯಲ್ಲಿ ವೈಶಿಷ್ಟ್ಯತೆ ಇದೆ. ಕಾಲದಿಂದ ಕಾಲಕ್ಕೆ ಈ ವೈಶಿಷ್ಟ್ಯತೆಯಲ್ಲದ ಮಾರ್ಪಾಟನ್ನು ಅರಿಯುವಲ್ಲಿ ದೇವಾಲಯದ ರೂಪುರೇಷೆ, ರಚನಾ ಕ್ರಮ ದೇವಾಲಯದ ಒಂದೊಂದು ಭಾಗದ ಅಂಗಗಳು, ಅವುಗಳ ಅಲಂಕಾರ, ಪ್ರಕಾರಗಳು ಇವುಗಳನ್ನು ಗಮನಿಸಬೇಕಾಗುತ್ತದೆ. ಇವು ದೇವಾಲಯದ ಶೈಲಿಯನ್ನು ನಿರ್ಧರಿಸಲು ಸಹಾಯಕವಾಗುವುದರೊಂದಿಗೆ ಆ ಅಂಗ ಭಾಗಗಳು ಬೆಳೆದು ಬಂದ ರೀತಿಯನ್ನು ಸೂಚಿಸುತ್ತವೆ. ತೇರದಾಳ ಪರಿಸರದಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡಾಗ ಧಾರ್ಮಿಕ ವಾಸ್ತು ಕಲೆಗಳ ಪ್ರತೀಕಗಳಾದ ಹಲವು ದೇವಾಲಯಗಳು ಕಂಡುಬಂದಿವೆ. ಇವುಗಳನ್ನು ಹೆಚ್ಚಾಗಿ ಶಿಲೆಯಿಂದಲೇ ನಿರ್ಮಿಸಲಾಗಿದೆ. ಹಾಗೆಯೇ ಕೆಲವು ದೇವಾಲಯಗಳ ಗೋಪುರ ಮತ್ತು ಶಿಖರಗಳಿಗೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಲಾಗಿದೆ. ಒಟ್ಟಿನಲ್ಲಿ ಇಲ್ಲಿ ಕಂಡು ಬಂದಿರುವ ದೇವಾಲಯಗಳಲ್ಲಿ ಕೆಲವು ಮಾತ್ರ ಮೂಲ ರೂಪದಲ್ಲಿವೆ. ಕೆಲವು ಜೀರ್ಣೋದ್ಧಾರಗೊಂಡಿದ್ದು, ಇನ್ನೂ ಕೆಲವು ಅವಸಾನದ ಅಂಚಿನಲ್ಲಿವೆ. ತೇರದಾಳ ಪರಿಸರದ ವಾಸ್ತು ಕಲೆಯ ವೈಶಿಷ್ಟತೆ ಮತ್ತು ಅವುಗಳ ಕಾಲವನ್ನು ಗುರುತಿಸಲು ಈ ಎಲ್ಲಾ ದೇವಾಲಯಗಳು ಸಹಾಯಕವಾಗಿವೆ.

ತೇರದಾಳ ಪ್ರದೇಶದಲ್ಲಿ ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಶಾಕ್ತ ದೇವಾಲಯಗಳು, ಜಿನ ಬಸದಿಗಳು ಮತ್ತು ಇತರೆ ದೇವಾಲಯಗಳು ಮುಖ್ಯವಾಗಿ ಕಾಣಬರುತ್ತವೆ. ಇವುಗಳೊಂದಿಗೆ ಆಯಾ ಧಾರ್ಮಿಕ ಪಂಥಕ್ಕೆ ಸೇರದೆ ಇರುವ ಮಿಶ್ರ ಪಂಥ ಇಲ್ಲವೇ ಪ್ರತ್ಯೇಕವೆನ್ನಬಹುದಾದ ಹರಿಹರ, ಬ್ರಹ್ಮ, ಮೊದಲಾದ ಸ್ಮಾರಕ ಅವಶೇಷಗಳು ಸಹ ಇಲ್ಲಿ ಕಂಡು ಬರುತ್ತವೆ.

ಇವುಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಮುನ್ನ ಇಲ್ಲಿನ ದೇವಾಲಯಗಳ ಅಂಗ ಭಾಗಗಳನ್ನು (ವಾಸು ಲಕ್ಷಣಗಳನ್ನು) ಸ್ಥೂಲವಾಗಿ ಈ ಕೆಳಗಿನಂತೆ ವಿಶ್ಲೇಷಿಸುವುದು ಅವಶ್ಯಕವೆನಿಸಿದೆ. ಇಲ್ಲಿನ ದೇವಾಲಯಗಳ ರಚನಾ ಕ್ರಮವನ್ನು 'ಊರ್ಧ್ವಮುಖ ಕ್ರಮ' ಮತ್ತು 'ತಿರ್ಯಙ್ಮುಖ ಕ್ರಮ' ಎಂದು ಎರಡು ರೀತಿಯಲ್ಲಿ ವಿಭಾಗಿಸಬಹುದು. ದೇವಾಲಯದ ಹೊರ ಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದರಂತೆ ಇರುವ ಭಾಗಗಳನ್ನು ನಿಶ್ಚಿತ

ರೀತಿಯಲ್ಲಿ ರಚಿಸುವ ಕ್ರಮವನ್ನು ಊರ್ಧ್ವಮುಖ ಕ್ರಮ ಎಂದು ಹೇಳಬಹುದು. ಅದೇ ರೀತಿ ಒಳಭಾಗದಲ್ಲಿ ಗರ್ಭಗೃಹ ಸೇರಿದಂತೆ ಅದರ ಮುಂದಿರುವ ಎಲ್ಲಾ ಮಂಟಪ ಇತ್ಯಾದಿಗಳ ರಚನಾ ಕ್ರಮವನ್ನ ತಿರ‍್ಯಜ್ಮುಖಕ್ರಮ ಎಂದು ಕರೆಯಬಹುದು.

ದೇವಾಲಯಗಳು 'ಊರ್ಧ್ವಮುಖ ಕ್ರಮ'ದಲ್ಲಿ (ಅಂದರೆ ಕೆಳಗಿನಿಂದ ಮೇಲಕ್ಕೆ) ಪ್ರಧಾನವಾಗಿ ಆರು ಭಾಗ(ಷಡ್ವರ್ಗ)ಗಳಿಂದ ಕೂಡಿರುತ್ತವೆ. ಅವುಳೆಂದರೆ, ಅಧಿಷ್ಠಾನ-ಭಿತ್ತಿ-ಪ್ರಸ್ತರ-ಗ್ರೀವ-ಶಿಖರ-ಸ್ತೂಪಿ. ಹೀಗೆ ಆರು ದೇವಾಲಯಗಳಿಗೆ 'ಷಡ್ವರ್ಗ ದೇವಾಲಯ' ಎಂದು ಹೆಸರು[೨೮]. ಷಡ್ವರ್ಗ ಕ್ರಮದ ದೇವಾಲಯಗಳಲ್ಲಿ ಅಧಿಷ್ಠಾನವೇ ಮೊದಲ ಭಾಗ.

**ಅಧಿಷ್ಠಾನ** : ಇಲ್ಲಿನ ದೇವಾಲಯಗಳ ಅಧಿಷ್ಠಾನಗಳಲ್ಲಿ ಪ್ರಮುಖವಾಗಿ ಉಪಾನ, ಪದ್ಮ, ಕರ್ಣಿಕಾ, ಕುಮುದ, ಕಪೋತ, ವೇದಿ ಅಂಗಗಳು ಕಂಡುಬರುತ್ತವೆ. ಇಲ್ಲಿನ ಅಧಿಷ್ಠಾನದ ಮೊದಲ ಭಾಗದಲ್ಲಿ ಕೆಲವು ಲೌಕಿಕ ಮತ್ತು ಪೌರಣಿಕ ಶಿಲ್ಪಗಳನ್ನು ಕೆತ್ತಲಾಗಿದೆ. ಅಧಿಷ್ಠಾನದಲ್ಲಿ ಅನೇಕ ಪ್ರಕಾರಗಳು ಇವೆ. ಮಂಚಕ, ಪಾದಬಂಧ, ಪ್ರತಿಬಂಧ ಎಂಬ ಮುಖ್ಯ ಪ್ರಭೇದವೂ, ಪಾದಬಂಧ, ಪ್ರತಿಬಂಧ, ಪದ್ಮಬಂಧ. ಮಂಚ ಬಂಧ-ಮುಂತಾದ ಉಪ ಪ್ರಕಾರಗಳೂ ಇವೆ.

**ಭಿತ್ತಿ** : ಅಧಿಷ್ಠಾನದ ಮೇಲಿನ ಭಾಗವೇ 'ಭಿತ್ತಿ' (ಗೋಡೆ). ಇದು ಷಡ್ವರ್ಗ ಕ್ರಮದ ಎರಡನೇ ಭಾಗ. ದೇವಾಲಯದ ಭಾರ ಹೊರಲೆಂದು ಭಿತ್ತಿಯಲ್ಲಿ ನಿಶ್ಚಿತ ಅಂತರದಲ್ಲಿ ಕುಡ್ಯಸ್ತಂಭಗಳು ಇರುವುದಲ್ಲದೆ, ಅವುಗಳ ನಡುವೆ ದೇವಕೋಷ್ಠ, ಜಾಲಂಧ್ರ(ವಾತಾಯನ), ತೋರಣ, ಕುಂಬಲತಾ ಇತ್ಯಾದಿಗಳಿರುತ್ತವೆ. ಜಿಲ್ಲೆಯ ತೇರದಾಳ, ಹನಗಂಡಿ, ಕಲ್ಲೋಳ್ಳಿ, ಹಳಿಂಗಳಿ ಮೊದಲಾದಡೆಯ ಭಿತ್ತಿಯ ಹೊರಭಾಗಗಳಲ್ಲಿ ಅರೆಗಂಭಗಳು, ಜೋಡಿ ಅರೆ ಗಂಭಗಳಗಳನ್ನೇ ಕೆತ್ತಿದ್ದರೆ, ಇನ್ನೂ ಕೆಲವು ಕಡೆ ಶಿಖರದ ಮಾದರಿಗಳನ್ನು ಬಿಡಿಸಲಾಗಿದೆ, ಈ ಮೇಲಿನ ದೇವಾಲಯಗಳ ಗರ್ಭಗುಡಿಗಳ ಹೊರಭಾಗದ ಮಧ್ಯೆ ಭಿತ್ತಿಯಲ್ಲಿ ದೇವಕೋಷ್ಠಗಳಿದ್ದು, ಕೆಲವು ದೇವಕೋಷ್ಠಗಳಲ್ಲಿ ಮೂರ್ತಿಗಳಿವೆ. ಈ ದೇವಕೋಷ್ಠಗಳನ್ನು ಉತ್ತಮ ರೀತಿಯಲ್ಲಿ ಅಲಂಕರಿಸಲಾಗಿರುತ್ತದೆ. ಯಲ್ಲಟಿ, ಹಿಪ್ಪರಗಿ ಜಗದಾಳದ ಪೂರ್ವ ಭಾಗದಲ್ಲಿ ಪುಷ್ಪ ಜಾಲಂಧ್ರ(ಜಾಲಕ)ಗಳಿವೆ. ತೇರದಾಳದ ನೇಮಿನಾಥ ಜಿನಾಲಯದ ಉತ್ತರದ ಭಿತ್ತಿಯಲ್ಲಿ ಕೇವಲ ಪುಷ್ಪಗಳ ಅಲಂಕಾರವಿದ್ದು, ಅಲ್ಲಿ ಜಾಲಂಧ್ರಗಳಿವೆ.

**ಪ್ರಸ್ತರ** : ಭಿತ್ತಿಯ ಮೇಲೆ ಇರುವ 'ಪ್ರಸ್ತರ'ವು ಷಡ್ವರ್ಗ ಕ್ರಮದಲ್ಲಿ ಮೂರನೇ ಭಾಗವಾಗಿದೆ. ಇದು ಭಿತ್ತಿಯ ಸ್ತಂಭಗಳ ತುದಿಯಿಂದ ಆರಂಭವಾಗಿದ್ದು ಉತ್ತರ, ವಾಜನ, ಬಲಭೀ, ಕಪೋತ, ಅಲಿಂಗ, ದೇವಾಲಯವನ್ನು ರಕ್ಷಿಸುತ್ತದೆ. ತೇರದಾಳ ಪರಿಸರದ ದೇವಾಲಯಗಳಲ್ಲಿನ ಪ್ರಸ್ತರದಲ್ಲಿ ಈ ವಿವಿಧ ಭಾಗಗಳನ್ನು ಕಾಣಬಹುದು. ಈ ಭಾಗವನ್ನು ಕೆಲವು ದೇವಾಲಯಗಳಲ್ಲಿ ಕೀರ್ತಿ ಮುಖಗಳಿಂದ, ಪುಷ್ಪಗಳಿಂದ ಅಲಂಕರಿಸಲಾಗಿದೆ. ಹಾಗೆಯೇ ಜಿಲ್ಲೆಯ ಬಹುತೇಕ ದೇವಾಲಯಗಳಲ್ಲಿನ ಕಪೋತ ಭಾಗವು ಸುತ್ತಲೂ ಹೊರಬಾಗಿದ್ದು, ಅದು ಮುಂದೆ ಚಾಚಿದಂತಿರುತ್ತದೆ. (ಆಂಗ್ಲ ವರ್ಣಮಾಲೆ 'ಎಸ್' ಆಕಾರದಂತಿರುವ ಕಪೋತ ಭಾಗವು ತೇರದಾಳ, ಹನಗಂಡಿ, ಮದನಮಟ್ಟಿ, ರಬಕವಿ ಮೊದಲಾದೆಡೆ ಇರುವ ದೇವಾಲಯಗಳಲ್ಲಿ ಕಂಡುಬರುತ್ತವೆ).

**ಮೇಲ್ಕಟ್ಟಡ :** ಪ್ರಸ್ತರದ ಮೇಲೆ ಇರುವುದೇ 'ಮೇಲ್ಕಟ್ಟಡ' ಇಲ್ಲಿ ಷಡ್ವರ್ಗ ಕ್ರಮದ ನಾಲ್ಕು-ಐದು-ಆರನೇ ಭಾಗಗಳಾದ ಗ್ರೀವ, ಶಿಖರ ಮತ್ತು ಸ್ತೂಪಿ - ಈ ಭಾಗಗಳಿರುತ್ತವೆ. ಗ್ರೀವದಲ್ಲೂ ಕೊಷ್ಠಗಳಿದ್ದು, ಅದರಲ್ಲಿ ದೇವತಾ ಶಿಲ್ಪಗಳಿರುತ್ತವೆ. ಅದರ ಮೇಲಿನ ಶಿಖರವು ಐದನೇ ಭಾಗವಾಗಿದೆ. ಶಿಖರವು ಬೇರೆ ಬೇರೆ ಆಕಾರದಲ್ಲಿ ರಚಿಸಲ್ಪಡುವುದರಿಂದ, ಆಕಾರಕ್ಕೆ ತಕ್ಕಂತೆ ಅವು ವಿಷ್ಣುಛಂದ, ಬ್ರಹ್ಮಛಂದ, ರುದ್ರ ಛಂದ, ಶಾಲಾಕಾರ, ಗಜಪೃಷ್ಠಾಕಾರ ಎಂದು ವಿವಿಧ ಹೆಸರುಗಳನ್ನು ಪಡೆಯುತ್ತವೆ[೨೯]. ಇವು ಪ್ರಧಾನವಾಗಿ 'ನಾಸಿ'ಗಳಿಂದ ಅಲಂಕರಿಸಲ್ಪಟ್ಟಿರುತ್ತವೆ. ಮೇಲ್ಕಟ್ಟಡದ ಒಂದು ಭಾಗವಾದ ಶಿಖರವು ಇಲ್ಲಿನ ಬಹುತೇಕ ದೇವಾಲಯಗಳಲ್ಲಿ ನಾಶವಾಗಿದೆ. ಉಳಿದ ಕೆಲವು ದೇವಾಲಯಗಳ ಶಿಖರಗಳಲ್ಲಿ ಪ್ರಧಾನವಾಗಿ ಕದಂಬ ನಾಗರ(ಫಾಂಸಾನ), ದ್ರಾವಿಡ, ವೇಸರ ಶೈಲಿಯ ಶಿಖರಗಳು ಕಂಡುಬರುತ್ತವೆ.

ಊರ್ಧ್ವಕ್ರಮದಲ್ಲಿ ಕೊನೆಯದಾದ ಮತ್ತು ಮುಖ್ಯವಾದ ಭಾಗವೇ ಸ್ತೂಪಿ(ಕಲಶ) ಇದರಲ್ಲೂ ಘಟ, ಗಲ ಮತ್ತು ಮುಕುಲಗಳೆಂಬ ಮುಖ್ಯ ಅಂಗಗಳಿರುತ್ತವೆ. ಕಲಶ ಸ್ಥಾಪನೆಯಿಂದಲೇ ದೇವಾಲಯದ ಪೂಜಾ ವಿಧಿಗಳ ಆರಂಭವಾಗುವುದರಿಂದ ಧಾರ್ಮಿಕ ದೃಷ್ಟಿಯಿಂದ ಇದು ಮುಖ್ಯ ಅಂಗವಾಗಿದೆ. ಇಲ್ಲಿನ ದೇವಾಲಯಗಳಲ್ಲಿನ ಶಿಖರಗಳ ಮೇಲಿನ ಕಲಶ ಭಾಗವು ಶಿಲೆಯದಾಗಿರುವುದು ವಿಶೇಷ. ಕೆಲವು ಎತ್ತರದ ದೇವಾಲಯಗಳಲ್ಲಿ ಮೇಲ್ಕಟ್ಟಡದಲ್ಲಿ, ಗ್ರೀವದ ಕೆಳಗೆ ಚೌಕೋನಾಕಾರದ ಕೂಟ, ಆಯತಾಕಾರದ ಶಾಲಾ, ಗಜಪೃಷ್ಠಾಕಾರದ ಪಂಜರ, ನಾಸಿ, ನಾಸಿಕೋಷ್ಠ, ವೃತ್ತಸ್ಫುಟಿಗಳಿಂದ ಕೂಡಿದ ತಲ, ಹಾರಗಳು ಇರುತ್ತವೆ.

**ಗರ್ಭಗೃಹ :** ಇಲ್ಲಿ ಮೂಲ ದೇವರ ಪ್ರತಿಷ್ಠಾಪನೆಯಾಗಿರುತ್ತದೆ. ಕೆಲವೊಮ್ಮೆ ಗರ್ಭಗೃಹದ ಸುತ್ತ ದೇವಾಲಯ ಒಳಭಾಗದಲ್ಲಿ 'ಪ್ರದಕ್ಷಿಣಾಪಥ' ಇರುತ್ತದೆ. ಕೆಲವೊಮ್ಮೆ ಗರ್ಭಗೃಹದಿಂದ ಹೊರಚಾಚಿರುವ ವಿವಿಧಾಕಾರದ ಜಲಪ್ರಣಾಳಿಯೂ ಇರುವುದು. ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥ ಇರುವ ದೇವಾಲಯಗಳನ್ನು 'ಸಂದಾರ' ದೇವಾಲಯಗಳೆಂದು ಆ ರೀತಿ ಇರದೇ ಇರುವ ದೇವಾಲಯಗಳನ್ನು 'ನಿರಂಧಾರ' ದೇವಾಲಯಗಳೆಂದು ಕರೆಯಲಾಗುತ್ತದೆ. ಈ ಜಿಲ್ಲೆಯ ಯಾವ ದೇವಾಲಯಗಳ ಗರ್ಭಗುಡಿಗಳ ಸುತ್ತ (ಒಳಭಾಗದಲ್ಲಿ) ಪ್ರದಕ್ಷಿಣಾ ಪಥ ಕಂಡುಬರುವುದಿಲ್ಲ. ಆದುದರಿಂದ ಈ ಜಿಲ್ಲೆಯ ದೇವಾಲಯಗಳನ್ನು ನಿರಂಧಾರ ದೇವಾಲಯಗಳ ಗುಂಪಿಗೆ ಸೇರಿಸಬಹುದು. ಈ ದೇವಾಲಯಗಳ ಗರ್ಭಗುಡಿಗಳನ್ನು ಹೆಚ್ಚಾಗಿ ಚೌಕಾಕಾರವಾಗಿದ್ದರೂ ಸಹ ಕೆಲವು ದೇವಾಲಯಗಳು ಆಯತಾಕಾರವಾಗಿರುವುದನ್ನು ಕಾಣಬಹುದು. ಅಂತರಾಳ :- ಮುಖ್ಯ ಗರ್ಭಗೃಹಗಳ ಮುಂದೆ ಸಾಮಾನ್ಯವಾಗಿ ಅಂತಾಳವಿರುತ್ತದೆ. ಒಂದಕ್ಕಿಂತ ಹೆಚ್ಚಿನ ಗರ್ಭಗುಡಿಗಳಿದ್ದಾಗ ಅವುಗಳ ಮುಂದೆಯೂ ಅಂತರಾಳಗಳಿರುವುದನ್ನು ಪರಿಸರದ ದೇವಾಲಯಗಳಲ್ಲಿ ಕಾಣಬಹುದು. ಇವುಗಳು ತೆರೆದ ಇಲ್ಲವೇ, ಮುಚ್ಚಿದ ರೀತಿಯಲ್ಲಿರುತ್ತವೆ.

**ನವರಂಗ :** ಅಂತರಾಳಗಳ ಮುಂದೆ ನವರಂಗವಿರುತ್ತದೆ. ನವರಂಗವು ವಿಶಾಲವಾದ ರಚನೆಯನ್ನು ಹೊದಿದ್ದು, ಹೆಚ್ಚು ಅಲಂಕೃತಗೊಂಡಿರುತ್ತದೆ. ಇಲ್ಲಿನ ನವರಂಗದಲ್ಲಿ (ಅಂತರಾಳಗಳ ಮುಂಭಾಗದಲ್ಲಿ ಹಾಗು ಪ್ರವೇಶದ್ವಾರದ ಒಳಭಾಗದ ಭಿತ್ತಿಯ ಎರಡೂ ಕಡೆ) ಕೋಷ್ಠಗುಡಿಗಳಿರುದನ್ನು ಕಾಣಬಹುದು. ಇವುಗಳಲ್ಲಿ ದೇವತಾಮೂರ್ತಿಗಳನ್ನು

ಇಡಲಾಗಿರುತ್ತದೆ. ಇಲ್ಲಿನ ಹಳಿಂಗಳಿ ಮದನಮಟ್ಟಿ, ಕಲ್ಲೂಳ್ಳಿ ದೇವಾಲಯಗಳ ನವರಂಗದಲ್ಲಿನ ಮಧ್ಯ ಭಾಗದ ವೇದಿಕೆಯಲ್ಲಿ ನಂದಿಗಳಿವೆ.

**ಮುಖಮಂಟಪ** : ನವರಂಗದ ನಂತರ ಇರುವುದೆ 'ಮುಖಮಂಟಪ' ಇದು ದೇವಾಲಯದ 'ಪ್ರವೇಶ'ದಲ್ಲೇ ಇರುವುದು. ಇದರಲ್ಲಿ ಕಕ್ಷಾಸನವೂ ಇರುತ್ತದೆ. ಇಲ್ಲಿನ ಬಹುತೇಕ ದೇವಾಲಯಗಳಲ್ಲಿನ ಮುಖ ಮಂಟಪಗಳಲ್ಲಿ ಕಕ್ಷಾಸನಗಳಿವೆ.

**ನಂದಿಮಂಟಪ** : ಇಲ್ಲಿನ ದೇವಾಲಯಗಳಿಗೆ ಹೊಂದಿಕೊಂಡಂತೆ ಇಲ್ಲವೇ ಪ್ರತ್ಯೇಕವಾಗಿರುವ ನಂದಿಮಂಟಪಗಳನ್ನು ಕಾಣಬಹುದು. ನಂದಿ ಮಂಟಪದಂತೆಯೇ ಇರಬೇಕಾದ ಕಲ್ಯಾಣ ಮಂಟಪ, ರಂಗ ಮಂಟಪಗಳಾಗಲಿ ಈ ಭಾಗದ ಯಾವ ದೇವಾಲಯಗಳಲ್ಲೂ ಕಾಣಬರುವುದಿಲ್ಲ. ಈ ಮೇಲಿನ ಮಂಟಪಗಳು ಅಲಂಕೃತ ಸ್ತಂಭಗಳು, ವಿತಾನ(ಒಳ ಭಾವಣಿ), ದ್ವಾರ, ತೋರಣ ಮತ್ತು ಸೋಪಾನಗಳಿಂದ ಕೂಡಿರುತ್ತವೆ.

**ಕಂಭ (ಸ್ತಂಭ)** : ಕಂಭದಲ್ಲಿ ಪೀಠ, ಪಾದ, ದಂಡ, ದಂಡಾಗ್ರ, (ಕಲಶ, ತಾಟಿಕಾ, ಘಟ, ಮಂಡಿ, ಫಲಕ), ವೀರಕಂಠ, ಬೋದಿಗೆ– ಈ ಭಾಗಗಳಿದ್ದು, ಇವುಗಳಲ್ಲೂ ಉಪವಿಧಗಳಿವೆ. ಅಲ್ಲದೆ, ರುಚಕ ಕಂಭ, ಪಾಲಿಕಾ ಕಂಭ, ಶ್ರೀಕಾರ ಕಂಭ, ಸಂಯೋಗಸ್ತಂಭ, ಕೋಷ್ಠಸ್ತಂಭ, ಪದ್ಮಕಾಂತ, ಚತುರಶ್ರ, ನಕ್ಷತ್ರಾಕಾರದ, ವೃತ್ತಾಕಾರದ ಕಂಭಗಳನ್ನು ಕಾಣಬಹುದು. ತೇರದಾಳ ಪರಿಸರದ ಬಹುತೇಕ ದೇವಾಲಯಗಳಲ್ಲಿ ಮಿಶ್ರಕಂಭ, ಶ್ರೀಕಾರ ಕಂಭ, ಚಿತ್ರಖಂಡ ಹಾಗು ಪದ್ಮಕಾಂತ ಕಂಭಗಳಿವೆ. ತೇರದಾಳ, ಜಮಖಂಡಿ ಮೊದಲಾದ ಕಡೆ ಕಲ್ಯಾಣಿ ಚಾಳುಕ್ಯ ಕಾಲದ ದೇವಾಲಯಗಳಲ್ಲಿ ಹೆಚ್ಚಾಗಿ ಶ್ರೀಕಾರ ಕಂಭ (ತಿರುಗುಣಿ ಯಂತ್ರದಿಂದ ತಿರುಗಿಸಲ್ಪಟ್ಟ ಕಂಭಗಳು) ಕಂಡು ಬಂದರೆ, ವಿಜಯನಗರ ಮತ್ತು ವಿಜಯನಗರೋತ್ತರ ಕಾಲಕ್ಕೆ ಸೇರಿದ ಹನಗಂಡಿ, ಜಗದಾಳ, ಮುಗಳಖೋಡ, ಹಾರೂಗೇರಿ ಮೊದಲಾದ ದೇವಾಲಯಗಳಲ್ಲಿ ಚಿತ್ರಖಂಡ ಹಾಗೂ ಪದ್ಮಕಾಂತ ಸ್ತಂಭಗಳನ್ನು ಕಾಣಬಹುದು[೨೦].

**ಮುಚ್ಚಿಗೆ (ವಿತಾನ)** : ಮುಚ್ಚಿಗೆಯು ಬೇರೆ ಬೇರೆ ಆಕಾರಗಳಿದ್ದು, ಇದರಲ್ಲಿ ಅಷ್ಟದಿಕ್ಪಾಲಕರು, ಮತ್ತಿತರ ಶಿಲ್ಪಗಳು, ಪದ್ಮ ಮಂಡಲ ಮುಂತಾದವುಗಳನ್ನು ಕೆತ್ತಲಾಗಿರುತ್ತದೆ. ಗರ್ಭಗುಡಿ, ಅಂತರಾಳ, ನವರಂಗದ ಮೇಲ್ಕಟ್ಟಿಗೆಗೆ ಎ, ಗೆಂ ಅಣ್ಣೊಗೆರೆಯವರು 'ಛತ್ತು' ಎಂದು ಕರೆದಿರುತ್ತಾರೆ. ಕೆಲವು ಲಾಕ್ಷಣಿಕರು ಈ ಭಾಗವನ್ನು 'ವಿತಾನ'ವೆಂದು ಕರೆದಿರುತ್ತಾರೆ. ನಾನು ಇದೇ ಭಾಗವನ್ನು 'ಮುಚ್ಚಿಗೆ' ಎಂದು ಕರೆದಿರುತ್ತೇನೆ. ತೇರದಾಳ ಪರಿಸರದ ದೇವಾಲಯಗಳ ಗರ್ಭಗುಡಿ. ಅಂತರಾಳ, ನವರಂಗ, ಮುಖಮಂಟಪದಲ್ಲಿನ ಮುಚ್ಚಿಗೆಯನ್ನು ಅರಳಿದ ತಾವರೆಯಂತೆ ಅಲಂಕರಿಸಿರುವುದನ್ನು ಕಾಣಬಹುದು. ಹಾಗೂ ಅರಳಿದ ತಾವರೆಯಿಂದ ಇಳಿಬಿದ್ದ ಮೊಗ್ಗಿನ ರೀತಿಯ ಅಲಂಕಾರವನ್ನು (ಪದ್ಮ ಶಿಲಾ) ಇಲ್ಲಿನ ಮುಖ ಮಂಟಪದ ಮುಚ್ಚಿಗೆಯಲ್ಲಿ ನಾವೀಗ ಕಾಣಬಹುದು. ಇದಕ್ಕೆ ಭಿನ್ನವಾಗಿ ದಿಕ್ಪಾಲಕರನ್ನು ಇಲ್ಲವೇ ಕೇವಲ ಅಷ್ಟ ದಿಕ್ಪಾಲಕರನ್ನಷ್ಟೇ ಸ್ಥಾನಿಕರಾಗಿರುವಂತೆ ಕೆತ್ತಿ, ಅವರ ಮಧ್ಯದಲ್ಲಿ ತಾಂಡವೇಶ್ವರ ಇಲ್ಲವೇ ಗಜಸಂಹಾರ ಮೂರ್ತಿಯನ್ನು ಕೆತ್ತಿರುವುದನ್ನು ನೋಡಬಹುದು.

**ದ್ವಾರ :** ದ್ವಾರವು ಲಲಾಟ, ಉತ್ತರಾಂಗ, ದ್ವಾರಶಾಖಾ, ಪೇದ್ಯಾಪಿಂಡ, ಉದುಂಬರ ಮತ್ತು ಚಂದ್ರಶಿಲಾಗಳಿಂದ ಕೂಡಿದ್ದು, ದ್ವಾರಶಾಖೆಯಲ್ಲಿ ವಿವಿಧ ಅಲಂಕರಣಗಳಿರುತ್ತವೆ. ಅಂತೆಯೇ, ತೋರಣದಲ್ಲೂ ಪತ್ರ, ಮಕರ, ಚಿತ್ರ ಎಂಬ ವಿವಿಧ ಅಲಂಕರಣ ರೀತಿಗಳನ್ನು ಗುರುತಿಸಿಬಹುದು. ದೇವಾಲಯದ ಅವಶ್ಯಕಾಂಗಗಳಲ್ಲಿ 'ದ್ವಾರ' (ಬಾಗಿಲು)ವು ಒಂದಾಗಿದ್ದು, ಗರ್ಭಗೃಹ, ನವರಂಗ ಇತ್ಯಾದಿಗಳು ದ್ವಾರಯುಕ್ತವಾಗಿರುತ್ತದೆ. ದ್ವಾರದ ಹೊಸ್ತಲಿಗೂ 'ಉದುಂಬರ' ಎನ್ನಲಾಗಿದೆ. ಈ ಭಾಗದಲ್ಲಿ ಸಾಮಾನ್ಯವಾಗಿ ಪದ್ಮಾಲಂಕಾವಾಗಿರತ್ತದೆ. ದ್ವಾರದ ಹೊಸ್ತಲಿಗೂ ಅಂದರೆ ಕೆಳಗೆ ಅಂದರೆ ನೆಲದ ಮೇಲೆ ಎದ್ದು ಕಾಣುವಂತಹ ಚಂದ್ರಾಕಾರದಂತಹ ರಚನೆಯನ್ನು 'ಚಂದ್ರಶಿಲಾ' ಎಂದು ಕರೆಯಲಾಗುತ್ತದೆ. ಆದರೆ ಇಲ್ಲಿನ ದೇವಾಲಯಗಳಲ್ಲಿ ಉದುಂಬರವೇ ಹೆಚ್ಚಾಗಿ ಕಂಡುಬರುತ್ತದೆ. ದ್ವಾರದ ಕೆಳಭಾಗದಲ್ಲಿ ದ್ವಾರ ಪಾಲಕರಿರುವುದು ಸಾಮಾನ್ಯ. ಇದನ್ನು ನಾನು 'ಪೇದ್ಯಾ' ಭಾಗವೆಂದು ಕರೆದಿದ್ದೇನೆ. ಇಲ್ಲಿನ ದೇವಾಲಯಗಳ ಪೇದ್ಯಾ ಭಾಗದಲ್ಲಿ ದ್ವಾರಪಾಲಕ ಶಿಲ್ಪಗಳು ಆಯಾಪಂಥಗಳಿಗೆ ಅನುಗುಣವಾಗಿ ಕಂಡುಬರುತ್ತವೆ. ಆದರೆ ಇಲ್ಲಿನ ಕೆಲವು ದೇವಾಲಯಗಳ ದ್ವಾರದ ಬಲಬದಿಯಲ್ಲಿ ಶೈವದ್ವಾರ ಪಾಲಕರು, ಎಡಬದಿಯಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಈ ದ್ವಾರಪಾಲಕರ ಜೊತೆಯಲ್ಲಿ ಗಂಗೆ, ಯಮುನೆಯರ ಶಿಲ್ಪಗಳನ್ನು ಕೆತ್ತಿರುವುದನ್ನು ತೇರದಾಳದ ಕಲ್ಮೇಶ್ವರ, ಈಶ್ವರ ದೇವಾಲಯಗಳಲ್ಲಿ ನೋಡಬಹುದು. ಆದರೆ ಇನ್ನು ಕೆಲವು ದೇವಾಲಯಗಳಲ್ಲಿ ಶಂಖ ಹಾಗು ಪದ್ಮ ನಿಧಿಗಳ ಅಲಂಕಾರ ಇಲ್ಲವೇ ಪುಷ್ಪ, ಫಲಗಳನ್ನು ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ. ಪೇದ್ಯಾಭಾಗವು ಅಲಂಕೃತವಾಗಿಲ್ಲದಿದ್ದಾಗ ಅದನ್ನು 'ಪೇದ್ಯಾಪಿಂಡ'ವೆಂದು ಕರೆಯಲಾಗುತ್ತದೆ. ಪೇದ್ಯಾಭಾಗದ ಮೇಲಿನ ದ್ವಾರವು ವಿವಿಧ ಶಾಖೆಗಳಿಂದ ಕೂಡಿದ್ದು, ಅಲಂಕೃತವಾಗಿರುತ್ತದೆ. ಅವುಗಳಲ್ಲಿ ರತ್ನ, ಪುಷ್ಪ, ವಲ್ಲಿ, ಸ್ತಂಭ, ನಾಗ, ವಿದ್ಯಾಧರ, ಮಿಥುನ, ವ್ಯಾಳ, ಶಾಖೆಗಳಿಂದ ಕೂಡಿರುತ್ತದೆ. ತೇರದಾಳದ ಗೊಂಕ ಜಿನಾಲಯ ಮತ್ತು ಕಲ್ಮೇಶ್ವರ ದೇವಾಲಯದ ನವರಂಗದ ಪ್ರವೇಶ ದ್ವಾರವು ಏಳು ಶಾಖೆಗಳಿಂದ ಕೂಡಿದ್ದರೆ, ಅದೇ ದೇವಾಲಯದ ಪೂರ್ವದ್ವಾರವು ಒಂಭತ್ತು ಶಾಖೆಗಳಿಂದ ಕೂಡಿದೆ. ಈ ಶಾಖೆಗಳ ಎರಡು ಬದಿಗೆ ಜಾಲಂಧ್ರಗಳನ್ನು ಅಳವಡಿಸಿರುವುದನ್ನು ತೇರದಾಳದ ಕಲ್ಮೇಶ್ವರ ದೇವಾಲಯದ ಅಂತರಾಳ ದ್ವಾರದ ಎರಡೂ ಬದಿಗೂ ಕಾಣಬಹುದು[೨೧].

ದ್ವಾರ ಬಂಧದ ಮೇಲ್ಭಾಗದಲ್ಲಿನ ಪಟ್ಟಿಕೆಯಂತೆ ಭಾಗವನ್ನು 'ಲಲಾಟ'ಎಂದು ಕರೆಯುತ್ತಾರೆ. ಈ ಭಾಗದಲ್ಲಿ ಗಜಲಕ್ಷ್ಮಿ ಶಿಲ್ಪವಿರುವುನ್ನು ಇಲ್ಲಿನ ದೇವಾಲಯಗಳಲ್ಲಿ ಕಾಣಬಹುದು. ಆದರೆ ಉಳಿದ ಕೆಲವೆಡೆ ಲಲಾಟದಲ್ಲಿ ಪದ್ಮಾಸನದಲ್ಲಿ ಕುಳಿತ ಲಕ್ಷ್ಮಿ ಇಲ್ಲವೇ ಗಣಪತಿಯ ಶಿಲ್ಪವನ್ನು ಕೆತ್ತಲಾಗಿದೆ. ಜೈನ ಬಸದಿಗಳಾದಲ್ಲಿ ಜಿನ ತೀರ್ಥಂಕರರ ವಿಗ್ರಹಗಳನ್ನು ಈ ಭಾಗದಲ್ಲಿ ಕೆತ್ತಲಾಗಿರುತ್ತದೆ. ತೇರದಾಳದ ಗೊಂಕ ಜಿನಾಲಯದಲ್ಲಿ ತೀರ್ಥಂಕರನ್ನು ಕೆತ್ತಲಾಗಿದೆ[೨೨].

ಲಲಾಟದ ಮೇಲಿನ ಭಾಗಕ್ಕೆ 'ಉತ್ತರಾಂಗ'ವೆಂದು ಕರೆಯಲಾಗುತ್ತದೆ. ಇಲ್ಲಿನ ಉತ್ತರಾಂಗ ಭಾಗದಲ್ಲಿ ಮಕರ ತೋರಣದ ಕೆಳಗೆ ಪತ್ನಿ ಮತ್ತು ವಾಹನ ಸಮೇತರಾಗಿರುವ ತ್ರಿಮೂರ್ತಿಗಳನ್ನು ಇಲ್ಲವೇ ನಾಟ್ಯ ಶಿವ (ನಟರಾಜ)ನನ್ನು ಕೆತ್ತಲಾಗಿರುತ್ತದೆ.

**ಸೋಪಾನ :** ಎತ್ತರವಾದ ದೇವಾಲಯಗಳನ್ನು ಹತ್ತಿಹೋಗಲು ಇರುವ ಮೆಟ್ಟಿಲುಗಳನ್ನು ಸೋಪಾನಗಳೆಂದು ಕರೆಯಲಾಗುತ್ತದೆ. 'ಸೋಪಾನ'ಗಳೂ ವಾಸ್ತು ದೃಷ್ಟಿಯಿಂದ ಗಮನಾರ್ಹವಾಗಿದ್ದು, ಇವುಗಳಲ್ಲಿ ಅಶ್ವಪಾದ, ಫಲಕ, ಹಸ್ತಿಹಸ್ತ, ಪಕ್ಷಶಿಲಾ ಮುಂತಾದ

ಅಂಗಗಳು ಇರುತ್ತವೆ. ಇದರಲ್ಲಿ ವಲ್ಲಿ ಮಂಡಲ, ಶಂಖ ಮಂಡಲ, ತ್ರಿಖಂಡಾಕಾರ ಮುಂತಾದ ವಿಧಗಳೂ ಇವೆ. ಈ ಎಲ್ಲ ಭಾಗಗಳೂ ಶಿಲ್ಪಿಯ ಕೈಚಳಕದಿಂದ ದೇವಾಲಯದಲ್ಲಿ ಆಕರ್ಷಣೀಯ ಭಾಗವಾಗಿ ಪರಿಣಮಿಸುತ್ತದೆ ಎಂದು ಹೇಳಬಹುದು. ಉದಾಃ ದೀಪಸ್ತಂಭ, ಮಾನಸ್ತಂಭ,

**ಗರುಡಗಂಭ** : ದೇವಾಲಯದ ಮುಂಭಾಗದಲ್ಲಿ ಹೊರಗಡೆ ಸಾಮಾನ್ಯವಾಗಿ ಬಲಿಪೀಠ, ದೀಪಸ್ತಂಭ, ಗರುಡ ಸ್ತಂಭ, ಧ್ವಜಸ್ತಂಭ, ಮಾನಸ್ತಂಭ ಮುಂತಾದ ಸ್ತಂಭಗಳೂ ಇರುತ್ತವೆ. ಆದರೆ ತೇರದಾಳ ಪರಿಸರದ ದೇವಾಲಯಗಳ ಮುಂಭಾಗದಲ್ಲಿ ದೀಪಸ್ತಂಭ, ಗರುಡ ಗಂಭಗಳಿದ್ದು, ಬಸದಿಗಳ ಮುಂಭಾಗದಲ್ಲಿ ಮಾನಸ್ತಂಭಗಳು ಕಂಡುಬರುತ್ತವೆ. ತೇರದಾಳದ ಗೊಂಕ ಜಿನಾಲಯದ ಮುಂಭಾಗಕ್ಕೆ ಮಾನಸ್ತಂಭವಿದೆ, ಹಾಗೂ ತೇರದಾಳ ಪರಿಸರದಲ್ಲಿ ಕಂಡು ಬರುವ ಎಲ್ಲಾ ಜೈನ ಬಸದಿಗಳ ಮುಂದೆ ಮಾನಸ್ತಂಭವಿದೆ.

**ಪರಿವಾರಾಲಯ, ಪ್ರಕಾರ, ಮಹಾದ್ವಾರ** : ದೇವಾಲಯಗಳ ಸುತ್ತ ಪರಿವಾರಾಲಯಗಳಿದ್ದು, ಇವುಗಳನ್ನು ಒಳಗೊಂಡಂತೆ ಸುತ್ತಲೂ ಪ್ರಾಕಾರವು ಇರುತ್ತದೆ. ಪ್ರಕಾರದ ಒಳಭಾಗದಲ್ಲಿ ಸುತ್ತ 'ಆವೃತ್ತ ಮಂಟಪ' ವೂ ಮುಂಭಾಗದಲ್ಲಿ 'ಪ್ರತೋಲಿ'ಯೂ ಇರುತ್ತದೆ. ಪ್ರಕಾರದ ಮಧ್ಯೆ ದ್ವಾರವಿದ್ದು (ಮಹಾದ್ವಾರ) ಅದರ ಮೇಲೆ ಗೋಪುರವಿರುತ್ತದೆ. ಇವುಗಳಲ್ಲಿ ವಿವಿಧ ತಲಗಳಿದ್ದು, ಅವು ವಿವಿಧ ಅಲಂಕರಣಗಳಿಂದ ಕೂಡಿರುತ್ತವೆ.

ದೇವಾಲಯಗಳ ಈ ಎಲ್ಲಾ ಅಂಗಗಳು ಕಾಲ ಕ್ರಮೇಣ ನಿರ್ಮಾಣವಾಗಿರುವ ಭಾಗಗಳಾಗಿರುವುದಲ್ಲದೇ, ನಿರ್ಮಾಪಕನ ಶಕ್ತಿ ಮತ್ತು ಅವಶ್ಯಕತೆಗೆ ತಕ್ಕಂತೆ ನಿರ್ಮಾಣವಾಗಿರುತ್ತದೆ. ದೇವಾಲಯದಲ್ಲಿ ಅವಶ್ಯಕತೆಗಾಗಿ ಇರುವ ಬಹುಪಾಲು ಅಂಗಗಳು ಅಲಂಕಾರದ ಭಾಗಗಳಾಗಿ ಪರಿಣಮಿಸಿದುದರಿಂದ ವೈವಿಧ್ಯಮಯ ರಚನೆಗಳುಂಟಾಗಲು ಕಾರಣವಾಯಿತು. ತೇರದಾಳ ಪರಿಸರದ ಕೆಲವು ದೇವಾಲಯಗಳಲ್ಲಿ ಗರ್ಭಗುಡಿ ಹಾಗೂ ಕೆಲವು ಪ್ರಮುಖ ಭಾಗಗಳು ಮಾತ್ರ ಕಾಣಬರುತ್ತವೆ. ಕ್ರಿ.ಶ.೯-೧೦ನೇ ಶತಮಾದಲ್ಲಂತೂ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಹೊಸ ಅಧ್ಯಾಯವೇ ಪ್ರಾರಂಭವಾಯಿತ್ತೆಂದು ಹೇಳಬಹುದು. ಈ ಮೇಲಿನ ಕ್ರಮದಲ್ಲಿಯೇ ದೇವಾಲಯಗಳ ಬೆಳವಣಿಗೆ ತೇರದಾಳ ಮತ್ತು ಅದರ ಸುತ್ತಲಿನ ಪರಿಸರದಲ್ಲಿ ಆಗಿರುವುದನ್ನು ಸಹ ನಾವು ಗುರುತಿಸಬಹುದಾಗಿದೆ.

### ೧. ತೇರದಾಳದ ಧಾರ್ಮಿಕ ಸ್ಮಾರಕಗಳು

ತೇರದಾಳವು ಪುರಾತನ ಗ್ರಾಮವೆಂದು ಪ್ರಸಿದ್ಧಿ ಪಡೆದಿದೆ. ಇಲ್ಲಿ ಅನೇಕ ರಾಜಮನೆತನಗಳು ಆಳಿ ಅನೇಕ ದೇವಾಲಯಗಳನ್ನು, ಬಸದಿಗಳನ್ನು ನಿರ್ಮಿಸಿದ್ದಾರೆ. ಈ ಗ್ರಾಮವು ವಿಶಾಲವಾಗಿದ್ದು, ಊರಿನ ಸುತ್ತಲೂ ಮುಸಲ್ಮಾನ ಮತ್ತು ಮರಾಠ ಕಾಲದಲ್ಲಿ ನಿರ್ಮಿಸಲ್ಪಟ್ಟ ಕಂದಕದಿಂದ ಆವರಿಸಲ್ಪಟ್ಟಿದೆ. ಇಲ್ಲಿ ಒಂದು ಪಾಳು ಬಿದ್ದ ಕಲ್ಲಿನ ಕೋಟೆ ಇದೆ. ಇಲ್ಲಿ ಅಲ್ಲಮಪ್ರಭು ಸ್ವಾಮಿ ಹಾಗೂ ನೇಮಿನಾಥ ಜೈನ ಬಸದಿಗಳಿವೆ. ಅಲ್ಲದೇ ಈ ಗ್ರಾಮದ ಉತ್ತರದಂಚಿಗೆ ಸುಡಗಾಡ ಲಕ್ಷ್ಮೀ, ರೇಣುಕಾ, ಹನುಮಂತ ದೇವಸ್ಥಾನಗಳಿವೆ. ಒಟ್ಟು ೪೨ ಗುಡಿಗಳು, ೧೮ ಮಸೀದಿಗಳಿವೆ. ೫ ಜೈನ ಬಸದಿಗಳಿವೆ. ಅಲ್ಲದೇ ದರ್ಗಾ ಊರಿನ ಆಗ್ನೇಯಕ್ಕಿದ್ದು, ಇಲ್ಲಿ ಅನೇಕ ಶಾಸನಗಳು ಸಹ ದೊರಕಿವೆ[೨೩].

ಈ ಗ್ರಾಮದ ಸಾಗುವಳಿ ಕ್ಷೇತ್ರ ೨೧೧.೭೭ ಎಕರೆ ೨೮ ಗುಂಟೆಯನ್ನು ಹೊಂದಿದೆ. ಅದರ ಪೂರ್ವಕ್ಕೆ ಒಂದು ವಿಶಾಲವಾದ ಅತಿ ಎತ್ತರವಾದ ಒಂದು ಗುಡ್ಡವಿದೆ. ಅಲ್ಲಿ ಪುರಾತನವಾದ ಕೆರೆಗಳಿವೆ. ಈ ಊರಿನ ಪರಿಸರದೊಳಗೆ ಅಧಿಕ ಪ್ರಮಾಣದಲ್ಲಿ ಪತ್ರಿ ಮರಗಳು ಬೆಳೆದಿದ್ದವು ಹಾಗೂ ಪತ್ರಿ ಮರಗಳ ಎಲೆಗಳು ತ್ರಿದಳದಿಂದ ಕೂಡಿದ್ದವು. ಆದರಿಂದಾಗಿ ಈ ಊರನ್ನು ತ್ರಿದಲವೆಂದೂ ಕರೆಯುತ್ತಾ ಬರು ಬರುತ್ತಾ ತ್ರಿದಳ ಹೆಸರಿನಲ್ಲಿ ಬದಲಾವಣೆಯಾಗುತ್ತಾ ತೇರದಾಳ ಎಂಬ ಹೆಸರು ಈ ಊರಿಗೆ ಬಂದಿದೆ ಎಂದು ಸ್ಥಳೀಯರು ಹೇಳುತ್ತಾರೆ. ಇದನ್ನು ಶಾಸನದಲ್ಲಿ "ತೇರಿದಾಳ" ಎಂದು ಉಲ್ಲೇಖಿಸಿದೆ. ಈ ಗ್ರಾಮಕ್ಕೆ ಹನ್ನೆರಡು ಗ್ರಾಮಗಳ ಒಂದು ಕಂಪಣ ಇದ್ದು, ಅದಕ್ಕೊಂದು ಗ್ರಾಮ ಸೇರಿಸಿದರೆ ಒಟ್ಟು ಹದಿಮೂರು ಗ್ರಾಮಗಳಾಗುತ್ತವೆ. ಈ ಗ್ರಾಮ ಸಮೂಹವನ್ನು ಮರಾಠಿಯಲ್ಲಿ 'ತೇರಾ' ಎಂದು, ಅದರ ಪ್ರತೀಕವಾಗಿ ಈ ಊರನ್ನು 'ತೇರದಾಳ' ಎಂದು ಕರೆದಿರುವ ಸಾಧ್ಯತೆಯನ್ನು ಡಾ. ಸಂಗಮೇಶ ಕಲ್ಯಾಣಿ ಅವರು ಗುರುತಿಸಿದ್ದಾರೆ. ಇಲ್ಲಿನ ಬಸದಿಯ ಗೋಡೆಯಲ್ಲಿನ ಒಂದು ಶಾಸನವು ಚಾಲುಕ್ಯರ ಪೇರ್ಮಾಡಿ ಎಂಬ ಅರಸನು ತೇರದಾಳ ಗ್ರಾಮವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸಿದೆ.

ಭಾರತ ಹಾಗೂ ಕರ್ನಾಟಕದಲ್ಲಿಯ ಕಲಾಸಿರಿಯ ಪ್ರತೀಕ ತೇರದಾಳ. ಇದು ತೇರದಾಳ ೧೨ರ ನಾಡಿನ ಪ್ರಮುಖವಾದ ಮಧ್ಯವರ್ತಿ ಸ್ಥಳವಾಗಿತ್ತು. ಇದು ಹಿಂದೆ ಕೆಲವು ಪ್ರಾಚೀನ ದೇವಾಲಯಗಳ ಕೇಂದ್ರ ಸ್ಥಾನವಾಗಿತ್ತು. ಇಂದು ಸಹ ಈ ಪ್ರದೇಶದಲ್ಲಿ ಕೆಲವು ದೇವಾಲಯಗಳು ವಿಶೇಷವಾಗಿದ್ದು, ಆಕರ್ಷಕವಾಗಿ ಉಳಿದಿವೆ. ಇಲ್ಲಿರುವ ಬಸದಿಗಳು ಮತ್ತು ಹಲವು ಶೈವ ದೇವಾಲಯಗಳು ಉತ್ಕೃಷ್ಟವಾದ ಕಲೆಯ ಆಗರಗಳಾಗಿವೆ. ಇವುಗಳು ಅಂದಿನ ಜನರ ವಿಶೇಷವಾದ ಭಕ್ತಿ ನಿಷ್ಠೆಗಳು ಹಾಗೂ ಪ್ರಾಮಾಣಿಕತೆಯ ಸಂಕೇತ ಮಾತ್ರವಾಗಿರದೆ, ಕಲಾವೈಭವ ಮತ್ತು ಕಲಾರಸಿಕತೆಯನ್ನು ಸಾರಿ ಹೇಳುವ ಮೂಕ ಸಾಕ್ಷಿಗಳಾಗಿವೆ. ಕೆಲವು ದೇವಾಲಯಗಳಲ್ಲಂತೂ ದೇಗುಲದ ಪ್ರತಿಯೊಂದು ಭಾಗವು ಶಿಲ್ಪಿಯ ಕೈಚಳಕಕ್ಕೆ ಸಿಲುಕಿ ಕಲಾ ವಿಶಿಷ್ಟವಾದ ಪರಿಣಿತಿಯನ್ನು ಪಡೆದುಕೊಂಡಿವೆ. ಐತಿಹಾಸಿಕ ಪ್ರಾಚೀನ ತೇರದಾಳದ ನೇಮಿನಾಥ ಜಿನಾಲಯ ಮತ್ತು ಕಲ್ಮೇಶ್ವರ ದೇವಾಲಯಗಳು ಕಲ್ಯಾಣ ಚಾಳುಕ್ಯರ ಶೈಲಿಗಳನ್ನು ಹೊಂದಿದ್ದು. ದೇವಾಲಯಗಳನ್ನು ಒರಟಾದ ದೊಡ್ಡ ದೊಡ್ಡದಾದ ಬಂಡೆಗಲ್ಲು ಹಾಗೂ ಒಳಗಿನ ಭಾಗದಲ್ಲಿ ಮೆದುಗಲ್ಲನ್ನು ಇವರು ದೇವಾಲಯಗಳಲ್ಲಿ ಬಳಸಲಾಗಿದೆ. ನೇಮಿನಾಥ ಜಿನಾಲಯವು ಸೂಕ್ಷ್ಮವಾದ ಕೆತ್ತನೆಯ ಕೆಲಸ ಇವರ ದೇವಾಲಯದ ವಿಶಿಷ್ಟವಾದ ಲಕ್ಷಣವಾಗಿದೆ. ತೇರದಾಳದಲ್ಲಿನ ವಿವಿಧ ಧಾರ್ಮಿಕ ಸ್ಮಾರಕ ಅವಶೇಷಗಳ ವೈಶಿಷ್ಟ್ಯಗಳನ್ನು ಮತ್ತು ಇಲ್ಲಿನ ಸ್ಮಾರಕಗಳ ವಾಸ್ತು ಕಲೆಯ ಅಧ್ಯಯನವನ್ನು ಈ ಮುಂದಿನಂತೆ ಮಾಡಲಾಗಿದೆ.

**ನೇಮಿನಾಥ(ಗೊಂಕ) ಜಿನಾಲಯ**

ನೇಮಿನಾಥ ಬಸದಿಯು ತೇರದಾಳ ಪಟ್ಟಣದ ಮಧ್ಯದಲ್ಲಿದೆ. ಬಸ್ ನಿಲ್ದಾಣಕ್ಕೆ ೧/೨ ಕಿಮೀ ದೂರದಲ್ಲಿ ಪಶ್ಚಿಮಕ್ಕೆ ಇರುವ ಈ ನೇಮಿನಾಥ ಜಿನಾಲಯವನ್ನು (ಬಸದಿಯನ್ನು) ಕ್ರಿ.ಶ. ೧೧೨೩ರಲ್ಲಿ ಗೊಂಕರಸನೆಂಬ ಮಾಂಡಳಿಕ ದೊರೆಯು ರಟ್ಟ ವಂಶದ ಕಾರ್ತಿವರ್ಯ ರಾಜನ ಅಪ್ಪಣೆಯಿಂದ ಕಟ್ಟಿಸಿದನು. ಗೊಂಕ ಜಿನಾಲಯವೆಂದೇ ಪ್ರಚಲಿತವಾಗಿರುವ ಈ ಬಸದಿಯು ೭೦ ಅಡಿ ಉದ್ದ, ೪೦ ಅಡಿ ಅಗಲ ಇದ್ದು, ಉತ್ತರಕ್ಕೆ ಮುಖ ಮಾಡಿದೆ.

ಇದನ್ನು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಲಾಗಿದ್ದು, ಇದು ಏಕಕೂಟ ತಲಾ ವಿನ್ಯಾಸವನವನ್ನು ಹೊಂದಿದೆ. ಒಂದೇ ಒಂದು ಸುಂದರವಾದ ಗರ್ಭಗೃಹ, ಆ ಗರ್ಭಗೃಹಕ್ಕೆ ಹೊಂದಿಕೊಂಡಂತೆ 'ಅಂತರಾಳ'. ಅದಕ್ಕೆ ಹೊಂದಿಕೊಂಡಂತೆ ವಿಶಾಲವಾದ ಚತುಸ್ರಾಕಾರದ 'ನವರಂಗ' ಹಾಗೂ ಮುಖ ಮಂಟಪಗಳನ್ನು ಒಳಗೊಂಡಿದೆ. ಕಲ್ಯಾಣಿ ಚಾಳುಕ್ಯರ ವಾಸ್ತುಶಿಲ್ಪ ಶೈಲಿಯ ಲಕ್ಷಣಗಳನ್ನೇ ಹೊಂದಿರುವ ಈ ಜಿನಾಲಯದಲ್ಲಿ ಕದಂಬ ನಾಗರ (ಪಂಸಾನ) ಶೈಲಿಯ ಶಿಖರವಿದೆ. ಇದು ಕಲ್ಯಾಣ ಚಾಳುಕ್ಯರ ಕಾಲದಾಗಿದ್ದು ಇದನ್ನು ೧೧ನೇ ಶತಮಾನದಲ್ಲಿ ನಿರ್ಮಿಸಿದ್ದಾರೆ[೨೪].

ನೇಮಿನಾಥ ಜಿನಾಲಯದ ಒಂದು ವಿಶಿಷ್ಟ ಲಕ್ಷಣವೆಂದರೆ ಅಲ್ಲಿರುವ ಜಗತಿ. ದೇವಾಲಯದ ಹೊರಗೋಡೆ ನೋಡಿದರೆ ಹೊಯ್ಸಳ ದೇವಾಲಯಗಳಲ್ಲಿ ಕಾಣುವಂತೆ ಜಿನಾಲಯದ ಹೊರ ಪ್ರದಕ್ಷಿಣೆಯನ್ನು ಹಾಕಲು ೩ ಅಡಿ ಎತ್ತರವಾಗಿ ನಿರ್ಮಿಸಿದ ಅಚ್ಚುಕಟ್ಟಾಗಿ ಕಲ್ಲುಗಳಿಂದ ಜೋಡಿಸಿದ ಜಗತಿಯನ್ನು ನಾವು ಕಾಣಬಹುದು. ಇದು ಜಿನಾಲಯದ ಅಲಂಕರಣೆಯನ್ನು ಹೆಚ್ಚಿಸುವಲ್ಲಿ ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸಿದೆ. ಇದರ ಮೇಲೆ ಜಿನಾಲಯದ ಅದಿಷ್ಠಾನ ಭಾಗವನ್ನು ಕಾಣಬಹುದು. ಇದರಲ್ಲಿ ಉಪಾನ, ಪಟ್ಟಿ, ಕಪೋತಗಳ ಮತ್ತು ದಂತಾಕೃತಿಯ ರಚನೆಯನ್ನೊಳಗೊಂಡಿರುವ ಪಟ್ಟಿಯನ್ನು ಹಾಗೂ ಕಪೋತ ಭಾಗವನ್ನು ಕಾಣಬಹುದು.

ಈ ಜಿನಾಲಯದ ಹೊರ ಗೋಡೆಯ ಅಲಂಕೃತವಾಗಿದ್ದು ಅನೇಕ ಹಿಂಬಣಿ ಮತ್ತು ಮುಂಬಣಿಗಳಿಂದ ಕೂಡಿದೆ. ಆದರೆ ಇಂದು ನೋಡಲಾಗಿ ಕೇವಲ ಗರ್ಭಗೃಹ ಹಾಗೂ ಅಂತರಾಳದ ಹೊರಗೋಡೆಯ ಮೂಲ ರೂಪದಲ್ಲಿದ್ದು, ನವರಂಗದ ಹೊರಗೋಡೆಯು ಪುನರ್ ರಚನೆಗೊಂಡಿದೆ. ಗರ್ಭಗೃಹದ ಹೊರಗೋಡೆಯ ಪೂರ್ವ, ಪಶ್ಚಿಮ, ದಕ್ಷಿಣ ಮೂರು ಬದಿಗಳಲ್ಲಿ ಮೂರು ಚಿಕ್ಕದಾದ ಸುಂದರವಾದ ದೇವ ಕೋಷ್ಠಗಳನ್ನು ಮಾಡಿದ್ದಾರೆ. ಇವುಗಳ ಮೇಲೆ ಅರ್ಧಕಂಬ, ಲತಾಬಳ್ಳಿಯ ಪಟ್ಟಿಗಳನ್ನು ಹಾಗೂ ಮೇಲೆ ದ್ರಾವಿಡ ಶಿಖರದ ಚಿತ್ರಣವನ್ನೊಳಗೊಂಡು ಸುಂದರವಾದ ಅಲಂಕಾರಗಳಿವೆ. ಒಟ್ಟಿನಲ್ಲಿ ಈ ಜಿನಾಲಯದ ಹೊರ ಗೋಡೆಗಳ ಭಾಗ ಕಲ್ಯಾಣಿ ಚಾಲುಕ್ಯರ ಕಾಲದ ಲಕ್ಷಣಗಳನ್ನೊಳಗೊಂಡಿದೆ ಎಂದು ಹೇಳಬಹುದು.

ಇದರ ಗರ್ಭಗೃಹವು ಚತುಸ್ರಾಕಾರವಾಗಿದ್ದು ಇದರಲ್ಲಿ ನಾಲ್ಕು ಅರ್ಧಕಂಬ ಹಾಗೂ ಕಮಲದ ಕೆತ್ತನೆಯುಳ್ಳ ಭುವನೇಶ್ವರಿಯನ್ನು ಹೊಂದಿದೆ. ಜೊತೆಗೆ ಪೀಠದ ಮೇಲೆ ಪದ್ಮಾಸನದಲ್ಲಿ ಸ್ಥಾನಿಕನಾಗಿರುವ ನೇಮಿನಾಥನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಇದು ೯.೩ X ೯.೬ ಸೆಂ.ಮೀ. ಉದ್ದ ಅಗಲವನ್ನು ಹೊಂದಿದೆ. ಗರ್ಭಗೃಹದ ದ್ವಾರ ಬಾಗಿಲು ಅಲಂಕೃತವಾಗಿದೆ ಹಾಗೂ ಲಲಾಟ ಬಿಂಬವು ಶಿಖರಗಳ ಕೆತ್ತನೆ ಹಾಗೂ ಸುರಳಿಯಾಕಾರದ ಶಿಲ್ಪವನ್ನು ಇದು ಒಳಗೊಂಡಿದೆ. ಇದರ ದ್ವಾರದ ಚೌಕಟ್ಟು ಅಲಂಕೃತವಾಗಿದ್ದು. ಮೂರು ಪಟ್ಟಿಕೆಗಳಿಂದ ಕೂಡಿದೆ. ಈ ಪಟ್ಟಿಕೆಗಳು ಲತಾಸುರಳಿ ಹಾಗೂ ಅರ್ಧಗಂಭಗಳ ಕೆತ್ತನೆಯನ್ನು ಒಳಗೊಂಡಿದೆ. ಇದರ ಗರ್ಭಗೃಹಕ್ಕೆ ಹೊಂದಿಕೊಂಡಿರುವ ಅದರ ಮುಂದಿನ ಭಾಗವನ್ನು ಸುಖನಾಸಿ ಅಥವಾ ಅಂತರಾಳ ಎನ್ನುವರು. ಇದು ಕೂಡಾ ಗರ್ಭಗೃಹದ ಆಕಾರದಲ್ಲಿಯೇ ಕಟ್ಟಲ್ಪಟ್ಟಿದ್ದು ಇದು ಸಹ ನಾಲ್ಕು ಅರ್ಧಗಂಭಗಳನ್ನು ಒಳಗೊಂಡಿದೆ. ಸುಖನಾಸಿಯ ದ್ವಾರವು ಸರಳವಾಗಿದ್ದು ಲಲಾಟ ಬಿಂಬದ ಮೇಲ್ಗಡೆ ಹಾಗೂ ಈ ದ್ವಾರದ ಬಲಕ್ಕೆ ಮತ್ತು ಎಡಕ್ಕೆ

ಎರಡೂ ಬದಿಯಲ್ಲಿ ಜಾಲೇಂದ್ರಿಗಳನ್ನು ನೋಡಬಹುದು. ಲಲಾಟ ಬಿಂಬದ ಮೇಲ್ಗಡೆ ೧೨ ಚಿಕ್ಕ ಜಾಲೇಂದ್ರಿಗಳು ದ್ವಾರದ ಬಲಕ್ಕೆ ೧೪ ಹಾಗೂ ಎಡಕ್ಕೆ ೧೪ ಚಿಕ್ಕ ಜಾಲೇಂದ್ರಿಗಳಿರುವುದನ್ನು ಕಾಣಬಹುದು.

ಸುಖನಾಸಿಯ ಭಾಗಕ್ಕೆ ಹೊಂದಿಕೊಂಡಿರುವ ಅದರ ಮುಂದಿನ ಭಾಗವೇ ನವರಂಗ. ಈ ನವರಂಗವು ಚತುಸ್ರಾಕಾರವಾಗಿದ್ದು, ನಾಲ್ಕು ಪೂರ್ಣಗಂಭಗಳನ್ನು ಮತ್ತು ಹನ್ನೆರಡು ಅರ್ಧಗಂಭಗಳನ್ನು ಇವುಗಳ ಸಂಪೂರ್ಣವಾಗಿ ನವರಂಗ ಮಂಟಪದ ಭಾರವನ್ನು ಹೊತ್ತಿರುವಂತೆ ತೋರುತ್ತದೆ. ನಾಲ್ಕು ಕಂಬಗಳು ಕೆಳಭಾಗವು ಚೌಕಕಾರದ್ದು ಮತ್ತು ಗೋಲಾದ ಬೋಧಿಗೆಯನ್ನು ಹೊಂದಿವೆ. ಇವು ಸಂಪೂರ್ಣವಾಗಿ ಕಲ್ಯಾಣ ಚಾಳುಕ್ಯರ ವಾಸ್ತುಶಿಲ್ಪದ ಲಕ್ಷಣಗಳನ್ನೊಳಗೊಂಡು ನಿರ್ಮಿತವಾದಂತವುಗಳಾಗಿವೆ. ಈ ಕಂಬಗಳ ಕೆಳಗಡೆಗೆ ಅಧಿಷ್ಠಾನ ಭಾಗವನ್ನು ಹೊಂದಿದ್ದು, ಉಪಾನ, ಕುಮುದ, ಕಪೋತ ಪಟ್ಟಿಯನ್ನು ಈ ಕಂಬಗಳ ಮೇಲೆ ನೋಡಬಹುದು. ಈ ಕಂಬಗಳ ಅಧಿಷ್ಠಾನ ಭಾಗದ ಮೇಲೆ ಚೌಕಕಾರದ ಭಾಗವನ್ನು ಅದರ ಮೇಲೆ ಬಹುಭುಜಾಕೃತಿಯ ಹಲವಾರು ಪಟ್ಟಿಕೆಗಳನ್ನು, ಹೂವಿನ ಚಿತ್ರತಳವನ್ನು ಒಳಗೊಂಡಿರುವ ಪಟ್ಟಿಕೆಗಳನ್ನು ನೋಡಬಹುದು. ಅದರ ಮೇಲೆ ಚೌಕಕಾರದ ಪಟ್ಟಿಯ ಮೇಲೆ ಬಹುಭುಜಾಕಾರದ ಪಟ್ಟಿ ಕಮಲದ ಎಸಳದ ಪಟ್ಟಿ, ಗಂಟೆಯಾಕಾರದ ಪಟ್ಟಿ ಹೀಗೆ ಹಲವಾರು ರೀತಿಯ ಪಟ್ಟಿಕೆಗಳನ್ನು ನೋಡಬಹುದು. ಅದರ ಮೇಲೆ ಚೌಕಕಾರದ ಪಟ್ಟಿ ಇದ್ದು ಮೇಲೆ ಸರಳವಾಗಿರುವ ತರಂಗ ಬೋಧಿಗೆಯನ್ನು ಕಾಣಬಹುದು. ಆದರೆ ಇದೇ ನವರಂಗದಲ್ಲಿರುವ ಹನ್ನೆರಡು ಅರ್ಧಗಂಬಗಳು ಬೇರೆ ರೀತಿಯಾದಂತ ಅಲಂಕೃತಗೊಂಡಿದೆ. ಇವು ನಡುವಿರುವ ಕಂಬಗಳಿಂದ ಪೂರ್ಣ ವ್ಯತ್ಯಾಸವಾಗಿದ್ದು ಸಣ್ಣಸಣ್ಣ ಪಟ್ಟಿಕೆಗಳ ಕೆತ್ತನೆಯನ್ನು ಈ ಕಂಬಗಳಲ್ಲಿ ನೋಡಬಹುದು.

ನವರಂಗದ ಬಲಕ್ಕೆ ಅತೀ ಸುಂದರವಾಗಿ ಪದ್ಮಾವತಿ ಹಾಗೂ ಎಡಕ್ಕೆ ಕುಷ್ಮಾಂಡಿನಿ ಎಂಬ ಯಕ್ಷಣಿಯರನ್ನು ಕೆತ್ತಲ್ಪಟ್ಟ ವಿಗ್ರಹಗಳನ್ನು ಕಾಣಬಹುದು. ನವರಂಗದ ಮೇಲ್ಭಾಗದಲ್ಲಿ ಹೂವು ಮತ್ತು ವಜ್ರಾಕೃತಿಯ ಅಲಂಕರಣೆಯನ್ನು ಕಾಣಬಹುದು ಎರಡು ಕಂಬದ ಕೆಳಗೆ ಖಡ್ಗಾಸನದಲ್ಲಿರುವ ತೀರ್ಥಂಕರರ ಮೂರ್ತಿಗಳನ್ನು ಕಾಣಬಹುದು. ಇವುಗಳನ್ನು ಶಕವರ್ಷ ೧೬೮೦ರಲ್ಲಿ (ವಿಭವ ಮಾರ್ಗಶಿರ ಶು. ದಶಮಿ ಎಂದಿದ್ದು ಇದು ಕ್ರಿ.ಶ.೧೮-೧೧-೧೮೪೮ಕ್ಕೆ ಸರಿಹೊಂದುತ್ತದೆ). ತೇರದಾಳದ ದೇಸಾಯಿ ಸತ್ಯವ್ವ ಮತ್ತು ಆಕೆಯ ಮಗನಾದ ಜಕ್ಕಪ್ಪ ಸೇರಿ ಗೊಂಕ ಜಿನಾಲಯದಲ್ಲಿ ನೇಮಿನಾಥಸ್ವಾಮಿ ತೀರ್ಥಂಕರನ ಖಡ್ಗಾಸನದಲ್ಲಿರುವ ತೀರ್ಥಂಕರರ ಮೂರ್ತಿಗಳನ್ನು ಪ್ರತಿಷ್ಠೆ ಮಾಡಿಸಿದುದ್ದನ್ನು ಇಲ್ಲಿಯೇ ಇರುವ ಶಾಸನ ಉಲ್ಲೇಖಿಸುತ್ತದೆ. ನವರಂಗದ ಬಾಗಿಲು ಬೃಹದಾಕಾರವಾಗಿದ್ದು ಸಂಪೂರ್ಣವಾಗಿ ಅಲಂಕೃತಗೊಂಡಿದೆ. ಲಲಾಟ ಬಿಂಬವು ಅಲಂಕೃತವಾಗಿದ್ದು ಶಿಖರ ಹಾಗೂ ಕಂಬಗಳ ಕೆತ್ತನೆಯನ್ನು ಒಳಗೊಂಡಿದೆ. ಜೊತೆಗೆ ಲಲಾಟ ಬಿಂಬದ ಮಧ್ಯದಲ್ಲಿ ನೇಮಿನಾಥ ವಿಗ್ರಹದ ಕೆತ್ತನೆಯನ್ನು ಕಾಣಬಹುದು. ಈ ದ್ವಾರದ ಚೌಕಟ್ಟುಗಳು ಅಲಂಕೃತವಾಗಿದ್ದು, ಹಲವಾರು ಪಟ್ಟಿಕೆಗಳಿಂದ ಕೂಡಿದೆ. ಇಂತಹ ಪಟ್ಟಿಕೆಗಳಲ್ಲಿ ವಜ್ರಾಕೃತಿಯ ಮತ್ತು ವೃತ್ತಾಕಾರದ ಕೆತ್ತನೆ ಹಾಗೂ ಸುರಳಿಯಾಕಾರದ ಕೆತ್ತನೆ, ಕಂಬ ಮತ್ತು ಇತರ ಪ್ರಾಣಿ ಶಿಲ್ಪಗಳ ಕೆತ್ತನೆಯನ್ನು ನಾವು ಕಾಣಬಹುದು.

ನವರಂಗದ ಮುಂಭಾಗಕ್ಕೆ ಹತ್ತಿಕೊಂಡಿರುವ ಭಾಗವೇ ಮುಖಮಂಟಪ. ಆಯತಾಕಾರವಾಗಿರುವ ಇದರಲ್ಲಿ ನಾಲ್ಕು ಪೂರ್ಣಗಂಭ, ನಾಲ್ಕು ಚಿಕ್ಕ ಕಂಬ, ನಾಲ್ಕು

ಅರ್ಧಗಂಭಗಳನ್ನು ಹಾಗೂ ಬಲಕ್ಕೆ ಮತ್ತು ಎಡಕ್ಕೆ ಸಮವಾಗಿ ಎರಡು ಕಕ್ಷಾಸನಗಳಿವೆ. ಇಲ್ಲಿನ ಕಂಬಗಳ ಕೆಳಭಾಗವು ಚೌಕಕಾರದಿಂದಿದ್ದು ಮತ್ತೆ ಗೋಲಾಗಿರುವ ಬೋಧಿಗೆಗಳನ್ನು ಹೊಂದಿವೆ. ಇಲ್ಲಿನ ಕಂಬಗಳೆಲ್ಲವೂ ನವರಂಗದಲ್ಲಿರುವ ಕಂಬಗಳ ಸಮಾನ ಲಕ್ಷಣಗಳನ್ನು ಒಳಗೊಂಡಿವೆ. ಇದರ ದ್ವಾರದ ಬಲಭಾಗದಲ್ಲಿ ಎರಡು ಅರ್ಧ ಕಂಬಗಳ ಮಧ್ಯದಲ್ಲಿ ೧೧೨೩, ೧೧೮೧ ಮತ್ತು ೧೧೮೭ರ ಕಾಲದ ಮೂರು ಕೆತ್ತಲ್ಪಟ್ಟ ಶಾಸನಗಳು ಇವೆ. ಇಲ್ಲಿನ ಮುಖ ಮಂಟಪದ ಮೇಲ್ಛಾವಣಿಯ ಮುಂದುಗಡೆ ಮಂಜೂರ ಭಾಗವಿದೆ. ಅದು ಚೌಕಕಾರದಲ್ಲಿದ್ದು ಸರಳವಾಗಿದೆ.

ಈ ಜಿನಾಲಯದ ಎದುರಿಗೆ ಬೃಹದಾಕಾರದ ಸುಂದರವಾದ ಮಾನಸ್ತಂಭವಿರುವುದನ್ನು ಕಾಣುತ್ತೇವೆ. ಸುಮಾರು ೫ ಅಡಿ ಚೌಕಕಾರದ ಪೀಠದ ಮೇಲೆ ಸುಮಾರು ೩೫ ಅಡಿ ಎತ್ತರವಾಗಿರುವ ಸ್ತಂಭವನ್ನು ನಿಲ್ಲಿಸಿರುವುದನ್ನು ನೋಡುತ್ತೇವೆ. ಮಾನಸ್ತಂಭವು ಜೈನರ ವಾಸ್ತುಶಿಲ್ಪದ ಕಲೆಯ ಪ್ರಮುಖವಾದ ಲಕ್ಷಣಗಳಲ್ಲಿ ಒಂದಾಗಿದೆ. ಅದರ ಮೇಲೆ ಹೋದಂತೆ ವೃತ್ತಾಕಾರದ ಕೆತ್ತನೆಯನ್ನು ಒಳಗೊಂಡು, ವೃತ್ತಾಕಾರದ ಬೋಧಿಗೆಯನ್ನು ಹೊಂದಿದೆ. ಹಾಗೂ ಮೇಲ್ಭಾಗವು ಪುನಃ ವಿಶಾಲವಾಗುತ್ತಾ ಹೋಗಿ ಮಾನಸ್ತಂಭದ ಕೊನೆಯಲ್ಲಿ ಶಿಖರವನ್ನು ಹೊಂದಿದ್ದು ಅದರಲ್ಲಿ ಚತುರ್ಮುಖದಲ್ಲಿ ಜಿನಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದ್ದು, ಅದರ ಮೇಲ್ಗಡೆ ಕಳಸ ಭಾಗವನ್ನು ಸಹ ಕಾಣಬಹುದು.

**ತೇರದಾಳದ ಕಲ್ಮೇಶ್ವರ ದೇವಾಲಯ**

ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮದ ಮಧ್ಯದಲ್ಲಿ ಕಲ್ಮೇಶ್ವರ ದೇವಾಲಯವಿದ್ದು, ಈ ದೇವಾಲಯವನ್ನು ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ. ಈ ಕಲ್ಮೇಶ್ವರ ದೇವಾಲಯ ನೆಲಮನೆಯ ದೇವಾಲಯದಂತೆ ಕಾಣುತ್ತದೆ. ಅಂದರೆ ದೇವಾಲಯವು ನೆಲಮಟ್ಟಕ್ಕಿಂತ ಕೆಳಗಿರುವುದರಿಂದ ಸುಮಾರು ೮ ಮೆಟ್ಟಿಲುಗಳನ್ನು ಇಳಿದು ದೇವಾಲಯಕ್ಕೆ ಹೋಗಬೇಕಾಗುತ್ತದೆ. ಈ ದೇವಾಲಯ ಪೂರ್ವಕ್ಕೆ ಮುಖ ಮಾಡಿದ್ದನ್ನು ಕಾಣುತ್ತೇವೆ ಹಾಗೂ ದೇವಾಲಯದಲ್ಲಿ ಗರ್ಭಗೃಹ ಅದಕ್ಕೆ ಹೊಂದಿಕೊಂಡು ಅಂತರಾಳ (ಸುಖನಾಸಿ) ಮಾತ್ರ ಕಾಣುತ್ತೇವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಇದನ್ನು ಕಲ್ಮೇಶ್ವರ ಎನ್ನುತ್ತಾರೆ. ಮುಂದಿನ ಮಂಟಪದಲ್ಲಿ ನಂದಿ ಇದೆ. ಗರ್ಭಗೃಹದ ಮೇಲೆ ಶಿಖರವಿದೆ. ಮಂಟಪದ ಮೇಲೆ ಎರಡು ನಂದಿ ವಿಗ್ರಹಗಳಿವೆ. ಗರ್ಭಗೃಹವು ಸುಖನಾಸಿಗಿಂತ ಕೆಳಮಟ್ಟದಲ್ಲಿದ್ದು ಇದು ಚತುಸ್ರಾಕಾರವಾಗಿದೆ. ಇದೂ ಸಹ ನಾಲ್ಕು ಅರ್ಧಗಂಬಗಳನ್ನು ಹೊಂದಿದ್ದು. ಕಮಲದ ಆಕಾರ ಕೆತ್ತನೆಯಿಂದ ಕೂಡಿದೆ. ಇದು ೬ ಫಿ ೮ ಅಡಿ ಉದ್ದ ಅಗಲವಾಗಿದೆ[೨೫]. ಇದರ ಅಂತರಾಳದ ಮಧ್ಯ ಭಾಗದಲ್ಲಿ ನಂದಿಯ ಶಿಲ್ಪವನ್ನು ಕಾಣಬಹುದು. ಅಂತರಾಳದ ಬಾಗಿಲು ಚೌಕಟ್ಟು ದಾಟಿದಾಗ ಉತ್ತರ ಭಾಗವಾದ ಬಲಕ್ಕೆ ಜೋಡು ಹೆಡೆಯ ನಾಗರ ಹಾವು ಹಾಗೂ ಪಶ್ಚಿಮ ಭಾಗವಾದ ಎಡಕ್ಕೆ ಜೋಡು ಹೆಡೆಯ ನಾಗರ ಹಾವು ಅದರ ಮುಂದೆ ಲಿಂಗವನ್ನು ಕಾಣಬಹುದು. ಗರ್ಭಗೃಹದ ಹೊರಗಡೆಯಲ್ಲಿ ಪೂರ್ವ ದಿಕ್ಕನ್ನು ಹೊರತುಪಡಿಸಿ ಇತರೆ ಮೂರು ಕೋಷ್ಠಗಳಿವೆ. ಆದರೆ ಇಂದು ಆ ಕೋಷ್ಠಗಳಲ್ಲಿ ಯಾವುದೇ ಮೂರ್ತಿಗಳನ್ನು ಕಾಣುವುದಿಲ್ಲ. ಕೋಷ್ಠಗುಡಿಯು ಅಲಂಕೃತವಾಗಿದ್ದು, ಅವುಗಳ ಲಲಾಟ ಬಿಂಬದಲ್ಲಿ ಗೋಡೆಯ ಕೆತ್ತನೆಯನ್ನು ಕಾಣುತ್ತೇವೆ. ಈ ದೇವಾಲಯದ ಅಧಿಷ್ಠಾನವು ಸುಮಾರು ೪ ರಿಂದ ೫೫ ಅಡಿ ಎತ್ತರವಾಗಿದ್ದು ಕೆಳಭಾಗವು ಉಪಾನ, ಅದರ ಮೇಲ್ಗಡೆ ಕುಮುದ ಹಾಗೂ

ಕಪೋತಗಳನ್ನು ಕಾಣಬಹುದು. ಕಲ್ಮೇಶ್ವರ ದೇವಾಲಯದ ಆವರಣದಲ್ಲಿ ನಾಗಶಿಲ್ಪ, ಶಿವ ಪಾರ್ವತಿ ಶಿಲ್ಪ, ವೀರಗಲ್ಲು, ಭೈರವ ಮೊದಲಾದ ಶಿಲ್ಪಗಳನ್ನು ಸಹ ನಾವು ಕಾಣಬಹುದು. ಈ ದೇವಾಲಯದ ಮುಂದುಗಡೆ ನಾಗ ಶಿಲ್ಪಗಳಿವೆ. ಬಲಗಡೆಯ ಬದಿಯಲ್ಲಿ ಶಿವನ ಶಿಲ್ಪ, ಮದನಿಕೆ ಶಿಲ್ಪಗಳಿವೆ. ಮುಂದಿನ ಮಂಟಪದಲ್ಲಿ ಎರಡು ಕಂಬಗಳಿವೆ. ಅವರ ಮೇಲೆ ಎರಡು ನಂದಿ ವಿಗ್ರಹಗಳಿವೆ. ಈ ದೇವಸ್ಥಾನ ಮೂಲತಃ ಜೈನರದಾಗಿತ್ತೆಂದು ಸ್ಥಳೀಯರು ಹೇಳುತ್ತಾರೆ. ಆದರೆ ದೇವಾಲಯದಲ್ಲಿನ ಭಗ್ನ ಭಾಗಗಳನ್ನು ನೋಡಿದರೆ ಇದು ಪ್ರಾಚೀನ ಕಾಲದಲ್ಲಿ ನವರಂಗ ಹಾಗೂ ಮುಖ ಮಂಟಪಗಳನ್ನೊಳಗೊಂಡ ಬೃಹದಾಕಾರದ ದೇವಾಲಯವಾಗಿತ್ತು ಎಂದು ಊಹಿಸಬಹುದು. ಅಲ್ಲದೇ ಕ್ರಿ.ಶ.೧೧ನೇ ಶತಮಾನದಲ್ಲಿ ಅಂದರೆ ಕಲ್ಯಾಣಿ ಚಾಳುಕ್ಯರ ಕಾಲಾವಧಿಯಲ್ಲಿ ಇದು ನಿರ್ಮಾಣವಾಗಿರುವ ಸಾಧ್ಯತೆ ಇದೆ.

**ತೇರದಾಳದ ಶ್ರೀ ಅಲ್ಲಮ ಪ್ರಭು ಬೃಹನ್ನ ಮಠ**

ಸಂತ ಪರಂಪರೆಯಲ್ಲಿ ಹೆಸರಾದ ಶ್ರೀ ಅಲ್ಲಮ ಪ್ರಭುಗಳ ಹೆಸರಿನ ಮಠ ಮತ್ತು ದೇವಾಲಯ ತೇರದಾಳದ ಊರ ಮಧ್ಯದಲ್ಲಿದೆ. ಈ ಮಠ ಸಾಕಷ್ಟು ಖ್ಯಾತವಾಗಿದ್ದು, ಇಲ್ಲಿಗೆ ದಿನಕ್ಕೆ ಸಾವಿರಾರು ಭಕ್ತರು ದರ್ಶನಕ್ಕಾಗಿ ಬರುತ್ತಾರೆ. ಪ್ರಭುಸ್ವಾಮಿ ಎಂಬ ಲಿಂಗವಂತ ಯೋಗಿಯು ಅಬಾಖಾನನೆಂಬ ಫಕೀರನೊಂದಿಗೆ ಬಂದು ಇಲ್ಲಿ ೧೪ ವರ್ಷ ಇದ್ದನಂತೆ ಅವರ ಹೇಳಿಕೆಯಿಂದ ಬಿಜಾಪೂರದ ಬಾದಶಾಹ ಕೃಷ್ಣೇಗೌಡನೆಂಬವನಿಗೆ ದೇಸಗತಿ ಸಂಸ್ಥಾನವನ್ನು ಮಾಡಿಕೊಟ್ಟನೆಂದು ಅಲ್ಲಿಯ ಅರ್ಚಕರು ಹೇಳಿಕೆ ನೀಡಿದ್ದಾರೆ. ಪ್ರಭುಸ್ವಾಮಿ ಇರುತ್ತಿದ್ದ ಈ ಮಠವನ್ನು ಮತ್ತು ಗುಡಿಯನ್ನು ಕೃಷ್ಣೇಗೌಡನು (ನಾಡಗೌಡರು) ಕಟ್ಟಿಸಿದ್ದನೆಂಬ ಪ್ರತೀತಿ ಇದೆ. ಇಂದು ಆ ಮನೆಯ ಸಹೋದರರಾದ ವಿಜಯ, ಪ್ರವೀಣ ಹಾಗೂ ಹನಗಂಡಿಯ ದೇಸಾಯಿಯ ಮನೆತನದವರು ವಿಶೇಷ ಪೂಜಾ ಸಮಾರಂಭದಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳುತ್ತಾರೆ.

ಈ ದೇವಾಲಯದ ಸುತ್ತಲೂ ಪ್ರಕಾರವಿದ್ದು, ಒಳ ಆವರಣದಲ್ಲಿ ಪ್ರಭುಸ್ವಾಮಿಯ ದೇವಾಲಯವು ೨೫೮ ಅಡಿ ಉದ್ದ, ೧೭೫ ಅಡಿ ಅಗಲ ವಿಸ್ತೀರ್ಣವನ್ನು ಹೊಂದಿದೆ. ಮಧ್ಯದಲ್ಲಿ ಈ ದೇವಾಲಯವಿದೆ. ಗರ್ಭಗೃಹ ಮತ್ತು ಮುಖ ಮಂಟಪವನ್ನು ಹೊಂದಿದೆ. ಮುಖ ಮಂಟಪದ ಮೇಲ್ಭಾಗದಲ್ಲಿ ಚಿಕ್ಕದಾದ ४ ಬಸವಣ್ಣನ ಮೂರ್ತಿಗಳಿವೆ. ಗರ್ಭಗೃಹದಲ್ಲಿಯ ಕರ್ತೃ ಗದ್ದುಗೆಯ ಮೇಲೆ, ನಾಗಭೂಷಣ ಲಿಂಗ ಪೀಠ (ಮಗಿ ಪೀಠ) ಕೇದಿಗೆ ಎಲೆಯ ಆಕಾರ, ದಾಸ್ವಾಳ ಹೂವಿನ ಆಕಾರ, ಅಪ್ತಗಿರಿ ಆಕಾರ ಬೆಳ್ಳಿಯ ಆಭರಣಗಳಿಂದ ಅಲಂಕಾರ ಮಾಡಲ್ಪಡುತ್ತದೆ. ಇದರ ಮಧ್ಯದಲ್ಲಿ ಪ್ರಭುಸ್ವಾಮಿಯ ಮೂರ್ತಿ ಇದ್ದು, ಅದಕ್ಕೆ ಬೆಳ್ಳಿಯ ಟೋಪಿಗೆ, ತುರಾಯಿ, ಹೂಗಳನ್ನು ಧರಿಸಲಾಗುತ್ತದೆ. ಇಲ್ಲಿಯೇ ಹಿಂದೆ ದೇವಾಲಯವಿತ್ತು. ಕ್ರಿ.ಶ.೧೬-೧೮ನೇ ಶತಮಾನಕ್ಕೆ ಸೇರಿದ ಈ ಮೂಲ ದೇವಾಲಯ ಪ್ರಸಕ್ತ ಉಳಿದಿಲ್ಲ. ಈಗ ಹಳೆಯ ದೇವಾಲಯದ ತಳಪಾಯದ ಮೇಲೆ ಹೊಸ ಬೃಹತ್ ದೇವಾಲಯ ಕಟ್ಟುವ ಕಾಮಗಾರಿ ಚಾಲನೆಯಲ್ಲಿದೆ. ಪ್ರಭುಗಳ ಮೂಲ ಗದ್ದುಗೆ ಮಾತ್ರ ಈಗ ಮೂಲ ಸ್ಥಿತಿಯಲ್ಲಿ ಉಳಿದಿದೆ.

ಪ್ರಾರಂಭದಲ್ಲಿ ಅಲ್ಲಮ ಪ್ರಭುವಿನ ದರ್ಶನಕ್ಕೆ ತೆರಳಿದಾಗ ಕಾಣುವುದು ದ್ವಾರ ಬಾಗಿಲ. ಈ ದ್ವಾರ ಬಾಗಿಲು ನಿರ್ಮಾಣದ ವೆಚ್ಚ ೧೮ ಲಕ್ಷ ರೂ. ಈ ಬೃಹತ್ ಮಹಾದ್ವಾರವು ಬಹು ಅಕರ್ಷಣೆಯಿಂದ ಕಪ್ಪು ಮತ್ತು ಕೆಂಪು ಕಲ್ಲಿನಲ್ಲಿ ಕೆತ್ತಲಾಗಿದೆ. ಪೂರ್ವ ದಿಕ್ಕಿಗೆ ಎದುರಾಗಿ

ಇರುವ ಮಹಾದ್ವಾರದ ಮುಂದೆ ಎಡ ಹಾಗೂ ಬಲ ಭಾಗದಲ್ಲಿ ಆನೆಗಳು ಸ್ವಾಗತವನ್ನು ಕೋರುತ್ತವೆ. ಕೆಲವು ಮೆಟ್ಟಲನ್ನು ಏರಿ ದ್ವಾರಬಾಗಿಲನ್ನು ಪ್ರವೇಶಿಸಿ ಸುಮಾರು ೧೦ ಹೆಜ್ಜೆಗಳನ್ನು ನಡೆದು ಮುಂದೆ ಸಾಗಿದಾಗ ೭೫ ಕೆ.ಜಿ. ತೂಕದ ಘಂಟೆ ಕಾಣುವುದು. ಅಲ್ಲಿದ ಸುಮಾರು ಮೆಟ್ಟಿಲುಗಳನ್ನು ಇಳಿದು ಎಡಬದಿಗೆ ಶ್ರೀ ಬಸವೇಶ್ವರ ಗುಡಿ, ಬಲಬದಿಗೆ ಹರಿವಾನ ಕಟ್ಟೆ ಇದೆ. ತೇರದಾಳ ಅಲ್ಲಮಪ್ರಭು ದೇವರ ಚಾಳುಕ್ಯರ ಶೈಲಿಯಲ್ಲಿ ನಿರ್ಮಾಣ ಗೋಳ್ಳಲಿದೆ. ಭಾರತದಲ್ಲಿರುವ ೧೨ ಜ್ಯೋತಿರ್ಲಿಂಗ ದೇವಾಲಯಗಳ ಮಾದರಿಯಲ್ಲಿ ನಿರ್ಮಿಸುವುದನ್ನು ತೀರ್ಮಾನಿಸಲಾಗಿದೆ. ಈ ದೇವಾಲಯಕ್ಕೆ ಬೇಕಾಗಿರುವ ಕಲ್ಲುಗಳನ್ನು ದೊಡ್ಡ ಬಳ್ಳಾಪುರದ ಒಳ್ಳೆಯ ಗುಣಮಟ್ಟದ ಕಲ್ಲುಗಳನ್ನು ತಂದು ದೇವಾಲಯಗಳನ್ನು ನಿರ್ಮಿಸುವ ಕಾರ್ಯ ಭರದಿಂದ ಸಾಗಿದೆ. ಉಡುಪಿಯ ಶ್ರೀ ರಾಜಶೇಖರ ಹೆಬ್ಬಾರ ಇವರಿಗೆ ಈ ಕೆಲಸವನ್ನು ವಹಿಸಿಕೊಟ್ಟದ್ದಾಗಿದೆ. ಒಟ್ಟು ವೆಚ್ಚ ೫ ಕೋಟಿ ರೂಗಳಲ್ಲಿ ನಿರ್ಮಾಣಗಳೊತ್ತಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಗದ್ದುಗೆ ಉದ್ದ ೯ ಅಡಿ ೭ ಇಂಚ, X ಅಗಲ ೫ ಅಡಿ ೩ ಇಂಚ, ಗರ್ಭಗೃಹ ಒಟ್ಟು ವಿಸ್ತೀರ್ಣ ಉದ್ದ ೧೫ ಅಡಿ ೬ ಇಂಚ X ಅಗಲ ೨೦ ಅಡಿ ೫ ಇಂಚ, ಸುಕಣಾಸಿ ಬಾಗ ಸುಮಾರು ಉದ್ದ ೭ ಅಡಿ ೩ ಇಂಚ X ಅಗಲ ೧೫ ಅಡಿ ೫ ಇಂಚವನ್ನು ಹೊಂದಿದೆ. ಮುಖ ಮಂಟಪ ಉದ್ದ ೩೩ ಅಡಿ ಅಗಲ ೫೫ ಹೊಂದಿದೆ. ೧) ಉಪಪಿಠ ೨) ಅಧಿಷ್ಠಾನ ೩) ಗೋಡೆ ೪) ಮೇಲ್ಛಾವಣೆ ೫) ಗೋಪುರ ಒಟ್ಟು ೯ ಗೋಪುರಗಳನ್ನು ಹೊಂದಿದೆ. ಒಟ್ಟು ೩೨ ಕಂಬಗಳನ್ನು ಹೊಂದಿದೆ. ಗರ್ಭಗುಡಿಯ ಮುಖಮಂಟಪದಲ್ಲಿ ಶಿವ, ಪಾರ್ವತಿ, ಗಣೇಶ ವಿಗ್ರಹ ಮೂರ್ತಿಗಳನ್ನು ಮೊದಲಿನಂತೆ ಪ್ರತಿಷ್ಠಾಪಿಸಲಾಗಿದೆ. ವಿಶೇಷವಾಗಿ ಕಲ್ಲು ಕಲ್ಲುಗಳ ನಡುವೆ ಲಾಕ್ ವ್ಯವಸ್ಥೆ ಇದೆ. ಒಟ್ಟು ೩೧೬೦ ಚದರ ಅಡಿ ಉಪ ಪೀಠ ಮತ್ತು ಅಂದಾಜು ೧೯೦೦ ಚದರ ಅಡಿ ಅಧಿಷ್ಠಾನ ಹೊಂದಿದೆ. ೫ ವಿಭಿನ್ನ ಶೈಲಿಯ ಒಟ್ಟು ೩೨ ವಿವಿಧ ಕಂಬಗಳನ್ನು ಹೊಂದಿದೆ. ಶ್ರೀ ಅಲ್ಲಮಪ್ರಭು ದೇವಾಲಯ ಜೀರ್ಣೋದ್ಧಾರ ಸಮಿತಿ ಟ್ರಸ್ಟ್ ಸುಕ್ಷೇತ್ರ ತೇರದಾಳ. ಅಧ್ಯಕ್ಷರು ಶ್ರೀಜಗದೀಶ ಶಿ ಗುಡಗುಂಟಿಮಠ, ಊರಿನ ಪ್ರಮುಖರಾದ ಉಪಾಧ್ಯಕ್ಷರಾದ ಶ್ರೀ ಪ್ರವೀಣ ಪಿ ನಾಡಗೌಡ ಹಾಗೂ ಭಕ್ತವೃಂದ ಸಹಾಯ ಸಹಕಾರದಿಂದ ಜೀರ್ಣೋದ್ದಾರ ಕಾರ್ಯ ಭರದಿಂದ ಸಾಗಿದೆ. ೮ ಮನೆತನದ ಅರ್ಚಕರು ಪ್ರತಿ ವರ್ಷ ಒಂದು ಮನೆತನದವರು ಪೂಜಾ ವಿಧಿ ವಿಧಾನಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಾರೆ.

ಇಲ್ಲಿನ ಮೂಲ ಗುಡಿಯ ಪಕ್ಕದಲ್ಲಿರುವ ಗವಿಯಲ್ಲಿ ಶ್ರೀಗಳು ನೆಲೆಸಿದ್ದರೆಂದು ಪ್ರತೀತಿ ಇದೆ. ಅದೇ ಗವಿಯಲ್ಲಿ ಹಣತೆ ಹಾಗೂ ಇನ್ನುಳಿದ ಅನುಷ್ಠಾನದ ಕುರುಹುಗಳು ಇರುವುದು ಕಂಡುಬರುತ್ತವೆ. ಅಲ್ಲದೇ ಆ ಗವಿಯನ್ನು "ಶ್ರಿ ಪ್ರಭುದೇವರ ಅನುಷ್ಠಾನದ ಗವಿ" ಎಂದೂ ಈಗಲೂ ಜನ ಕರೆಯುತ್ತಾರೆ.

ಪ್ರಭುದೇವರ ಗುಡಿ ಪ್ರಾಂಗಣದಲ್ಲಿಯೇ ಹರಿವಾಣ ಕಟ್ಟೆ ಇದೆ. ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಶ್ರೀ ಅಲ್ಲಮಪ್ರಭು ದೇವರಿಗೆ ಭಕ್ತರು ಹರಿವಾಣ ತುಂಬವ (ಆರೋಗಣೆ) ಹರಕೆ ತೀರಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವರು. ಇಲ್ಲಿ ವಿಶೇಷವಾದ ಮಹಾ ಪ್ರಸಾದವನ್ನು ತಯಾರಿಸಿ ಶ್ರದ್ಧಾಭಕ್ತಿಯಿಂದ ನಯ ವಿನಯದಿಂದ ಹರಿವಾಣ ಕಟ್ಟೆಗೆ ಮಹಾಪ್ರಸಾದವನ್ನು ಅರ್ಪಿಸಿದರೆ ಬೇಗನೆ ತುಂಬುವುದು ಇಲ್ಲವಾದರೆ ಅದು ತುಂಬುವುದಿಲ್ಲ ಎಂಬ ನಂಬಿಕೆ ಇದೆ. ಈ ದೇವಾಲಯಕ್ಕೆ ಆರು ಗಾಲಿಗಳನ್ನು ಕಾಣುತ್ತೇವೆ. ಷಟ್‌ಸ್ಥಳಗಳಾದ ಭಕ್ತ, ಮಹೇಶ್ವರ, ಪ್ರಸಾದ, ಪ್ರಾಣಲಿಂಗ, ಶರಣ ಮತ್ತು ಐಕ್ಯ ಹೀಗೆ ಆರು ಷಟ್‌ಸ್ಥಲಗಳನ್ನು ಗೆದ್ದಂತಹ ಓಂಕಾರ

ಮೂರ್ತಿ ದೇವಾಲಯಕ್ಕೆ ಆರು ಗಾಲಿಗಳಿದ್ದದ್ದು ಕಂಡುಬರುತ್ತದೆ. ಶ್ರೀ ಅಲ್ಲಮಪ್ರಭು ದೇವರ ಹೆಸರಿನ ಅಗಸಿ ಬಾಗಿಲು ಈ ಮಠದ ಪೂರ್ವ ದಿಕ್ಕಿಗೆ ಎದುರಾಗಿರುತ್ತದೆ. ಅಗಸಿ ಬಾಗಿಲಿನ ಮೂಲಕ ಶ್ರೀ ಅಲ್ಲಮಪ್ರಭು ದೇವರ ಬೃಹನ್ಮಠಕ್ಕೆ ಹೋಗಬೇಕಾಗುತ್ತದೆ. ಅಗಸಿ ಬಾಗಿಲಿನ ಮಧ್ಯ ಶ್ರೀ ಅಲ್ಲಮಪ್ರಭು ದೇವರು ಬಲಕ್ಕೆ ಅಕ್ಕಮಹಾದೇವಿ ಎಡಕ್ಕೆ ಬಸವೇಶ್ವರರ ಮೂರ್ತಿಗಳು ಅತ್ಯಂತ ನಯನ ಮನೋಹರವಾಗಿವೆ. ಇದಲ್ಲದೇ ಇಲ್ಲಿನ ಕಿಲ್ಲಾಭಾಗ, ಚಾವಡಿ ಗಲ್ಲಿಯಲ್ಲಿ ಪ್ರಭುವಿನ ಮತ್ತೊಂದು ಗುಡಿ ಇದೆ. ಇಲ್ಲಿ ಒಟ್ಟು ೩ ಕಡೆಗಳಲ್ಲಿ ಪ್ರಭುವಿನ ನೆಲೆಗಳು ಕಂಡುಬರುತ್ತವೆ[೨].

### ಶ್ರೀ. ಅಲ್ಲಮ ಪ್ರಭುಗಳ ಹಿನ್ನೆಲೆ

ತೇರದಾಳ ಪಟ್ಟಣದ ಆರಾಧ್ಯ ದೇವರಾದ ಷಟ್‌ಸ್ಥಳಗಳನ್ನು ಗೆದ್ದಂತಹ 'ಓಂಕಾರ' ಮೂರ್ತಿ ಶ್ರೀ ಅಲ್ಲಮ ಪ್ರಭುವಿನ ವಿಶೇಷವಾದ ಪವಾಡಗಳು ಹಾಗೂ ಭಕ್ತ ಸಮೂಹ ಅಪಾರವಾದದ್ದು. ೧೨ನೇ ಶತಮಾನದಲ್ಲಿ ಲೋಕ ಕಲ್ಯಾಣಾರ್ಥವಾಗಿ ಲೋಕದಲ್ಲಿ ಸಂಚರಿಸುತ್ತಿರುವಾಗ ಚಿಮ್ಮಡ ಎಂಬ ಗ್ರಾಮದಲ್ಲಿ ನೆಲೆಸಿ ಅಲ್ಲಿಯೇ ಹಲವು ದಿನ ಕಳೆದರು. ಅದೇ ಗ್ರಾಮದೊಳಗೆ ಒಬ್ಬ ಕುಂಬಾರನ ಮನೆಯಲ್ಲಿ ಪ್ರಭುವಿನ ಕೈಯೊಳಗಿನ ಒಂದು ಬೆತ್ತವಿರುವುದು. ಅದರ ನಿತ್ಯ ಪೂಜೆಯನ್ನು ಆ ಕುಂಬಾರರೇ ಮಾಡುತ್ತಿರುವರು. ಬೆತ್ತವು ಸವೆದಿರುವುದು ನಿರಂಜನ ವಂಶಾರತ್ನಾಕರವೆಂಬ ಗ್ರಂಥದಲ್ಲಿ ಹೇಳಿದ ಬೆತ್ತವು ಇದೇ ಎಂದೂ ನಂಬಲಾಗಿದೆ. ನಂತರ ಚಿಮ್ಮಡ ಗ್ರಾಮದಿಂದ ಐತಿಹಾಸಿಕ ಪ್ರಾಚೀನ ತೇರದಾಳ ಗ್ರಾಮಕ್ಕೆ ಆಗಮಿಸಿದರು. ಮೊದಲು ಪ್ರಾಚೀನ ತೇರದಾಳ ಗ್ರಾಮದ ಕಿಲ್ಲಾ ಭಾಗದಲ್ಲಿ ನೆಲೆಸಿ, ತಮ್ಮ ಕಾಯಕದೊಂದಿಗೆ ತಂಗಿದ್ದರು. ಒಂದು ದಿವಸ ರಾತ್ರಿ ಚಿಕ್ಕೋಡಿಯೊಳಗಿನ ಒಬ್ಬ ಲಿಂಗಾಯತ ಮನುಷ್ಯನ (ಹೆಸರು ತಿಳಿದಿರುವುದಿಲ್ಲ) ಸ್ವಪ್ನದಲ್ಲಿ ಯೋಗ ದಂಡ ಕೌಪೀನು, ಕಾಷಾಯಾಂಬರಗಳು, ಜಟಾ ಕರಕ ಮಂಡಲ ಮುಂತಾದ ಚಿಹ್ನೆಗಳಿಂದ ಕೂಡಿದ ಒಂದು ದಿವ್ಯ ಮೂರ್ತಿಯು ಬಂದ ಹಾಗೇ ಕನಸಿನಲ್ಲಿ ಭಾಸವಾಯಿತು. ಎಚ್ಚೆತ್ತು ನೋಡಲಾಗಿ ಅಲ್ಲಿ ಏನೂ ಇದ್ದಿರಲಿಲ್ಲ ಆ ಮೇಲೆ ಅವನು ತನ್ನ ಸ್ವಪ್ನದ ಸವಿಸ್ತಾರವಾದ ವರ್ತಮಾನವನ್ನು ತನ್ನ ಹೆಂಡತಿಗೆ ಹೇಳಿದನು. ಆಮೇಲೆ ಆ ಉಭಯ ಸ್ತ್ರೀ ಪುರುಷರು ಆ ಸ್ವಪ್ನದೊಳಗಿನ ದಿವ್ಯ ಮೂರ್ತಿಯ ಶೋಧ ಮಾಡುತ್ತಾ ಸುತ್ತಲೂ ಸಂಚಾರ ಮಾಡುತ್ತಿರುವಷ್ಟರಲ್ಲಿ ಆ ಮೂರ್ತಿಯು ತೇರದಾಳಕ್ಕೆ ಬಂದಿದ್ದರ ಸುದ್ಧಿಯು ಕರ್ಣೋಪಕರಣದಿಂದ ಅವರಿಗೆ ತಿಳಿದ ಕೂಡಲೇ ಅವರು ತೇರದಾಳದ ಕಡೆಗೆ ಹೊರಟು ಬಂದರು. ತದನಂತರ ಇಲ್ಲಿಗೆ ಬಂದು ನೋಡುವಷ್ಟರಲ್ಲಿ ಸ್ವಪ್ನದ ಮಾತು ನಿಜವಾಗಿ ಮನಗಂಡರು. ಅವರು ಪ್ರಭುದೇವನಿಗೆ ಶಿರಸಾಷ್ಟಾಂಗ ಪ್ರಣಿಪಾತಂಗಳ ಮಾಡಿ ಅವನ ಎದುರಿನಲ್ಲಿ ಕಿಂಕರತ್ವದಿಂದ (ಕರುಣೆಯಿಂದ) ನಿಂತರು. ಪ್ರಭು ದೇವನ ಕೃಪಾದೃಷ್ಟಿಯು ಅವರ ಮೇಲೆ ಬಿದ್ದ ಕೂಡಲೇ ಅವರು ಕೃತಾರ್ಥರಾದವೆಂದು ಬಗೆದು ಪ್ರಭುದೇವನ ಶುಶ್ರೂಷೆಯನ್ನು ಏಕೋಭಾವದಿಂದ ಮಾಡಲು ಪ್ರಾರಂಭಿಸಿದರು. ಹೀಗೆ ಶ್ರೀ ಅಲ್ಲಮ ಪ್ರಭುದೇವರು ತೇರದಾಳದಲ್ಲಿ ಬಂದು ನೆಲೆಸಿದರು. ಕರ್ನಾಟಕ ಪ್ರಕರಣ ೧೩ ಪುಟ ೪೩೮ ರಲ್ಲಿ ಇದೇ ಆದಿಲಿಂಗೇಶ್ವರನ ಹೆಸರನ್ನು ಹೇಳಿದೆ. ಒಟ್ಟಿನ ಮೇಲೆ ಪ್ರಭುದೇವನು ತೇರದಾಳಕ್ಕೆ ಬಂದಿದ್ದನಷ್ಟೇ, ಅಲ್ಲದೇ ಆತನ ವಾಸವು ಅಲ್ಲಿ ಕೆಲವು ದಿವಸಗಳವರೆಗೆ ಇದ್ದದ್ದು ನಿರ್ವಿತವಾದವಾಗಿ ಸಿದ್ಧವಾಗುತ್ತದೆ.

ಗ್ರಾಮೋಪಾಧ್ಯ ಎಂಬ ಉಪನಾಮದ ಒಬ್ಬ ಬಡ ವೃದ್ಧ ಸ್ಮಾರ್ತ ಬ್ರಾಹ್ಮಣ ವಿಧವೆಯು ತನ್ನ ಮಗನನ್ನು ಕರೆದುಕೊಂಡು ದಿನಂಪ್ರತಿ ಶ್ರೀಗಳವರ ದರ್ಶನಕ್ಕೆ ಬಂದು ಅವರ ಸೇವೆಯನ್ನು ಮಾಡುತ್ತಿದ್ದಳು. ಈ ರೀತಿ ಕೆಲವು ಕಾಲ ಹೋದ ಮೇಲೆ ಒಂದು ದಿವಸ ಶ್ರೀಗಳವರ ದಿವ್ಯ ಚರಣಗಳು ತನ್ನ ಬಡವಿಯ ಮನೆಯಲ್ಲಿ ಬೀಳಬೇಕು ಮತ್ತು ಅದರಿಂದ ತಾನು ಕೃತಾರ್ಥಳಾಗಬೇಕು ಎಂದು ಅವಳು ಶ್ರೀಗಳವರೆಗೆ ಭಿನ್ನವಿಸಿಕೊಂಡಳು. ಕೃಪಾ ಸಮುದ್ರನಾದ ಪ್ರಭುದೇವನು ಈ ಬಡವಿಯ ಬಿನ್ನಹವನ್ನು ಮಾನ್ಯ ಮಾಡಿ ಕೂಡಲೇ ಅವಳ ಮನೆಗೆ ದಯಮಾಡಿಸಿದರು. ಕಿಂಚತ್ ಕಾಲದಲ್ಲಿ ಅವರು ಕುಳಿತ ಸ್ಥಳದಲ್ಲಿ ಕಟ್ಟೆಯನ್ನು ಕಟ್ಟಿ ಅದನ್ನು ಶ್ರೀಗಳವರ ಹೆಸರಿನಿಂದ ಪ್ರತಿದಿನ ಪೂಜಿಸಲು ಹತ್ತಿದಳು. ಮುಂದೆ ಅವರ ಸಂತತಿಯ ಬೆಳವಣಿಗೆಯಾಗಿ ಆ ಮನೆತನವೂ ಬಹಳ ಪ್ರಸಿದ್ದಿಗೆ ಬಂದು, ಈಗಲೂ ಆ ಮನೆತನದವರು ತಮ್ಮ ಮನೆಯೊಳಗೆ ಆ ಕಟ್ಟೆಯನ್ನು ನಿತ್ಯ ಪೂಜಿಸುತ್ತಿರುವರು.

ಒಮ್ಮೆ ಒಬ್ಬ ಡಾಂಭೀಕನ ಮನದಲ್ಲಿ ಮೈಲಿಗೆಯಿಂದ ಬಹಿರಂಗದಲ್ಲಿ ಬಹಳ ಮಡಿಯಿಂದ ವನದೊಳಗಿನ ಹೂವುಗಳನ್ನು ತಂದು ದಿನಾಲು ಬಂದು ಶಿವಾಲಯದೊಳಗಿನ ಶಿವಲಿಂಗದ ಪೂಜೆ ಮಾಡಿ ಹೋಗುತ್ತಿದ್ದನು. ಅವನು ಭಕ್ತಿಯ ಪರೀಕ್ಷಾರ್ಥವಾಗಿ ಕೆಲವು ದಿವಸಗಳವರೆಗೆ ಪ್ರಭುದೇವನು ಯಾರಿಗೂ ಗೊತ್ತಾಗದಂತೆ ಆ ಶಿವಾಲಯದಲ್ಲಿ ಹೋಗಿ ದೇವರ ಪೂಜೆಯನ್ನು ಕೆಡಿಸಿ ಬರುತ್ತಿದ್ದನು. ಇದು ಏನೂ ಚಮತ್ಕಾರವಿರಬಹುದೆಂದು ಮೂಢವಾಗಿ ಆ ಭಕ್ತನು ವಿಚಾರ ಮಾಡತೊಡಗಿದನು. ಆದರೆ ಅದು ಗೊತ್ತಾಗಲಿಲ್ಲ. ಒಂದು ದಿವಸ ಅಕಸ್ಮಿಕವಾಗಿ ಪ್ರಭುದೇವನು ಶಿವಾಲಯದಲ್ಲಿ ಪ್ರವೇಶ ಮಾಡುವ ಕಾಲಕ್ಕೆ ಆ ಮನುಷ್ಯನು ಅವನ ಹಿಂದಿನಿಂದ ಬಂದನು. ಪ್ರಭುದೇವನು ಶಿವಾಲಯದೊಳಗೆ ಇರುವಾಗಲೇ ಆ ಮನುಷ್ಯನು ಮೆಲ್ಲನೆ ಹೋಗಿ ಅದರ ದ್ವಾರಗಳನ್ನು ಹಾಕಿ ತಾನು ಹೊರಗೆ ನಿಂತುಕೊಂಡನು. ಆಮೇಲೆ ಪ್ರಭುದೇವನು ಗುಂಗೀ ಹುಳದ ರೂಪವನ್ನು ಧರಿಸಿಕೊಂಡು ಆ ಗುಡಿಯ ಗಚ್ಚಿನ ಭದ್ರವಾದ ಗೋಡೆಯೊಳಗೆ ತೂತು ಕೊರೆದು ಹೊರಬಿದ್ದು ಹೋದನು. ಕೆಲವು ಹೊತ್ತಿನ ಮೇಲೆ ಆ ಮನುಷ್ಯನು ಶ್ರೀಗಳವರ ಸಮಾಚಾರವನ್ನು ತೆಗೆದುಕೊಳ್ಳುವ ಉದ್ದೇಶದಿಂದ ಬಾಗಿಲ ತೆಗೆದು ನೋಡುವಷ್ಟರಲ್ಲಿ ಅಲ್ಲಿ ಪ್ರಭುದೇವರ ಇದ್ದಿರಲಿಲ್ಲ ಶಿವಾಲಯದಲ್ಲಿರುವ ಶಿವಲಿಂಗವು ಕೂಡ ಇದ್ದಿರಲಿಲ್ಲ. ಇದನ್ನು ಕಂಡು ಅವನು ಗಾಬರಿಯಿಂದ ಕ್ಷಮೆಯನ್ನು ಬೇಡುವ ಕುರಿತು ಶ್ರೀಗಳವರ ಕಡೆಗೆ ಹೋದರು. ಆದರೆ ಅವನಿಗೆ ಅವರ ದರ್ಶನವು ಕೂಡಾ ಆಗಲಿಲ್ಲ. ಶ್ರೀಗಳವರ ಲೀಲೆಯ ಆದ ಸ್ಥಳಕ್ಕೆ ಗದ್ದಗಿ ಮಠವೆನ್ನುವುರು ಹಾಗೂ ಆ ಮಠದ ಗಚ್ಚಿನ ಗೋಡೆಯೊಳಗೆ ಈಗಲೂ ಒಂದು ತೂತು ಇರುವುದು.

ಶ್ರೀ ಅಲ್ಲಮಪ್ರಭು ಬೃಹನ ಮಠದಲ್ಲಿ ಪ್ರತಿನಿತ್ಯ ಸರಿಯಾಗಿ ಬೆಳಗ್ಗೆ ಮುಂಜಾನೆ ೪ ಗಂಟೆಗೆ ಶ್ರೀ ಮಠದಲ್ಲಿ ನಗಾರಿ ವಾದ್ಯ ಮೊಳಗಿದ ಮೇಲೆ ಅರ್ಚಕರು ಮಡಿಯಿಂದ ಗರ್ಭ ಗುಡಿಯ ದ್ವಾರವನ್ನು ತೆಗೆಯುವರು ಶ್ರೀ ಅಲ್ಲಮಪ್ರಭುವಿನ ನಾಮಸ್ಮರಣೆಯನ್ನು ಮಾಡುತ್ತಾ, ದೇವಾಲಯದ ಒಳಗೆ ಪ್ರವೇಶಿಸುವರು. ರುದ್ರಾಭಿಷೇಕ, ಪಂಚಾಮೃತಭಿಷೇಕ, ಜಲಾಭಿಷೇಕ ಗದ್ದುಗೆಯ ಪೂಜೆಯನ್ನು ಗುರುಸೂತ್ರ ರಾಗದಿಂದ ಹಾಗೂ ಮಂಗಳಾರುತಿ ಮಾಡಿ ಪ್ರಥಮ ಪೂಜೆ ಮುಗಿಸಲು ಬೆಳಿಗ್ಗೆ ೬ ಗಂಟೆಯಾಗುವುದು. ಗದ್ದುಗೆಯ ಮೇಲೆ ಮಗಿಯ ಪೀಠವನ್ನಿರಿಸಿ ಅಲಂಕರಿಸಿ ಬೆಳ್ಳಿಗ್ಗೆ ೧೦ ರಿಂದ ೧೧ ರವರೆಗೆ ದ್ವಿತೀಯ ಪೂಜಾ ಕಾರ್ಯ

ಜರಗುವುದು. ಪೂರ್ವಾಹ್ಣ ೧೨ ಗಂಟೆಗೆ ತೃತೀಯ ಪೂಜಾ ಕಾರ್ಯ ನಡೆಯುವುದು. ಸೂರ್ಯಾಸ್ತಕ್ಕೆ ದೀಪಾಲಂಕಾರ ಪೂಜೆ, ದೀಪನಗಾರಿ ನಡೆಯುವುದು ಸಂಜೆ ೮ಕ್ಕೆ ಚತುರ್ಥ ಪೂಜೆ ಜರಗುವುದು. ರಾತ್ರಿ ೯-೩೦ ಕ್ಕೆ ಪಂಚಮ ಪೂಜಾಕಾರ್ಯ ಜರುಗುವುದು ಎಂದು ಅರ್ಚಕರು ಹಾಗು ಶಿಕ್ಷಕರಾದ (ಶ್ರೀ ಪರಯ್ಯ ಸ್ವಾಮೀಜಿ ತೇಳಗಿನಮನಿ, ಇವರನ್ನು ಸಂದರ್ಶಿಸಿದಾಗ ಶ್ರೀ ಅಲ್ಲಮಪ್ರಭು ಬೃಹನ ಮಠದ ಪೂಜೆಯ ಕ್ರಮದ ಕುರಿತು ವಿವರಣೆ ನೀಡಿದ್ದಾರೆ).

ಜಾಗಟೆ, ನಗಾರಿ, ಸಂಭಾಳ ಚಳ್ಳಂಗ ವಾದ್ಯಗಳಿಂದ ಪ್ರತಿ ಪೂಜೆಗಳಿಗೆ ಜರುಗುವುದು. ನಂತರ ನೈವೇದ್ಯ ಪ್ರಸಾದಗಳೊಂದಿಗೆ ಪೂಜೆಗಳು ಮುಕ್ತಾಯಗೊಳ್ಳುತ್ತವೆ. ಗದ್ದುಗೆಯ ಮೇಲಿರುವ ಎಲ್ಲ ಅಲಂಕಾರ ಪೂಜಾ ಸಾಮಗ್ರಿ ತೆಗೆದು ಬೆಳಿಗ್ಗೆ ನಡೆಸಿದಂತೆ ಈಗಲೂ ಅಗರಬತ್ತಿ ಹಾಗೂ ಕರ್ಪೂರ ಹಚ್ಚುವ ಕಾರ್ಯ ಜರುಗಿ ರಾತ್ರಿ ೧೧ ಗಂಟೆಗೆ ಶ್ರೀ ಪ್ರಭುದೇವರಿಗೆ ದಿಂಬು ಮತ್ತು ಉತ್ತಮ ಹಾಸಿಗೆ ಹಾಸಿ, ಗುರುವಿಗೆ ನೀರು, ವಿಳ್ಳೇದೆಲೆ ವಗೈರೆ ಇಟ್ಟು ಜೋಗುಳ ಪದವನ್ನು ಹಾಡಿ ಗದ್ದುಗೆ ಮೇಲೆ ಅರ್ಚಕರು ಶ್ರೀ ಪ್ರಭುದೇವರ ಪಾದಸೇವೆಗೈದ್ದು, ನಮಸ್ಕಾರ ಮಾಡಿ ಎಲ್ಲ ಗಂಟೆಗಳನ್ನು ಬಾರಿಸಿ ಗರ್ಭಗುಡಿಯ ಬಾಗಿಲು ಹಾಕಿಕೊಂಡು ಹೊರ ಬರುವರು.

**ಶ್ರೀ ಅಲ್ಲಮಪ್ರಭು ದೇವರ ಪಲ್ಲಕಿ ಉತ್ಸವ**

ಪ್ರತಿವರ್ಷ ಶ್ರಾವಣ ಪಾಡ್ಯದಿಂದ ಹಿಡಿದು ಭಾದ್ರಪದ ಪಾಡ್ಯದವರೆಗೆ ಶ್ರೀ ಅಲ್ಲಮಪ್ರಭು ದೇವರ ಬೃಹನಮಠದಲ್ಲಿ ಎರಡು ಹೊತ್ತು ಪಲ್ಲಕ್ಕಿ ಸೇವೆ ನಡೆಯುವುದು. ಅಲ್ಲದೇ ದಸರಾ ಹಬ್ಬ, ವಿಜಯದಶಮಿಯ ದಿನದಂದು ಸಂಜೆ ದೀಪಾಲಂಕಾರದಿಂದ ಪಲ್ಲಕ್ಕಿ ಉತ್ಸವ ವಿಜೃಂಭಣೆಯಿಂದ ಅರ್ಚಕರು, ಭಕ್ತ ವೃಂದವು ನೇರವೇರಿಸುವರು.

ದೀಪಾವಳಿಯ ಹಬ್ಬದ ಬರಮ ಹಬ್ಬದಂದು ದ್ವಾರದಲ್ಲಿರುವ ಬ್ರಹ್ಮನ ಪೂಜೆ, ಚತುದರ್ಶಿಯಿಂದ ಪಂಚಮಿ ಮಿತಿಯವರೆಗೆ ಪಲ್ಲಕ್ಕಿ ಸೇವೆ ನೆರವೇರುವುದು. ೮ನೆಯ ದಿನದಂದು ಶ್ರೀ ಪ್ರಭುದೇವರ ಪಲ್ಲಕ್ಕಿ ಮತ್ತು ನಂದಿಕೋಲು ಉತ್ಸವಗಳು ಜರುಗುತ್ತವೆ. ಇದು ಶ್ರೀ ಅಲ್ಲಮಪ್ರಭು ಜಾಂಝ್ ಪಥಕ್ ಕಲಾಮೇಳ ಅವರ ವಿಶೇಷ ವಾದ್ಯಗಳೊಂದಿಗೆ ಶ್ರೀ ಮಠದಿಂದ ಆರಂಭಗೊಳ್ಳುವುದು. ಪಟ್ಟಣದ ಪ್ರಮುಖ ಬೀದಿಗಳಲ್ಲಿ ಹಾಯ್ದು ದೇಸಾಯಿಯವರ ಬಾವಿ ಹತ್ತಿರವಿರುವ ಗದ್ದುಗೆಗೆ ಬರುವುದು. ಅಲ್ಲಿಂದ ದೇಸಾಯಿಯವರ ಬಾವಿಗೆ ಬರುವುದು. ಅಲ್ಲಿ ಎಲ್ಲ ಅರ್ಚಕರೂ ಸಾಮೂಹಿಕವಾಗಿ ಮಂತ್ರ ಸ್ತೋತ್ರಗಳೊಂದಿಗೆ ಪೂಜೆ ನೆರವೇರುವುದು. ನಾಡಗೌಡರ ಹಸ್ತದಿಂದ ಪಂಚಾಮೃತ ಅಭಿಷೇಕ, ಫಲಹಾರಭಿಷೇಕ, ವನಸ್ಪತ್ತಿಭಿಷೇಕ, ಗಂಧಾಭಿಷೇಕ, ಕ್ಷೀರಾಭಿಷೇಕ, ಜಲಾಭಿಷೇಕ, ಭಸ್ಮಧಾರಣೆ, ಗಂಧಧಾರಣೆ ನಡೆಯುವುದು. ಇದಾದ ಮೇಲೆ ಶ್ರೀ ಪ್ರಭುದೇವರ ಗದ್ದುಗೆ ಮೇಲೆ ಬಂದ ನಂತರ ವಿಶೇಷ ನೈವೇದ್ಯ ಜರಗುವುದು. ಊರಿನ ಸಕಲ ಸದ್ಭಕರು ಬಂದು ದರ್ಶನವನ್ನು ಪಡೆಯುವುದು. ರಾತ್ರಿ ೧೨ ಗಂಟೆಗೆ ಮತ್ತೆ ಉತ್ಸವ ಆರಂಭವಾಗಿ ೪ ಗಂಟೆಗೆ ಪುನಃ ಬೃಹನಮಠಕ್ಕೆ ಬಂದು ಮಠದಲ್ಲಿ ಮತ್ತೆ ಪ್ರದಕ್ಷಿಣೆಯ ಬಳಿಕ ಗರ್ಭಗೃಹದಲ್ಲಿ ಪ್ರವೇಶಿಸುತ್ತಾರೆ.

ಸಂಕ್ರಮಣದಲ್ಲಿ ಕೂಡಾ ಇದೇ ರೀತಿಯ ವೈಭವದಿಂದ ಪಲ್ಲಕ್ಕಿ ಉತ್ಸವ ಸಮಾರಂಭ ಜರುಗುವುದು. ಮಹಾಶಿವರಾತ್ರಿಯಲ್ಲಿ ೨ ವಿಶೇಷ ಅಲಂಕಾರ ಪೂಜೆ ನೆರವೇರುವುದು.

ಸೂರ್ಯ ಉದಯದಿಂದ ಹಿಡಿದು ಮರುದಿನದ ಸೂರ್ಯೋದಯದವರೆಗೆ ನಡೆಯುವ ವಿಶೇಷ ಪೂಜೆ ಕಾಲಕ್ಕೆ ೫ ಸಾವಿರ ಉತ್ರಾಣಿ ಕಡ್ಡಿಗಳಿಂದ ಮಾಡಿದ ತುಪ್ಪದ ದೀಪದಿಂದ ಬೆಳಗುವರು. ಅಲ್ಲದೇ ಯುಗಾದಿ ಪಾಢ್ಯದಂದು ಇಲ್ಲಿ ಶ್ರೀ ಅಲ್ಲಮಪ್ರಭು ದೇವರ ಜಯಂತಿ ನಿಮಿತ್ಯ ಜೋಗುಳ ಕಾರ್ಯಕ್ರಮ, ನಾಮಕರಣ, ತೊಟ್ಟಿಲು ಕಾರ್ಯಕ್ರಮ, ವೈಶಿಷ್ಟ್ಯಪೂರ್ಣವಾಗಿ ಸಮಸ್ತ ಮುತ್ತೈದೆಯರಿಂದ ನಡೆಯುವುದು.

೧ ಆಗಸ್ಟ್ ೨೦೦೦ ರಲ್ಲಿ ಶ್ರೀ ಪ್ರಭುಲಿಂಗೇಶ್ವರ ಪ್ರಸಾದ ಸಮಿತಿ ಅಸ್ತಿತ್ವಕ್ಕೆ ಬಂದಿತು. ಪ್ರತಿವರ್ಷ ಶ್ರಾವಣ ಮಾಸದ ಕೊನೆಯ ಸೋಮವಾರ ಜಾತ್ರೆ ಜರುಗುವುದು. ಈ ಜಾತ್ರೆಯ ಸಮಯದಲ್ಲಿ ಶ್ರೀ ಪ್ರಭುದೇವರ ದರ್ಶನಕ್ಕೆ ಲಕ್ಷಾಂತರ ಜನರು ಬರುತ್ತಾರೆ. ಅವರೆಲ್ಲರಿಗೂ ಪ್ರಸಾದ ವ್ಯವಸ್ಥೆ ಬೆನಕನ ಅಮಾವಾಸ್ಯೆಯ ಪಾಡ್ಯಮಿಯವರೆಗೆ ಲಕ್ಷಾಂತರ ಭಕ್ತ ಸಮೂಹಕ್ಕೆ ಬೇರೆ ಬೇರೆ ಪಕ್ವಾನಗಳನ್ನು ತಯಾರಿಸಿ ಪ್ರಸಾದವನ್ನು ಪ್ರತಿಯೊಬ್ಬರಿಗೂ ಕೂಡಾ ದೊರಕುವಂತೆ ಮಾಡಿದ್ದಾರೆ. ಎಲ್ಲ ಭಕ್ತ ಸಮೂಹ ಈ ವಿಶೇಷವಾದ ಪ್ರಸಾದವನ್ನು ಸ್ವೀಕರಿಸಿ ಅತಿ ಸಂತೃಪ್ತರಾಗುವುದನ್ನು ನಾವು ಕಾಣುತ್ತೇವೆ. ಹೀಗೆ ಐತಿಹಾಸಿಕ ಪ್ರಾಚೀನ ತೇರದಾಳದಲ್ಲಿ ಶ್ರೀ ಪ್ರಭುದೇವರ ಪ್ರಭಾವ ಅಪಾರವಿದ್ದು ಊರಿನ ಯಾವುದೇ ಮನೆಯಲ್ಲಿ ಪ್ರಥಮವಾಗಿ ಜನಿಸಿದ ಗಂಡು ಮಗುವಿಗೆ ಪ್ರಭು, ಪರಪ್ಪಾ ಎಂದು ನಾಮಕರಣ ಮಾಡುತ್ತಾರೆ. ಹೀಗಾಗಿ ಪ್ರತಿ ಮನೆಯಲ್ಲೊಬ್ಬ ಪ್ರಭು ಹೆಸರಿನವನು ಇದ್ದಾನೆ. ಹೀಗೆ ಊರಿನ ತುಂಬೆಲ್ಲಾ ಪ್ರಭುಗಳನ್ನು ಕಾಣುತ್ತೇವೆ.

**ಗುಮ್ಮಟ ಗಲ್ಲಿ ಮಸೀದಿ**

ತೇರದಾಳದ ಗುಮ್ಮಟ ಗಲ್ಲಿ ಎಂದು ಕರೆಯುವ ಪ್ರದೇಶದಲ್ಲಿ ಮುಸ್ಲಿಂರ ಒಂದು ಪ್ರಾಚೀನ ಮಸೀದಿ ಇದೆ. ಆದರೆ ಇಲ್ಲಿನ ಸ್ಥಳೀಯರು ಇದು ಮುಸ್ಲಿಂ ಸಂತನೋರ್ವನ ಕಳೇಬರ ಇರುವ ದರ್ಗಾ ಎನ್ನುತ್ತಾರೆ. ಇದರ ಭೂಮಿಯಲ್ಲಿ ಆ ಸಂತನ ಅಸ್ಥಿ ಅವಶೇಷಗಳನ್ನು ತಾಮ್ರದ ಗಡಿಗೆಯಲ್ಲಿ ಹೂಳಲಾಗಿದೆ. ಹಾಗಾಗಿ ಆತನ ಸಂತತಿಯವರು ಪ್ರತಿವರ್ಷ ಇಲ್ಲಿಗೆ ಬಂದು ಪೂಜೆಗಳನ್ನು ಮಾಡಿಕೊಂಡು ಹೋಗುತ್ತಾರೆ ಎನ್ನುವ ನಂಬಿಕೆಗಳು ಇಲ್ಲಿವೆ. ಪೂರ್ವಾಭಿಮುಖವಾಗಿರುವ ಇದು ಚಚ್ಚೌಕಾರವಾಗಿದ್ದು ೧೦ X ೧೦ ಅಡಿ ವ್ಯಾಸವನ್ನು ಹೊಂದಿದೆ. ಇದರ ನಿರ್ಮಾಣಕ್ಕೆ ಗ್ರಾನೈಟ್, ಇಟ್ಟಿಗೆ, ಗಾರೆಗಳನ್ನು ಬಳಸಲಾಗಿದೆ. ಇದನ್ನು ಹನಂಗಡಿ ದೇಸಾಯಿ ಮನೆತನದವರು ನಿರ್ಮಿಸಿದರು ಎನ್ನುವ ಪ್ರತೀತಿ ಇದೆ[೨೭]. ಕ್ರಿ.ಶ.೧೫–೧೬ನೇ ಶತಮಾನಕ್ಕೆ ಸೇರಿರಬಹುದಾದ ಇದು ಇಂಡೋ–ಇಸ್ಲಾಮಿಕ್ ಶೈಲಿಯಲ್ಲಿದೆ. ಒಳ ಭಾಗದ ಭಿತ್ತಿ ಸಂಪೂರ್ಣ ಸರಳವಾಗಿದ್ದು, ಅದರ ಪಶ್ಚಿಮ ದಿಕ್ಕಿನ ಭಿತ್ತಿಯಲ್ಲಿ 'ಮಿಹ್ರಾಬ್' ಇದೆ. ಅದರ ಕೆಳ ಭಾಗದಲ್ಲಿ ಖಾಜಿ/ಮುಲ್ಲಾ ಕುಳಿತುಕೊಳ್ಳುವ ಪಾಲಿಪಿಟ್ (ಕಟ್ಟೆ) ಇದೆ. ಇದರ ವಿತಾನದಲ್ಲಿ ಬಿಜಾಪುರ ಆದಿಲ್ ಶಾಹಿಗಳ ಶೈಲಿಯ ಡಬಲ್ ಡೂಮ್ ಇದೆ. ಇದರ ಹೊರಭಾಗದಲ್ಲಿ ಅಧಿಷ್ಠಾನ, ಭಿತ್ತಿ, ಶಿಖರಗಳಿದ್ದು, ಅಲಂಕಾರಯುಕ್ತವಾಗಿವೆ[೨೮]. ಅಧಿಷ್ಠಾನದಲ್ಲಿ ವಿವಿಧ ಪಟ್ಟಿಕೆಗಳಿದ್ದು, ನೋಡಲು ಸುಂದರವಾಗಿದೆ. ಇಲ್ಲಿನ ಭಿತ್ತಿಯೂ ಸರಳವಾಗಿದ್ದು, ಅದರ ಮೇಲೆ ಯಾವುದೇ ಅಲಂಕಾರಗಳಿಲ್ಲ. ಆದರೆ ಪೂರ್ವ ಭಾಗದ ಭಿತ್ತಿಯಲ್ಲಿ ಪ್ರವೇಶ ದ್ವಾರವಿದ್ದು, ಅದರಲ್ಲಿ ತುದಿಗಮಾನಿನ ಅಲಂಕಾರ ಮಾಡಲಾಗಿದೆ. ಇದರ ಪ್ರಸ್ತರ ಭಾಗವು ಸ್ವಲ್ಪ ಮುಂದೆ ಬಂದಿರುವಂತಿದ್ದು, ಅದರ ಮೇಲೆ ಅರಳಿದ ಪುಷ್ಪಗಳ ಅಲಂಕಾರವಿದೆ. ಅದರ ಮೇಲ್ಗಡೆ ತೆನೆಗಳ ಅಲಂಕಾರವಿದೆ. ನಂತರ ಅದರ ಮೇಲ್ಗಡೆ ಅರೆ ವೃತ್ತಾಕಾರದ

ಗುಮ್ಮಟವಿದ್ದು, ಅದರ ಮುಂಭಾಗದ ಸುತ್ತಲೂ ಇನ್ನೊಂದು ಸುತ್ತಿನ ತೆನೆಗಳ ಅಲಂಕಾರವಿದೆ. ಗುಮ್ಮಟದ ತುದಿಯಲ್ಲಿ ಪಿನಲ್ ಇದ್ದು ಇದರ ನಾಲ್ಕು ಮೂಲೆಗಳಲ್ಲಿ ಮಿನಾರ್ ಮತ್ತು ಮಿನಾರೇಟ್ಸ್ ಇದ್ದು ಅವು ನಯನ ಮನೋಹರವಾಗಿವೆ.

**೨. ಹನಗಂಡಿಯ ಧಾರ್ಮಿಕ ಸ್ಮಾರಕಗಳು**

ಹನಗಂಡಿ ಗ್ರಾಮವು ತಾಲೂಕು ಕೇಂದ್ರವಾದ ಜಮಖಂಡಿಯಿಂದ ೨೬ ಕಿ.ಮೀ ಪಶ್ಚಿಮಕ್ಕಿದ್ದು, ತೇರದಾಳ ಗ್ರಾಮದಿಂದ ೯ಕಿ.ಮೀ ದೂರದಲ್ಲಿ ಇದೆ. ಇದು ರಬಕವಿ-ತೇರದಾಳ ಮಾರ್ಗದ ಮಧ್ಯದಲ್ಲಿರುತ್ತದೆ. (ಅಕ್ಷಾಂಶ, ೧೬.೨೯ ಡಿಗ್ರಿ ದಿಂದ ೩೦ ಡಿಗ್ರಿ, ರೇಖಾಂಶ : ೮೫.೪ ಡಿಗ್ರಿ) ಗ್ರಾಮಕ್ಕೆ ವಿಶಾಲವಾದ ರಸ್ತೆ ಮಾರ್ಗವಿದ್ದು ಸಾಕಷ್ಟು ವಾಹನಗಳ ಸೌಕರ್ಯವಿದೆ. ೨೦೧೧ರ ಜನಗಣತಿ ಪ್ರಕಾರ ಇಲ್ಲಿನ ಜನಸಂಖ್ಯೆ ೮೫೦೦ ಇದೆ. ನಾವು ಗ್ರಾಮದ ಸುತ್ತಲಿನ ಪ್ರದೇಶ ವೀಕ್ಷಿಸಿ ನೋಡಲಾಗಿ ನಮಗೆ ಸುಮಾರು ಅರ್ಧಕ್ಕಿಂತ ಹೆಚ್ಚು ಭಾಗ ಪ್ರದೇಶವು ಬಿಳಿ ಮತ್ತು ಸ್ವಲ್ಪ ಕೆಂಪು ಮಿಶ್ರಿತ ಶಿಲೆಯಿಂದ ಕೂಡಿದ ಅಷ್ಟೇನು ಎತ್ತರವಾಗಿರದೇ ಮತ್ತು ಸ್ವಲ್ಪ ಏರು ತಗ್ಗುಗಳಿಂದ ಕೂಡಿದ ಗುಡ್ಡವನ್ನು ಕಾಣುತ್ತೇವೆ. ಸುಮಾರು ೧೦೦ಕ್ಕೆ ೨೦ ರಷ್ಟು ಬೇಸಾಯಕ್ಕೆ ಯೋಗ್ಯವಾದ ಕಪ್ಪು ಎರೆ ಮಣ್ಣಿನ ಭೂಮಿ ಇದೆ. ಸುಮಾರು ೧೦೦ಕ್ಕೆ ೧೫ ರಷ್ಟು ಭಾಗ ಪ್ರದೇಶವು ಕೆಂಪು ಮಸಾರೆ ಭೂಮಿಯನ್ನು ಹೊಂದಿದೆ. ಇದು ಊರಿಗೆ ಹೊಂದಿಕೆಯಾಗಿದೆ ಮತ್ತು ಇಲ್ಲಿ ಬೇಸಾಯವನ್ನು ಮಾಡುತ್ತಾರೆ. ಗ್ರಾಮವು ಜನಸಂಖ್ಯೆಯಿಂದ ಚಿಕ್ಕದಾಗಿದ್ದರೂ ಕೂಡಾ ಅದು ಇತ್ತೀಚಿಗೆ ಬೆಳವಣಿಗೆ ಹೊಂದುತ್ತಾ ಇದೆ. ಇಲ್ಲಿನ ಪರಿಸರದಲ್ಲಿ ಅನೇಕ ಪ್ರಾಚ್ಯಾವಶೇಷಗಳು ಈ ಪೂರ್ವದಲ್ಲಿ ಉತ್ಖನನಗೊಂಡಿವೆ. ಉದಾ: ಪುರಾತತ್ವ ಶಾಸ್ತ್ರಜ್ಞರಾದ ಅ.ಸುಂದರರವರು ಅನೇಕ ಬೃಹತ್ ಶಿಲಾಗೋರಿಗಳನ್ನು ಪತ್ತೆ ಹಚ್ಚಿ ಬೆಳಕಿಗೆ ತಂದಿದ್ದಾರೆ. ಈ ಒಂದು ದೃಷ್ಟಿಯಿಂದ ಇತಿಹಾಸಕಾರರಿಗೆ ಈ ಭಾಗದ ಪ್ರದೇಶವು ಗಮನಸೆಳೆಯುವಂತಾಗಿದೆ. ಗ್ರಾಮದ ಅಕ್ಕ ಪಕ್ಕದಲ್ಲಿ ನದಿಗಳಿರುವುದಿಲ್ಲ. ಆದರೆ ಅನೇಕ ನೀರಿನ ಕಾಲುವೆಗಳು, ಬಾವಿ, ಕೆರೆ, ಕೊಳವೆಬಾವಿಗಳನ್ನು ಮತ್ತು ಹಳ್ಳಗಳನ್ನು ಕಾಣುತ್ತೇವೆ. ಗ್ರಾಮದ ಪೂರ್ವದಂಚಿನಲ್ಲಿ ಹಳ್ಳವಿದೆ. ಈ ಭಾಗದ ಹವಾಗುಣವು ತಂಪು ಸೂಸುಗಾಳಿಯಿಂದ ಕೂಡಿದ್ದು ಸಮಶಿತೋಷ್ಣವಲಯವಾಗಿದೆ. ಕೃಷ್ಣಾ ನದಿಯು ೧೨ ಕಿ.ಮೀ ಅಂತರದಲ್ಲಿ ಉತ್ತರ ದಿಕ್ಕಿಗೆ ಇರುವುದು.

ಹನಗಂಡಿ ಎಂದು ಹೆಸರು ಬರಲು ಕಾರಣವೇನೆಂದು ಸ್ಥಳೀಯ ಜನರನ್ನು ವಿಚಾರಿಸಲಾಗಿ ಅದಕ್ಕೆ ಅವರು ಹೀಗೆ ಹೇಳಿದರು. ಮೊದಲು ಈ ಗ್ರಾಮದಲ್ಲಿ ಅಧಿಕ ಪ್ರಮಾಣದಲ್ಲಿ ಪಸರಿಸಿಕೊಂಡ ಶಿಲಾ ಗೋರಿ ಇದ್ದವು. ಕೆಲವೊಂದು ಗೋರಿಗಳು ಮತ್ತು ಸಮಾಧಿಗಳು ಕಲ್ಲಿನ ತುಂಡುಗಳಿಂದ ಕೆಳಗಿನಿಂದ ಮೇಲಿನವರೆಗೂ ಕಟ್ಟುತ್ತಾ ಬಂದು ಮೇಲೆ ಒಂದು ಕಿಂಡಿ ಇರುತ್ತಿದ್ದವು ಇದರಿಂದ ಜನರು ಹೆಣಗಳ ಗುಂಡಿ ಎಂದು ಕರೆಯುತ್ತಾ, ಬರಬರುತ್ತಾ ಹನಗಂಡಿ ಎಂದು ಕರೆದಿರಬಹುದಾದ ಸಾಧ್ಯತೆ ಇದೆ. ಇದುವೇ ಹೊನ್ನ+ಕಂಡಿ=ಹೊನಕಂಡಿ>ಹನಗಂಡಿಯಾಗಿರುವ ಸಾಧ್ಯತೆ ಇದೆ. ಇಲ್ಲಿ ತ್ರಾಮ, ಹಿತ್ತಾಳೆಯಿಂದ ತಯಾರಿಸಿದ ವಿವಿಧ ವಿಶೇಷವಾದ ಮೂರ್ತಿಗಳನ್ನು ಹಾಗೂ ಘಂಟಿಗಳನ್ನು ತಯಾರಿಸುವುದರಲ್ಲಿ ವಿಶೇಷ ಪ್ರಸಿದ್ಧಿ ಪಡೆದಿದೆ. ಇದು ಪ್ರಾರಂಭದಲ್ಲಿ ಸಾಂಗ್ಲಿ ಸಂಸ್ಥಾನಕ್ಕೆ ಒಳಪಟ್ಟಿತ್ತು. ಆದಿಲ್‌ಶಾಹಿಗಳ ಆಡಳಿತದಲ್ಲಿ ತೇರದಾಳ ನಾಡಗೌಡರ ವಶದಲ್ಲಿತ್ತು. ನಂತರದಲ್ಲಿ

ದೇಸಗತಿ ಗ್ರಾಮವಾಗಿ ಆಡಳಿತ ನಡೆಸಿದ್ದು ಕಂಡುಬರುತ್ತದೆ. ಇಲ್ಲಿ ೧) ಕೊಳ್ಳನ್ನವರ ವಸತಿ ೨) ಸರದಾರ ಮಡ್ಡಿ ವಸತಿ ೩) ಕಮಲ ದಿನ್ನಿ ವಸತಿಗಳಿವೆ.

ಈ ಗ್ರಾಮದ ಸುತ್ತಲಿನ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ನೆಲೆಗಳನ್ನು ಅ.ಸುಂದರ ಅವರಿಂದ ಈ ಪೂರ್ವದಲ್ಲಿ ಶೋಧನೆಗೊಂಡಿದ್ದು ಇನ್ನು ಪುರಾತತ್ವ ಉತ್ಖನನ ಕಾರ್ಯ ನಡೆಯಬೇಕಾಗಿದೆ[೨೯]. ದಿಗಂಬರೇಶ್ವರ, ಬಸವಣ್ಣ ಹಾಗೂ ನೇಮಿನಾಥ ಬಸದಿ ಇವು ಸಮಾರು ೧೨-೧೩ ನೇ ಶತಮಾನದಲ್ಲಿ ನಿರ್ಮಿಸಲ್ಪಟ್ಟವುಗಳಾಗಿವೆ. ಗ್ರಾಮದ ಮಧ್ಯದಲ್ಲಿ ಸುಮಾರು ೪ ಎಕರೆಯಷ್ಟು ಆವರಣ ಹೊಂದಿದ ಕೋಟೆಯಿದ್ದು ವಿಜಯನಗರ ಕಾಲಾವಧಿಯಲ್ಲಿ ನಿರ್ಮಿತವಾದಂತೆ ತೋರುತ್ತದೆ. ಕೋಟೆಯೊಳಗೆ ಎರಡು ಅಂತಸ್ತಿನಿಂದ ನಿರ್ಮಾಣಗೊಂಡ ಜೈನ ತೀರ್ಥಂಕರರ ಬಸದಿ ಹಾಗು ಒಂದು ಬಾವಿ ಇದೆ. ಕೋಟೆಯ ಹೊರ ಭಾಗದ ಆವರಣದಲ್ಲಿ ಹನುಮಂತನ ಗುಡಿ ಇದೆ. ಇದರ ಪ್ರವೇಶ ದ್ವಾರವು ದಕ್ಷಿಣಾಭಿಮುಖವಾಗಿದೆ. ಈ ಗ್ರಾಮದಲ್ಲಿ ಅನೇಕ ದೇವಾಲಯಗಳು, ಬಸದಿಗಳಿವೆ. ಗ್ರಾಮದಲ್ಲಿ ಅನೇಕ ಚಿಕ್ಕ ಗುಡಿಗಳೊಂದಿಗೆ ದೊಡ್ಡ ಗಾತ್ರದ ದೇವಾಲಯಗಳು ಇವೆ. ಗ್ರಾಮದಿಂದ ೧ ಕಿ,ಮೀ ಪೂರ್ವದ ಅಂಚಿನಲ್ಲಿ ದಿಗಂಭರೇಶ್ವರ ದೇವಾಲಯವಿದ್ದು, ಇದರ ಎದುರಿಗೆ ಸುಮಾರು ೧೦೦ ಅಡಿ ಅಂತರದಲ್ಲಿ ಬಸವಣ್ಣನ ಗುಡಿ ಇದೆ. ಇದರ ಪ್ರವೇಶ ದ್ವಾರವು ದಿಗಂಭರೇಶ್ವರ ದೇವಾಲಯವಿದ್ದು, ಇದರ ಎದುರಿಗೆ ಮೂಕವಾಗಿದೆ. ದುರ್ಗದ ಒಳಗಡೆ ನೇಮಿನಾಥ, ಪಾರ್ಶ್ವನಾಥ ಬಸದಿ ಇದೆ. ಇನ್ನೊಂದು ಆದಿನಾಥ ಬಸದಿ ಗ್ರಾಮದಿಂದ ೧.೧/೨ಕಿ.ಮೀ ಅಂತರದಲ್ಲಿ ತೇರದಾಳಕ್ಕೆ ಹೋಗುವ ರಸ್ತೆಯ ಪಕ್ಕದಲ್ಲಿರುತ್ತದೆ. ಇಲ್ಲಿ ಆಂಜನೇಯ ಗುಡಿಯಿದೆ.

**ವಾಡೆಯೊಳಗಿನ ಪಾರ್ಶ್ವನಾಥ ಬಸದಿ**

ಹನಗಂಡಿಯ ವಾಡೆಯೊಳಗಡೆ ಇರುವ ಈ ಬಸದಿ ಎರಡು ಅಂತಸ್ತಿನಿಂದ ಕೂಡಿದೆ. ಇದು ಸುಮಾರು ೬೦೦ ವರ್ಷಗಳ ಹಿಂದೆಯೇ ನಿರ್ಮಾಣವಾಗಿದೆ[೩೦]. ಇದು ಗರ್ಭಗುಡಿ, ಸುಕನಾಶಿ, ಸಭಾಮಂಟಪ ಮತ್ತು ತೆರೆದ ಮುಖ ಮಂಟಪಗಳನ್ನೊಳಗೊಂಡಿದೆ. ಅದರಲ್ಲಿ ಪಾರ್ಶ್ವನಾಥ, ಅನಂತನಾಥ, ಬಾಹುಬಲಿ, ಪದ್ಮಾವತಿ ಶಿಲ್ಪಗಳನ್ನು ಕಾಣುತ್ತೇವೆ. ಈ ಬಸದಿಯ ಗರ್ಭಗುಡಿಯಲ್ಲಿ ಪಾರ್ಶ್ವನಾಥ ತೀರ್ಥಂಕರನ ಕಪ್ಪು ಶಿಲೆಯ ಮೂರ್ತಿ ಇದೆ. ಗರ್ಭಗುಡಿ ಮುಂಭಾಗದಲ್ಲಿ ಸರಳ ರೀತಿಯ ಅಂತರಾಳವಿದೆ. ಆನಂತರ ಸಭಾಮಂಟಪವಿದ್ದು, ಅದರ ಮಧ್ಯದಲ್ಲಿ ೪ ಕಂಬಗಳಿವೆ. ಇದರಲ್ಲಿ ಸ್ಥಾನೀಕ ಭಂಗಿಯಲ್ಲಿರುವ ತೀರ್ಥಂಕರರ ಮೂರ್ತಿ ಇದೆ. ಇಲ್ಲಿಯೇ ಆಸೀನ ತೀರ್ಥಂಕರ ಮೂರ್ತಿ ಇದೆ. ಇವುಗಳ ನಡುವೆ ಯಕ್ಷಿಣಿಯಾದ ಪದ್ಮಾವತಿ ಮತ್ತು ಜ್ವಾಲಾ ಮಾಲಿನಿಯರ ಮೂರ್ತಿಗಳನ್ನು ಇಡಲಾಗಿದೆ. ಸಭಾ ಮಂಟಪದ ಮುಂಭಾಗಕ್ಕೆ ಹೊಂದಿಕೊಂಡಂತೆ ತೆರೆದಮುಖ ಮಂಟಪವಿದೆ. ಇದರ ಮುಂದುಗಡೆ ಬಹುಶ: ಮಾನಸ್ತಂಭ ನಿಲ್ಲಿಸಲು ಮಾಡಿದ ಒಂದು ಚೌಕಾಕಾರದ ಕಟ್ಟೆ ಇದೆ. ಆದರೆ ಅಲ್ಲಿ ಮಾನಸ್ತಂಭವಿಲ್ಲ.

ಇಲ್ಲಿನ ಗರ್ಭಗುಡಿಯ ಮೇಲೆ ಮತ್ತೊಂದು ಗರ್ಭಗುಡಿ ಇದೆ. ಅಲ್ಲಿ ಬಿಳಿ ಅಮೃತ ಶಿಲೆಯ ಅನಂತನಾಥ ಮೂರ್ತಿ ಇದೆ. ಅದನ್ನು ಪೀಠದ ಮೇಲೆ ಕೂಡಿಸಲಾಗಿದೆ. ಅದರ ಮುಂಭಾಗದಲ್ಲಿ ತೆರೆದ ಮಂಟಪವಿದ್ದು, ಅದರಲ್ಲಿ ಬಾಹುಬಲಿ ಶಿಲ್ಪವಿದೆ. ಅದು ಕೂಡಾ ಬಿಳಿ

ಶಿಲೆಯಿಂದ ಮಾಡಲ್ಪಟ್ಟಿದೆ. ಮುಂದುಗಡೆ ಛಾವಣಿ ಕಮಾನುಗಳ ರೀತಿಯಿಂದ ನಿರ್ಮಿಸಿದೆ. ಅದರಲ್ಲಿ ಕಮಲದ ಚಿಹ್ನೆ ಇದೆ. ಅದನ್ನು ಕಟ್ಟಿಗೆಯಿಂದ ಮಾಡಲಾಗಿದೆ. ಇಲ್ಲಿ ಮೇಲಂತಸ್ತಿನ ಗರ್ಭಗುಡಿಯ ಮೇಲೆ ಶಿಖರವಿದೆ. ಆ ಶಿಖರ ಮುಸ್ಲಿಂ ಶೈಲಿಯಲ್ಲಿ ಕೂಡಿದೆ. ಆ ಶಿಖರ ಕೂಡ ಚಿಕ್ಕ ಚಿಕ್ಕ ಕಮಾನುಗಳಿಂದ ಆವರಿಸಲ್ಪಟ್ಟ ಸುಂದರವಾದ ಚಿಕ್ಕದಾದ ಶಿಖರವನ್ನು ಹೊಂದಿದೆ. ಈ ಪಾರ್ಶ್ವನಾಥ ಬಸದಿಯು ವಾಡೆಯ ಒಳಗೆ ಇದೆ. ಅದರಲ್ಲಿ ಮತ್ತೆ ಸುತ್ತಲೂ ಗೋಡೆ ಇದೆ ಮಧ್ಯದಲ್ಲಿ ಈ ಬಸದಿ ನಿರ್ಮಾಣವಾಗಿದೆ

**ಹನುಮಂತ ದೇವಸ್ಥಾನ**

ಹನಗಂಡಿಯಲ್ಲಿರುವ ಗುಡಿಗಳಲ್ಲಿ ಈ ಹನುಮಂತ ದೇವಸ್ಥಾನವು ಒಂದಾಗಿದೆ. ಇದು ಸುಮಾರು ೧೩-೧೪ ನೇ ಶತಮಾನಕ್ಕೆ ಸೇರಿದ ಹಳೆಯ ಕಟ್ಟಡವಾಗಿದೆ. ಗರ್ಭಗುಡಿಯಲ್ಲಿ ಹನುಮಂತನ ಕಪ್ಪು ಶಿಲಾ ವಿಗ್ರಹವಿದೆ. ಈ ದೇವಾಲಯಕ್ಕೆ ಗರ್ಭಗೃಹ ಮಾತ್ರ ಇದೆ. ಸಭಾ ಮಂಟಪ ತೆರದದ್ದಾಗಿದೆ. ಮೇಲ್ಛಾವಣಿ ಇರುವುದಿಲ್ಲ. ಮೆಟ್ಟಲುಗಳಂತೆ ಶಿಖರವನ್ನು ಹೊಂದಿದೆ. ಆ ಶಿಖರ ಅತಿ ಕಿರಿದಾಗಿದೆ.

**ದಿಗಂಬರೇಶ್ವರ ದೇವಾಲಯ**

ದಿಗಂಬರೇಶ್ವರ ದೇವಾಲಯವು ಹನಗಂಡಿ ಗ್ರಾಮದಿಂದ ಒಂದು ಕಿ.ಮೀ ಪೂರ್ವಕ್ಕೆ ಇದ್ದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯವು ಗುಡ್ಡದ ಇಳಿ ಜಾರಿನಲ್ಲಿದ್ದು, ಪಕ್ಕದಲ್ಲಿ ಹಳ್ಳವಿದೆ. ಇದು ೧೨ ನೇ ಶತಮಾನದಲ್ಲಿ ನಿರ್ಮಿಸಿದ್ದಾರೆ. ಇದರ ಸಭಾ ಮಂಟಪ ೧೮೬೪ ರಲ್ಲಿ ಜೀರ್ಣೋದ್ದಾರಗೊಂಡಿದೆ. ಚಾಲುಕ್ಯರ ಕಾಲಾವಧಿಯಲ್ಲಿ ನಿರ್ಮಾಣಗೊಂಡ ದಿಗಂಬರೇಶ್ವರ ದೇವಸ್ಥಾನದ ೪ಮನೆತನದವರು ಪೂಜೆಯನ್ನು ಮಾಡುತ್ತಾರೆ. ಇವರಲ್ಲಿ ಸಿದ್ದಪ್ಪ ಶಿವಗೊಂಡ ಪೂಜಾರಿಯವರು ಒಬ್ಬರು. ದಿಗಂಬರೇಶ್ವರ ಸ್ವಾಮಿಯವರು ಬಬಲಾದಿ ಸದಾಶಿವಪ್ಪ, ತೇರದಾಳದ ಅಲ್ಲಮ ಪ್ರಭುವಿನ ಸಮಕಾಲಿನರು. ಈ ದೇವಾಲಯವು ೨.೧/೨ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣವಾಗಿದೆ. ಇದರ ಗರ್ಭಗುಡಿಯು ಸ್ವಲ್ಪ ಆಯತಾಕಾರವಾಗಿದ್ದು ೬ ಅಡಿ ೮ ಸೆ ಮೀ ಉದ್ದ, ೮ ಅಡಿ ಅಗಲವಾಗಿದೆ. ಗರ್ಭಗುಡಿಯ ಕತ್ತಲೆಯ ಕೋಣೆಯಾಗಿದ್ದು ಕಿಟಕಿಗಳು ಇರುವುದಿಲ್ಲ. ಇದರ ಮೇಲ್ಛಾವಣಿಯು ಕಪ್ಪು ಶಿಲೆಯದಾಗಿದ್ದು ಉಬ್ಬು ಆಕಾರದ ವೃತ್ತಾಕಾರದ ೩ ಪಟ್ಟಿಕಗಳಿವೆ. ಇವುಗಳ ಮಧ್ಯದಲ್ಲಿ ಕಮಲದ ಹೂವನ್ನು ಕಾಣುತ್ತೇವೆ. ಗರ್ಭಗೃಹದ ಹಿಂಬದಿಯ ಗೋಡೆಗೆ ಹತ್ತಿ ೨.೧/೨ ಅಡಿ ಎತ್ತರ ಜಗಲಿ ಇದೆ. ಇದರ ಮೇಲೆ ದಿಗಂಬರೇಶ್ವರನ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ದಿಂಗಬರೇಶ್ವರನ ವಿಗ್ರಹಕ್ಕೆ ಹಿತ್ತಾಳೆಯ ಮುಖ ಕವಚವಿದೆ. ತಲೆಗೆ ಕೆಂಪು ಜರತಾರೆ ರುಮಾಲು ಸುತ್ತಲಾಗಿದ್ದು ಮೇಲೆ ಸಪ್ತ ಹೆಡೆಯ ಹಿತ್ತಾಳೆಯ ನಾಗರವಿದೆ. ಇದು ಹಿತ್ತಾಳೆಯಿಂದ ಮಾಡಿದ್ದಾಗಿದೆ. ವಿಗ್ರಹದ ಮುಂಭಾಗದಲ್ಲಿ ಎರಡು ಚಿಕ್ಕ ಹಿತ್ತಾಳೆಯ ಬಸವ ವಿಗ್ರಹಗಳು ಹಾಗೂ ಹಿತ್ತಾಳೆಯ ಪಗಡೆ ಕಾಯಿಗಳು ಇರುತ್ತವೆ. ಗರ್ಭಗೃಹದ ಬಾಗಿಲ ಲಲಾಟ ಬಿಂಬದಲ್ಲಿ ಕುಳಿತ ಗಣಪತಿಯ ಚಿತ್ರವಿದೆ. ದ್ವಾರದ ಎಡ ಬಲಕ್ಕೆ ದ್ವಾರ ಪಾಲಕರಿದ್ದಾರೆ.

ಇದರ ಅಂತರಾಳವು ಗರ್ಭಗುಡಿಯನ್ನು ಹಾಗೂ ಸಭಾಮಂಟಪವನ್ನು ಒಂದು ಗೂಡಿಸಿದೆ. ಮತ್ತು ಅಂತರಾಳವು ಚಿಕ್ಕದಾಗಿದ್ದು ೨೪/೨ ಅಡಿ ಉದ್ದವಾಗಿದೆ. ಇದು ತೆರೆದ ಸಭಾಮಂಟಪವನ್ನು ಹೊಂದಿದ್ದು ೧೬ ಕಂಬಗಳ ಆಧಾರದಿಂದ ಕಟ್ಟಲ್ಪಟ್ಟಿದೆ. ಸಭಾಮಂಟಪ

ಒಳ ವಿಸ್ತೀರ್ಣವು ೨೩ ಅಡಿ ಅಗಲ ೧೮ ಅಡಿ ಉದ್ದವಿದೆ. ಇದರಲ್ಲಿ ೬ ಕಮಾನುಗಳಿವೆ. ಗರ್ಭದ್ವಾರದ ಗೋಡೆಯ ಎರಡು ಪಕ್ಕಗಳಲ್ಲಿ ನಾಗರ ಶಿಲ್ಪಗಳಿವೆ.

ದಿಗಂಬರೇಶ್ವರ ಗರ್ಭಗುಡಿಯ ಮೇಲೆ ಶಿಖರವಿದ್ದು ವೃತ್ತಾಕಾರದ ಪಟ್ಟಿಕೆಗಳಿಂದ ಕೂಡಿದ್ದು ಮೇಲೆ ಹೋದಂತೆ ಚಿಕ್ಕದಾಗುತ್ತ ಹೋಗಿದೆ. ಮೇಲೆ ತುದಿಯಲ್ಲಿ ಕಂಚಿನ ಕಲಶವಿದೆ. ಇದರ ಶೈಲಿಯನ್ನು ಗಮನಿಸದಾಗ ನಾಗರ ಶೈಲಿ ಕಾಣುತ್ತದೆ. ಈ ದೇವಾಲಯದಿಂದ ಸುಮಾರು ೨೫ ಅಡಿ ಅಂತರದಲ್ಲಿ ದೀಪಸ್ತಂಭವಿದೆ. ಇದರ ಹಿಂಬದಿಯಲ್ಲಿ ಚಿಕ್ಕಗುಂಡಿಯಿದ್ದು ಅದರಲ್ಲಿ ಜೋಡುನಾಗರ ಕಪ್ಪು ಶಿಲಾ ಫಲಕವನಿಟ್ಟಿದ್ದಾರೆ. ದಿಗಂಬರೇಶ್ವರ ದೇವಾಲಯದ ಹಿಂಬದಿಯ ಗೋಡೆಯ ಹೊರಭಾಗದಲ್ಲಿ ಧರ್ಮ ಚಕ್ರವಿರುತ್ತದೆ. ದೇವಾಲಯದ ಹೊರ ಆವರಣದಲ್ಲಿ ಉಗ್ರಾಣಗಳಿವೆ. ಈ ದೇವಸ್ಥಾನದ ಜಾತ್ರೆಯು ಶ್ರಾವಣ ಕಡೆಯ ಶನಿವಾರ ತೇರಿನ ಜಾತ್ರೆ ಜರಗುತ್ತದೆ. ಸಂಜೆ ಮೂಲ ಗದ್ದುಗೆಯಿಂದ ಬಸವೇಶ್ವರ ದೇವಸ್ಥಾನದವರೆಗೆ ಹೋಗಿ ಮರಳಿ ಬರುತ್ತದೆ. ಮರುದಿನ ಕುಸ್ತಿ ಸ್ಪರ್ಧೆಗಳು ಜರಗುತ್ತವೆ. ಶಿವರಾತ್ರಿಯ ಸಮಯದಲ್ಲಿ ನಾಡಿನ ಒಳತಿಗಾಗಿ ನುಡಿ ಅಥವಾ ಹೇಳಿಕೆಗಳು ಜರಗುತ್ತವೆ. ನಸುಕಿನಲ್ಲಿ ೩ ರಿಂದ ೫ ಗಂಟೆಯ ಒಳಗಾಗಿ ೫ಪೂಜೆಗಳು ಜರಗುತ್ತವೆ. ೫ನೇ ಪೂಜೆ ಜರುಗಿದ ನಂತರ ಅಗ್ನಿ ಪ್ರವೇಶ ಕಾರ್ಯ ಜರಗುತ್ತದೆ. ಸಿದ್ದಪ್ಪ ಪೂಜಾರಿಯವರು ಪೂಜೆ, ಕೃಷಿ ಕಾರ್ಯ ಜೊತೆಗೆ ಭಕ್ತ ಜನರ ಕಷ್ಟಗಳನ್ನು ದೂರು ಮಾಡುತ್ತಾರೆ. ಇವರ ಮಠದಲ್ಲಿ ಪ್ರತಿ ಸೋಮವಾರ, ಮಂಗಳವಾರ ಹಾಗೂ ಅಮವಾಸ್ಯೆಯೆಂದು ಅನ್ನ ಪ್ರಸಾದ ಜರಗುತ್ತದೆ. ಪ್ರತಿವರ್ಷ ಬೆನಕನ ಅಮವಾಸ್ಯೆಯಂದು ಸುಮಾರು ೧೫೦೦ ಮುತ್ತೈದಯರಿಗೆ ಉಡಿ ತುಂಬುವ ಕಾರ್ಯ ಜರಗುತ್ತದೆ. ದಿಗಂಬರೇಶ್ವರ ಗುಡಿಯ ಪಕ್ಕದಲ್ಲಿ ಗವಿಸಿದ್ಧೇಶ್ವರನ ಚಿಕ್ಕ ಗುಡಿ ಇದೆ. ಈ ಗವಿಸಿದ್ಧೇಶ್ವರ ಗುಡಿಯಲ್ಲಿ ಗುಪ್ತ ಮಾರ್ಗವಿದೆ. ಈ ಗುಪ್ತ ಮಾರ್ಗದಿಂದ ಬೀರದೇವರಿಗೆ ಮತ್ತು ತೇರದಾಳಕ್ಕೆ ಹೋಗಲು ಗವಿಸಿದ್ಧೇಶ್ವರದ ಗುಪ್ತ ಮಾರ್ಗದಿಂದ ಮೊದಲು ಆ ಊರಿಗೆ ಹೋಗುತ್ತಿದ್ದರು. ದಿಗಂಬರೇಶ್ವರ ಗುಡಿಯ ಬಲ ಭಾಗದಲ್ಲಿ ಸುಮಾರು ೨೦೦ ಮೀಟರ ಅಂತರದಲ್ಲಿ ಶ್ರೀ ರಾಮಾವದುತರ ಮಠವಿದೆ. ಅಲ್ಲಿರುವ ಅವದೂತರು ಸಮಾಜದ ಒಳತಿಗಾಗಿ ಸುಮಾರು ೧೦ ವರ್ಷಗಳ ಕಾಲ ಮೌನ ವೃತ್ರಾಚರಣೆ ಕೈಗೊಂಡು ಅಧಿಷ್ಠಾನದಲ್ಲಿ ತೊಡಗಿದ್ದರು. ನಂತರ ನಡೆದಾಡುವ ದೇವರೆಂದೆ ಪ್ರಖ್ಯಾತರಾಗಿರರುವ ಶ್ರೀ ಪೂಜ್ಯ ಸಿದ್ಧೇಶ್ವರ ಸ್ವಾಮಿಗಳು ಅವದೂತರನ್ನು ಅಧಿಷ್ಠಾನದಿಂದ ಹಾಗೂ ಮೌನ ವೃತ್ರಾಚರನೆಯನ್ನು ಬಿಟ್ಟು ನೀವು ಸಮಾಜದ ಒಳತಿಗಾಗಿ ಮಾತನಾಡುತ್ತಿರುವದರ ಜೊತೆಗೆ ಸಾಮಾನ್ಯ ಜನರ ಕಷ್ಟಗಳನ್ನು ಪರಿಹರಿಸಬೇಕೆಂದು ಆಶೀರ್ವದಿಸಿದರು.

**ಬೀರಸಿದ್ದೇಶ್ವರ ದೇವಸ್ಥಾನ**

ಹನಗಂಡಿಯ ಪ್ರಶಾಂತವಾದ ಪರಿಸರದಲ್ಲಿ ದಿಗಂಬರೇಶ್ವರ ದೇವಸ್ಥಾನದ ಮಾರ್ಗದಲ್ಲಿ ಸುಮಾರು ಅಂತರದಲ್ಲಿ ಈ ದೇವಸ್ಥಾನ ಇದೆ. ಬಕ್ತರು ಹಾಗೂ ಅಕ್ಕಿಮರಡಿ ಪೂಜಾರಿಯ ಪರಿಶ್ರಮದಿಂದ ಸುಮಾರು ೯ ಲಕ್ಷ ರೂ ವೆಚ್ಚದಲ್ಲಿ ೧೯೯೮ರಲ್ಲಿ ಮಂದಿರವನ್ನು ಕಟ್ಟಿದ್ದರು. ಈ ಮಂದಿರವು ಪೂರ್ವ ಮುಖವಾಗಿದ್ದು ದಕ್ಷಿಣೋತ್ತರವಾಗಿ ೭೦ ಪುಟ ಉದ್ದ ಪೂರ್ವ ಪಶ್ಚಿಮವಾಗಿ ೪೦ ಪುಟ ಅಗಲು ಇದೆ. ಒಟ್ಟು ಹನ್ನೊಂದು ಕಮಾನುಗಳು ಹಾಗೂ ಮೂವತ್ತಾರು ಕಂಬಗಳಿಂದ ಕೂಡಿದೆ. ಈ ದೇವಸ್ಥಾನ ಒಟ್ಟು

ಹತ್ತು ಎಕರೆ ಕ್ಷೇತ್ರ ವ್ಯಾಪ್ತಿಯನ್ನು ಹೊಂದಿದೆ. ಇದರ ವ್ಯಾಪ್ತಿಯಲ್ಲಿ ೧) ಶ್ರೀ ಬೀರದೇವರು ೨) ಬ್ರಹ್ಮ ದೇವರು ೩) ಮಾಳಿಂಗರಾಯ ೪) ಆದಿಗೊಂಡ ೫) ಪದ್ಮಗೊಂಡ ದೇವರು ೬) ವಿಠ್ಠಲ ದೇವರು ೭) ರೇವಣಸಿದ್ಧ ದೇವರು ೮) ಆರಾಣ್ಯಸಿದ್ಧ ದೇವರು ೯) ಲಕ್ಷ್ಮಿ ದೇವರು ಹೀಗೆ ಸಲಾಗಿ ಗುಡಿಗಳು ಈ ಆವರಣದಲ್ಲಿ ಇವೆ. ಈ ದೇವಸ್ಥಾನದ ಪೂಜೆಯನ್ನು ಸುಮಾರು ೭೫ ತಲೆ ತಲಾತರುಗಳಿಂದ ಮೂದೋಳ ತಾಲೂಕಿನ ಅಕ್ಕಿ ಮರಡಿಯವರು ಪೂಜೆಯನ್ನು ಮಾಡುತ್ತಾರೆ. ಈಗ ಪ್ರಸ್ತುತವಾಗಿ ಶ್ರೀ ಭಾಗಪ್ಪ ರಾಯಪ್ಪ ಹನಗಂಡಿಯವರ ಚಿರಂಜಿವಿಯಾದ ಹನುಮಂತ ಭಾಗಪ್ಪ ಹನಗಂಡಿಯವರು ಅಕ್ಕಿ ಮರಡಿಯಿಂದ ಬಂದು ವಾರಕ್ಕೊಮ್ಮೆ ರವಿವಾರ ಮಡಿವಂತಿಕೆಯಿಂದ ವಿಶೇಷವಾಗಿ ಪೂಜೆಯನ್ನು ಮಾಡುತ್ತಾರೆ. ಪ್ರತಿ ರವಿವಾರ ಕವಲು ಹಚ್ಚುತ್ತಾರೆ. ಈ ಪರಿಸರದಲ್ಲಿ ಪರಿಸರ ಸಂರಕ್ಷಣೆಗಾಗಿ ವಿವಿಧ ಜಾತಿಯ ಮರ ಗಿಡಗಳನ್ನು ಪೂಜಾರಿಗಳು ಬೆಳೆಸಿ ಸಂರಕ್ಷಿಸುತ್ತಿದ್ದಾರೆ.

**ಬಸವಣ್ಣನ ಗುಡಿ**

ಹನಂಗಡಿಯ ದಿಗಂಬರೇಶ್ವರ ದೇವಾಲಯದಿಂದ ೧೦೦ ಅಡಿಯ ಅಂತರದಲ್ಲಿ ಬಸವಣ್ಣನ ದೇವಾಲಯವಿದೆ. ಗರ್ಭಗುಡಿಯಲ್ಲಿ ಬೃಹದಾಕಾರದ ಕಪ್ಪು ಶಿಲೆಯಲ್ಲಿ ಬಸವಣ್ಣನ ವಿಗ್ರಹವಿದೆ. ಇದು ಮೊದಲು ಚಿಕ್ಕದಿತ್ತು. ಈಗ ಅದು ಬೃಹದಾಕಾರವಾಗಿ ಬೆಳೆಯುತ್ತದೆ. ಇದಕ್ಕೆ ಗರ್ಭಗೃಹ ಮಾತ್ರವಿದೆ. ತೆರದ ಮಂಟಪವಿದೆ, ಮೇಲ್ಛಾವಣೆಯಿಲ್ಲ. ಇವುಗಳಲ್ಲದೇ ಇಲ್ಲಿ ದುರ್ಗವ್ವನ ಗುಡಿ, ಲಕ್ಕವ್ವನ ಗುಡಿ, ಹನುಮನ ದೇವಸ್ಥಾನ, ಯಲ್ಲಮ್ಮನ ದೇವಸ್ಥಾನ ಮುಂತಾದ ಚಿಕ್ಕಪುಟ್ಟ ದೇವಾಲಯಗಳಿವೆ.

**೧. ಹಳಿಂಗಳಿಯ ಧಾರ್ಮಿಕ ಸ್ಮಾರಕಗಳು**

ಹಳಿಂಗಳಿ ಜಮಖಂಡಿಯಿಂದ ಪಶ್ಚಿಮ ದಿಕ್ಕಿನ ಬನಹಟ್ಟಿಯ ಮಾರ್ಗವಾಗಿ ೨೨ಕಿಮೀ ದೂರದ ಒಂದು ಗ್ರಾಮ(ಅಕ್ಷಾಂಶ : ೧೬ ಡಿಗ್ರಿ ೩೧ ಡಿಗ್ರಿ, ರೇಖಾಂಶ : ೮೫ ಡಿಗ್ರಿ ೪ ಡಿಗ್ರಿ)ವಾಗಿದೆ. ಇಲ್ಲಿ ಬಸ್ಸಿನ ಸೌಲಭ್ಯ ಕಡಿಮೆ ಇರುವುದು. ೨೦೧೧ರ ಜನಗಣತಿ ಪ್ರಕಾರ ಇಲ್ಲಿನ ಜನಸಂಖ್ಯೆ ಸುಮಾರು ೮೦೦೦ ಇದೆ. ಈ ಗ್ರಾಮದಲ್ಲಿ ರಾಮಲಿಂಗೇಶ್ವರ ದೇವಾಲಯ ಪ್ರಮುಖವಾಗಿರುವುದು. ಈ ದೇವಾಲಯದಿಂದಲೇ ಹಳಿಂಗಳಿ ಎಂದು ಹೆಸರು ಬಂದಿದೆ. ಈ ಊರಿನಲ್ಲಿ ಅನೇಕ ದೇವಾಲಯಗಳು, ಬಸದಿಗಳು, ಮಸೀದಿಗಳನ್ನು ಒಳಗೊಂಡಿದೆ. ಇಲ್ಲಿ ಪುರಾತತ್ವ ಶೋಧನೆ ಆಗಿದೆ. ಈ ಗ್ರಾಮವು ಗುಡ್ಡದ ಹತ್ತಿರವಿದೆ. ಇದರ ಪೂರ್ವ ಪಶ್ಚಿಮಕ್ಕೆ ಸಮತಟ್ಟಾದ ಭೂಮಿ ದಕ್ಷಿಣಕ್ಕೆ ಹಳ್ಳ ಉತ್ತರಕ್ಕೆ ಬೆಟ್ಟ ಇದೆ. ಭಾಗದ ಕ್ಷೇತ್ರ ಭೂಮಿ ೧,೪೮೫ ಎಕರೆ ಇದೆ, ಇಲ್ಲಿಯ ಭೂಮಿ ಎರೆ ಮಣ್ಣನ್ನು ಹೊಂದಿದೆ. ಮಸಾರೆ ಭೂಮಿ ಕೆಂಪು ಉಸುಕಿನ ಭೂಮಿ ಇದೆ. ಇಲ್ಲಿ ಜನರು ಗೋಧಿ, ಜೋಳ, ಕಬ್ಬು, ಬೆಳೆಯುವರು. ಈ ಗ್ರಾಮದ ಸುತ್ತಲೂ ಜಾಲೆ ಮರಗಳು, ಬೇವಿನ ಮರಗಲು ಹೆಚ್ಚಾಗಿ ಕಂಡು ಬರುವವು. ಈ ಗ್ರಾಮ ಹುಟ್ಟುವುದಕ್ಕಿಂತ ಮುಂಚೆ ಇಲ್ಲಿ ಒಂದು ಲಿಂಗವಿತ್ತು. ಜನರು ಸೇರಿದ ನಂತರ ಈ ಲಿಂಗವನ್ನು ಹಳ್ಳಿಯ ಲಿಂಗ ಎಂದು ಕರೆಯುತ್ತಿದ್ದರು. ಮುಂದೆ ಇದೇ ಹಳ್ಳ+ಲಿಂಗ = ಹಳಿಂಗಳಿ ಎಂಬ ಹೆಸರು ಬಂದಿದೆ ಎಂಬುದು ಸ್ಥಳೀಯ ಜನರ ಅಭಿಪ್ರಾಯ. ಭದ್ರಗಿರಿಯಲ್ಲಿ ದೊರೆತ ಶಾಸನದಲ್ಲಿ ಇದನ್ನು ಸಂಪಾಳಂಗಳಿ ಎಂದು ಉಲ್ಲೇಖವಿರುವುದನ್ನು ಕಾಣುತ್ತೇವೆ.

ಈ ಪ್ರದೇಶದಲ್ಲಿ ಹಲವು ಪ್ರಾಚೀನ ಅವಶೇಷಗಳಿವೆ. ಇಲ್ಲಿಯ ಪುರಾತತ್ವ ಪ್ರದೇಶದಲ್ಲಿ ಪ್ರಾಚೀನ ಭಾರತದ ಇತಿಹಾಸ ಶಾಸನ ವಿಜ್ಞಾನ ವಿಭಾಗದ ಮುಖ್ಯಸ್ಥನಾಗಿರತಕ್ಕಂತ ಅ. ಸುಂದರವರು ೧೯೬೪-೬೬ರಲ್ಲಿ ಉತ್ಖನನ ಮಾಡಿದಾಗ ಇಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ಸಿಕ್ಕಿವೆ. ಇಲ್ಲಿ ಪ್ಲಸ್ (+)/ಶಿಲುಬೆಯಾಕಾರದ ಸಮಾಧಿಗಳು ಸಿಕ್ಕಿವೆ. ಇಂತಹ ಸಮಾಧಿಗಳು ಭಾರತದಲ್ಲಿ ಎಲ್ಲಿಯೂ ಸಿಗುವುದಿಲ್ಲ. ಇಲ್ಲಿ ಪ್ರಾಚೀನ ಕಾಲದಲ್ಲಿ ಗುಡ್ಡದ ಮಧ್ಯದಲ್ಲಿ ಹನಗಂಡಿ ದೇಸಗತಿಯ ಜನರು ಕುದುರೆ ಕಟ್ಟುವ ಒಂದು ಸ್ಥಳವಿತ್ತು. ಅದರ ೪ ಕಡೆ ವಾಡೆಗಳಿದ್ದವಂತೆ, ಆದರೆ ಅವು ಈಗ ನಾಶವಾಗಿವೆ.

ಇಲ್ಲಿ ಕ್ರಿ.ಶ.ಪೂ. ೧ನೆಯ ಶತಮಾನದಿಂದ ಕ್ರಿ.ಶ. ೨/೩ನೇ ಶತಮಾನದವರೆಗೆ ಅಲ್ಲಿ ಜೈನ ಮುನಿಗಳು ವಾಸಿಸುತ್ತಿದ್ದರು. ಹಳಿಂಗಳಿ ಗ್ರಾಮದ ಊರಿನ ಬಲಭಾಗಕ್ಕೆ ವಿಶಾಲವಾದ ಗುಡ್ಡ ಹಬ್ಬಿದೆ. ಈ ಗುಡ್ಡ ಅಷ್ಟೇನೂ ಎತ್ತರವಿಲ್ಲ. ಈ ಗುಡ್ಡದಲ್ಲಿ ಸುಮಾರು ೮೮೨ ಮುನಿಗಳ ನಿವಾಸವಿದ್ದು ಅವು ಮುನಿ-ತಪಸ್ವಿಗಳ ಸ್ಥಾನವಾಗಿದ್ದವು. ಅವುಗಳನ್ನು ಸ್ಥಳೀಯರು ಗುಂಪಾಗಳೆನ್ನುತ್ತಾರೆ. ಈಗ ಅವುಗಳಲ್ಲಿ ಎಲ್ಲವೂ ಅಳಿವಿನಂಚಿನಲ್ಲಿದ್ದು, ಅಲ್ಲೊಂದು ಇಲ್ಲೊಂದು ಮಾತ್ರ ಉಳಿದಿವೆ. ಈ ಊರಿನಲ್ಲಿ ಪುರಾತನ ಕಾಲದಿಂದಲೂ ಜೈನರು ಬಹಳ ಇದ್ದಾರೆ. ಮುನಿಗಳ  ತಪಸ್ಸು ಮಾಡುವ ಒಂದು ದೊಡ್ಡದಾದ ಗುಡಿ ಇದೆ. ಪ್ರಸ್ತುತ ಸುಳ್ಳ ಗುಡಿ ಎಂದು ಕರೆಯುತ್ತಿದ್ದು ಮುಂಚೆ ಮುನಿಗಳು ನೆಲೆಸಿರುವ ಸ್ಥಳವಾಗಿತ್ತು. ಈ ಗುಡ್ಡದಲ್ಲಿ ಸಾವಿರಾರು ಜೈನ ಮುನಿಗಳು ನಿರ್ವಾಣ (ಮರಣ) ಹೊಂದಿದ್ದಾರೆ.  ಈ ಗುಡ್ಡದ ಮೇಲೆ ಆದಿಶಿಲಾಯುಗ ಜನರು ವಾಸಿಸುತ್ತಿದ್ದರು. ಈ ಊರು ಬಲಕ್ಕೆ ಪುರಾತನ ಕೆರೆ ಇದೆ. ಈ ಊರಲ್ಲಿ ಇವುಗಳಿಗಿಂತ ಪಾರ್ಶ್ವನಾಥ ಬಸದಿ, ದುರ್ಗಮ್ಮನ ದೇವಾಲಯ, ಕೋತಲವ್ವಾ ದೇವಸ್ಥಾನ, ಯಲ್ಲಮ್ಮನ ದೇವಸ್ಥಾನ, ಹನುಮಂತನ ದೇವಸ್ಥಾನ ಹಾಗೂ ಮಸೀದಿಗಳಿವೆ. ಅಲ್ಲದೇ ಇಲ್ಲಿಯೇ ಸದ್ಗುರು ಶರಣ ಬಸವೇಶ್ವರ ಕಮರಿ ಮಠವಿದೆ. ಈ ಮಠದ ಮಠಾಧೀಶರು ಶ್ರೀ ಸದ್ಗುರು ಶಿವಾನಂದ ಸ್ವಾಮೀಜಿಯವರು ಆಗಿದ್ದು, ಉತ್ತರಾಧಿಕಾರಿಗಳು ಶ್ರೀ ಅಭಿನಂದನ್ ಸ್ವಾಮೀಜಿಗಳು ಆಗಿದ್ದಾರೆ. ಇವರು ಗ್ರಾಮೀಣ ಭಾಗದಲ್ಲಿ ಶ್ರೀ ಸದ್ಗುರು ಶರಣ ಬಸವೇಶ್ವರ ಶಿಕ್ಷಣ ಸಂಸ್ಥೆಯನ್ನು ಹುಟ್ಟು ಹಾಕಿ ಉನ್ನತ ಶಿಕ್ಷಣವನ್ನು ನೀಡುತ್ತಿದ್ದಾರೆ. ವೈ.ಎಚ್.ಅಲಾಸ್‌ರವರು ಇದರ ಆಡಳಿತಾಧಿಕಾರಿ ಹಾಗೂ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಹಳಿಂಗಳಿ ಮತ್ತು ತೇರದಾಳದ ಮಧ್ಯಭಾಗದಲ್ಲಿರುವ ಇಲ್ಲಿನ ಮತ್ತೊಂದು ಬೆಟ್ಟವನ್ನು ಭದ್ರಗಿರಿ ಬೆಟ್ಟ ಎಂದು ಕರೆಯುತ್ತಾರೆ. ಇದು ಸಹ ಹಿಂದೆ ಜೈನ ಮುನಿಗಳ ಅವಾಸ ತಾಣವಾಗಿತ್ತು. ಇಲ್ಲಿ ಜೈನ ಮುನಿಗಳು ತಪಸ್ಸು ಮಾಡಿದ ಗುಹೆಗಳಿದ್ದು, ಅವುಗಳನ್ನು ಸಹ ಗುಂಪಾಗಳೆಂದು ಕರೆಯುತ್ತಾರೆ. ಇಲ್ಲಿ ಕ್ರಿ.ಪೂ.೭-೮ನೇ ಶತಮಾನದ ಹಲವು ಜೈನ ಆರ್ಚಾಯರ ಮೂರ್ತಿಗಳು ದೊರೆತಿದ್ದು, ಅವುಗಳನ್ನು ಇಲ್ಲಿನ ಗುರುಗಳು ಸಂರಕ್ಷಿಸಿಟ್ಟಿದ್ದಾರೆ. ಮೌರ್ಯರ ಚಂದ್ರಗುಪ್ತ ಮೌರ್ಯ ತನ್ನ ಜೀವಿತಾವಧಿಯ ಕೊನೆ ಕಾಲದಲ್ಲಿ ಮುಕ್ತಿ ಹೊಂದಲು ಪಾಟಲಿಪುತ್ರದಿಂದ ಶ್ರವಣಬೆಳಗೊಳಕ್ಕೆ ಹೋಗುವಾಗ ಮಾರ್ಗ ಮಧ್ಯದಲ್ಲಿ ಇಲ್ಲಿನ ಭದ್ರಗಿರಿಯಲ್ಲಿ ಕೆಲ ಕಾಲ ತಂಗಿದನೆಂದು ಇಲ್ಲಿನ ಜೈನ ಆಚಾರ್ಯರಾದ ೧೦೮ ಕುಲರತ್ನ ಭೂಷಣಮುನಿಗಳು ಹೇಳುತ್ತಾರೆ. ಶ್ರೀಯುತರು ಇಲ್ಲಿ ಆಧ್ಯಾತ್ಮಿಕ ಕೇಂದ್ರ ಸ್ಥಾಪಿಸಿದ್ದು, ಇಲ್ಲಿನ ಜೈನ ಮುನಿಗಳ ಗುಂಪಾಗಳನ್ನು ಶ್ರಾವಕರ ಸಿದ್ಧಿ ಸಾಧನೆಯ ಕೇಂದ್ರವನ್ನಾಗಿ ಮತ್ತು

ಪ್ರವಾಸಿಗರ ಕೇಂದ್ರವನ್ನಾಗಿ ಮಾಡಲು ಸಂಕಲ್ಪಿಸಿದ್ದಾರೆ. ಪರಿಸರದ ಸಂರಕ್ಷಣೆಗಾಗಿ ಇವರು ಪ್ರತಿ ವರ್ಷ ಈ ಪರಿಸರದಲ್ಲಿ ಸಾವಿರಾರು ಮರಗಳನ್ನು ನೇಟ್ಟು ಅವುಗಳ ಸಂರಕ್ಷಣೆಗಾಗಿ ಪಣತೋಟ್ಟಿದ್ದಾರೆ. ಪರಿಸರದ ಜೀರ್ಣೋದ್ಧಾರ ಕಾರ್ಯವನ್ನು ಕೈಗೆತ್ತಿಕೊಂಡಿದ್ದು, ಅಲ್ಲಿನ ಇತಿಹಾಸ ಮತ್ತು ಪರಂಪರೆಯನ್ನು ಮುಂದಿನ ಪೀಳಿಗೆಗೆ ತಲುಪಿಸಲು ಯೋಜನೆಗಳನ್ನು ರೂಪಿಸಿಕೊಂಡಿದ್ದಾರೆ.

**ರಾಮಲಿಂಗೇಶ್ವರ ದೇವಾಲಯ**

ಈ ದೇವಸ್ಥಾನವು ಗ್ರಾಮದ ಮಧ್ಯದಲ್ಲಿದ್ದು, ದಕ್ಷಿಣಾಭಿಮುಖವಾಗಿದೆ. ಈ ದೇವಾಲಯವು ಗರ್ಭಗೃಹ, ನವರಂಗ, ಸಭಾ ಮಂಟಪ ಹಾಗೂ ಶಿಖರ ಹೊಂದಿದೆ. ವಿಶಾಲವಾದ ಜಗಲಿ ಮೇಲೆ ಈ ದೇವಸ್ಥಾನವಿದೆ. ಇದು ನಕ್ಷತ್ರಾಕಾರದಲ್ಲಿದೆ. ಇಲ್ಲಿನ ಗರ್ಭ ಗೃಹವು ಚೌಕಾಕಾರವಿದ್ದು, ಅದರಲ್ಲಿ ಶಿವಲಿಂಗವಿದೆ. ಇದರ ಮಧ್ಯದಲ್ಲಿ ಯೋನಿಪೀಠದ ಮೇಲಿರುವ ಗಣೇಶನ ಶಿಲ್ಪವಿದೆ. ಈ ಶಿವಲಿಂಗದಿಂದ ಈ ಊರಿಗೆ ಹಳಿಂಗಳಿ ಎಂದು ಹೆಸರು ಬಂದಿದೆ. ಮೇಲೆ ಯುಗಾದಿ ಪಾಡ್ಯದ ದಿವಸ ಮಾತ್ರ ಸೂರ್ಯನ ಕಿರಣಗಳು ಆ ದೇವರ ಮೇಲೆ ಬೀಳುತ್ತವೆ. ಅದರ ಪಕ್ಕದಲ್ಲಿ ಪುರಾತನವಾದ ಹನುಮಂತ ಶಿಲ್ಪವಿದೆ. ಹಾಗೂ ಅದರ ಮುಂದೆ ಶಿವನ, ನಾಗಪಾದ ಶಿಲ್ಪಗಳು ಕಾಣುತ್ತೇವೆ. ಇಲ್ಲಿನ ಅಂತರಾಳದಲ್ಲಿ ಯಾವ ಕಂಬಗಳಾಗಲಿ ಇಲ್ಲವೇ ಬೇರೆ ಮೂರ್ತಿಗಳಾಗಲಿ ಕಂಡು ಬರುವದಿಲ್ಲ. ಇಲ್ಲಿನ ಸಭಾಮಂಟಪದ ಗೋಡೆಯಲ್ಲಿ ೮ ಅರ್ಧಗಂಬಗಳಿದ್ದು, ಮಧ್ಯದಲ್ಲಿ ೬ ಕಂಬಗಳು ಒಟ್ಟು ೧೪ ಕಂಬಗಳಿವೆ. ಕಂಬದ ಶೈಲಿ–ಕಂಬದ ಕೆಳಗೆ ಪೀಠ ನಂತರ ಚೌಕ ಬಂದು, ಕಾಂಡಭಾಗ, ಚೌಕ ಮೂಲಸ್ಥಾನ, ಕುಂಭ, ಕಲಶ, ಪದ್ಮ ಫಲಕ ಬೋಧಿಗೆ ಕಂಡು ಬರುವವು. ಇದರ ಎತ್ತರ ೧೨ ಸೆಂ.ಮಿ. ಸುತ್ತಳತೆ ೮೫ ಸೆಂ ಮೀ ಇದೆ. ಈ ದೇವಾಲಯದ ಶೈಲಿಯ ಆಧಾರದ ಮೇಲೆ ಇದು ಕ್ರಿ.ಶ.೧೧ನೇ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು.

**ಆದಿನಾಥ ಬಸದಿ**

ಈ ಬಸದಿ ಊರ ಮಧ್ಯದಲ್ಲಿ ಇದೆ. ಇದು ಸುಮಾರು ೩೦೦ ವರ್ಷಗಳ ಹಿಂದಿನದು ಇದು ಈ ಊರಿನ ದೊಡ್ಡ ಬಸದಿ ಪಾರ್ಶ್ವನಾಥ ಬಸದಿ ಚಿಕ್ಕ ಬಸದಿಯಾಗಿದೆ. ಆದಿನಾಥ ಬಸದಿಯ ಗರ್ಭಗೃಹ, ಸುಕನಾಶಿ, ನವರಂಗ, ತೆರದ ಮಂಟಪ ಹಾಗೂ ಶಿಖರಗಳನ್ನು ಹೊಂದಿದೆ. ಚೌಕಕಾರವಾಗಿರುವ ಇದರ ಗರ್ಭಗೃಹದಲ್ಲಿ ಬಿಳಿ ಅಮೃತ ಶಿಲೆಯ ಪದ್ಮಾಸನದಲ್ಲಿರುವ ಆದಿನಾಥ ತೀರ್ಥಂಕರ ಮೂರ್ತಿ ಇದೆ. ಇದರ ಪ್ರಭಾವಳಿಯ ಸುತ್ತಲೂ ೨೪ ತೀರ್ಥಂಕರರ ಶಿಲ್ಪಗಳಿವೆ. ಇದರ ಸುಕನಾಶಿಯಲ್ಲಿ ದೇವರ ಪೂಜೆ ಮಾಡುವ ಸಾಮಗ್ರಿಗಳಿವೆ. ಇಲ್ಲಿನ ನವರಂಗದಲ್ಲಿ ೪ ಕಂಬಗಳಿವೆ. ಒಂದು ಕಡೆ ಯಕ್ಷಿಣಿ ಪದ್ಮಾವತಿ ಶಿಲ್ಪ ಇನ್ನೊಂದು ಕಡೆ ಕ್ಷೇತ್ರ ಭರಮಪ್ಪನ ಶಿಲ್ಪವಿದೆ. ಮಧ್ಯದಲ್ಲಿ ವಿವಿಧ ತೀರ್ಥಂಕರ ಶಿಲ್ಪಗಳಿವೆ. ಸಭಾ ಮಂಟಪದಲ್ಲಿ ಯಾವುದೇ ಕಂಬಗಳಾಗಲಿ, ಮೂರ್ತಿಗಳಾಗಲಿ ಇಲ್ಲ. ಇದರ ಎದುರುಗಡೆ ಮಾನಸ್ತಂಭವಿದೆ. ಗರ್ಭಗುಡಿಯ ಮೇಲೆ ಶಿಖರವಿದೆ. ಆ ಶಿಖರದ ಸುಕನಾಶಿಯಲ್ಲಿ ತೀರ್ಥಂಕರ ಮೂರ್ತಿ ಇದೆ.

## ೪. ಕಲ್ಲಳ್ಳಿಯ ಧಾರ್ಮಿಕ ಸ್ಮಾರಕಗಳು

ಕಲ್ಲಳ್ಳಿ ಗ್ರಾಮವು (ಅಕ್ಷಾಂಶ.೧೬.೩೧ ಡಿಗ್ರಿ ದಿಂದ ೩೦ ಡಿಗ್ರಿ, ರೇಖಾಂಶ.೭೫.೯೦ ಡಿಗ್ರಿ ದಿಂದ ೩೦ ಡಿಗ್ರಿ) ಜಮಖಂಡಿ ತಾಲ್ಲೂಕಿನ ಪಶ್ಚಿಮ ಭಾಗದ ನೈರುತ್ಯಕ್ಕೆ ಕೇವಲ ೭ ಕಿ.ಮೀ ದೂರದಲ್ಲಿದೆ. ಮಧುರಖಂಡಿ ಗ್ರಾಮದಿಂದ ೩ ಕಿ.ಮೀ ದಕ್ಷಿಣಕ್ಕೆ ಹೋಗಬೇಕಾಗುತ್ತದೆ. ಪ್ರಸ್ತುತ ಗ್ರಾಮನಾಮವನ್ನು ಶಾಸನದ ಮೂಲಕ ಗುರುತಿಸಿಕೊಳ್ಳಲಾಗಿದೆ, ಕಲ್+ಹಳ್ಳಿ=ಕಲಹಳ್ಳಿ>ಕಲ್ಲಳ್ಳಿ>ಕಲ್ಲೋಳಿ ಎಂಬುದಾಗಿದೆ, ಬಹುಶ: ಆ ಊರಿನಲ್ಲಿ ಹೆಚ್ಚು ಕಲ್ಲುಗಳಿರುವ ಕಾರಣಕ್ಕಾಗಿ ಕಲ್ಲ+ಹಳ್ಳಿ ಎಂದು ಕರೆದು ಅದು ಬರುಬರುತ್ತಾ ಕಲ್ಲಳ್ಳಿ ಆಗಿರುವ ಸಾಧ್ಯತೆ ಇದೆ. ಕಲ್ಲಹಳ್ಳಿಯ ವೆಂಕಟೇಶ್ವರ ದೇವಾಲಯದ ವರಹ ಮೂರ್ತಿಯ ಗುಡಿಯ ಬಲಗಡೆ ಗೋಡೆಯಲ್ಲಿನ ಕ್ರಿ.ಶ ೧೭೮೯ ಶಾಸನದಲ್ಲಿ ಶೇಷರಾವ್ ಎಂಬುವವರು ಕಲ್ಲಹಳ್ಳಿಯ ಬೆಟ್ಟದ ಮೇಲಿನ ವರಾಹ ಮೂರ್ತಿಯನ್ನು ಸ್ಥಾಪಿಸಿದ ಉಲ್ಲೇಖವಿದೆ. ನಾಗರ ಹೆಡೆಯ ಅಡಿಯಲ್ಲಿ ಶಾಸನೋಕ್ತ ಕಾಲವು ಶಕೆ ೧೬೩೦ ವಿಭವ ಮಾಘ ಶುದ್ಧ ಏಕಾದಶಿ ಸೋಮವಾರವೆಂದಿದ್ದು ಇದು ಕ್ರಿ.ಶ ೧೬-೦೧-೧೭೮೯ ಕ್ಕೆ ಸರಿ ಹೊಂದುತ್ತದೆ. ಇಲ್ಲಿರುವ ಜನವಸತಿ ೧) ಅರಬವಸತಿ ೨) ದನಗರ ವಸತಿ ೩)ಸತ್ಯಕಾಮ ವಸತಿ ೪) ಪೂಜಾರ ವಸತಿ ೫) ಪದ್ಮಾವತಿ ವಸತಿ ೬) ವೆಂಕಟೇಶ್ವರ ವಸತಿ. ೨೦೧೧ ಜನಗಣತಿ ಪ್ರಕಾರ ಇಲ್ಲಿನ ಜನಸಂಖ್ಯೆ ೭೨೦೦ ಇದೆ. ಇಲ್ಲಿನ ಹೆಚ್ಚು ಭಾಗ ತಗ್ಗು ದಿಣ್ಣೆಯಿಂದ ನಿರ್ಮಿಸಿದ ಗುಡ್ಡ ಪ್ರದೇಶವು ವ್ಯಾಪಿಸಿದ್ದು. ಬೇಸಾಯದ ಭೂಮಿ ಕಡಿಮೆ ಇರುತ್ತದೆ. ಗ್ರಾಮದಿಂದ ೨ ಕಿ.ಮೀ ಉತ್ತರ ದಿಕ್ಕಿನಲ್ಲಿ ಹಳ್ಳವಿದೆ. ಗ್ರಾಮದ ಸುತ್ತ ಮುತ್ತಲೂ ನೀರಿನ ಕಾಲುವೆಗಳು ಇದ್ದು ಘಟಪ್ರಭಾ ನದಿಯಿಂದ ನೀರನ್ನು ಪಡೆದಿರುತ್ತಾರೆ. ಗ್ರಾಮದ ಪರಿಸರದ ಮಡಿಲಲ್ಲಿ ಅನೇಕ ಮರಗಳು ಬೆಳೆದುಕೊಂಡಿದ್ದು ತಂಪು ಹವಾಮಾನ ಇರುತ್ತದೆ. ಗ್ರಾಮದ ಪಕ್ಕದಲ್ಲಿ ದಕ್ಷಿಣ ದಿಕ್ಕಿಗೆ ಒಂದು ಕೆರೆಯಿದ್ದು ೩ ಎಕರೆ ವಿಸ್ತೀರ್ಣವನ್ನು ಹೊಂದಿದೆ, ಇದರ ಪಕ್ಕದಲ್ಲಿಯೇ ಬಸವಣ್ಣನ ಗುಡಿ ಇರುವುದು. ಈ ಗ್ರಾಮದಲ್ಲಿ ಬಸವಣ್ಣ, ವೀರಭದ್ರ, ಮಲ್ಲಿಕಾರ್ಜುನ, ಲಕ್ಕವ್ವ, ದುರ್ಗಾದೇವಿ, ಕೆರವ್ವ, ಮಾರುತಿ ದೇವಾಲಯಗಳು ಇರುತ್ತವೆ. ಗ್ರಾಮದಿಂದ ೨ ಕಿ.ಮೀ ಅಂತರದ ಉತ್ತರ ದಿಕ್ಕಿನಲ್ಲಿ ವಿಶಾಲವಾದ ಬಯಲು ಆವರಣದಲ್ಲಿ ಹಾಗೂ ಸ್ವಲ್ಪ ಬೆಟ್ಟದ ದಿಣ್ಣೆಯ ಮೇಲೆ ವೆಂಕಟೇಶ್ವರ ದೇವಾಲಯದ ಎದುರಿಗೆ ಕಲ್ಯಾಣ ಮಂಟಪವಿದ್ದು ಅದರ ಹಿಂಬದಿಯಲ್ಲಿ ಮಾರುತಿ ಗುಡಿಯಿದೆ. ವೆಂಕಟೇಶ್ವರ ಗರ್ಭಗುಡಿಯ ಹಿಂದೆ ರಾಮದೇವರ ಗುಡಿಯಿದ್ದು ಗರ್ಭಗುಡಿಯಲ್ಲಿ ರಾಮ, ಲಕ್ಷ್ಮಣ, ಸೀತಾದೇವಿಯ ಮೂರ್ತಿಗಳಿವೆ. ವೆಂಕಟರಮಣ ದೇವಾಲಯದಿಂದ ಅರ್ಧ ಕಿ.ಮೀ. ಪಶ್ಚಿಮಕ್ಕೆ ಪದ್ಮಾವತಿಯ ಗುಡಿಯಿದ್ದು ಎದುರಿಗೆ ಬಾವಿಯಿದೆ. ಇದೇ ಆವರಣದಲ್ಲಿ ಗೋವಿಂದ ರಾಜ ದೇವಾಲಯವಿದೆ. ಈ ಮೇಲೆ ಹೇಳಿದ ಎಲ್ಲ ದೇವಾಲಯಗಳಲ್ಲಿ ಪ್ರಾಚೀನ ಕಾಲದ ಶಿಲಾ ವಿಗ್ರಹಗಳಿರುವವು.

### ವೆಂಕಟರಮಣ ದೇವಾಲಯ

ಗ್ರಾಮದಲ್ಲಿ ಅತ್ಯಂತ ಮುಖ್ಯವಾದ ದೇವಾಲಯವೆಂದರೆ ಶ್ರೀ ವೆಂಕಟರಮಣ ದೇವಾಲಯವಾಗಿದೆ. ಈ ದೇವಾಲಯ ೧೭೩೬ ರಲ್ಲಿ ಜೀರ್ಣೋದ್ಧಾರವಾಗಿದ್ದು ಗುಡ್ಡದ ಮೇಲೆ ಪೂರ್ವಾಭಿಮುಖವಾಗಿದೆ. ದೇವಾಲಯವು ವಿವಿಧ ಪಟ್ಟಿಗಳುಳ್ಳ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿರುತ್ತದೆ. ಗರ್ಭಗೃಹ, ಅಂತರಾಳ, ಸಭಾಮಂಟಪ ಹಾಗೂ ಗರ್ಭಗುಡಿಯ ಮೇಲೆ ದೇವಕೋಷ್ಠಕದಿಂದ ತುಂಬಿದ ಶಿಖರವನ್ನು ಹೊಂದಿರುತ್ತದೆ ಹಾಗೂ ದೇವಾಲಯಕ್ಕೆ

ಹತ್ತಿಕೊಂಡಿರುವ ಚಿಕ್ಕ ಗುಡಿಗಳನ್ನು ಗಮನಿಸಿದರೆ ದೇವಾಲಯವು ಸುಮಾರು ೮-೯ನೇ ಶತಮಾನದಲ್ಲಿ ನಿರ್ಮಿಸಿದಂತೆ ತೋರುತ್ತದೆ. ಇದರ ಗರ್ಭಗುಡಿಯು ಕತ್ತಲೆಯಿಂದ ಕೂಡಿದ್ದು, ಕಿಟಕಿಗಳಿರುವುದಿಲ್ಲ. ಮಧ್ಯದಲ್ಲಿ ಒಂದುವರೆ ಅಡಿ ಎತ್ತರದ ಜಗಲಿಯ ಮೇಲೆ ಕಪ್ಪು ಶಿಲೆಯಲ್ಲಿ ನಿರ್ಮಿಸಿದ ವೆಂಕಟೇಶ್ವರ ಮೂರ್ತಿಯನ್ನು ಕಾಣುತ್ತೇವೆ. ವೆಂಕಟೇಶ್ವರ ಮೂರ್ತಿಯು ೮೪ ಸೆಂ.ಮೀ ಎತ್ತರವಿದ್ದು ೫೫ ಸೆಂ.ಮೀ ಅಗಲವಾಗಿದೆ. ಗರ್ಭಗೃಹದ ೪ ಮೂಲೆಗಳಲ್ಲೂ ಕಲ್ಲು ಕಂಬಗಳಿದ್ದು ಮೇಲ್ಛಾವಣಿಯು ಕಪ್ಪು ಶಿಲೆಯಿಂದ ಕೂಡಿದೆ. ಇದರ ದ್ವಾರ ಚೌಕಟ್ಟು ಕಪ್ಪು ಶಿಲೆಯದಾಗಿದ್ದು ಮೇಲೆ ಹಿತ್ತಾಳೆಯ ಕವಚವಿರುತ್ತದೆ. ಈ ದ್ವಾರ ಬಾಗಿಲು ಐದು ಶಾಖೆಗಳಿಂದ ಕೂಡಿದ್ದು ಕವಚದ ಮೇಲೆ ಚಿತ್ರಗಳನ್ನು ಜಿಡಿಸಿದ್ದಾರೆ. ದ್ವಾರದ ಕೆಳಭಾಗದಲ್ಲಿ ದ್ವಾರಪಾಲಕರಿದ್ದು ಕೈಗಳಲ್ಲಿ ಕೋಲುಗಳನ್ನು ಹಿಡಿದಿರುವಂತೆ ಚಿತ್ರಿಸಿದ್ದಾರೆ. ಇದರ ಬಾಗಿಲು ಹಿತ್ತಾಳೆಯ ಕವಚದಿಂದ ಮುಚ್ಚಿದ್ದು ಉಬ್ಬಿದಂತೆ ಕಾಣುತ್ತದೆ. ಇದರಲ್ಲಿ ಹೂ-ಬಳ್ಳಿ, ಮಕರ ತೋರಣವನ್ನು ಕಾಣುತ್ತೇವೆ. ಬಾಗಿಲ ಲಲಾಟ ಬಿಂಬದಲ್ಲಿ ಸುಕಾಸಿನದಲ್ಲಿ ಕುಳಿತ ಚಿಕ್ಕ ಗಣಪತಿಯ ಉಬ್ಬು ಶಿಲ್ಪವಿದೆ.

ಇದರ ಅಂತರಾಳವು ಚಿಕ್ಕ ಚೌಕ ಕೋಣೆಯಿಂದ ನಿರ್ಮಿಸಿದ್ದು ೮ ಅಡಿ ಉದ್ದ ೫ ಅಡಿ ಅಗಲದಿಂದ ನಿರ್ಮಿಸಿದೆ. ಇದರ ಪ್ರವೇಶ ದ್ವಾರವು ಕೂಡಾ ಗರ್ಭಗೃಹದ ಪ್ರವೇಶ ದ್ವಾರದಂತೆ ಹಿತ್ತಾಳೆಯ ಕವಚದಿಂದ ಮುಚ್ಚಿರುತ್ತದೆ. ಮಧ್ಯದಲ್ಲಿ ಆಮೆಯ ಶಿಲ್ಪವಿದೆ. ಇಲ್ಲಿನ ಸಭಾ ಮಂಟಪವು ವಿಶಾಲವಾಗಿದ್ದು ಜೀರ್ಣೋದ್ದಾರಗೊಂಡಿರುತ್ತದೆ. ಇದರಲ್ಲಿ ೧೬ ಕಂಬಗಳಿದ್ದು ಅದು ಮರದಿಂದ ನಿರ್ಮಿಸಿರುತ್ತದೆ. ಸಭಾ ಮಂಟಪದ ಎದುರಿಗೆ ಚೌಕವಾದ ಕಲ್ಯಾಣ ಮಂಟಪವಿದೆ.

ಇಲ್ಲಿನ ಗರ್ಭಗುಡಿಯ ಮೇಲೆ ಶಿಖರವಿದ್ದು ಗಚ್ಚು ಗಾರೆಯಿಂದ ನಿರ್ಮಿಸಿದೆ. ಆಯತಾಕಾರವಾಗಿ ಮೇಲೆ ಚಿಕ್ಕದಾಗುತ್ತ ಹೋಗಿದೆ. ತುದಿಯ ಮೇಲೆ ಕಂಚಿನ ಕಳಶವಿರುತ್ತದೆ. ಶಿಖರದ ಸುತ್ತಲೂ ದೇವಕೋಷ್ಟಕಗಳಿದ್ದು, ಅವುಗಳಲ್ಲಿ ದೇವ ದೇವತೆಗಳನ್ನು ಕಾಣುತ್ತೇವೆ. ದೇವಾಲಯದ ಸುತ್ತಲೂ ಉಗ್ರಾಣಗಳು, ನಾಟ್ಯ ಮಂದಿರ, ಧರ್ಮಶಾಲೆ, ಅಡುಗೆ ಮನೆ, ಅರ್ಚಕರ ಕೋಣೆಗಳಿರುತ್ತವೆ. ದೇವಾಲಯಕ್ಕೆ ಹತ್ತಿಕೊಂಡು ಅನೇಕ ಚಿಕ್ಕ ಗುಡಿಗಳು ಇರುತ್ತವೆ. ಗರ್ಭಗುಡಿಯ ಬಲಭಾಗಕ್ಕೆ ಹತ್ತಿಕೊಂಡು ವರಹ ಮೂರ್ತಿ ಇರುವ ಗುಡಿಯಿದೆ. ಇದರ ಪಕ್ಕದಲ್ಲಿ ಮರದ ರಥವಿದ್ದು ಇದರ ಚಕ್ರಗಳು ಕಲ್ಲಿನದ್ದಾಗಿದೆ.

ವೆಂಕಟೇಶ್ವರ ದೇವಾಲಯದಿಂದ ೧೦೦ ಅಡಿ ಅಂತರದಲ್ಲಿ ಹನುಮಂತನ ಗುಡಿ ಇದೆ. ಇದು ವೆಂಕಟೇಶ್ವರ ಗುಡಿಗೆ ಎದುರು ಮುಖ ದ್ವಾರವನ್ನು ಹೊಂದಿದೆ. ಇದರಲ್ಲಿ ಹನುಮಂತನ ಕಪ್ಪು ಶಿಲೆಯ ವಿಗ್ರಹವಿದ್ದು ಹನುಮಂತನು ಕೈಮುಗಿದು ನಿಂತಿದ್ದಾನೆ. ಇವರ ಬಲಕ್ಕೆ ಪಕ್ಕದಲ್ಲಿ ಎದುರು ಮುಖ ಮಾಡಿದ ಕೈಮುಗಿದುಕೊಂಡು ನಿಂತಿರುವನು. ಎಡಕ್ಕೆ ಮಧ್ವಾಚಾರ್ಯರ ಮೂರ್ತಿಯನ್ನು ಶಿಲ್ಪಿಯೂ ಶಿಲೆಯಲ್ಲಿ ನಿರ್ಮಿಸಿದ್ದಾರೆ. ಮಧ್ವಾಚಾರ್ಯ ಮೂರ್ತಿಯು ಬಲಭಾಗದ ಭುಜಕ್ಕೆ ಬೆತ್ತವಿದ್ದಂತೆ ಕಾಣುತ್ತದೆ.

ಕಲ್ಲಳ್ಳಿಯು ಪುರಾಣ ಪ್ರಸಿದ್ಧವಾದ ಪುಣ್ಯ ಕ್ಷೇತ್ರ. ಇದು ವೇದಗಿರಿ ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ. ಈ ಕ್ಷೇತ್ರ ೮೦೦ ವರ್ಷಗಳ ಪೂರ್ವದಲ್ಲಿ ವೆಂಕಟಾಚಲ ಪರ್ವತದಲ್ಲಿರುವ ಭೂವೈಕುಂಠ ಹೆಸರಿನಿಂದ ಪ್ರಸಿದ್ಧವಾಗಿತ್ತು. ಶ್ರೀ ತಿರುಪತಿ ಕ್ಷೇತ್ರದ ಭಗವಾನ್ ಶ್ರೀ ವೈಕುಂಠ ಪತಿ ತನ್ನ ಭಕ್ತರಿಗೆ ದರ್ಶನ ಕೊಡುವ ಸಲುವಾಗಿ ಮತ್ತು ಉದ್ಧಾರ ಮಾಡುವ ಸಲುವಾಗಿ

ಇಲ್ಲಿಗೆ ಬಂದು ನೆಲೆಸಿದರೆಂಬ ಪ್ರತೀತಿ ಇದೆ. "ಒಬ್ಬ ಭಕ್ತ ತನಗೆ ೮೦ ವರ್ಷವಾಗುವ ತನಕ ತಿರುಪತಿಗೆ ವೆಂಕಟೇಶ್ವರ ದರ್ಶನಕ್ಕೆ ಹೋದರು. ನಂತರ ವಯಸ್ಸಾದ ಬಳಿಕ ಹೋಗಲಿಕ್ಕೆ ಆಗದೇ ಈ ಗುಡ್ಡದ ಮೇಲೆ ಬಂದು ಆ ರಾತ್ರಿ ನೆಲಸಿದನು. ಆಗ ಆ ಭಕ್ತನ ಕನಸಿನಲ್ಲಿ ಬಂದು ಇಲ್ಲೇ ವೆಂಕಟೇಶ್ವರ, ಭೂದೇವಿ ಮತ್ತು ಶ್ರೀದೇವಿ ಕಂಚಿನ ಪ್ರತಿಮೆಗಳನ್ನು ಪ್ರತಿಷ್ಠಾಪನೆ ಮಾಡು ನಾನು ದರ್ಶನ ಕೊಡುವೆ ಎಂದನು. ಅದರಂತೆ ಆ ಭಕ್ತ ಮಾಡಿದನು. ಅಂದಿನಿಂದ ಶ್ರೀ ವೆಂಕಟೇಶ್ವರ ಹೆಸರಿನಲ್ಲಿ ದೇವಾಲಯ ಪ್ರಸಿದ್ಧವಾಯಿತು. ಕಲ್ಲಳ್ಳಿ ಶ್ರೀ ವೆಂಕಟೇಶ್ವರ ದೇವರನ್ನು ಯಂಕಪ್ಪಾ ರಂಗಪ್ಪಾ ಎನ್ನುವವರು ವಂಶಪಾರಂಪರ್ಯವಾಗಿ ಪೂಜಿಸಿಕೊಂಡು ಬರುತ್ತಿದ್ದಾರೆ. ಈ ಕಲಿಯುಗದಲ್ಲಿ ಶ್ರೀ ಮಹಾವಿಷ್ಣುವು ವೆಂಕಟೇಶ ಅವತಾರವನ್ನು ಧರಿಸಿ ಶೇಷಾಚಲದಲ್ಲಿ ವಾಸವಾಗಿರುವದರಿಂದಲೇ ಅದಕ್ಕೆ ಶೇಷಾಚಲವೆಂದೂ ಹೆಸರು ಬಂದಿದೆ. ಇಷ್ಟಾರ್ಥಗಳನ್ನು ಪೂರೈಸುವ ಈ ಮಹಾಮಹಿಮನ ದರ್ಶನ ಆಕಾಂಕ್ಷಿಗಳಾಗಿ ಬರುವ ಜನಸ್ತೋಮವು ದಿನೇ ದಿನೇ ಬೆಳೆಯಹತ್ತಿತ್ತು. ಪ್ರತಿ ವರ್ಷ ಅಶ್ವಿನಿ ಪ್ರತಿಪೆದಯಿಂದ ದರ್ಶನವನ್ನು ಪಡೆದುಕೊಂಡು ಪುನೀತರಾಗಿ ಹರಕೆಗಳನ್ನು ಸಲ್ಲಿಸಿ ಹರ್ಷ ಪುಳಕಿತರಾಗಿ ತಮ್ಮ ಬಯಕೆ ಈಡೇರಿಕೆಯಿಂದಾಗಿ ಆನಂದದಾಯಕರಾಗಿರುತ್ತಿದ್ದರು.

ಭಕ್ತಾಭಿಮಾನಿಯಾದ ತಿರುಪತಿ ಈ ಕಲಿಯುಗದಲ್ಲಿ ನಡೆಯುವ ಅನೀತಿ ಅನ್ಯಾಯ ಪಾಪಗಳನ್ನು ಪರಿಹರಿಸಲೆಬೇಕಂದು ಈ ಅವತಾರವನ್ನು ತಾಳಿದನೆಂದು ಸ್ಥಳೀಯರು ಹೇಳುತ್ತಾರೆ. ೧೩೯೫ರಲ್ಲಿ ಕೊಣ್ಣೂರಿನ ದೇಸಾಯಿಯವರು ಪುಷ್ಕರಣೀತೀರ್ಥ ಕಟ್ಟಿಸಿದ್ದರು ಮತ್ತು ಗೋವಿಂದ ರಾಜನ ಗುಡಿ ಕಟ್ಟಿಸಿ ಕಲ್ಲಹಳ್ಳಿಯ ಕಲ್ಲು ಹೊಲವನ್ನು ದೇವರಿಗೆ ಇನಾಮು ಕೊಡಿಸಿದರು. ಅದೇ ರೀತಿ ಕ್ರಿ.ಶ. ೧೮೨೮ ಪ್ರಭವನಾಮ ಸಂವತ್ಸರದಲ್ಲಿ ಮಹಾದೇವರ ಗುಡಿಯನ್ನು ಇಲ್ಲಿ ಕಟ್ಟಲಾಯಿತು. ಕ್ರಿ.ಶ.೧೮೩೦ ವಿಭವನಾಮ ಸಂವತ್ಸರದಲ್ಲಿ ವರಹದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿದರು ಎನ್ನುವ ಶಾಸನಗಳು ಸಹ ಇಲ್ಲಿವೆ[೩೧]. ಕನ್ನಡ ಸಾಹಿತ್ಯದ ಕ್ಷೇತ್ರದ ಹಿರಿಯ ಸಾಹಿತಿಗಳಾದ ಸತ್ಯಕಾಮ ಅವರು ಕಲ್ಲಹಳ್ಳಿ ಗ್ರಾಮದಲ್ಲಿಯೇ ಜನಿಸಿದ್ದಾರೆ. ಇವರು ೧೯೭೧ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಸ್ವೀಕರಿಸಿ ಸಾಹಿತ್ಯ ಕ್ಷೇತ್ರಕ್ಕೆ ಹಿರಿಮೆಯನ್ನು ತಂದು ಕೊಟ್ಟಿದ್ದಾರೆ. ಇವರ ಜನ್ಮದಿನಾಚರಣೆ ದಿನದಂದು ಗುರುಪೌರ್ಣಿಮೆಯ ಆಸುಪಾಸಿನಲ್ಲಿ ರವಿವಾರದಂದು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಅಕ್ಟೋಬರ್ ೨೦ರಂದು ೧೯೮ರಂದು ಇವರು ಇಹಲೋಕವನ್ನು ತ್ಯಜಿಸಿದರು. ಕಲ್ಲಹಳ್ಳಿಯ ಗ್ರಾಮದಲ್ಲಿ ಸತ್ಯಕಾಮ ಪ್ರತಿಷ್ಠಾನ ಸ್ಥಾಪಿಸಿ ಗೋಸಂರಕ್ಷಣೆಯನ್ನು, ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಬಿತ್ತರಿಸುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಾ ಬಂದಿದ್ದಾರೆ. ಬೇಸಿಗೆಯಲ್ಲಿ ಮಕ್ಕಳಿಗಾಗಿ ವಿಶೇಷ ಶಿಬಿರವನ್ನು ಏರ್ಪಡಿಸಲಾಗುತ್ತದೆ.

**ಶಿಲಾ ಮೂರ್ತಿಗಳು**

ಭಾರತದಲ್ಲಿ ದೇವತಾರಾಧನೆ ಹಾಗೂ ವ್ಯವಸ್ಥಿತ ದೇವಾಲಯಗಳ ನಿರ್ಮಾಣ ಎಂದು ಆರಂಭವಾಯಿತೊ ಅಂದಿನಿಂದಲೂ ದೇವಾತಾ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆದೆ ಇದೆ. ಯಾವುದೇ ಪಂಥದ ದೇವಾಲಯವಿರಲಿ ಆ ದೇವಾಲಯಕ್ಕೊಂದು ದೇವತಾಮೂರ್ತಿ ಇದ್ದೇ ಇರುತ್ತದೆ. ಈ ರೀತಿಯ ಮೂರ್ತಿಗಳನ್ನು ಕುರಿತು ಶಾಸ್ತ್ರೀಯವಾಗಿ

ಅಧ್ಯಯನ ಮಾಡುವ ಶಾಸ್ತ್ರವನ್ನು ನಾವು ಸ್ಥೂಲವಾಗಿ "ಮೂರ್ತಿಶಾಸ್ತ್ರ" ಎಂದು ಕರೆಯಬಹುದು.

'ಮೂರ್ತಿ' ಎಂಬ ಶಬ್ದಗಳನ್ನೊಳಗೊಂಡು ಅದಕ್ಕೆ ಪರ್ಯಾಯವಾಗಿ ಬಳಸಿದ ಶಬ್ದಗಳಲ್ಲಿ ಅದೊಂದು ಭೌತಿಕವಸ್ತು ಎಂಬಂತೆಯೆ ಗ್ರಹಿಸಲಾಗುತ್ತದೆ. ಏಕೆಂದರೆ 'ದೇವತಾಮೂರ್ತಿ' ಎಂಬ ಶಬ್ದದಲ್ಲಿ ಮೂರ್ತಿಯೇ ದೇವತೆಯಲ್ಲ ಮೂರ್ತಿ ದೇವತೆಯದು. ಈ ಕುರಿತು ಇರುವ 'ಪ್ರತಿಮಾ', 'ಬಿಂಬ', 'ಪ್ರಕೃತಿ', 'ವಿಗ್ರಹ' ಮುಂತಾದ ಶಬ್ದಗಳನ್ನು ಇದನ್ನು ಇನ್ನೂ ಸ್ಪಷ್ಟವಾಗಿ ಸೂಚಿಸುತ್ತವೆ. ಇಲ್ಲೆಲ್ಲ ಒಂದು ನಿರಾಕಾರ ಕಲ್ಪನೆಯನ್ನು ಯಥಾವತ್ತಾಗಿ ಅನುಕರಿಸಿದ 'ಸಾಕಾರ ವಸ್ತು' ಎಂಬ ಪರಿಕಲ್ಪನೆ ಇದೆ. 'ಅರ್ಚ್ಯ'ಎಂಬ ಶಬ್ದ ಪೂಜಿಸಲಡುವಂಥದ್ದು ಎಂದಾದರೆ, ಬೇರೆ ಕೂಡ ಅದೇ ಅರ್ಥವನ್ನು 'ತನು' 'ವಪು' ಮುಂತಾದ ಶಬ್ದಗಳು ಮೂರ್ತಿಯನ್ನು ದೇವರನ್ನಾಗಿ ಗ್ರಹಿಸುವಲ್ಲಿ ಹಾಗೂ ದೇವರನ್ನು ಅದರ ಆತ್ಮವನ್ನಾಗಿ ಪ್ರತ್ಯೇಕಿಸುತ್ತವೆ[೩೨].

ಮೂರ್ತಿ ಎಂಬ ಪದಕ್ಕೆ ಸಮಾನಾರ್ಥವಾಗಿ 'ಪ್ರತಿಮೆ' ಎಂಬ ಪದ ಪ್ರಯೋಗದಲ್ಲಿದೆ. ಅಲ್ಲದೆ. ಮೂರ್ತಿಶಾಸ್ತ್ರವನ್ನು 'ಪ್ರತಿಮಾ ಶಾಸ್ತ್ರ' ಎಂದು ಕರೆಯಲಾಗುತ್ತಿದೆ. (Iconography - Iconomentry) ಪ್ರತಿಮಾ ಲಕ್ಷಣವೆಂದರೆ. ಒಂದು ದೇವತೆಯ ಲಕ್ಷಣವನ್ನ ಮೂರ್ತಿ ರೂಪದಲ್ಲಿ ಪ್ರಮಾಣಬದ್ಧವಾಗಿ ಹೇಗೆ ಹಿಡಿಯಬೇಕೆಂಬುದನ್ನು ವಿಧಿಸುವ ಶಾಸ್ತ್ರ, ಶಾಸ್ತ್ರೀಯ ನಿರೂಪಣೆ ಪ್ರಕಾರ ಮೂರ್ತಿಯು ಒಂದು ರೂಪ ಒಂಭತ್ತು ಅಂಗಗಳನ್ನು ಒಳಗೊಂಡಿರುತ್ತದೆ. ಅವೆಂದರೆ ನ್ಯಾಸ(ರೂಪ ಸಂಯೋಜನೆ) ಅಲಂಕಾರ (ಆಭರಣ, ವಸ್ತ್ರ ಕೇಶ ಮುಂತಾದವು) ಮುದ್ದಾ (ಹಸ್ತಮುದ್ದೆಗಳು) ಆಯುಧ (ದೇವತೆಯ ಕೈಯಲ್ಲಿರುವ ಆಯುಧಗಳು) ಭಾಪ್ರಕಕ್ಷ (ಆಸನ) ವಾಹನ, ಉಪದೇವ (ಪ್ರಧಾನ ದೇವತೆಯಜತೆ ತೋರಿಸಲ್ಪಡುವ ಇತರ ಕಡಿಮೆ ಮಹತ್ವದ ದೇವತೆಗಳು, ಪುರುಷ. ದೇವತೆಗಳ ಸಂದರ್ಭದಲ್ಲಿ ಅವರ 'ಸ್ತ್ರೀ' ದೇವತೆಗಳು) ಅರಿ (ದೇವತೆಯ ವೈರಿ) ಹಾಗು ಸ್ತುವಕ (ಭಕ್ತರ ಹಾಗೂ ಇತರ ಸೇವಕರು) ಈ ಶಾಸ್ತ್ರೀಯ ಸಂಪ್ರದಾಯಕ್ಕನುಗುಣವಾಗಿಯೇ ದೇವತಾ ಮೂರ್ತಿಗಳು ರೂಪಗೊಳ್ಳುತ್ತವೆ. ಮೂರ್ತಿಶಿಲ್ಪಕ್ಕೆ ಪ್ರಾಗೈತಿಹಾಸಿಕ ಕಾಲದಿಂದಲೂ ಆಧಾರಗಳು ದೊರಕುತ್ತವೆ[೩೩]. ಭಾರತದ ವಿವಿಧ ನೆಲೆಗಳ ಉತ್ಖನನದಿಂದ ಹಲವಾರು ಮಾಹಿತಿಗಳು ದೊರಕಿವೆ. ಅವುಗಳಲ್ಲಿ ಬಿಹಾರ ರಾಜ್ಯದ ಚಿರಾಂಡ, ರಾಜಸ್ಥಾನದ ಅಹಾರ್, ಮಧ್ಯ ಪ್ರದೇಶದ ಕಾಯಥ, ನವದಾತೋಲಿ ಹಾಗೂ ಪ್ರಕಾಶ ಮತ್ತು ಮಹಾರಾಷ್ಟ್ರದ ನೆವಾಸ, ಇನಾಂಗಾಂವ್ ಉತ್ತರ ಪ್ರದೇಶದ ಲಾಲ್-ಖಿಲಾದಲ್ಲಿ ಪ್ರಾಣಿ ಹಾಗೂ ಮಾತೃದೇವತೆಯ ಮಣ್ಣೂರ್ತಿಗಳು ದೊರೆತಿವೆ. ಹಾಗೂ ಗಂಗಾ ಬಯಲಿನ ಪಟ್ಟಣಗಳಾದ ಮಥುರಾ, ಅಹಿಚ್ಚತ್ರ ಮೊದಲಾದ ಪಟ್ಟಣಗಳಲ್ಲಿ ಕ್ರಿ.ಪೂ. ಐದನೇ ಶತಮಾನದಿಂದಲೇ ಮಣ್ಣೂರ್ತಿಗಳನ್ನು ಪತ್ತೆ ಹಚ್ಚಲಾಗಿದೆ. ಇವುಗಳು ನಂತರದ ಭಾರತೀಯ ಮೂರ್ತಿ ಲಕ್ಷಣಗಳಿಗೆ ಪ್ರೇರಕವಾಗಿವೆ. ಕರ್ನಾಟಕದ ಕುಪ್ಪಗಲ್, ಪಿಕ್ಲಿಹಾಳ, ಸಂಗನಕಲ್ಲು, ತೆಕ್ಕಲಕೋಟೆ ಮುಂತಾದ ಕಡೆ ನಡೆದ ಉತ್ಖನನಗಳಿಂದ ನೂತನ ಶಿಲಾಯುಗಕ್ಕೆ ಸೇರಿದ ಸುಡಾವೆ ಮಣ್ಣಿನ ಗೊಂಬೆಗಳು ದೊರೆತಿವೆ. ಅವುಗಳಲ್ಲಿ ಎತ್ತು, ಕುರಿ, ಪಕ್ಷಿ, ಮನುಷ್ಯ ಕೃತಿಗಳು ಪ್ರಮುಖವಾಗಿ ದೊರಕಿವೆ. ದಾವಣಗೆರೆ ಜಿಲ್ಲೆಗೆ ಹೊಂದಿಕೊಂಡಂತಿರುವ ಕೂಡ್ಲಿಗಿ ತಾಲೂಕಿನ ಕುಮತಿ, ಹುಲಿಕುಂಟೆ ನೆಲೆಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಏಕಶಿಲಾ ಮಾನವಾಕೃತಿಗಳು ದೊರತಿವೆ. ಇದೇ ರೀತಿಯ ಗೊಂಬೆಗಳು ಓರೇಬೆನಕಲ್, ಐಹೊಳೆಯಲ್ಲೂ ಕಂಡು ಬಂದಿವೆ. ಇವು ಅಂದಿನ ಧಾರ್ಮಿಕ ನಂಬಿಕೆ,

ಭಾವನೆ, ಮತ್ತು ಪರಂಪರೆಯನ್ನು ಸೂಚಿಸುವ ಆಕರಗಳಾಗಿರುವುದಷ್ಟೇ ಅಲ್ಲದೇ ಕರ್ನಾಟಕ ಮೂರ್ತಿಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತವೆ. ಈ ನಿರ್ಮಿತಿಗಳು ಸರಳ ಹಾಗೂ ಚತುರ ತಾಂತ್ರಿಕ ಕುಶಲತೆಯನ್ನು ತೋರಿಸುತ್ತವೆ. ಅಷ್ಟೇ ಅಲ್ಲದೆ ಇವು ತರುವಾಯದ ಶಿಲಾ ನಿರ್ಮಿತಿಗಳಿಗೆ ನಾಂದಿಯಾಗಿದ್ದು, ಆ ಕಾಲದಲ್ಲೇ ಶಿಲ್ಪಿಯು ಕಲ್ಲಿನಲ್ಲಿ ಕೆತ್ತುವ ಕೆಲಸದಲ್ಲಿ ಪರಿಣಿತಿಯನ್ನು ಹೊಂದಿದ್ದನೆಂಬುದರ ನಿದರ್ಶನಗಳಾಗಿವೆ.

ಮೆಹೆಂಜೊದಾರಿನಲ್ಲಿ ದೊರೆತ ಪ್ರಾಣಿಗಳ ಶಿಲ್ಪಗಳು ಹಾಗೂ ನರ್ತನ ಶಿಲ್ಪ, ಮುದ್ರೆಯ ಮೇಲೆ ದೊರೆತ ವಿಗ್ರಹಗಳಲ್ಲಿ ಮುಖ್ಯವಾಗಿ ಪಶುಪತಿ ಶಿವನೆಂದು ಗುರುತಿಸಲಾಗಿರುವ ಧ್ಯಾನಸ್ಥಮೂರ್ತಿಗಳು ಸಿಂಧೂ ನಾಗರಿಕತೆಯಲ್ಲಿ ದೊರೆಯುವ ಪ್ರಮುಖ ಮೂರ್ತಿಶಿಲ್ಪಗಳಾಗಿವೆ. ವೇದಗಳ ಕಾಲದಲ್ಲಿ ವಿಗ್ರಹಗಳಿಗೆ ಪ್ರಾಧಾನ್ಯವಿರಲಿಲ್ಲವೆಂದು ಪ್ರಕೃತಿ ಶಕ್ತಿಗಳನ್ನು ಆರಾಧಿಸುದುತ್ತಿದ್ದರೆಂದು ಹೇಳಲಾಗುತ್ತದೆ. ಆದರೂ ಇಂದ್ರ, ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಕಂಡು ಬರುತ್ತದೆ.

ರಾಮಾಯಣ, ಮಹಾಭಾರತಗಳಲ್ಲಿಯೂ ದೇವಾಲಯಗಳ ಉಲ್ಲೇಖ ಬರುವುದರಿಂದ ಆ ಕಾಲದಲ್ಲಿಯೇ ವಿಗ್ರಹ ಆರಾಧನೆ ತಕ್ಕಮಟ್ಟಿಗೆ ಪ್ರಚಲಿತವಾಗಿರಬೇಕು ಎನಿಸುತ್ತದೆ. ವೇದೋತ್ತರ ಕಾಲದ ಗೃಹ್ಯಸೂತ್ರಗಳಲ್ಲಿ ಮೂರ್ತಿ ಪೂಜೆಯ ಮೊದಲ ಉಲ್ಲೇಖ ಸಿಗುತ್ತದೆ. ನಂತರದ ಸಾಹಿತ್ಯವಾದ ಶತರುದ್ರೀಯದಲ್ಲಿ ಬ್ರಾಹ್ಮಣ ಸಂಸ್ಕೃತಿಯ ಕೆಲ ಮುಖ್ಯ ದೇವತೆಗಳಾದ ವಿಷ್ಣು, ಶಿವ. ಬ್ರಹ್ಮ, ಕುಮಾರ, ವಕ್ರತುಂಡ, ದುರ್ಗ, ಆದಿತ್ಯ ಮುಂತಾದ ದೇವತೆಗಳ ಉಲ್ಲೇಖ ಬರುತ್ತದೆ. ಹಾಗೂ ದೇವತಾ ತನಯಗಳಿಗೆ ಗ್ರಾಂಥಿಕ ಆಧಾರಗಳು ಆ ಕಾಲದಲ್ಲೇ ಸಿಗುತ್ತವೆ[೩೪].

ಮೂರ್ತಿಶಾಸ್ತ್ರಕ್ಕೆ ಕ್ರಿ.ಪೂ. ೩ನೇ ಶತಮಾನದಿಂದ ಆಧಾರಗಳು ಸಿಗುತ್ತವೆ. ಅವೈದಿಕರು ಕೂಡ ಮೂರ್ತಿಗಳ ಆರಾಧನೆಯಲ್ಲಿ ತೊಡಗಿದ್ದರೆಂಬುದು ವೈದಿಕ ಸಾಹಿತ್ಯದಿಂದ ವ್ಯಕ್ತವಾಗುತ್ತದೆ. ಕ್ರಿ.ಶ. ನಾಲ್ಕನೇಯ ಶತಮಾನಕ್ಕೆ ಸೇರಿದ ಅವಶೇಷಗಳು ಗಂಗಾ ಬಯಲಿನಲ್ಲಿ ದೊರೆತಿದ್ದು, ಅವುಗಳಿಂದ ಕ್ರಿ.ಪೂ. ೩ನೇ ಶತಮಾನಕ್ಕೆ ಪೂರ್ವದಲ್ಲೇ ಪ್ರಾಚೀನ ಭಾರತದ ಗ್ರಾಮಗಳಲ್ಲಿ ಮರದ ಮೂರ್ತಿಗಳು ಇದ್ದವೆಂಬುದು ಸ್ಪಷ್ಟವಾಗುತ್ತದೆ. ಈ ಎಲ್ಲಾ ಆಧಾರಗಳಿಂದ ಭಾರತೀಯ ನೆಲದ ಅವೈದಿಕ ಸಮಾಜಗಳಲ್ಲಿ ಮೂರ್ತಿ ಪೂಜೆ ಸಂಪ್ರದಾಯ ಪ್ರಚಲಿತದಲ್ಲಿತ್ತೆಂದು ಹೇಳಬಹುದು.

ಭಾರತೀಯ ಮೂರ್ತಿ ಶಿಲ್ಪ ಚರಿತ್ರೆಯಲ್ಲಿಯೇ ಮೌರ್ಯ ಕಾಲದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು, ತನ್ನ ಪೂರ್ವಿಕರಿಗಿಂತ ಭಿನ್ನವಾಗಿ ಅಶೋಕ ಶಿಲಾ ಮಾಧ್ಯಮಕ್ಕೆ ಆದ್ಯತೆ ನೀಡಿದೆ. ಕಲ್ಲಿನಿಂದ ಮಾಡಿದ ಮೂರ್ತಿಗಳಲ್ಲಿ ಮೌರ್ಯರ ಸ್ತಂಭಗಳ ಮೇಲ್ಭಾಗದ ವೃಷಭ, ಆನೆ, ಸಿಂಹ, ಕುದುರೆಯ ಆಕೃತಿಗಳು ಮುಖ್ಯವಾಗಿವೆ. ಧೌಲಿಯ ಬಂಡೆಯ ಮೇಲಿರುವ ಆನೆಯ ಉಬ್ಬುಶಿಲ್ಪ, ಪಾಟ್ನದ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪಗಳು, ಬೇಸನಗರದ ಯಕ್ಷಿ, ಸಾರನಾಥದಲ್ಲಿ ದೊರೆತ ಶಿಲ್ಪಗಳು ಪ್ರಮುಖವಾದವುಗಳಾಗಿವೆ. ಬೌದ್ಧ, ಜೈನ ಧರ್ಮಗಳ ಪ್ರಾರಂಭಿಕ ರೂಪಕ್ಕೂ, ಮಧ್ಯಕಾಲೀನ ಯುಗದಲ್ಲಿನ ಅವುಗಳ ಆಚರಣೆಯ ರೂಪಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಅವು ಸ್ಪಷ್ಟವಾಗಿ ಅನಾತ್ಮ, ಅನಿತ್ಯ ವಾದಗಳಿಂದ ಪಾರಮಾರ್ಥಿಕಕ್ಕೆ ಹೊರಳಿಕೊಳ್ಳುತ್ತವೆ. ಜೊತೆಗೆ ತಮ್ಮದೇ ದೇವತಾ ಪ್ರಪಂಚವನ್ನು ನಿರ್ಮಾಣ ಮಾಡಿ, ಸಾಮಾನ್ಯ ಉಪಾಸಕರ, ಸಾಮಾನ್ಯ ಜ್ಞಾನದಲ್ಲಿ ಮೂರ್ತಿ ಪೂಜಾ ಪರಂಪರೆಗಳಾಗಿ ಪರಿವರ್ತನೆ ಹೊಂದುತ್ತವೆ. ಕ್ರಿ.ಪೂ. ಎರಡು ಹಾಗೂ ಒಂದನೇಯ

ಶತಮಾನಕ್ಕೆ ಸೇರಿದ ಸಾಂಚಿ ಸ್ತೂಪ ಹಾಗೂ ಭಾರಹೂತ್ ಸ್ತೂಪಗಳೆಲ್ಲ ಭಾರತೀಯ ಪೂಜಾ ಪರಂಪರೆಯ ಆಧಾರಗಳು ದೊರೆಯುತ್ತವೆ.

ಇವುಗಳಲ್ಲಿ ಬುದ್ಧನನ್ನು ಮೂರ್ತಿ ರೂಪದಲ್ಲಿ ತೋರಿಸದಿದ್ದರೂ ಬುದ್ಧನ ಪ್ರತೀಕವಾದ ಬೋಧಿವೃಕ್ಷ, ಸಿಂಹಾಸನ, ಸ್ತೂಪ, ಚಕ್ರ ರೂಪದಲ್ಲಿ ಪೂಜಿಸುವ ದೃಶ್ಯಗಳಿರುತ್ತವೆ. ಈ ಪೂಜೆಯಲ್ಲಿ ನಮಸ್ಕಾರ, ಪ್ರದಕ್ಷಿಣೆ, ಧೂಪ, ದೀಪ, ಪುಷ್ಪ, ನೈವೇದ್ಯ ಮುಂತಾದ ಪೂಜೆಯ ಅಂಗಗಳು ಚಿತ್ರಿತವಾಗಿರುತ್ತವೆ. ಈ ಪೂಜೆಯನ್ನು ಮೂರ್ತಿ ಪೂಜೆಯ ಇತಿಹಾಸದಲ್ಲಿ ಒಂದು ಪ್ರಾರಂಭಿಕ ಅವಸ್ಥೆ ಎಂದು ಹೇಳಬಹುದಾಗಿದೆ. ಬುದ್ಧನ ಮೂರ್ತಿಯ ಕಲ್ಪನೆ ಕ್ರಿ.ಶ. ದಿಂದ ಆರಂಭದಿಂದ ಕ್ರಮೇಣ ಗಟ್ಟಿಗೊಳ್ಳುತ್ತಾ ಹೋಗಿ ಸುಮಾರು ಕ್ರಿಸ್ತಶಕ ಎರಡನೇಯ ಶತಮಾನದಲ್ಲಿ ಈ ಮೂರ್ತಿಯು ಅಂತಿಮ ರೂಪ ಪಡೆಯಿತು. ಬುದ್ಧನ ಮೂರ್ತಿಯ ಉಗಮದ ಬಗೆಗೆ ಈ ಶತಮಾನದ ಆದಿಯಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಗಾಂಧಾರ ಶಿಲ್ಪಗಳಲ್ಲಿ ಅವು ಗ್ರೀಕ್ ದೇವತೆಗಳ ಶೈಲಿಯಲ್ಲಿ ಕಾಣಿಸಿಕೊಳ್ಳುವುದರಿಂದ ಬುದ್ಧನ ಮೂರ್ತಿಗಳು ಗ್ರೀಕ್ ಸಂಸ್ಕೃತಿಯ ಪ್ರಭಾವದಿಂದ ಉಗಮಿಸಿದವು ಎಂಬ ವಾದ ಇತ್ತು. ಪ್ರಾಚೀನ ಭಾರತೀಯ ಗ್ರಾಮ ಸಂಸ್ಕೃತಿಯ ಯಕ್ಷ – ಯಕ್ಷಿಯರ ಮೂರ್ತಿ ಶೈಲಿಯೇ ಬುದ್ಧನ ಮೂರ್ತಿಯನ್ನು ರೂಪಿಸಿತು ಎಂದು ಆನಂದ ಕುಮಾರ ಸ್ವಾಮಿಯವರು ಹೇಳಿದ್ದಾರೆ[೩೫].

ಕ್ರಿಸ್ತ ಪೂರ್ವದಲ್ಲಿ ಕಂಡು ಬರುವ ಬೌದ್ಧ ಸ್ತೂಪಗಳಲ್ಲಿ ಬುದ್ಧ ಮೂರ್ತಿಯೊಡನೆ ಯಕ್ಷ–ಯಕ್ಷಿಣಿ, ನಾಗ, ಹಾಗೂ ವೈದಿಕ ದೇವತೆಗಳು ಕೈಮುಗಿದು ನಿಂತಿರುವಂತೆ ಕೆತ್ತಲಾಗಿದೆ. ಬುದ್ಧನನ್ನು ಭಗವಂತ ಎಂದು ಭಾಗವತ ಸಂಪ್ರದಾಯದವರಂತೆ ಕರೆಯುವ ರೂಢಿ ಅದಾಗಲೇ ಬೆಳೆದಿತ್ತು. ಆತ 'ಚಕ್ರವರ್ತಿ' ಎಂಬ ಪರಿಕಲ್ಪನೆಯಲ್ಲಿ ಛತ್ರ, ಚಾಮರ, ಧ್ವಜ, ಸಿಂಹಾಸನ, ಲಾಂಛನ ಮುಂತಾದ ಪ್ರಾಚೀನ ಭಾರತೀಯ ರಾಜತ್ವದ ಚಿಹ್ನೆಗಳನ್ನು ಆತನ ಸಂಕೇತಗಳೊಡನೆ ಶಿಲ್ಪಗಳಲ್ಲಿ ತೋರಿಸಲಾಗಿದೆ.

ಜೈನ ಧರ್ಮದಲ್ಲಿ ತೀರ್ಥಂಕರರನ್ನು ಮೂರ್ತಿ ರೂಪದಲ್ಲಿ ಪೂಜಿಸುವ ಸಂಪ್ರದಾಯ ಕ್ರಿ.ಶ. ಆರಂಭದಲ್ಲೇ ಇದ್ದುದಕ್ಕೆ ಪ್ರಾಕ್ತನ ಶಾಸ್ತ್ರೀಯ ಆಧಾರಗಳು ದೊರೆಯುತ್ತವೆ. ಜಿನಮೂರ್ತಿಯ ಉಲ್ಲೇಖ ಸ್ಪಷ್ಟವಾಗಿ ಖಾರವೇಲನ ಹಾಥಿಗುಂಪಾ ಶಾಸನದಲ್ಲಿ ದೊರಕುತ್ತದೆ ಇದು ಕ್ರಿ.ಪೂ, ಮೊದಲನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದಾಗಿದೆ. ಮಥುರಾದಲ್ಲಿ ಬೌದ್ಧಮೂರ್ತಿಗಳಂತೆ ಪ್ರಾಚೀನ ಜಿನಮೂರ್ತಿಗಳು ದೊರೆಯುತ್ತವೆ. ಮಧ್ಯಕಾಲದಲ್ಲಿ ಪ್ರತಿ ತೀರ್ಥಂಕರರನ್ನು ಪ್ರತ್ಯೇಕಿಸುವ ನಾಗ, ವೃಕ್ಷ, ಲಾಂಛನ, ಯಕ್ಷ–ಯಕ್ಷಿ ಮುಂತಾದ ಗುರುತುಗಳು ಬೆಳೆಯುತ್ತವೆ. ಜೈನ ಮೂರ್ತಿಶಾಸ್ತ್ರದಲ್ಲಿ ಪ್ರತಿ ತೀರ್ಥಂಕರ ಮೂರ್ತಿಗೂ ಒಬ್ಬ ಯಕ್ಷ ಹಾಗೂ ಒಬ್ಬ ಯಕ್ಷಣಿಯರು ದ್ವಾರಪಾಲಕರಂತೆ, ಸೇವಕರಂತೆ, ಇಲ್ಲವೇ ಉಪಾಸಕರಂತೆ ಕಲ್ಪಿಸಲಾಗಿದೆ. ಜೈನ ಮೂರ್ತಿಗಳಲ್ಲಿ ದಿಕ್ಪಾಲಕರು, ನವಗ್ರಹಗಳು ಹಾಗೂ ಇನ್ನು ಅನೇಕ ಶಕ್ತಿಗಳು ಮತ್ತು ದೇವತೆಗಳು ಬ್ರಾಹ್ಮಣ ಮೂರ್ತಿಗಳ ಜೊತೆ ಸಾಮ್ಯತೆಯನ್ನು ಹೊಂದಿವೆ.

ಶಾಸನ ಮತ್ತು ಸಾಹಿತ್ಯ ಆಧಾರದಿಂದ ಮರದ ಶಿಲ್ಪ ನಿರ್ಮಾಣವು ಕ್ರಿ.ಪೂ. ೩ನೇ ಶತಮಾನದಷ್ಟು ಹಿಂದೆ ಹೋಗುತ್ತದೆ. ಮರದ ಮೂರ್ತಿಗಳ ತಯಾರಿಕೆಯ ಬಗ್ಗೆ ಪ್ರಾಚೀನ ಮತ್ತು ಮಧ್ಯಕಾಲೀನ ಗ್ರಂಥಗಳಲ್ಲಿ ಸಾಕಷ್ಟು ಮಾಹಿತಿ ಇದೆ. ಭಾರತದಲ್ಲಿ ಲೋಹದ ಚಿಕ್ಕ ಮೂರ್ತಿಗಳು ಬಹಳ ದೊರೆತಿವೆ. ಕೆಲವು ಪ್ರಾಚೀನ ಗ್ರಂಥಗಳಲ್ಲಿ 'ಮಧುರಚೇಷ್ಠ' ವಿಧಾನದ ಬಗ್ಗೆ ಮಾಹಿತಿ ಇದೆ[೩೬].

ದಕ್ಷಿಣ ಭಾರತದಲ್ಲಿ ಶಾತವಾಹನರ ಕಲೆ ಅನೇಕ ಕಡೆ ವಿಜೃಂಭಿಸಿತು. ಗುಡಿಮಲ್ಲಂ ಶಿವಲಿಂಗ ಶಾತವಾಹನರ ಶೈಲಿಯ ಅತ್ಯುತ್ತಮ ಕೊಡುಗೆಯಾಗಿದೆ. ನಾಗಾರ್ಜುನಕೊಂಡ ಶಿಲ್ಪಗಳು ಅಮರಾವತಿಯ ಶೈಲಿಯಲ್ಲಿವೆ. ಬಾದಾಮಿ ಚಾಲುಕ್ಯರ ಶಿಲ್ಪಗಳು ಕರ್ನಾಟಕದ ಐಹೊಳೆ, ಬಾದಾಮಿ, ಮಹಾಕೂಟ, ಪಟ್ಟದಕಲ್ಲು ಮುಂತಾದ ಕಡೆಗಳಲ್ಲಿ ಕಂಡು ಬರುತ್ತವೆ. ಐಹೊಳೆಯ ಮೇಗುತಿಯ ದೇವಾಲಯ, ಹುಚ್ಚಮಲ್ಲಿಗುಡಿ ಮತ್ತು ಲಾಡಖಾನ ಗುಡಿಗಳಲ್ಲಿರುವ ಶಿಲ್ಪಗಳು ಆರಂಭಿಕ ಹಂತದ ಅತ್ಯುತ್ತಮ ಶಿಲ್ಪಗಳಾಗಿವೆ. ನೆರೆಯ ರಾಜ್ಯವಾದ ಮಹಾರಾಷ್ಟ್ರದ ಎಲಿಫೆಂಟಾ, ಎಲ್ಲೋರಾದಲ್ಲಿ ಹಾಗೂ ಕರ್ನಾಟಕದ ಗದಗ, ರೋಣ, ನಿಡಗುಂದಿ ಮುಂತಾದ ಕಡೆಗಳಲ್ಲಿ ದೊರೆತಿವೆ. ಶ್ರವಣಬೆಳಗೊಳದ ಗೊಮ್ಮಟೇಶ್ವರ ಮೂರ್ತಿ ಮಹತ್ವದ್ದಾಗಿದೆ. ಹೊಯ್ಸಳರ ಮೂರ್ತಿಗಳು ಹೆಚ್ಚಾಗಿ ಅಲಂಕೃತಗೊಂಡಿದ್ದು ನೋಡಲು ಸುಂದರವಾಗಿವೆ. ವಿಜಯನಗರ ಕಾಲದ ಗಣನೀಯವಾದದ್ದು[೩೭], ಭಾರತ ಮತ್ತು ಕರ್ನಾಟಕದ ಸಂದರ್ಭದಲ್ಲಿ ಮೂರ್ತಿಶಿಲ್ಪಕಲೆ ಬೆಳೆದು ಬಂದ ಬಗೆಯನ್ನು ಸಂಕ್ಷಿಪ್ತವಾಗಿ ಈ ವರೆಗೆ ಅವಲೋಕಿಸಲಾಗಿದೆ.

ತೇರದಾಳ ಪರಿಸರದ ರಾಜ ಮಹಾರಾಜರು, ರಾಣಿಯರು, ಸಾಮಂತರು, ಅಧಿಕಾರಿಗಳು, ವರ್ತಕರು, ಮೂರ್ತಿಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಇಲ್ಲಿನ ಮೂರ್ತಿ ಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಯದಿದ್ದರೂ ದೊರೆತಿರುವ ಅಲ್ಪ ಪ್ರಮಾಣದ ಮೂರ್ತಿ ಶಿಲ್ಪಗಳಲ್ಲಿ ಜನರ ಭಕ್ತಿ ಭಾವನೆಗಳು ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಇವು ಗುಡಿಯ ಒಳಗೆ ಹಾಗೂ ಹೊರಗೆ ಪ್ರತಿಷ್ಠಾಪನೆಗೊಂಡಿವೆ. ಇನ್ನೂ ಕೆಲವು ಮೂರ್ತಿಶಿಲ್ಪಗಳನ್ನು ಗೋಡೆಯ ಕೋಷ್ಠ ಗುಡಿಗಳಲ್ಲಿ ಅಲಂಕಾರಕ್ಕಾಗಿ ಕೆತ್ತಲಾಗಿರುವುದನ್ನು ನೋಡಬಹುದು. ನೇಮಿನಾಥ ಜಿನಾಲಯದಲ್ಲಿ ಒಟ್ಟು ಮೂರು ಜೈನ ತೀರ್ಥಂಕರ ಮೂರ್ತಿ ಶಿಲ್ಪಗಳಿದ್ದು ಕಲ್ಮೇಶ್ವರ ದೇವಾಲಯದಲ್ಲಿ ಶಿವಲಿಂಗ, ನಂದಿ, ಶಿವ ಪಾರ್ವತಿಯರ ಶಿಲ್ಪ ಹಾಗೂ ಜೋಡು ನಾಗರ ಶಿಲ್ಪಗಳನ್ನು ಕಾಣಬರುತ್ತವೆ. ಆ ಕುರಿತ ಮಾಹಿತಿ ಈ ಮುಂದಿದೆ.

**ಶಿವಲಿಂಗಗಳು**

ಶಿವನನ್ನು ಲಿಂಗರೂಪದಲ್ಲಿ ಪೂಜಿಸುವುದು ಸರ್ವೇ ಸಾಮಾನ್ಯ. ಇಂತಹ ಶಿವಲಿಂಗಗಳು ಹಲವಾರು ಬಗೆಯಲ್ಲಿ ಕಂಡುಬರುತ್ತಿದ್ದು ಪಾಣಿಪಟ್ಟವಿಲ್ಲದ ಲಿಂಗ, ಚೌಕ ಪಾಣಿಪಟ್ಟವಿರುವ ಲಿಂಗ, ಯೋನಿ ಪಾಣಿಪಟ್ಟ ಲಿಂಗಗಳು ಹೀಗೆ ಹಲವಾರು ರೂಪದಲ್ಲಿ ಲಿಂಗಗಳು ಕಂಡುಬರುತ್ತಿದ್ದರೂ ತೇರದಾಳ ಕಲ್ಮೇಶ್ವರ ದೇವಾಲಯದಲ್ಲಿ ಯೋನಿ ಪಾಣಿಪಟ್ಟ ಲಿಂಗವಿದ್ದು, ನೋಡಲು ಸುಂದರವಾಗಿದೆ.

**ಉಮಾಮಹೇಶ್ವರ ಮೂರ್ತಿ**

ತೇರದಾಳದ ಕಲ್ಮೇಶ್ವರ ದೇವಾಲಯದ ವರಾಂಡದ ಗೋಡೆಯಲ್ಲಿ ಉಮಾಮಹೇಶ್ವರ ಮೂರ್ತಿ ಇದೆ. ಇದರಲ್ಲಿ ಶಿವ ಮತ್ತು ಪಾರ್ವತಿಯನ್ನು ಜೊತೆಯಾಗಿ ದಾಂಪತ್ಯ ಆಸನದಲ್ಲಿ ಕುಳಿತಿರುವಂತೆ ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿದೆ. ಇದರ ದೇಹದ ಮೇಲೆ ವಿವಿಧ ಬಗೆಯ ಆಭರಣ ಮತ್ತು ಹಾರಗಳಿವೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.ಪೂ. ೧೦ ನೇ ಶತಮಾನ ಎಂದು ಹೇಳಬಹುದು.

**ತೇರದಾಳದ ನಂದಿ ಮೂರ್ತಿ**

ತೇರದಾಳದ ಕಲ್ಮೇಶ್ವರ ದೇವಾಲಯದಲ್ಲಿ ಬಳಪದ ಶಿಲೆಯಲ್ಲಿ ತಯಾರಿಸಿದ ನಂದಿ ಇದೆ. ವಿವಿಧ ಆಭರಣ ಮತ್ತು ಅಲಂಕಾರವನ್ನೊಂದಿರುವ ಇದು ಎಡಕ್ಕೆ ವಾಲಿ, ಬಲಗಾಲನ್ನು ಮುಂದೆ ಚಾಚಿ ಮಲಗಿದೆ. ಇಲ್ಲಿ ನಂದಿಯನ್ನು ಶಿವನ ವಾಹನದ ರೂಪದಲ್ಲಿ ಗರ್ಭಗುಡಿಯ ಮುಂದೆ ಇಡಲಾಗಿದೆ. ಇಲ್ಲಿನ ಅಂತರಾಳದಲ್ಲಿ ಇದೇ ಶೈಲಿಯ ಮತ್ತೆರಡು ಕಪ್ಪು ಶಿಲೆಯಲ್ಲಿ ತಯಾರಿಸಿದ ನಂದಿಗಳಿವೆ. ಇವುಗಳ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ. ೧೧ನೇ ಶತಮಾನ ಎಂದು ಹೇಳಬಹುದು. ಇದೇ ವರಾಂಡದಲ್ಲಿ ಇದೇ ಕಾಲಘಟ್ಟಕ್ಕೆ ಸೇರಿದ ಒಂದು ಜೋಡು ನಾಗ ಶಿಲ್ಪದ ಪ್ರತಿಮೆಯನ್ನು ಕಾಣಬಹುದು.

**ಹಳಂಗಳಿಯ ಗಣೇಶ ಮೂರ್ತಿ**

ಈ ಮೂರ್ತಿಯು ಹಳಂಗಳಿಯ ರಾಮಲಿಂಗೇಶ್ವರ ದೇವಾಲಯದ ನವರಂಗದಲ್ಲಿದ್ದು, ಪಶ್ಚಿಮಾಭಿಮುಖವಾಗಿದೆ. ಈ ವಿಗ್ರಹವು ಯೋನಿಪೀಠದ ಮೇಲೆ ಕುಳಿತಿರುವ ಗಣೇಶನು ಚತುರ್ಭುಜವನ್ನು ಹೊಂದಿದ್ದಾನೆ. ಮೇಲಿನ ಕೈಗಳಲ್ಲಿ ಅಂಕುಶ, ಅಭಯ ಹಸ್ತ ಕೆಳಗಿನ ಕೈಯಲ್ಲಿ ತ್ರಿಶೂಲ, ಪ್ರತಿಹಾರ ತಟ್ಟಿ ಇದರ ಎತ್ತರ ೧೮ ಸೆಂ ಮೀ ಸುತ್ತಳತೆ ೧೮ ಸೆಂ ಮೀ.ಇದೆ. ಇದು ಕಪ್ಪು ಶಿಲೆಯಿಂದ ಕೂಡಿದೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.ಪೂ.೧೧ನೇ ಶತಮಾನ ಎಂದು ಹೇಳಬಹುದು.

**ನೇಮಿನಾಥ**

ತೇರದಾಳದ ನೇಮಿನಾಥ ಬಸದಿಯ ಗರ್ಭ ಗೃಹದಲ್ಲಿರುವ ಇದನ್ನು ಕಪ್ಪು ಶಿಲೆಯಿಂದ ತಯಾರಿಸಲಾಗಿದೆ. ನೇಮಿನಾಥ ತೀರ್ಥಂಕರರು ಪೀಠದ ಮೇಲೆ ಯೋಗ ಮುದ್ರೆಯಲ್ಲಿ ಪದ್ಮಾಸನದಲ್ಲಿ ಆಸೀನನಾಗಿದ್ದಾನೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ೧೦ ನೇ ಶತಮಾನ ಎಂದು ಹೇಳಬಹುದು.

**ಪಾರ್ಶ್ವನಾಥ**

ಈ ವಿಗ್ರಹವು ತೇರದಾಳದ ನೇಮಿನಾಥ ಬಸದಿಯ ಅಂತರಾಳದಲ್ಲಿದೆ. ಇದನ್ನು ಬಿಳಿ ಅಮೃತ ಶಿಲೆಯಿಂದ ತಯಾರಿಸಲಾಗಿದೆ. ಪಾರ್ಶ್ವನಾಥ ಶಿಲ್ಪವು ಕಮಲಾಕೃತಿಯ ಪೀಠದ ಮೇಲೆ ಕಾಯೋತ್ಸರ್ಗ ಭಂಗಿಯಲ್ಲಿ ಸ್ಥಾನೀಕವಾಗಿದೆ. ಪೀಠದ ಸುತ್ತಲು ೨೪ ತೀರ್ಥಂಕರ ಶಿಲ್ಪಗಳಿವೆ. ಆಚೆ ಈಚೆ ಚಾಮಲದಾರಿಗಳು ಯಕ್ಷ-ಯಕ್ಷಣಿಯರ ಶಿಲ್ಪಗಳಿವೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ೧೦-೧೧ ನೇ ಶತಮಾನ ಎಂದು ಹೇಳಬಹುದು.

**ಪದ್ಮಾವತಿ**

ಈ ವಿಗ್ರಹವು ತೇರದಾಳದ ನೇಮಿನಾಥ ಬಸದಿಯ ನವರಂಗ ಮಂಟಪದಲ್ಲಿರುವ ಇದನ್ನು ಕಪ್ಪು ಶಿಲೆಯಿಂದ ತಯಾರಿಸಲಾಗಿದೆ. ಪದ್ಮಾವತಿಯ ಶಿಲ್ಪವು ಚಿಕ್ಕದಾದ ಪೀಠದ ಮೇಲಿದೆ. ವರದಾ-ಅಭಯ ಹಸ್ತಗಳಿರುವ ಈ ಮೂರ್ತಿಯ ದೇಹದ ಮೇಲೆ ಬಗೆಬಗೆಯ ಆಭರಣಗಳಿವೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ೧೦-೧೧ ನೇ ಶತಮಾನ ಎಂದು ಹೇಳಬಹುದು.

**ಹನಗಂಡಿ ದಿಗಂಬರೇಶ್ವರ ಮೂರ್ತಿ**

ಈ ವಿಗ್ರಹವು ದಿಗಂಬೇಶ್ವರ ಗರ್ಭಗೃಹದ ಜಗಲಿಯ ಮೇಲೆ ಇದ್ದು, ಇದನ್ನು ಕಪ್ಪು ಶಿಲೆಯಿಂದ ತಯಾರಿಸಲಾಗಿದೆ. ಅಲ್ಲದೇ ಅದಕ್ಕೆ ಈಚೆಗೆ ಹಿತ್ತಾಳೆ ಕವಚ ಜೋಡಿಸಲಾಗಿದೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ. ೧೨ನೇ ಶತಮಾನ ಎಂದು ಹೇಳಬಹುದು.

**ಹನಗಂಡಿ ಹನುಮಂತ ಮೂರ್ತಿ**

ಈ ವಿಗ್ರಹವು ಹನಗಂಡಿ ಹನುಮಂತ ದೇವಾಲಯದ ಗರ್ಭಗೃಹದ ಜಗಲಿಯ ಮೇಲೆ ಇದ್ದು, ಇದನ್ನು ಕಪ್ಪು ಶಿಲೆಯಿಂದ ತಯಾರಿಸಲಾಗಿದೆ. ದೇಹದ ಮೇಲೆ ವಿವಿಧ ಆಭರಣಗಳಿದ್ದು, ಸ್ಥಾನೀಕವಾಗಿರುವ ಈ ಮೂರ್ತಿ ಬಲಗೈ ಆಭಯ ಮುದ್ರೆಯಲ್ಲಿದ್ದು, ಎಡಗೈನಲ್ಲಿ ಗದೆ ಹಿಡಿದಿದ್ದು, ನೋಡಲು ಆಕರ್ಷಕವಾಗಿದೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.ಪೂ. ೧೩-೧೪ನೇ ಶತಮಾನ ಎಂದು ಹೇಳಬಹುದು.

**ಹಳಂಗಳಿಯ ಆಂಜನೇಯ ಮೂರ್ತಿ (ರಾಮಲಿಂಗೇಶ್ವರ ಪಕ್ಕದಲ್ಲಿರುವ ದೇವಾಲಯ)**

ಈ ಮೂರ್ತಿಯು ಹಳಿಂಗಳಿಯ ರಾಮಲಿಂಗೇಶ್ವರ ದೇವಾಲಯದ ಪಕ್ಕದಲ್ಲಿದೆ. ಈ ಮೂರ್ತಿಯು ದಕ್ಷಿಣಕ್ಕೆ ಮುಖ ಮಾಡಿದ್ದು, ಇದನ್ನು ಕಪ್ಪು ಶಿಲೆಯಿಂದ ತಯಾರಿಸಲಾಗಿದೆ. ದೇಹದ ಮೇಲೆ ವಿವಿಧ ಆಭರಣಗಳಿದ್ದು, ಸ್ಥಾನಿಕವಾಗಿರುವ ಈ ಮೂರ್ತಿ ಬಲಗೈ ಆಭಯ ಮುದ್ರೆಯಲ್ಲಿದ್ದು, ಎಡಗೈನಲ್ಲಿ ಗದೆ ಹಿಡಿದಿದ್ದು, ನೋಡಲು ಆಕರ್ಷಕವಾಗಿದೆ. ಇದರ ಎತ್ತರ ೬೦ ಸೆಂ. ಮೀ .ಅಗಲ ೨೪ ಸೆಂ ಮೀ ಇದೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.ಪೂ.೧೩-೧೪ನೇ ಶತಮಾನ ಎಂದು ಹೇಳಬಹುದು.

**ಹಳಂಗಳಿಯ ಆಂಜನೇಯ ಮೂರ್ತಿ(ರಾಮೇಶ್ವರ ದೇವಾಲಯದ ಆವರಣ)**

ಹಳಂಗಳಿಯ ರಾಮೇಶ್ವರ ದೇವಾಲಯದ ಗರ್ಭಗುಡಿ ಆವರಣದಲ್ಲಿದೆ. ಈ ಮೂರ್ತಿ ದಕ್ಷಿಣಕ್ಕೆ ಮುಖ ಮಾಡಿದೆ. ಬಲಗೈ ಉತ್ತರಕ್ಕೆ ಅಭಯ ಹಸ್ತವಾಗಿದ್ದು, ಇನ್ನೊಂದು ಕೈಯನ್ನು ಟೊಂಕದ ಮೇಲೆ ಇರಿಸಿದ್ದಾನೆ. ಬಾಲವು ಬಲದಿಂದ ತಲೆಯ ಮೇಲೆ ಹಾಯ್ದು ಭುಜದವರೆಗೆ ಚಾಚಿದೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.ಪೂ.೧೩-೧೪ನೇ ಶತಮಾನ ಎಂದು ಹೇಳಬಹುದು.

**ಕಲ್ಲಳ್ಳಿಯ ವೆಂಕಟೇಶ್ವರ ಮೂರ್ತಿ**

ಈ ವಿಗ್ರಹವು ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದ ಗರ್ಭ ಗುಡಿಯಲ್ಲಿದೆ. ಕಪ್ಪು ಶಿಲೆಯಿಂದ ನಿರ್ಮಿಸಿದ ವೆಂಕಟೇಶ್ವರ ಮೂರ್ತಿಯು ನಿಂತ ಭಂಗಿಯಲ್ಲಿದೆ. ಈ ಮೂರ್ತಿಗೆ ಎರಡು ಕೈಗಳಿದ್ದು, ಅವು ವರದಾ, ಆಭಯ ಮುದ್ರೆಯಲ್ಲಿವೆ. ಸಮ ಭಂಗಿಯಲ್ಲಿರುವ ಈ ಮೂರ್ತಿಯ ಕೊರಳಲ್ಲಿ ವಿವಿಧ ಆಭರಣಗಳಿವೆ. ಇದರ ತಲೆಯ ಮೇಲೆ ಕಿರೀಟವಿದೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.ಪೂ.೧೨ ನೇ ಶತಮಾನ ಎಂದು ಹೇಳಬಹುದು.

**ಕಲ್ಲಳ್ಳಿಯ ಶೇಷ ಶಾಹಿ ಅನಂತ ಮೂರ್ತಿ**

ಈ ವಿಗ್ರಹವು ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದ ಗರ್ಭ ಗುಡಿಯಲ್ಲಿದೆ. ಇದು ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದ ಆಗ್ನೇಯಕ್ಕಿದ್ದು, ನವರಂಗದಲ್ಲಿ ಮೂರ್ತಿಯನ್ನು ಇಟ್ಟಿದ್ದಾರೆ. ಸುಂದರವಾದ ಕೆತ್ತನೆಯಿಂದ ಕೂಡಿದೆ. ಈ ವಿಗ್ರಹವು ಬೂದು ಬಣ್ಣದ ಶಿಲೆಯಲ್ಲಿ ನಿರ್ಮಿಸಿರುತ್ತಾರೆ. ಇಲ್ಲಿ ಏಳು ಹೆಡೆಗಳ ಸರ್ಪದ ಮೇಲೆ ಶಯನವಾಗಿದ್ದಾನೆ. ಇದಕ್ಕೆ ೪ ಕೈಗಳಿವೆ. ಈ ಮೂರ್ತಿಯ ದೇಹ ಮತ್ತು ಕೊರಳಲ್ಲಿ ವಿವಿಧ ಆಭರಣಗಳಿವೆ. ಎಡ ಕಾಲನ್ನು ಬಲಗಾಲಿನ ಮೊಣಕಾಲಿನ ಮೇಲೆ ಇಟ್ಟಿರುತ್ತಾನೆ. ಬಲಗಾಲನ್ನು ಮುಂದಕ್ಕೆ ಚಾಚಿದ್ದಾನೆ. ವಿಷ್ಣುವಿನ ನಾಭಿ ಕಮಲ ಮತ್ತು ಅದರ ಮೇಲೆ ದಕ್ಷ ಬ್ರಹ್ಮ ಸ್ಪಷ್ಟವಾಗಿ ಕೆತ್ತಲ್ಪಟ್ಟಿದೆ. ವಿಷ್ಣುವಿನ ಬಲಕ್ಕೆ ಭೂದೇವಿಯು ಸುಖಾಸನದಲ್ಲಿ ಕುಳಿತ್ತಿದ್ದಾರೆ. ಎಡಭಾಗದಲ್ಲಿ ಶ್ರೀದೇವಿಯು ಸುಖಾಸನದಲ್ಲಿ ಕುಳಿತು ತನ್ನ ಬಲತೊಡೆಯ ಮೇಲೆ ವಿಷ್ಣುವಿನ ಪಾದ್ಯವನ್ನು ಬಾರಿಸುತ್ತಿರುವಂತೆ ಇದ್ದಾಳೆ. ಇದರ ಶೈಲಿಯನ್ನು ಅನುಸರಿಸಿ ಇದರ ಕಾಲ ಕ್ರಿ.ಶ.೧೨ ನೇ ಶತಮಾನ ಎಂದು ಹೇಳಬಹುದು. ಆಯತಾಕಾರದ ವಿಷ್ಣುವಿನ ಈ ಶಿಲಾಫಲಕ ಬಹುಶಃ ಕಲ್ಯಾಣ ಚಾಲುಕ್ಯರ ಕಾಲದ ಒಂದು ಒಳ್ಳೆಯ ಮಾದರಿಯಾಗಿದೆಯೆಂದು ಹೇಳಬಹುದು.

**ಕಲ್ಲಳ್ಳಿಯ ಸೂರ್ಯ ವಿಗ್ರಹ**

ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದಲ್ಲಿ ಈ ಸೂರ್ಯ ವಿಗ್ರಹವಿದ್ದು, ಇದರ ಎತ್ತರ ೨೫ ಸೆಂ ಮೀ ಇದೆ. ಕಪ್ಪು ಶಿಲೆಯಲ್ಲಿ ತಯಾರಿಸಿರುವ ಇದು ೮ ಕೈಗಳನ್ನೊಂದಿದೆ. ಎಡಕ್ಕಿರುವ ೪ ಕೈಗಳಲ್ಲಿ ಹಿಂದಿನ ಕೈಯಿಂದ ಎಡ ಮುಂದಿನ ಕೈವರೆಗೆ ಸರ್ಪ, ದಂಡ, ಶಂಖ ಹಾಗೂ ಕಮಲಗಳಿವೆ. ಬಲಕ್ಕಿರುವ ೪ ಕೈಗಳಲ್ಲಿ ಹಿಂದಿನಿಂದ ಕ್ರಮವಾಗಿ ತ್ರಿಶೂಲ, ಚಕ್ರ, ಶಂಖ ಹಾಗೂ ಕಮಲಗಳಿವೆ. ಕೀರಿಟ ಮುಕುಟ ಧರಿಸಿರುವ ಸೂರ್ಯನ ಹಿಂಬದಿಯಲ್ಲಿ ಕೀರ್ತಿ ಮುಖದ ಪ್ರಭಾವಳಿಯ ಕೆತ್ತನೆಯಿದೆ. ಇದನ್ನು ಗಮನಿಸಿದರೆ ಈ ವಿಗ್ರಹವು ಸುಮಾರು ೧೩ ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ ಎಂಬ ನಿಲುವಿಗೆ ಬರಬಹುದಾಗಿದೆ.

**ಕಲ್ಲಳ್ಳಿಯ ಗಜಲಕ್ಷ್ಮಿ ಶಿಲ್ಪ**

ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದಲ್ಲಿ ಈ ವಿಗ್ರಹವಿದೆ. ಸುಂದರ ಶಿಲ್ಪವು ೩೪ ಸೆಂ ಮೀ ಎತ್ತರ ಹಾಗೂ ೧೪ ಸೆಂ. ಮೀ ಅಗಲವಾಗಿದ್ದಾಳೆ. ಗಜಲಕ್ಷ್ಮಿಯನ್ನು ಹೊತ್ತ ಶಿಲೆಯು ೧೫೧ ಸೆಂ. ಮೀ ಅಗಲವಿದೆ. ಈ ಶಿಲ್ಪವು ಸುಮಾರು ಮಧ್ಯಯುಗದ ಆರಂಭಕ್ಕೆ ಸಂಭಂಧಿಸಿದ್ದಾಗಿದೆ ಎಂದು ಅದರ ಶೈಲಿಯನ್ನು ಆಧರಿಸಿ ಹೇಳಬಹುದಾಗಿದೆ.

**ಕಲ್ಲಳ್ಳಿಯ ಭೂದೇವಿ ಮತ್ತು ಶ್ರೀದೇವಿ ಶಿಲ್ಪಗಳು.**

ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದಲ್ಲಿ ಈ ವಿಗ್ರಹಗಳಿವೆ. ಭೂದೇವಿ ಮತ್ತು ಶ್ರೀದೇವಿಯರನ್ನು ಕಪ್ಪು ಶಿಲೆಯಿಂದ ನಿರ್ಮಿಸಲಾಗಿದೆ. ವೆಂಕಟರಮಣ ಜೊತೆ ಇವರಿಬ್ಬರೂ ಇದ್ದದ್ದು ಈ ಮೂರ್ತಿಗಳನ್ನು ಭೂಮಿಯನ್ನು ಅಗೆದಾಗ ದೊರಕಿವೆ.

ಈ ಮೇಲಿನ ಮೂರ್ತಿಗಳಲ್ಲದೇ ಪಾರ್ವತಿ ಮೂರ್ತಿಯೊಂದಿದ್ದು, ಅದನ್ನು ಜನರು ಶ್ರೀದೇವಿ ಮೂರ್ತಿ ಎನ್ನುತ್ತಾರೆ. ಅದೇ ರೀತಿ ವೆಂಕಟರಮಣ ದೇವಾಲಯದ ಎಡಭಾಗದಲ್ಲಿ ಮತ್ತೊಂದು ಭೂದೇವಿಯ ವಿಗ್ರಹವನ್ನು ಕೆತ್ತಲಾಗಿದೆ. ಈ ವೆಂಕಟರಮಣ ದೇವಾಲಯದ ಸ್ವಲ್ಪ

ದೂರದಲ್ಲಿ ದೇವಾಲಯದ ಹಿಂದುಗಡೆ ಹೊಸ ದೇವಾಲಯವನ್ನು ಕಟ್ಟಿಸಿದ್ದಾರೆ. ಕಲ್ಲಹಳ್ಳಿಯಲ್ಲಿ ಇನ್ನು ಅನೇಕ ಪ್ರಾಚೀನ ವಿಗ್ರಹಗಳು ವೆಂಕಟೇಶ ದೇವಾಲಯದ ವಿಶಾಲವಾದ ಪ್ರದೇಶದಲ್ಲಿ ಮುಂದೆ ಮುಖ ಹೊಂದಿದ ಹನುಮನ ವಿಶೇಷ ಮೂರ್ತಿ ಇದೆ. ಇದು ಇಲ್ಲಿನ ವಿಶೇಷವಾಗಿದೆ. ಮತ್ತು ಅಲ್ಲಿ ಅನೇಕ ಸುಂದರವಾದ ಶಿಲ್ಪಗಳನ್ನು ಕಾಣುತ್ತೇವೆ. ಈ ಕಲ್ಲಳ್ಳಿ(ವೆಂಕಟಗಿರಿಯ) ಉತ್ತರಕ್ಕೆ ದೂರದಲ್ಲೊಂದು ಬೆಟ್ಟವಿದೆ. ಆ ಬೆಟ್ಟದ ಮೇಲೆ ಶ್ರೀ ರೇಣುಕಾದೇವಿಯ ದೇವಾಲಯವಿದೆ. ಅದರಲ್ಲಿ ಶ್ರೀ ವೆಂಕಟೇಶ ಮೂರ್ತಿ, ಶ್ರೀ ರಾಮಸೀತಾ ಮೂರ್ತಿ, ಶ್ರೀ ಮಾರುತಿ ವಿಗ್ರಹ, ಶ್ರೀ ಭೀಮ ವಿಗ್ರಹ, ಶ್ರೀ ಮಧ್ವ ವಿಗ್ರಹ, ಶ್ರೀ ಗೋವಿಂದ ರಾಜ ವಿಗ್ರಹಗಳಿದ್ದು, ಸಾಕಷ್ಟು ಪ್ರಸಿದ್ಧಿ ಪಡೆದಿವೆ. ಶಕೆ೧೩೪೮ ಸರ್ವ ಜಿತನಾಮ ಸಂವತ್ಸರದಲ್ಲಿ ಬ್ರಹ್ಮಯ್ಯ, ಸಾಂಬಯ್ಯ, ರಂಗಯ್ಯ ಮತ್ತು ತ್ರಿನಾಮಯ್ಯ ಕಲ್ಲಹಳ್ಳಿಗೆ ಬಂದರು. ಶಕೆ೧೩೯೫ ವಿಜಯ ನಾಮ ಸಂವತ್ಸರ ಚೈತ್ರ ಶುದ್ಧ ೧ಕ್ಕೆ ಶ್ರೀ ವೆಂಕಟೇಶ ರಾಮ, ಹನುಮ, ಭೀಮ ಮತ್ತು ಮಧ್ವ ಶಿಲಾ ಮೂರ್ತಿಗಳನ್ನು ಸ್ಥಾಪಿಸಿದ್ದರು.

**ಕಂಚಿನ ಮೂರ್ತಿಗಳು**

ಕಂಚನ್ನು ವಿವಿಧ ಮಿಶ್ರಲೋಹಗಳ ಸಮ್ಮಿಶ್ರಣದಿಂದ ತಯಾರಿಸಲಾಗುತ್ತದೆ. ತಾಮ್ರ, ಬೆಳ್ಳಿ, ಬಂಗಾರ, ಹಿತ್ತಾಳೆ ಮತ್ತು ಬಿಳಿ ಸೀಸ, ಈ ಐದು ಲೋಹಗಳಿಂದ ತಯಾರಿಸಲ್ಪಟ್ಟ ಲೋಹವನ್ನು ಪಂಚ ಲೋಹವೆನ್ನುತ್ತಾರೆ. ಹೀಗೆ ತಯಾರಿಸಿದ್ದನ್ನು ಸಾಮಾನ್ಯವಾಗಿ ಕಂಚು ಎನ್ನುತ್ತಾರೆ. ಹತ್ತು ಭಾಗ ತಾಮ್ರ, ಅರ್ಧಭಾಗ ಹಿತ್ತಾಳೆ, ಮುಕ್ಕಾಲು ಭಾಗ ಬಿಳಿ ಸೀಸವನ್ನು ಸೇರಿಸಿ ಕಂಚಿನ ಲೋಹ ಶಿಲ್ಪ ತಯಾರಿಸುವ ಬಗ್ಗೆ ಶಿಲ್ಪಶಾಸ್ತ್ರ ಗ್ರಂಥ ವಿವರಿಸುತ್ತದೆ.

ಮೇಣದಿಂದ ಮೂರ್ತಿಗಳನ್ನು ತಯಾರಿಸುವ ವಿಧಾನಕ್ಕೆ ಮಧು ಶಿಷ್ಠ ವಿಧಾನ (Madhuchista Vidhanam) ಎನ್ನುತ್ತಾರೆ. ಜೇಡಿ ಮಣ್ಣಿನ ಮೂರ್ತಿಗಳಿಗೆ ಮೇಣವನ್ನು ಲೇಪಿಸಿ ಅದನ್ನು ಬಿಸಿಲಿನಲ್ಲಿ ಒಣಗಿಸಿದ ನಂತರ ಸುಟ್ಟಾಗ ಉತ್ತಮ ಮೂರ್ತಿಗಳು ಸಿದ್ಧವಾಗುತ್ತವೆಂದು, ಇದೇ ವಿಧಾನದ ಮೂಲಕ ಲೋಹ ಮೂರ್ತಿಗಳನ್ನು ತಯಾರಿಸಿ, ನೀರಿನಿಂದ ತೊಳೆಯಬೇಕೆಂದು ಶಿಲ್ಪಶಾಸ್ತ್ರ ತಿಳಿಸುತ್ತದೆ.

ಕಂಚಿನ ಮೂರ್ತಿಗಳನ್ನು ಮೇಣ ಮತ್ತು ಜೇಡಿ ಮಣ್ಣಿನ ಸಹಾಯದಿಂದ ತಯಾರಿಸಿ ನಂತರ ನಿರ್ದಿಷ್ಟ ಶಾಖಕ್ಕೆ ಒಳಪಡಿಸಿ ಸಿದ್ಧಪಡಿಸಬೇಕೆಂಬುದನ್ನು ವಿಷ್ಣು ಸಂಹಿತೆ ಗ್ರಂಥವು ವಿವರಿಸುತ್ತದೆ. ಮೂರನೇ ಸೋಮೇಶ್ವರನಿಂದ ರಚಿತವಾದ ಮಾನಸೋಲ್ಲಾಸ ಗ್ರಂಥವು ಮೂರ್ತಿ ತಯಾರಿಕೆಯ ವಿವರಣೆಯನ್ನು ನೀಡುತ್ತದೆ. ಮಾನಸಾರವು ಸಹ ಮೇಣದ ಸಹಾಯದೊಡನೆ ಕಂಚಿನ ಮೂರ್ತಿಯ ಅಂತಿಮ ತಯಾರಿಕೆಯ ವಿಧಾನವನ್ನು ಅಭಿಲಾಸಾರ್ಥ ಚಿಂತಾಮಣಿ ಗ್ರಂಥವು ಸಹ ಸ್ಥಪತಿಗಳು ಅನುಸರಿಸುವ ನಿಯಮ, ಉಚ್ಚರಿಸುವ ಶ್ಲೋಕಗಳ ವಿವರಣೆ ನೀಡುತ್ತದೆ. ಕಂಚಿನ ಮೂರ್ತಿಗಳ ತಯಾರಿಕೆಯಲ್ಲಿ ರಂಧ್ರ (Hallow) ಮತ್ತು ಘನೀಕೃತ (Solid) ಎಂಬ ಎರಡು ವಿಧಾನಗಳನ್ನು ಅನುಸರಿಸಲಾಗುತ್ತದೆ[೩೮].

ಭಾರತದಲ್ಲಿ ಈಗ ದೊರೆತಿರುವ ಕಂಚಿನ ಮೂರ್ತಿಗಳಲ್ಲಿ ಸಮಭಂಗದಲ್ಲಿ ನಿಂತಿರುವ ಮೂರ್ತಿಗಳು, ದ್ವಿಭಂಗ ಇಲ್ಲವೇ ತ್ರಿಭಂಗದಲ್ಲಿರುವ, ಇಲ್ಲವೇ ನಾಟ್ಯ ಶಿವ ಮೂರ್ತಿಗಳೇ ಹೆಚ್ಚಾಗಿ ದೊರೆತಿವೆ. ಬಹಳ ಹಿಂದಿನಿಂದಲೂ ಈ ಮೂರ್ತಿಗಳು ಕಂಡುಬಂದಿವೆ. ಕ್ರಿ.ಪೂ.ಮೂರನೇಯ ಸಹಸ್ರಮಾನದಲ್ಲಿ ಅಂದರೆ ಹರಪ್ಪ ಸಂಸ್ಕೃತಿಯಲ್ಲಿ ದೊರೆತಿರುವ ಸಣ್ಣ

ಸ್ತ್ರೀ ಮೂರ್ತಿಯ ನಿರೂಪಣೆಯಲ್ಲಿ ಸಹಸ್ರಮಾನದಲ್ಲಿ ಅಸಾಧಾರಣ ಕೌಶಲ್ಯ ಮತ್ತು ಚಾತುರ್ಯ ಕಂಡುಬಂದಿದೆ. ಆ ಸಂಸ್ಕೃತಿಯು ತನ್ನ ಸಮಕಾಲೀನವಾದ ಇತರ ಸಂಸ್ಕೃತಿಗಳಿಗಿಂತ ಲೋಹ ವಿಜ್ಞಾನದಲ್ಲಿ ಮುಂದಿತ್ತು ಎಂಬ ಅರಿವು ಮೂಡುತ್ತದೆ. ವೈದಿಕ ಯುಗದಲ್ಲಿಯೂ ಲೋಹ ಶಿಲ್ಪಜ್ಞಾನ ಚೆನ್ನಾಗಿ ಬೆಳೆದು ಬಂದಿದೆ. ಯರ್ಜುವೇದವು ಲೋಹ ಶಿಲ್ಪವನ್ನು ಸೃಷ್ಟಿಕರ್ತನೆಂದೇ ಹೊಗಳುತ್ತದೆ. ಆತನನ್ನು ದೈವ ಶಿಲ್ಪಿ "ತ್ವಷ್ಟ" ನೊಂದಿಗೆ ಸಮೀಕರಿಸುತ್ತದೆ. ರಾಮಾಯಣ ಮತ್ತು ಮಹಾಭಾರತಗಳಲ್ಲಿಯೂ ಆ ಕಾಲದಲ್ಲಿ ಲೋಹ ಶಿಲ್ಪಕಲೆ ಬಹಳವಾಗಿ ಉಪಯೋಗದಲ್ಲಿದ್ದುದಕ್ಕೆ ಸಾಕಷ್ಟು ಮಾಹಿತಿಗಳಿವೆ. ಪ್ರಾಚೀನ ಸಾಹಿತ್ಯಗಳಿಂದ ಭಾರತದಲ್ಲಿ ಲೋಹ ಶಿಲ್ಪಕಲೆ ಸಾಕಷ್ಟು ಪ್ರವರ್ಧಮಾನವಾಗಿ ಬೆಳೆದಿತ್ತು ಎಂಬ ವಿಚಾರ ಸ್ಪಷ್ಟವಾದರೂ ಲೋಹ ಶಿಲ್ಪಗಳ ಉದಾಹರಣೆಗಳು ದೊರೆತಿರುವುದು ಮಾತ್ರ ಅತೀ ಕಡಿಮೆ ಇದಕ್ಕೆ ಕಾರಣ ಲೋಹ ಅಮೂಲ್ಯ ವಸ್ತುವಾಗಿದೆ. ನಮ್ಮ ಪೂರ್ವಜರು ಲೋಹವನ್ನು ಮತ್ತೆ ಮತ್ತೆ ಕರಗಿಸಿ ಉಪಯೋಗಿಸುತ್ತಿದ್ದುದರಿಂದ ಹಳೆಯ ಲೋಹದ ವಸ್ತುಗಳು ದೊರೆಯುವುದು ಕಡಿಮೆ. ಯಾವ ಲೋಹದ ವಸ್ತಗಳು ಕಳೆದು ಹೋಗಿ ಭೂಮಿಯಲ್ಲಿ ಹುದುಗಿ, ಅಡಗಿದವೋ ಯಾವ ವಸ್ತು ಶಿಲ್ಪಗಳನ್ನು ಅಮೂಲ್ಯವೆಂದು ಸಂರಕ್ಷಿಸಿ ಇಡಲಾಯಿತೋ ಅಂತಹ ಉದಾಹರಣೆಗಳು ಮಾತ್ರ ಇಂದು ದೊರೆತಿವೆ.

ದಕ್ಷಿಣ ಭಾರತದಲ್ಲಿಯೂ ಲೋಹಕಲೆ ಸಾಕಷ್ಟು ಪ್ರವರ್ಧಮಾನವಾಗಿ ಬೆಳೆದಿತ್ತು. ತಮಿಳುನಾಡಿನ ಆದಿಚ್ಚನಲ್ಲೂರ್. ಉತ್ಖನನಗಳಲ್ಲಿ ದೊರೆತಿರುವ ಕ್ರಿ.ಪೂ.ಸುಮಾರು ೧೦೦೦ ದಷ್ಟು ಹಳೆಯದಾದ 'ಮಾತೃದೇವತೆ'ಯ ಲೋಹ ಮೂರ್ತಿ, ಸೌಂದರ್ಯದ ದೃಷ್ಟಿಯಿಂದ ಕಳಪೆ ಎನಿಸಿದರೂ ಲೋಹ ಕಲೆಯ ದೃಷ್ಟಿಯಿಂದ ಅಮೂಲ್ಯವಾದದ್ದು. ಈ ರೋಡ್ ಬಳಿ ಇರುವ ಕೋಡುಮಾನಾಳ್ ಎಂಬಲ್ಲಿ ನಡೆಸಿದ ಇತ್ತೀಚಿನ ಉತ್ಖನನಗಳಲ್ಲಿ ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ಒಂದು ಸಣ್ಣ ಕಂಚಿನ ಹುಲಿಯ ಮೂರ್ತಿ ಸಿಕ್ಕಿದೆ. ಮೂರ್ತಿ ಚಿಕ್ಕದಾದರೂ ಸಹಜ ಸುಂದರವಾಗಿದೆ. ಈ ಶಿಲ್ಪದ ಒಂದು ವೈಶಿಷ್ಟವೆಂದರೆ ಇದರ ಮೈಮೇಲೆ ಅರೆ–ಅಮೂಲ್ಯವಾದ ಕಲ್ಲುಗಳನ್ನು ಮೆಟ್ಟಿ ಅಲಂಕರಿಸಲಾಗಿದೆ.

ಕರ್ನಾಟಕದಲ್ಲಿ ಲೋಹ ಶಿಲ್ಪಕಲೆ ತಾಮ್ರ ಶಿಲಾಯುಗದಿಂದ ಪ್ರಾರಂಭವಾಗುತ್ತದೆ. ಕ್ರಿ.ಪೂ. ೧೦೦೦ ಕ್ಕೆ ಸೇರಿದುದೆಂದು ನಿರ್ಧರಿಸಲಾಗಿದೆ. ಈ ಸಂಸ್ಕೃತಿಯ ನಿವೇಶನಗಳಲ್ಲಿ ತಾಮ್ರ ವಸ್ತಗಳು ಬಳಕೆಯಲ್ಲಿದ್ದುದಕ್ಕೆ ಆಧಾರಗಳು ದೊರೆತಿವೆ. ಆದರೆ ಕಲಾಕೃತಿಗಳೆಂದು ಶಾತವಾಹನರ ಕಾಲದಿಂದ ಪ್ರಾರಂಭವಾಗುತ್ತದೆ. ಶಾತವಾಹನರ ಚಕ್ರಾಧಿಪತ್ಯ ಮಹಾರಾಷ್ಟ್ರ ಆಂಧ್ರ ಪ್ರದೇಶ ಮತ್ತು ಕರ್ನಾಟಕಗಳನ್ನು ಒಳಗೊಂಡಿದ್ದರೂ ಕರ್ನಾಟಕದ ದಕ್ಷಿಣ ಭಾಗಗಳು ಅವರ ಆಳ್ವಿಕೆಗೆ ಒಳಪಟ್ಟಿರಲಿಲ್ಲ. ಕೇವಲ ಉತ್ತರ ಕರ್ನಾಟಕದ ಭಾಗಗಳು ಮಾತ್ರ ಶಾತವಾಹನರ ವಶದಲ್ಲಿದ್ದವು. ಶಾತವಾಹನ ಕಾಲದ ಲೋಹ ಕೃತಿಗಳು ಮಹಾರಾಷ್ಟ್ರ ಆಂಧ್ರ ಪ್ರದೇಶಗಳಲ್ಲಿ ಹೇರಳವಾಗಿ ದೊರೆತಿದ್ದರೂ ಕರ್ನಾಟಕದಲ್ಲಿ ಮಾತ್ರ ಇವುಗಳು ಕೇವಲ ನಾಣ್ಯಗಳಿಗೆ ಮಾತ್ರ ಮೀಸಲು. ಕರ್ನಾಟಕದಲ್ಲಿ ದೊರೆತಿರುವ ಶಾತವಾಹನರ ನಾಣ್ಯಗಳ ತಂತ್ರ ಭಾಗಗಳಲ್ಲಿಯೂ ಹೆಚ್ಚೂ ಕಡಿಮೆ ಒಂದೇ ರೀತಿ ಇತ್ತು ಎಂಬ ಅಂಶವನ್ನು ವಿಶದಪಡಿಸುತ್ತವೆ. ಶಾತವಾಹನರ ಲೋಹ ಶಿಲ್ಪಗಳು ಕರ್ನಾಟಕದಲ್ಲಿ ದೊರೆಯದಿದ್ದರೂ ಆ ಕಲೆಗೆ ಪೂರ್ವಭಾವಿಯಾಗಿದ್ದ ಶಿಲ್ಪಕಲೆ ಕರ್ನಾಟಕದಲ್ಲಿ ದೊರೆಯದಿದ್ದರೂ ಆ ಕಲೆಗೆ ಪೂರ್ವಭಾವಿಯಾಗಿದ್ದ ಶಿಲ್ಪ ಕಲೆ ಕರ್ನಾಟಕದಲ್ಲಿ ಚೆನ್ನಾಗಿ ಬೆಳೆದಿತ್ತು ಎಂಬ ವಿಚಾರ

ಸನ್ನತಿಯ ಸುಂದರ ಶಿಲ್ಪಗಳು, ಬನವಾಸಿಯ ಚೈತ್ಯಾಲಯಗಳು ಇತ್ಯಾದಿಗಳಿಂದ ತಿಳಿಯಬಹುದಾಗಿದೆ.

ಭಾರತೀಯ ಕಂಚು ಶಿಲ್ಪಗಳ ಅಧ್ಯಯನ ಮಾಡುವಾಗ ನಾವು ಗಮನದಲ್ಲಿ ಇರಿಸಿಕೊಳ್ಳಬೇಕಾದ ಅಂಶವೆಂದರೆ ಕಂಚು ಶಿಲ್ಪಗಳು ಸಾಮಾನ್ಯವಾಗಿ ನಮಗೆ ವಸ್ತು ಸಂಗ್ರಹಾಲಯ, ದೇವಾಲಯ ಮತ್ತು ಉತ್ಖನನಗಳಲ್ಲಿ ದೊರೆಯುತ್ತವೆ. ಅಲ್ಲದೇ ಕೆಲವೊಮ್ಮೆ ಆಕಸ್ಮಿಕವಾಗಿ ಭೂಮಿಯಲ್ಲಿ ದೊರೆಯುತ್ತದೆ. ಕೆಲವು ಮಾತ್ರ ಶಾಸನಗಳನ್ನು ಹೊಂದಿವೆ. ಶಾಸನ ಸಹಿತವಾದ ಕಂಚುಗಳಿಗೆ ಮಾತ್ರ ನಾವು ಕಾಲವನ್ನು ನಿಖರವಾಗಿ ನಿರ್ಣಯಿಸಬಹುದು. ಆದರೆ ಉಳಿದೆಲ್ಲಾ ಕಂಚು ಶಿಲ್ಪಗಳ ಕಾಲವನ್ನು ನಾವು ಕೇವಲ ಶೈಲಿಯ ಆಧಾರದ ಮೇಲೆಯೇ ಗುರುತಿಸಬೇಕು.

ದಕ್ಷಿಣ ಭಾರತದಲ್ಲಿ ಶಾತವಾಹನರ ನಂತರ ಬಾದಾಮಿ ಚಾಳುಕ್ಯರ ರಾಜ್ಯವಾಳಿದರು. ಇವರ ಕಾಲದ ಕಂಚಿನ ಪ್ರತಿಮೆಗಳು ಅಪರೂಪಾಗಿ ದೊರೆತಿವೆ. ಸಂಖ್ಯೆಯಲ್ಲಿ ಇವು ಸ್ವಲ್ಪವಾದರೂ ಸೌಂದರ್ಯದಲ್ಲಿ, ಗುಣಮಟ್ಟದಲ್ಲಿ ಬಹಳ ಉಚ್ಚ ಮಟ್ಟದಾಗಿವೆ. ಈಗ ಬೊಂಬಾಯಿಯ 'ಪ್ರಿನ್ಸ್ ಆಪ್ ವೇಲ್ಸ್' ವಸ್ತು ಸಂಗ್ರಹಾಲಯದಲ್ಲಿರುವ ಜೋಗೇಶ್ವರಿ ಗುಹಾಲಯದಲ್ಲಿ ಕಂಡು ಬಂದ ಸುಮಾರು ೧೨೨.ಸೆಂ.ಮೀ. ಉದ್ದದ ಆನೆ ಸವಾರನ ಮೂರ್ತಿ ಇದೆ[೬]. ಇದು ಉದ್ದನೆಯ ಸರಪಳಿಯನ್ನು ಹೊಂದಿದ್ದು, ಒಂದು ತುದಿಯಲ್ಲಿ ಕೊಂಡಿ, ಮತ್ತೊಂದು ತುದಿಯಲ್ಲಿ ಆನೆಯ ಸವಾರನನ್ನು ಒಳಗೊಂಡಿದೆ. ಇವುಗಳ ಮಧ್ಯೆ ಅಲ್ಲಲ್ಲಿ ತಾಳ ಮೃದಂಗಗಳನ್ನು ಬಾರಿಸುತ್ತಾ ನರ್ತಿಸುತ್ತಿರುವ ನರ್ತಕ, ನರ್ತಕಿಯರಿದ್ದು ನೋಡಲು ನಯನ ಮನೋಹರವಾಗಿದೆ. ಈಗ ಇದು ಸದ್ಯ ಮದರಾಸು ವಸ್ತು ಸಂಗ್ರಹಾಲಯದಲ್ಲಿದೆ.

ಪ್ರಿನ್ಸ್ ಆಫ್ ವೇಲ್ಸ್ ವಸ್ತು ಸಂಗ್ರಹಾಲಯದಲ್ಲಿರುವ ಮತ್ತೊಂದು ವಿಗ್ರಹವು ಕ್ರಿ.ಶ. ಸುಮಾರು ೯ನೇ ಶತಮಾನದಾಗಿದ್ದು, ಚಾಲುಕ್ಯ ಶೈಲಿಯ ಲಕ್ಷಣಗಳನ್ನು ಹೊಂದಿದೆ. ಬಾಹುಬಲಿಯ ಈ ವಿಗ್ರಹವನ್ನು ಎಲ್ಲೋರದಲ್ಲಿರುವ ಬಾಹುಬಲಿಯ ಅನೇಕ ವಿಗ್ರಹಗಳೊಂದಿಗೆ ಲಕ್ಷಣದಲ್ಲಿ ಸಮೀಕರಿಸಬಹುದಾಗಿದೆ. ಕರ್ನಾಟಕದಲ್ಲಿ ಉತ್ಸವ ಮೂರ್ತಿ, ಪೂಜಾ ಸಂಪ್ರದಾಯ ಮೊದ ಮೊದಲು ಬಹಳ ನಿಧಾನವಾಗಿ ಬೆಳೆಯಿತು. ಅದರಲ್ಲೂ ತಮಿಳು ರಾಜ್ಯದ ಗಡಿಗೆ ಸೇರಿದ ಮತ್ತು ಹತ್ತಿರದ ಪ್ರದೇಶಗಳಲ್ಲಿ ಈ ಪದ್ಧತಿಯನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಕರ್ನಾಟಕದ ದಕ್ಷಿಣ ಅದರಲ್ಲೂ ಆಗ್ನೇಯ ಭಾಗಗಳಲ್ಲಿ ಈ ಪದ್ಧತಿ ಮೊದಲು ಪ್ರಾರಂಭವಾಯಿತು. ಚಾಲುಕ್ಯರ ನಂತರ ದಕ್ಷಿಣ ಕರ್ನಾಟಕದಲ್ಲಿ ಆಳಿದ ಗಂಗರು ಮತ್ತು ನೊಳಂಬರ ಕಾಲದ ಕಂಚಿನ ಪ್ರತಿಮೆಗಳು ಹೆಚ್ಚಿಗೆ ದೊರಕುವಂತಾಯಿತು ಎಂದು ಹೇಳಬಹುದು. ಬೆಂಗಳೂರಿನ ಬಳಿ ಇರುವ ನಂದಿ ಗ್ರಾಮದ ಭೋಗ ನಂದೀಶ್ವರ ದೇವಾಲಯದಲ್ಲಿದ್ದ ಸೋಮಸ್ಕಂದ ಮೂರ್ತಿ ಈಗ ಬೆಂಗಳೂರು ವಸ್ತು ಸಂಗ್ರಹಾಲಯದಲ್ಲಿದೆ. ಇದು ಕ್ರಿ.ಶ. ೯ನೇ ಶತಮಾನಕ್ಕೆ ಸೇರಿದ್ದು, ಇದು ಪ್ರಾಚೀನ ಕಾಲಕ್ಕೆ ಸೇರಿದ ಮೂರ್ತಿಯೆಂದು ನಿರ್ಣಯಿಸಲಾಗಿದೆ. ಪೀಠದ ಮೇಲೆ ಕುಳಿತಿರುವ ಶಿವ ಪಾರ್ವತಿಯ ಭಾವ ಭಂಗಿಗಳು ಮುಖಚರ್ಯೆ, ಅಲಂಕರಣ, ದೈಹಿಕ ರೂಪರೇಷೆಗಳು ಇತ್ಯಾದಿ ಇದೇ ತರಹದ ಮತ್ತು ಇದೇ ಕಾಲದ ಪಲ್ಲವರ ಕಂಚಿನ ಪ್ರತಿಮೆಗಳನ್ನು ನೆನಪಿಗೆ ತರುತ್ತವೆ. ಪೀಠದ ಮೇಲಿರುವ ನೆಗೆಯುತ್ತಿರುವ ಸಿಂಹಗಳ ಆಕೃತಿಗಳು. ಪಲ್ಲವರ ಅರೆಗಂಭಗಳ ಸಿಂಹಗಳನ್ನು ಹೋಲುತ್ತಿವೆ.

ಬಾದಾಮಿ ಚಾಲುಕ್ಯ ಮತ್ತು ಕಂಚಿಯ ಪಲ್ಲವರ ಕಾಲ ದಕ್ಷಿಣ ಭಾರತದ ವಾಸ್ತು ಶಿಲ್ಪ ದೃಷ್ಟಿಯಿಂದ ಒಂದು ಪರ್ವಕಾಲ ಹಿಂದೆಂದೂ ಕಾಣದ ಅಮಿತ ಉತ್ಸಾಹ, ಆನಂದ, ಕಲ್ಪನೆ, ಕ್ರಿಯಾಶೀಲತೆ ಈ ಕಾಲದ ವಾಸ್ತು ಶಿಲ್ಪಗಳಲ್ಲಿ ಕಾಣಬರುತ್ತದೆ. ಈ ಕಾಲ ವೈದಿಕ ಧರ್ಮದ ಪುನರುಜ್ಜೀವನ ಕಾಲವೆಂದು ಕರೆಯಬಹುದು, ಹಿಂದೂ ಪೂಜಾ ಪದ್ಧತಿಗೆ ಅನುಗುಣವಾಗಿ ವಾಸ್ತು ಶಿಲ್ಪದಲ್ಲೂ ಬದಲಾವಣೆಯಾಗಿ ಇವೆರಡರ ನಡುವೆ ಸಮನ್ವಯ ಸಾಧಿಸಲಾಗಿದೆ.

ಕರ್ನಾಟಕದಲ್ಲಿ ವೈಧಿಕ ಧರ್ಮದ ಜೊತೆಗೆ ಜೈನಧರ್ಮವು ಸಹ ನಿರಂತರವಾಗಿ ಬೆಳೆಯಿತು. ತಲಕಾಡಿನ ಗಂಗರ ಆಸರೆಯಲ್ಲಿ ರಾಜ್ಯದ ಪ್ರಮುಖ ಧರ್ಮವಾಗಿ ಜೈನಧರ್ಮ ರಾರಾಜಿಸಿತು. ಶ್ರವಣಬೆಳಗೊಳವು ಜೈನಧರ್ಮದ ಪ್ರಮುಖ ಕೇಂದ್ರವಾಗಿತ್ತು. ಬಾಹುಬಲಿಯ ಬೃಹನ್ಮೂರ್ತಿ ಗಂಗ ಮಾರಸಿಂಹ ಕಾಲದಲ್ಲಿ ನಿರ್ಮಾಣವಾಯಿತು. ಶಿಲಾ ಮೂರ್ತಿಗಳ ಜೊತೆಗೆ ಕಂಚಿನ ಶಿಲ್ಪಗಳ ಸಹ ಸಾಕಷ್ಟು ಸಂಖ್ಯೆಯಲ್ಲಿ ತಯಾರಿಸಲ್ಪಟ್ಟವು. ನಮಗೆ ದೊರೆತಿರುವ ಜೈನ ಕಂಚಿನ ಶಿಲ್ಪಗಳು ಅಪಾರವೆನಿಸಿದ್ದರೂ, ಅವುಗಳ ಗುಣಮಟ್ಟ ಮತ್ತು ತಂತ್ರ ಕೌಶಲ್ಯ ಪ್ರಶಂಸಾರ್ಹವಾದದ್ದು. ಸರಳ ಸುಂದರ ರೂಪ, ಮುಗ್ಧ ಹಾಗೂ ಶಾಂತ ಮುಖ ಭಾವ ಈ ಶಿಲ್ಪಗಳ ಮುಖ್ಯ ಲಕ್ಷಣಗಳು. ಶ್ರವಣಬೆಳಗೊಳದ ಮಠದಲ್ಲಿರುವ ಒಂದು ಜಿನಮೂರ್ತಿ, ಅದರ ಪೀಠದ ಮೇಲಿರುವ ಶಾಸನವು ಎರಡನೇಯ ಗಂಗ ಮಾರಸಿಂಹನ ಅಕ್ಕ ಕುಂದಣ ಸೋಮಿದೇವಿ ಮಾಡಿಸಿದ ವಿಗ್ರಹವೆಂದು ಹೇಳುತ್ತದೆ. ಇದೇ ಕಾಲಕ್ಕೆ ಸೇರಿದ ಅರ್ಧ ಪದ್ಮಾಸನದಲ್ಲಿ ಕುಳಿತಿರುವ ಮತ್ತು ಹಿಂಭಾಗದಲ್ಲಿ ವಾಸ್ತು ಅಲಂಕರಣದ ಪ್ರಭಾವಳಿಯನ್ನು ಹೊಂದಿರುವ ಜಿನ ಮೂರ್ತಿಯೊಂದು ಕಲ್ಕತ್ತಾ ವಸ್ತು ಸಂಗ್ರಾಹಾಲಯದಲ್ಲಿದೆ. ಪೀಠದ ಮೇಲೆ ಕನ್ನಡದ ಶಾಸನವೊಂದಿದ್ದು, ಅದರ ಪ್ರಕಾರ ಜಿನವಲ್ಲಭನ ಪತ್ನಿ ಭಗಿಯಬ್ಬೆ ಈ ಪ್ರತಿಮೆಯನ್ನು ಮಾಡಿಸಿದಳು. ಈಗ ಮದರಾಸು ವಸ್ತು ಸಂಗ್ರಹಾಲಯದಲ್ಲಿರುವ ಕಂಚಿನ ಜಿನ ಮೂರ್ತಿಯೊಂದರ ಪೀಠ ಶಾಸನಗಳಲ್ಲಿ ಪೈಠ್ವಣೆ (ಪೈಥಾನಿನ) ಭಾಗಿಯಬ್ಬೆ ಮಾಡಿಸಿದಳೆಂದು ಹೇಳಿದೆ. ಇದೇ ರೀತಿ ಹೊಯ್ಸಳ ಮತ್ತು ವಿಜಯನಗರ ಕಾಲದಲ್ಲಿಯೂ ಸಾಕಷ್ಟು ಸಂಖ್ಯೆಯಲ್ಲಿ ಕಂಚಿನ ಜಿನಪ್ರತಿಮೆಗಳು ತಯಾರಾದವು. ಆದರೆ ಈ ಎಲ್ಲಾ ವಿಗ್ರಹಗಳು ಒಂದೇ ರೀತಿಯ ವಿಷಯ ನಿರೂಪಣೆ, ಅಲಂಕರಣ ಇತ್ಯಾದಿಗಳನ್ನು ಹೊಂದಿರುವುದರಿಂದ ಶಾಸನ ಅಥವಾ ಬೇರೆ ಇನ್ನಾವುದೇ ಆಧಾರಗಳಿಲ್ಲದೆ. ನಿಖರವಾಗಿ ಇವುಗಳ ಕಾಲ ತೀರ್ಮಾನ ಮಾಡುವುದು ಕಷ್ಟ.

ಕರ್ನಾಟಕದಲ್ಲಿ ಬೌದ್ಧ, ಧರ್ಮ, ಜೈನಧರ್ಮದಷ್ಟು ಪ್ರಭಾವಶಾಲಿಯಾಗಿರಲಿಲ್ಲ. ಶಾತವಾಹನರ ಕಾಲದಲ್ಲಿ ಬೌದ್ಧ ಧರ್ಮ ಪ್ರಚಲಿತದಲ್ಲಿತ್ತೆಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ನಂತರ ಕಾಲದಲ್ಲಿ ಎಲ್ಲೋ ಕೆಲವು ಸಣ್ಣ ಪುಟ್ಟ ಕೇಂದ್ರಗಳಲ್ಲಿ ಮಾತ್ರ ಬೌದ್ಧ ಧರ್ಮ ಉಳಿದಿತ್ತು. ಇದರಿಂದಾಗಿ ಬೌದ್ಧ ಶಿಲ್ಪಗಳು ಅದರಲ್ಲೂ ಕಂಚಿನ ಶಿಲ್ಪಗಳು ಬಹಳ ಕಡಿಮೆ. ಮಂಗಳೂರಿನ ಸಮೀಪದ ಕದ್ರಿಯಲ್ಲಿ ಬುದ್ಧ ಎಂದು ಹೇಳಲಾದ ಕೆಲವು ಕಂಚಿನ ಶಿಲ್ಪಗಳಿವೆ. ಅವುಗಳನ್ನು ಗುರುತಿಸುವಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದರೂ ಅಲ್ಲಿಯ ಲೋಕೇಶ್ವರ ವಿಗ್ರಹದ (೧೨೦ ಸೆಂ.ಮೀ.) ಸೌಂದರ್ಯ ಇಡೀ ಭಾರತೀಯ ಕಂಚಿನ ಶಿಲ್ಪ ಪರಂಪರೆಯಲ್ಲೇ ವಿಶಿಷ್ಟವಾದುದೆಂದು ಹೇಳಬಹುದು. ಈ ವಿಗ್ರಹದ ಪೀಠದ ಮೇಲಿರುವ ಶಾಸನದಲ್ಲಿ ಶಕ೮೯೦ರಲ್ಲಿ (ಕ್ರಿ.ಶ.೯೬೮) ಆಳುಪ ದೊರೆ ಕಂದವರ್ಮನು ಈ ಪ್ರತಿಮೆಯನ್ನು ಮಾಡಿಸಿ, ಕದರಿಕಾ (ಕದ್ರಿ) ವಿಹಾರದಲ್ಲಿ ಪ್ರತಿಷ್ಠಾಪಿಸಿದನೆಂದು ಹೇಳಿದೆ. ಇದೇ ಗುಂಪಿಗೆ ಸೇರಿದ ಅವಲೋಕಿತೇಶ್ವರ ಮತ್ತು ಬುದ್ಧ ವಿಗ್ರಹಗಳು ಇದೇ ದೇವಾಲಯದಲ್ಲಿವೆ.

ಕ್ರಿ.ಶ.೧೦ನೇ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದ ಆಗ್ನೇಯ ಭಾಗಗಳು ಚೋಳರು ಧಾಳಿಗೆ ಒಳಗಾದವು. ಚೋಳರ ಕಂಚವು ಶಿಲ್ಪ ಶೈಲಿಯ ಪ್ರಭಾವವನ್ನು ಹೊಂದಿರುವ ಅನೇಕ ಕಂಚಿನ ಮೂರ್ತಿಗಳು ಆಗ್ನೇಯ ಕರ್ನಾಟಕ ವಿವಿಧ ಭಾಗಗಳಲ್ಲಿ ಕಂಡುಬಂದಿವೆ. ಕೋಲಾರ ಜಿಲ್ಲೆಯ ನರಸಮಂಗಲದ ನಟರಾಜ (೧೨೨ ಸೆಂ.ಮೀ) ಮತ್ತು ಶಿವಕಾಮ ಸುಂದರಿ (೮೫ ಸೆಂ.ಮೀ.) ಕಂಚಿನ ಶಿಲ್ಪಗಳು ಭವ್ಯಮೂರ್ತಿಗಳಾಗಿದ್ದು, ಚತುರ್ಬಾಹುಗಳಿಂದ ಕೂಡಿದ ಶಿವನು ಅಗ್ನಿ ಡಮರುಗಳನ್ನು ಹಿಡಿದು ಅಭಯ ಮತ್ತು ಲಂಭ ಹಸ್ತಗಳಲ್ಲಿ ಅಪಸ್ಮಾರ ಪುರುಷನ ಮೇಲೆ ನರ್ತಿಸುತ್ತಿದ್ದಾನೆ. ವಿಶಾಲವಾದ ಪ್ರಭಾವಳಿಯೊಂದು ವಿಗ್ರಹದ ಸುತ್ತಲೂ ತಂಜಾ ಊರಿನ ಬೃಹದೇಶ್ವರ ದೇವಾಲಯಕ್ಕೆ ದಾನ ನೀಡಿದ ನಟರಾಜನ ಶಿಲ್ಪಕ್ಕೆ ಸಮವಾಗಿದೆ. ನರಸಮಂಗಲದ ನಟರಾಜನ ಶಿಲ್ಪವು ಪ್ರಾಯಶಃ ರಾಜರಾಜ ಚೋಳನು ನೊಳಂಬವಾಡಿಯನ್ನು ಆಕ್ರಮಿಸಿಕೊಂಡ ಕಾಲಮಾನ (ಕ್ರಿ.ಶ.ಸು. ೧೦೦೦) ರಚಿಸಲಾದ ವಿಗ್ರಹವಿರಬಹುದು. ನರಸಮಂಗಲ ಸಮೀಪದಲ್ಲಿಯೇ ಇರುವ ಬೆಳ್ಳೂರಿನಲ್ಲಿ ಕೆಲವು ಕಂಚಿನ ಶಿಲ್ಪಗಳಿವೆ. ಅವುಗಳಲ್ಲಿ ಸೋಮಸ್ಕಂದ (೫೦ ಸೆಂ.ಮೀ.) ವಿಗ್ರಹವು ಬಹಳ ಮುಖ್ಯವಾದದ್ದು ಚೋಳರ ಕಾಲದ ಮತ್ತು ಅವರ ಶಿಲ್ಪ ಶೈಲಿಯ ಪ್ರಭಾವವನ್ನು ಹೊಂದಿರುವ ಇನ್ನೂ ಅನೇಕ ಮೂರ್ತಿಗಳು ನಮಗೆ ದೊರೆತಿವೆ. ಅವುಗಳೆಂದರೆ ತೆರಣಾಂಬಿಯಲ್ಲಿನ ಶಿವ, ಗಂಗೆ, ಗೌರಿ, ರಾಮ, ಸೀತೆಯ ಕಂಚಿನ ಶಿಲ್ಪಗಳು, ನಂಜನಗೂಡಿನ ಶಿವ, ಪಾರ್ವತಿಯರ ಉತ್ಸವ ಮೂರ್ತಿಗಳು, ಕೊಡಲೂರು ಬಳಿ ದೊರೆತ ನಟರಾಜ, ಪಾರ್ವತಿ ಇತ್ಯಾದಿ.

ಕ್ರಿ.ಶ.ಸುಮಾರು೧೧೦೦ ರ ಹೊತ್ತಿಗೆ ಪ್ರಬಲರಾದ ಹೊಯ್ಸಳರು ತಮ್ಮ ಆಳ್ವಿಕೆಯಲ್ಲಿ ವಾಸ್ತು ಮತ್ತು ಶಿಲ್ಪದ ಬಗ್ಗೆ ಬೆಳವಣಿಗೆ ಬಹಳ ಪ್ರೋತ್ಸಾಹ ಕೊಟ್ಟರು. ಆದರೆ ಹೊಯ್ಸಳರ ಕಂಚು ಶಿಲ್ಪಗಳ ಅಲಂಕರಣ ಭವ್ಯತೆಯನ್ನು ಹೊಂದಿಲ್ಲವಾದರೂ ಇತರೆ ಶೈಲಿಯ ಕಾಲದ ಶಿಲ್ಪಗಳಿಗೆ ಹೋಲಿಸಿದಲ್ಲಿ ಸ್ವಲ್ಪ ಜಾಸ್ತಿಯೇ ಎನ್ನುವುದು ಅಲಂಕರಣವನ್ನು ಇವು ಖಂಡಿತವಾಗಿಯು ಹೊಂದಿರುತ್ತವೆ. ಹೊಯ್ಸಳರ ಕಂಚುಗಳು ಶಿವಗಂಗೆ, ಕಿಕ್ಕೇರಿ, ನಾಗಮಂಗಲ, ಬೇಲೂರು ಇತ್ಯಾದಿ ಕಡೆಗಳಲ್ಲಿ ದೊರೆತಿವೆ. ಶಿವಗಂಗೆಯಲ್ಲಿ ನರ್ತಿಸುತ್ತಿರುವ ಶಿವನ ಕಂಚಿನ ವಿಗ್ರಹವು (೭೫ ಸೆಂ.ಮೀ) ಹೊಯ್ಸಳ ಶೈಲಿಯ ಅತ್ಯಂತ ಅಮೋಘ ಶಿಲ್ಪವೆನ್ನಬಹುದು. ವಿಶೇಷವಾಗಿ ಅಲಂಕರಿಸಿದ ಜಟಾಮುಕುಟ ಜ್ವಾಲೆಯಂತೆ ಹರಡಿರುವ ಕೇಶಿರಾಜರಿರುವ ಶಿಲ್ಪಕ್ಕೆ ಕೆಂಪಿನ ಹರಳಿನ ಆಭರಣಗಳಿವೆ. ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯದಲ್ಲಿನ ಶಿವನಶಿಲ್ಪ (೭೦ ಸೆಂ.ಮೀ.) ಹೊಯ್ಸಳ ಶೈಲಿಯ ಅತ್ಯಂತ ಅಮೋಘ ಶಿಲ್ಪವೆನ್ನಬಹುದು. ವಿಶೇಷವಾಗಿ ಅಲಂಕರಿಸಿದ ಜಟಾಮಕುಟ ಜ್ವಾಲೆಯಂತೆ ಹರಡಿರುವ ಕೇಶರಾಶಿಯಿರುವ ಈ ಶಿಲ್ಪಕ್ಕೆ ಕೆಂಪಿನ ಹರಳುಗಳನ್ನು ಹಾಕಲಾಗಿದೆ. ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯದಲ್ಲಿನ ಶಿವನ ಶಿಲ್ಪ (೭೫ ಸೆಂ.ಮೀ) ಹಾಗೂ ತೆರಕಣಾಂಬಿಯಲ್ಲಿನ ಮೂಲನಾಥೇಶ್ವರ ದೇವಾಲಯದಲ್ಲಿ ಇರುವ ಶಿವ (೭೦ ಸೆಂ.ಮೀ) ಪಾರ್ವತಿಯರ (೫೦ ಸೆಂ.ಮೀ) ವಿಗ್ರಹಗಳು ಹೊಯ್ಸಳ ಕಾಲದ ಸುಂದರ ಶಿಲ್ಪಗಳು.

ಈ ಕಂಚು ಶಿಲ್ಪಗಳೇ ಅಲ್ಲದೆ ಹೊಯ್ಸಳ ಕಾಲದ ಅನೇಕ ಹಿಂದೂ, ಜೈನ ಕಂಚು ಶಿಲ್ಪಗಳು ಅವರ ರಾಜ್ಯದ ಅನೇಕ ದೇವಾಲಯಗಳಲ್ಲಿ ಸಂಗ್ರಹವಾಗಿವೆ. ಈ ಎಲ್ಲ ಶಿಲ್ಪಗಳ ಅಧ್ಯಯನ ನಡೆದಾಗ ಮಾತ್ರ ಹೊಯ್ಸಳರ ಕಂಚು ಶಿಲ್ಪಗಳ ನಿಜವಾದ ಲಕ್ಷಣ ವೈವಿಧ್ಯತೆ ಮತ್ತು ಮೌಲ್ಯಗಳು ನಮಗೆ ತಿಳಿಯುವುದು ಸಾಧ್ಯ.

ಕರ್ನಾಟಕದ ಕಂಚಿನ ಶಿಲ್ಪಗಳ ಸುವರ್ಣಯುಗವನ್ನು ವಿಜಯನಗರ ಕಾಲದಲ್ಲಿ ನಾವು ನೋಡಬಹುದು[೪೦]. ಈ ಯುಗದಲ್ಲಿ ಕರ್ನಾಟಕದ ಮತ್ತು ತಮಿಳು ಸಂಸ್ಕೃತಿಗಳು ಹೆಚ್ಚಿನ ಮಟ್ಟದಲ್ಲಿ ಮತ್ತು ವೇಗದಲ್ಲಿ ಸಮ್ಮಿಳಿತಗೊಂಡವು. ಪ್ರತಿಯೊಂದು ದೇವಾಲಯದಲ್ಲೂ ಉತ್ಸವ ಮೂರ್ತಿ ಪೂಜೆ ಪ್ರಾರಂಭವಾಯಿತು. ಶಿವ, ವಿಷ್ಣುವಿನ ವಿವಿಧ ಅವತಾರಗಳೂ, ಲೀಲೆಗಳು, ರೂಪಗಳು, ಪರಿವಾರ ದೇವತೆಗಳು, ಸಣ್ಣಪುಟ್ಟ ದೇವರುಗಳು, ಆಳ್ವಾರುಗಳು, ನಾಯನಾರುಗಳು, ವಾಹನ ಮೂರ್ತಿಗಳು, ಆಯುಧ ಪುರುಷರು ಇತ್ಯಾದಿ ಎಲ್ಲ ವಿಧಧ ಆಕಾರದ, ಗಾತ್ರದ ಮೂರ್ತಿಗಳು ಹಿಂದೆಂದೂ ಕಾಣದಷ್ಟು ಸಂಖ್ಯೆಯಲ್ಲಿ ಬಳಕೆಗೆ ಬಂದವು. ವಿಜಯನಗರದ ಕಂಚುಗಳು ಕೇವಲ ಸಂಖ್ಯೆಯಲ್ಲಿ ಮಾತ್ರ ಹೆಚ್ಚಾಗಿರದೆ ಸೌಂದರ್ಯ, ಪ್ರಮಾಣ, ಗಾತ್ರಗಳಲ್ಲೂ ಹೆಸರುವಾಸಿಯಾಗಿವೆ. ದೇವತಾ ಮೂರ್ತಿಗಳ ಜೊತೆಗೆ ವ್ಯಕ್ತಿ ಶಿಲ್ಪಗಳೂ ಈ ಅವಧಿಯಲ್ಲಿ ತಯಾರಿಸಲ್ಪಟ್ಟವು.

ವಿಜಯನಗರ ಕಂಚಿನ ಶಿಲ್ಪಗಳು ಸಾಮಾನ್ಯವಾಗಿ ಒಂದೇ ರೀತಿಯ ಮುಖಚರ್ಯೆ, ಆಭರಣಾಲಂಕಾರ. ನಿಲವು, ಸೊಬಗುಗಳನ್ನು ಹೊಂದಿದ್ದು, ಬೇರೆ ಕಾಲದ ಶೈಲಿಯ ಕಂಚುಗಳಿಗಿಂತ ವಿಭಿನ್ನವಾಗಿರುವುದರಿಂದ ಇವುಗಳನ್ನು ಸುಲಭವಾಗಿ ಗುರುತಿಸಹುದು. ಉದ್ಧವಾದ ಕಿರೀಟ, ದುಂಡಮುಖ, ಅಗಲ ಹಾಗೂ ದುಂಡಾದ ನೇತ್ರಗಳು, ಅಗಲವಾದ, ಕೆನ್ನೆ, ಸ್ವಲ್ಪ ಪ್ರಮುಖವಾದ ಗಲ್ಲ, ಚಿಕ್ಕದಾದ ಬಾಯಿ, ಚೂಪಾದ ಮೂಗು ಮತ್ತು ಪ್ರಧಾನವಾದ ಮೂಗಿನ ಹೊಳ್ಳು ಮುಂತಾದ ಕೆಲವು ವೈಶಿಷ್ಟ್ಯಗಳು, ಪುರುಷ ವಿಗ್ರಹಗಳು ದೃಢಕಾಯನನ್ನು ಹೊಂದಿರುತ್ತದೆ. ಸ್ತ್ರೀ ಶಿಲ್ಪಗಳು ಮೇಲೆತ್ತಿದ ದುಂಡಾದ ಸ್ತನ, ಪ್ರಧಾನವಾದ ನಿತಂಬ ಮುಂತಾದವುಗಳನ್ನು ಹೊಂದಿರುತ್ತದೆ. ಸ್ತ್ರೀ, ಪುರುಷ ವಿಗ್ರಹಗಳಲ್ಲಿ ಆಭರಣಗಳು ಸಾಕಷ್ಟಿದ್ದು, ವಸ್ತ್ರಾಲಂಕರಣ ಕೇವಲ ದೇಹದ ಕೆಳ ಭಾಗದಲ್ಲಷ್ಟೇ ಇರುತ್ತದೆ. ಮಡಚಿದ ನೆರಿಗೆ ಕೆಲವು ಬಾರಿ ಪಾರದರ್ಶಕವಾಗಿಯೂ ಇರುತ್ತದೆ. ಪಾರ್ಶ್ವಗಳಲ್ಲು ದಪ್ಪನಾದ ವಸ್ತ್ರದ ಗಂಟುಗಳು, ನೆರಿನೆರಿಯಾಗಿ ಇಳಿಬಿದ್ದ ವಸ್ತ್ರಗಳು ಕಂಡು ಬರುವುದು ಸಾಮಾನ್ಯ. ವಿಗ್ರಹಗಳು ಆಯುಧಗಳು ಬಹಳ ಬೆಡಗಿನಿಂದ ಹಿಡಿದಿರುತ್ತವೆ. ಆದರೂ ಈ ಶಿಲ್ಪಗಳಲ್ಲಿ ಹೊಯ್ಸಳ ಶಿಲ್ಪಗಳ ಸ್ವಾಭಾವಿಕತೆಯ ಓಜಸ್ಸು, ಸೊಬಗು ಕಾಣಬರುವುದು ಕಡಿಮೆ.

ವಿಜಯನಗರ ಕಾಲದ ಕಂಚು ಶಿಲ್ಪಗಳಲ್ಲಿ ವ್ಯಕ್ತಿ ಶಿಲ್ಪಗಳು ಮುಖ್ಯವಾದುವು. ಅವುಗಳಲ್ಲಿ ತಿರುಮಲ ಬೆಟ್ಟದ ಮೇಲಿರುವ ಕೃಷ್ಣದೇವರಾಯ ಮತ್ತು ಆತನ ಇಬ್ಬರು ರಾಣಿಯರ ನೈಜಾಕಾರದ ಶಿಲ್ಪಗಳು ಗಮನಾರ್ಹವಾದವು. ವೆಂಕಟೇಶ್ವರ ಮುಂದೆ ನಮಸ್ಕರಿಸುತ್ತಾ ನಿಂತಿರುವ ಈ ವಿಗ್ರಹಗಳು ಅವರ ಹೆಸರಿನ ಶಾಸನಗಳನ್ನು ಹೊಂದಿದ್ದು ಸರಳ ಸೌಂದರ್ಯ ಮತ್ತು ಸೊಬಗಿನಿಂದ ಕೂಡಿವೆ.

ವಿಜಯನಗರ ಶೈಲಿಯು ನಾಯಕರು, ಪಾಳೆಯಗಾರರು ಮತ್ತು ಮೈಸೂರಿನ ಒಡೆಯರುಗಳ ಆಳ್ವಿಕೆಯಲ್ಲೂ ಮುಂದುವರಿಯಿತು. ಆದರೆ ಈ ಕಾಲದ ಕಂಚಿನ ಮೂರ್ತಿಗಳ ಸ್ವರೂಪದಲ್ಲಿ ಒಂದು ರೀತಿಯ ಜೀವರಹಿತ, ಭಾವನಾ ರಹಿತ ಸ್ಥಿರ ಭಾವನೆಗಳು ಕಾಣಬರುತ್ತವೆ. ಗುಣಮಟ್ಟ ಕಡಿಮೆಯಾಗಿ ಸಂಖ್ಯಾಬಲ ಜಾಸ್ತಿಯಾಯಿತು, ಹಿಂದಿನಂತೆಯೇ ವಿಷ್ಣುವಿನ ಅವತಾರಗಳು, ರೂಪಗಳು, ಶಿವನ ಲೀಲೆಗಳು, ಇತರೇ ದೇವರುಗಳ, ಭಕ್ತರ ವಿಗ್ರಹಗಳು ಇತ್ಯಾದಿ ನೂರಾರು ಮೂರ್ತಿಗಳು ತಯಾರಾದವು. ಆದರೆ ಇವು ರೂಪದಲ್ಲಿ ಮತ್ತು ಭಾವನೆಯಲ್ಲಿ ಒಂದೇ ಸ್ವರೂಪದ್ದಾಗಿವೆ. ಈ ವಿಗ್ರಹಗಳ ಅಂಗ ಸೌಷ್ಠವ ಅಸ್ವಾಭಾವಿಕವೆಂದೇ ಹೇಳಬಹುದು. ಮೈಸೂರು. ನಂಜನಗೂಡು, ಶ್ರೀರಂಗಪಟ್ಟಣ,

ನರಸೀಪುರ, ಬೆಟ್ಟದಪುರ, ಬೆಂಗಳೂರು, ನಾಗಮಂಗಲ. ಗುಂಡ್ಲುಪೇಟೆ, ಹಂಗಳ, ತೆರಕಣಾಂಬಿ ಇತ್ಯಾದಿ ಕಡೆಗಳಲ್ಲಿ ಮೈಸೂರು ಒಡೆಯರ ಕಾಲದ ಅನೇಕ ಕಂಚಿನ ಮೂರ್ತಿಗಳನ್ನು ಕಾಣಬಹುದು. ಕೆಳದಿಯ ಅರಸರ ಕಾಲದ ಕೆಲವು ಕಂಚಿನ ವಿಗ್ರಹಗಳು ಈಗ ಶಿವಮೊಗ್ಗ ವಸ್ತುಸಂಗ್ರಹಾಲಯದಲ್ಲಿವೆ.

ಕರ್ನಾಟಕದ ದಕ್ಷಿಣ ಭಾಗ ಅಂದರೆ ಹಳೆಯ ಮೈಸೂರು ಪ್ರಾಂತ್ಯದಲ್ಲಿ ವಿಜಯನಗರ ನಂತರ ಕಾಲದ ಕಂಚು ಶಿಲ್ಪಗಳು ಹೇರಳವಾಗಿ ದೊರೆಯುತ್ತವೆ. ಆದರೆ ಉತ್ತರ ಕರ್ನಾಟಕದಲ್ಲಿ ಈ ಕಾಲದ ಕಂಚುಗಳು ಬಹಳ ಕಡಿಮೆ. ದಕ್ಷಿಣ ಕರ್ನಾಟಕ ಮೊದಲಿನಿಂದಲೂ ತಮಿಳು ಸಂಸ್ಕೃತಿಯೊಂದಿಗೆ ಸಂಪರ್ಕವನ್ನು ಹೊಂದಿದ್ದುದರಿಂದ ಈ ಭಾಗದಲ್ಲಿ ಕಂಚಿನ ಶಿಲ್ಪಗಳ ಸಂಖ್ಯೆಯೂ ಹೆಚ್ಚಾಗಿ ಕಾಣಬರುವುದಕ್ಕೆ ಕಾರಣವಾಯಿತು, ಕರ್ನಾಟಕದ ಉಳಿದ ಭಾಗಗಳಲ್ಲಿ ಉತ್ಸವ ಮೂರ್ತಿ ಸಂಪ್ರದಾಯ ಪ್ರಚಲಿತದಲ್ಲಿದ್ದರೂ ತೀವ್ರವಾಗಿರಲಿಲ್ಲವಾದ ಕಾರಣ ಉತ್ತರ ಕರ್ನಾಟಕದಲ್ಲಿ ಈ ಕಾಲದ ಕಂಚು ಶಿಲ್ಪಗಳು ವಿರಳವಾಗಿ ಕಾಣಬರುತ್ತವೆ.

ಈ ಮೇಲಿನ ಎಲ್ಲಾ ವಿವರಣೆಯು ಭಾರತ ಮತ್ತು ಕರ್ನಾಟಕದ ಮೂರ್ತಿಗಳ ಹಿನ್ನೆಲೆ ಬೆಳವಣಿಗೆಯನ್ನು ಸೂಚಿಸುತ್ತದೆ. ಅದು ತೇರದಾಳ ವ್ಯಾಪ್ತಿಯಲ್ಲಿನ ಕಂಚಿನ ಮೂರ್ತಿ ಶಿಲ್ಪಗಳನ್ನು ಅಧ್ಯಯನ ಮಾಡಲು ಸಹಕಾರಿಯಾಗಬಲ್ಲದು. ಈ ಪರಿಸರದಲ್ಲಿ ಕಂಚಿನ ಮೂರ್ತಿಗಳ ತಯಾರಿಕೆ ಮತ್ತು ಆರಾಧನೆ ಕಡಿಮೆ ಎಂದೇ ಹೇಳಬಹುದು. ಏಕೆಂದರೆ ತೇರದಾಳ, ಕಲ್ಲಳ್ಳಿ, ಹನಗಂಡಿ, ಅಸ್ಕಿ, ಹಳಂಗಳಿ ಮೊದಲಾದ ಕೆಲವು ಭಾಗಗಳಲ್ಲಿ ಮಾತ್ರ ಕಂಚಿನ ಮೂರ್ತಿಗಳು ದೊರೆತಿದ್ದು, ಅವು ಅಧ್ಯಯನ ದೃಷ್ಟಿಯಿಂದ ಪ್ರಮುಖವಾಗಿವೆ. ಕಲ್ಲಳ್ಳಿಯ ವೆಂಕಟೇಶ್ವರ ದೇವಾಲಯದಲ್ಲಿರುವ ಭೂದೇವಿ ಮತ್ತು ಶ್ರೀದೇವಿ ಕಂಚಿನ ಪ್ರತಿಮೆಗಳು ಅಲಂಕಾರ ದೃಷ್ಟಿಯಿಂದ ಮುಖ್ಯವಾಗಿದ್ದು ಅವು ವಿಜಯನಗರ ಕಾಲಕ್ಕೆ ಸೇರಿವೆ.

**೬.೨. ಲೌಕಿಕ ಸ್ಮಾರಕಗಳು**

ತೇರದಾಳ ಪರಿಸರದಲ್ಲಿ ಆರ್ಚನೆಗಾಗಿ ದೇವಾಲಯಗಳನ್ನು ಹಾಗೂ ತನ್ನ ಸುಭದ್ರತೆಗಾಗಿ ಮತ್ತು ರಕ್ಷಣೆಗಾಗಿ ಕೆಲ ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡು ತನ್ನ ರಕ್ಷಣೆಯನ್ನು ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದಾನೆ. ಅದೇ ರೀತಿ ತನ್ನ ವಾಸಕ್ಕಾಗಿ ಮನೆಗಳನ್ನು, ಅರಮನೆಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಾ ಬಂದಿರುವುದನ್ನು ಗುರುತಿಸಬಹುದಾಗಿದೆ. ಸಾಮಾನ್ಯರು ಸಾಮಾನ್ಯ ಮನೆಗಳನ್ನು ವಾಸಕ್ಕಾಗಿ ನಿರ್ಮಿಸಿಕೊಂಡಿದ್ದಾರೆ. ಶ್ರೀಮಂತರು ಬೃಹತ್ ಮನೆಗಳನ್ನು ವಾಸಕ್ಕಾಗಿ ನಿರ್ಮಿಸಿಕೊಂಡಂತೆ ರಾಜ ಮಹಾರಾಜರು ದೊಡ್ಡ ದೊಡ್ಡ ಅರಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

ಶತ್ರುಗಳ ವಿರುದ್ಧ ಜನರನ್ನು ರಕ್ಷಿಸಲು ಮತ್ತು ತಮ್ಮಲ್ಲಿದ್ದ ಧನ ಧಾನ್ಯಗಳನ್ನು ಮತ್ತು ಸಂಪತ್ತನ್ನು ರಕ್ಷಿಸುವ ಸಲುವಾಗಿ ಹಲವು ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ಹಲವು ಅರಮನೆಗಳನ್ನು ಇಲ್ಲಿ ನಿರ್ಮಿಸಿದ್ದಾರೆ. ನಮ್ಮ ದೇಶದಲ್ಲಿರುವ ಅನೇಕ ಶಾಸ್ತ್ರ ಗ್ರಂಥಗಳು ಅರಮನೆ ನಿರ್ಮಾಣದ ತಾಂತ್ರಿಕ ವಿಧಿ-ವಿಧಾನಗಳನ್ನು ಉಲ್ಲೇಖಿಸುತ್ತವೆ. ಇದೇ ನಿಯಮಗಳನ್ನು ಅಳವಡಿಸಿಕೊಂಡು ತೇರದಾಳ ಪರಿಸರದಲ್ಲಿನ ಹನಂಗಡಿ, ಹಳಂಗಳಿ, ಜಮಖಂಡಿ, ತೇರದಾಳದಲ್ಲಿ ಅರಮನೆಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಹನಗಂಡಿಯ ಅರಮನೆ**

ಹನಂಗಂಡಿಯ ದೇಸಾಯಿಗಳಿಂದ ನಿರ್ಮಾಣವಾದ ಈ ಅರಮನೆಯು ವಾಡೆ ಎಂದು ಕರೆಯಲಾಗುವ ಪ್ರದೇಶದಲ್ಲಿದೆ. ಕ್ರಿ.ಶ.೧೬-೧೭ನೇ ಶತಮಾನಕ್ಕೆ ಸೇರಿದೆ. ಸುಮಾರು ೧೫೦ x ೯೦ ಅಡಿ ಅಳತೆ ಹೊಂದಿರುವ ಇದರಲ್ಲಿ ಒಟ್ಟು ೨೪ ಕೋಣೆಗಳಿವೆ. ಗಜಾಯದಲ್ಲಿರುವ ಈ ಅರಮನೆಯ ನಿರ್ಮಾಣಕ್ಕೆ ಕಲ್ಲು, ಮರ, ಮಣ್ಣು ಮತ್ತು ಹೆಂಚು ಹಾಗೂ ಟೈಲ್ಸ್‌ಗಳನ್ನು ಬಳಸಿಕೊಂಡು ಆಯಾತಾಕಾರಾಗಿ ನಿರ್ಮಿಸಲಾಗಿದೆ. ಮುಖ್ಯ ಪ್ರವೇಶ ದ್ವಾರವು ಪೂರ್ವಕ್ಕಿದ್ದು, ಇದರ ಆಗ್ನೇಯಕ್ಕೆ ಪಾಕಶಾಲೆ, ಈಶಾನ್ಯಕ್ಕೆ ಪೂಜಾ ಮಂದಿರ, ನೈರುತ್ಯಕ್ಕೆ ಶಯನ ಗೃಹ, ವಾಯುವ್ಯಕ್ಕೆ ಶೌಚಗೃಹ, ಮಧ್ಯ ಭಾಗದಲ್ಲಿ ವಿಶ್ರಾಂತಿ ಪ್ರಾಂಗಣಗಳಿವೆ. ಇಲ್ಲಿನ ಕಂಬಗಳನ್ನು ಮತ್ತು ಮಾಡನ್ನು ವಿವಿಧ ಪಕ್ಷಿ, ಪ್ರಾಣಿ, ಎಲೆ, ಮರ, ಗಿಡಗಳ ಚಿತ್ರಗಳಿಂದ ಸುಂದರವಾಗಿ ಅಲಂಕರಿಸಲಾಗಿದೆ. ಇಲ್ಲಿ ತುದಿ ಕಮಾನುಗಳ್ನು ವಿಶೇಷವಾಗಿ ಬಳಸಲಾಗಿದೆ. ಇದರ ಮೇಲಿನ ಮಹಡಿಯಲ್ಲಿ ಇದೇ ಲಕ್ಷಣಗಳಿರುವ ಕೊಠಡಿಗಳಿವೆ. ಅಲ್ಲದೇ ಈ ಮನೆತನದಲ್ಲಿ ಆಳ್ವಿಕೆ ಮಾಡಿದ ರಾಜರ ಪೋಟೋಗಳು, ಅವರು ಬಳಸಿದ ಶಸ್ತ್ರಾಸ್ತ್ರಗಳು, ಆಯುಧಗಳು, ದಿನ ಉಪಯೋಗಿ ವಸ್ತುಗಳು ಇತ್ಯಾದಿಗಳನ್ನು ಇಲ್ಲಿನ ಸಂಗ್ರಾಹಾಲಯದಲ್ಲಿಡಲಾಗಿದ್ದು ಅವು ಅತ್ಯಂತ ಸುಂದರವಾಗಿದ್ದು ನೋಡುಗರ ಮನಸ್ಸನ್ನು ಸೆಳೆಯುತ್ತವೆ.

ಹನಗಂಡಿಯ ವಾಡೆಯಲ್ಲಿ ಲೌಕಿಕ ವಾಸ್ತುಶಿಲ್ಪಕ್ಕೆ ಸೇರಿಸಬಹುದಾದ ಪುರಾತನ ಕಾಲದಲ್ಲಿನ ಒಂದು ಬಾವಿ ಇದೆ. ಇದು ವಾಡೆಯ ಹೊರ ಆವರಣದಲ್ಲಿ ಇದೆ. ಇದರಲ್ಲಿ ಸುಂದರವಾದ ಲಿಂಗ ಅದರ ಮುಂದೆ ನಂದಿ ಇದೆ. ಅದರ ಸುತ್ತಲೂ ೧೮ ಕಮಾನುಗಳಿವೆ. ೨ ಚಿಕ್ಕ ಕಮಾನುಗಳಿವೆ. ಒಂದೊಂದು ಕಮಾನದಲ್ಲಿ ಒಂದು ಮಾಡವಿದೆ. ಅದರೊಳಗೆ ಸುಂದರವಾದ ಬಾವಿ ಇದೆ. ಅಲ್ಲಿಯ ಲಿಂಗಕ್ಕೆ ದೇಸಾಯಿ ಮನೆತನದವರು ನಿತ್ಯ ಪೂಜೆ ಮಾಡಲು ಬರುತ್ತಿದ್ದರಂತೆ.

ಜಮಖಂಡಿ ದೇಸಾಯಿಗಳ ಕಾಲದಲ್ಲಿ ನಿರ್ಮಾಣವಾದ ವರ್ಗ್ಥನರ್ಸ್ ಬಂಗ್ಲೊ ಅಥವಾ ಪೋಲೊ ಫ್ಯಾಲೇಸ್ ಎಂದು ಕರೆಯುವ ಕಟ್ಟಡವು ಇಲ್ಲಿನ ಲೌಕಿಕ ಸ್ಮಾರಕ ಅವಶೇಷಗಳಿಗೆ ಮತ್ತೊಂದು ಉತ್ತಮ ಉದಾಹರಣೆಯಾಗಿದೆ. ಇದನ್ನು ರಾಜ್ಯಕ್ಕೆ ಉನ್ನತ ಬ್ರಿಟೀಷ ಅಧಿಕಾರಿಗಳು ಭೇಟಿ ನೀಡಿದಾಗ ಅವರ ವಾಸ್ತವ್ಯಕ್ಕಾಗಿ ಸಕಲ ಸೌಲಭ್ಯಗಳಿಂದ ಕೂಡಿದ ಭವ್ಯ ಮತ್ತು ಸುಂದರವಾದ ಕಟ್ಟಡವನ್ನು ಕ್ರಿ.ಶ. ೧೯೦೬ ರಲ್ಲಿ ಅಲ್ಲಿನ ದೇಸಾಯಿಗಳು ಕಟ್ಟಿಸಿದರು. ಇದಕ್ಕೆ ವರ್ಗ್ಥನರ್ಸ್ ಬಂಗ್ಲೊ ಅಥವಾ ಪೋಲೊ ಫ್ಯಾಲೇಸ್ ಎಂದು ಕರೆಯುತ್ತಾರೆ. ಇದೇ ಕಟ್ಟಡದಲ್ಲಿ ಇಂದು ಬಿ.ಎಲ್.ಡಿ.ಇ. ಸಂಸ್ಥೆಯ ಕಾಲೇಜು ನಡೆಯುತ್ತದೆ.

ಇಲ್ಲಿನ ಹಳಿಂಗಳಿ, ಅಸ್ಕಿ, ಜಗದಾಳ, ಮದನಮಟ್ಟಿ ತೇರದಾಳ ಮೊದಲಾದ ಕಡೆ ಪ್ರಾಚೀನ ಜನರ ವಾಸದ ಕಟ್ಟಡಗಳು ದೊರೆತಿದ್ದು, ಅವುಗಳು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಇದರ ಮೇಲೆ ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆ.

**೬.೩. ರಕ್ಷಣಾ ಸಂಬಂಧಿ ಸ್ಮಾರಕಗಳು**

ತೇರದಾಳ ಪರಿಸರದಲ್ಲಿ ಆರ್ಚನೆಗಾಗಿ ದೇವಾಲಯಗಳನ್ನು ನಿರ್ಮಿಸಿಕೊಂಡಂತೆ, ತನ್ನ ಸುಭದ್ರತೆಗಾಗಿ ಮತ್ತು ರಕ್ಷಣೆಗಾಗಿ ಕೆಲ ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡು ತನ್ನ ರಕ್ಷಣೆಯನ್ನು ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದಾನೆ. ಶತ್ರುಗಳ ವಿರುದ್ಧ ಜನರನ್ನು ರಕ್ಷಿಸಲು ಮತ್ತು ತಮ್ಮಲ್ಲಿದ್ದ ಧನ ಧಾನ್ಯಗಳನ್ನು ಮತ್ತು ಸಂಪತ್ತನ್ನು ರಕ್ಷಿಸುವ ಸಲುವಾಗಿ

ಹಲವು ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ಕೋಟೆಗಳನ್ನು ಇಲ್ಲಿ ನಿರ್ಮಿಸಿದ್ದಾರೆ. ನಮ್ಮ ದೇಶದಲ್ಲಿರುವ ಶಾಸ್ತ್ರ ಗ್ರಂಥಗಳು ಕೋಟೆ ನಿರ್ಮಾಣದ ತಾಂತ್ರಿಕ ವಿಧಿ-ವಿಧಾನಗಳನ್ನು ಉಲ್ಲೇಖಿಸುತ್ತವೆ. ಕೌಟಲ್ಯ ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ಮೃತ್ತಿಕಾ, ಜಲ, ನೆಲ, ವನ ಎನ್ನುವ ಕೋಟೆ/ದುರ್ಗದ ಪ್ರಕಾರಗಳನ್ನು ಹೆಸರಿಸಿದ್ದಾನೆ. ಇದೇ ನಿಯಮಗಳನ್ನು ಅಳವಡಿಸಿಕೊಂಡು ತೇರದಾಳ ಪರಿಸರದಲ್ಲಿನ ಹನಂಗಡಿ, ಹಳಿಂಗಳಿ, ಭದ್ರಗಿರಿ, ತೇರದಾಳದಲ್ಲಿ ಕೋಟೆಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಹನಗಂಡಿ ಕೋಟೆ (ವಾಡೆ)**

ಹನಗಂಡಿಯ ಗ್ರಾಮ ಮಧ್ಯದಲ್ಲಿ ವಿಜಯನಗರ ಕಾಲಾವಧಿಯಲ್ಲಿ ನಿರ್ಮಿಸಿದಂತೆ ತೋರುವ ಒಂದು ದುರ್ಗವಿದೆ. ಇದನ್ನು ಸ್ಥಳೀಯರು ವಾಡೆ ಅಥವಾ ಕೋಟೆ ಎಂದು ಕರೆಯುತ್ತಾರೆ. ೨೨ x ೧೬೦ ಅಡಿ ಉದ್ದ ಮತ್ತು ಅಗಲ ಹೊಂದಿರುವ ಇದರ ಸುತ್ತಲೂ ವಿಶಾಲವಾದ ೧೫ ಅಡಿ ಎತ್ತರ ಗೋಡೆಯಿದ್ದು, ನೆಲ ದುರ್ಗ ಪ್ರಕಾರಕ್ಕೆ ಸೇರಿದ ಇದನ್ನು ಹೆಚ್ಚು ಸುಭದ್ರವಾಗಿ ಸಮ ಗಾತ್ರದ ಶಿಲೆ, ಇಟ್ಟಿಗೆ ಮತ್ತು ಮಣ್ಣನ್ನು ಬಳಸಿ ನಿರ್ಮಿಸಲಾಗಿದೆ. ಇಲ್ಲಿನ ಎತ್ತರವಾದ ಗೋಡೆಗಳ ಮೇಲೆ ಅಲ್ಲಲ್ಲಿ ಅಂಬುಗಂಡಿಗಳಿವೆ. ಇದರ ಕುಂಬೆಯ ಭಾಗದಲ್ಲಿ ತೆನೆಗಳ ಅಲಂಕಾರವಿದೆ. ಚೌಕಕಾರವಾಗಿರುವ ಈ ವಾಡೆಯಲ್ಲಿ ನಾಲ್ಕು ಅಯಾತಾಕಾರದ ಕೊತ್ತಳಗಳಿವೆ. ಇದರ ಮಹಾದ್ವಾರವು ಪೂರ್ವಕ್ಕಿದ್ದು, ಅದರ ಬಾಗಿಲು ಸುಮಾರು ೧೮ ಅಡಿ ಎತ್ತರವಿದೆ. ಈ ಬಾಗಿಲ ಕದಗಳನ್ನು ದಪ್ಪನೆಯ ಸುಮಾರು ಅರ್ಧ ಅಡಿಯ ಮರದ ಅಲಗೆಗಳನ್ನು ಬಳಸಿ ಅದರ ಮುಂಭಾಗಕ್ಕೆ ಕಬ್ಬಿಣದ ಚೂಪನೆಯ ಮೊಳೆಗಳನ್ನು ಅಳವಡಿಸಿ ನಿರ್ಮಿಸಲಾಗಿದೆ. ಮುಖ್ಯ ದ್ವಾರವನ್ನು ಮುಚ್ಚಿದಾಗ ಶತ್ರುಗಳು ಆನೆಗಳು ಸಹಾಯದಿಂದ ಕೋಟೆ ಬಾಗಿಲು ತೆರಯಲು ಅಸಹಾಯಕವಾಗುವಂತೆ ಮಾಡಲಾಗಿದೆ. ಇದಕ್ಕೆ ಮುಖ್ಯ ದ್ವಾರವಲ್ಲದೇ ಇನ್ನು ಎರಡು ಚಿಕ್ಕ (ದಿಡ್ಡಿ) ಬಾಗಿಲುಗಳಿವೆ. ದುರ್ಗದ ಅಥವಾ ವಾಡೆಯ ಹೊರ ಆವರಣದಲ್ಲಿ ೯೦ ಕೋನದಂತೆ ನಿರ್ಮಿಸಿದ ಒಂದು ಹಳೆಯ ಕಟ್ಟಡ ಬಾವಿ ಇದೆ. ಈ ವಾಡೆಯಲ್ಲಿ ನೇಮಿನಾಥ, ಪಾರ್ಶ್ವನಾಥ ಬಸದಿ ಹಾಗೂ ಗುಡಿಗಳು ಹಾಗೂ ಬೃಹತ್ ಮತ್ತು ವಿಶಾಲವಾದ ಮನೆ ಇದೆ. ಇದು ಇಲ್ಲಿನ ದೇಸಗತಿ ಮನೆತನದ ಕೃಷ್ಣಾ ದೇಸಾಯಿಯವರಿಂದ ಇದು ಸುಮಾರು ೧೧ನೇ ಶತಮಾನದಲ್ಲಿ ನಿರ್ಮಾಣವಾಯಿತು. ಇದನ್ನು ಈತನು ಬಿಜಾಪುರ ಆದಿಲ್ ಶಾಹಿಯಿಂದ ದೇಣಿಗೆಯಾಗಿ ಪಡೆದು ಇಲ್ಲಿನ ಪರಗಣಿಯ ವತನದಾರರಾದರು. ೬೦೦ ವರ್ಷಗಳ ಹಿಂದೆಯೇ ಬಿಜಾಪುರ ಆದಿಲ್ ಶಾಹಿಯ ಕಾಲದಲ್ಲಿ ದೇಸಾಯಿಯ ಮನೆತನಕ್ಕೆ ೩೩ ಹಳ್ಳಿಗಳ ಪರಗಣದಾರರನ್ನಾಗಿ ಮಾಡಿದ್ದರು. ಇದು ದೇಸಾಯಿ ಪರಗಣ ತೇರದಾಳ ಠಾಣೆಯ ಅಧೀನದಲ್ಲಿತ್ತು. ದೇಸಾಯಿ ಮನೆತನದವರಿಗೆ ದೊರೆತ ಬಂದೂಕ, ತೋಪಗಳು ಮುಂತಾದವುಗಳನ್ನು ಭಾರತ ಸರಕಾರಕ್ಕೆ ಸೇರಿ ಸುಮಾರು ೫೦ ವರ್ಷಗಳಾಯಿತು. ಷಹಜಾನ ಬಾದಷಾಹನ ಕಾಲದ ದೇಸಗತಿ ಇತ್ತು ಇವರಿಗೆ ಔರಂಗಜೇಬನ ಕಾಲದಲ್ಲಿ ದೇಸಗತಿ ಹೊಂದಿದ್ದರು. ಸುಮಾರು ೬೦೦ ವರ್ಷಗಲ ಹಿಂದೆ ಪರಗಣ ಹೊಂದಿದ ಈ ವಾಡೆಯು ಭವ್ಯ ಮತ್ತು ಸುಂದರವಾಗಿತ್ತು. ಆದರೆ ಅದು ಈಗ ಅದರ ಹಿಂಬದಿಯ ಗೋಡೆ ಮತ್ತು ಹೂಡೆಗಳು ಬೀಳಲು ಪ್ರಾರಂಭಿಸಿವೆ. ಈಗ ಸಂಪೂರ್ಣವಾಗಿ ಪುನರ್ ನಿರ್ಮಾಣಗೊಂಡಿವೆ. ಈಗಲಾದರೂ ವಾಡೆಯ ಒಂದು ಐತಿಹಾಸಿಕ ಸುಂದರವಾದ ಸರಳ ರೀತಿಯ ಕಲಾ ಶೈಲಿಯನ್ನು ಹೊಂದಿದ ಭವ್ಯ

ಕಟ್ಟಿಡವಾಗಿದೆ. ಷಹಜಾನನು ಒಂದು ಹುಚ್ಚ ಕುದುರೆಯನ್ನು ಬಿಟ್ಟು ಇಲ್ಲಿನ ಮೂಲ ದೇಸಾಯಿಯನ್ನು ಕೊಲ್ಲಲು ಕಳುಹಿಸಿದ್ದನು. ಬಿಜಾಪೂರದಿಂದ ಎಲ್ಲಡೆ ಸುತ್ತಿ ಆ ಕುದುರೆಯನ್ನು ಸೋಲಿಸಿ ಹನಗಂಡಿಗೆ ಬಂದನು. ಆದರಿಂದಾಗಿ ಬಿಜಾಪುರ ಷಾಹಿ ಮನೆತನದವರು ಆತನನ್ನು ೩೩ ಹಳ್ಳಿಗಳ ವತನದಾರರನ್ನಾಗಿ ಮಾಡಿದನು. ಇವರಿಗೆ ೫೮೦ ಇನಾಮಿ ಕಾಲಸಾ ಇವೆಲ್ಲ ಬ್ರಿಟಿಷರ ಕಾಲದಲ್ಲಿ ಇತ್ತು. ದೇಶ ಸ್ವಾತಂತ್ರ್ಯವಾದ ಬಳಿಕ ಕೆಲವೊಂದು ವರ್ಷಗಳ ನಂತರ ಹನಗಂಡಿಯನ್ನು ಭಾರತ ಸರಕಾರ ತನ್ನ ವಶಕ್ಕೆ ಸೇರಿಸಿಕೊಂಡಿತು.

ಈ ದೇಸಾಯಿ ಮನೆತನದವರು ಪ್ರಭು ದೇವರ ಭಕ್ತಗಾಗಿದ್ದರು. ಮುಂದಿನ ೮ ತಲೆಮಾರಿನ ತನಕ ಅವರಿಗೆ ಮಕ್ಕಳಿಲ್ಲದ ಕಾರಣ ಸ್ವಾಮಿಗಳು ತೇರದಾಳ ಪ್ರಭು ಸ್ವಾಮಿಗೆ ಹೋಗಲು ಹೇಳಿದರು. ಅದರ ಮತ್ತೆ ಪಲ್ಲಕ್ಕಿಯಲ್ಲಿ ಕುಳಿತು ದೇಸಾಯಿ ಮನೆತನದ ಸ್ತ್ರೀಯರು ಪ್ರಭುಸ್ವಾಮಿಗೆ ಹೋಗುತ್ತಿದ್ದರು. ಅದರಂತೆ ಮುಂದೆ ಅವರದೇ ಆದ ವಂಶ ಪರಂಪರೆ ಮುಂದುವರೆಯಿತು. ಬ್ರಿಟಿಷರ ಕಾಲದಲ್ಲಿ ಅಪ್ಪಾಸಾಹೇಬ ಎಂಬ ಬ್ರಿಟೀಷ ಹೋರಾಟಗಾರನಾಗಿದ್ದ ಈತನಿಗೆ ಇಬ್ಬರು ಪತ್ನಿಯರು ಒಬ್ಬಳು ತಾಯಿಸಾಹೇಬ ಮತ್ತೊಬ್ಬಳು ಅಕ್ಕಾಸಾಹೇಬ ಇವರಿಗೂ ಮಕ್ಕಳಿರಲಿಲ್ಲ. ಇವರು ಕೂಡ ಪಲ್ಲಕ್ಕಿಯಲ್ಲಿ ಕುಳಿತು ಪ್ರಭುದೇವರಿಗೆ, ದಿಗಂಬಂರೇಶ್ವರಿಗೆ ಹಾಗೂ ಬೀರದೇವರಿಗೆ ಹೋಗುತ್ತಿದ್ದರು. ಅದಕ್ಕಾಗಿ ವೆಂಕೋಬಾನ ಮಗ ನಾರಾಯಣನನ್ನು ೧೯೪೮ ರಲ್ಲಿ ದತ್ತು ತೆಗೆದುಕೊಂಡರು.

**ತೇರದಾಳದ ವಾಡೆ**

ತೇರದಾಳ ಗ್ರಾಮವು ವಿಶಾಲವಾಗಿದ್ದ ಊರಿನ ಸುತ್ತಲೂ ಕ್ರಿ.ಶ.೧೫ನೇ ಶತಮಾನದಲ್ಲಿ ಬಿಜಾಪುರದ ಆದಿಲ್‌ಶಾಹಿಗಳಿಂದ ನಿರ್ಮಿತವಾದ ಮತ್ತು ಮರಾಠ ಕಾಲದಲ್ಲಿ ನವೀಕರಣಗೊಂಡ ಕೋಟೆಯೊಂದಿದ್ದು, ಅದನ್ನು ಅಲ್ಲಿನ ಸ್ಥಳೀಯರು ವಾಡೆ ಎನ್ನುತ್ತಾರೆ. ಇದು ಒಂದು ಪಾಳು ಕಲ್ಲಿನ ಕೋಟೆಯಾಗಿದೆ. ೧೨೦ x ೮೦ ಮೀ.ಉದ್ದ ಮತ್ತು ಅಗಲ ಹೊಂದಿರುವ ಇದರ ಸುತ್ತಲೂ ವಿಶಾಲವಾದ ೧೫ ಅಡಿ ಎತ್ತರ ಗೋಡೆಯಿದ್ದು, ನೆಲ ದುರ್ಗ ಪ್ರಕಾರಕ್ಕೆ ಸೇರಿದ ಇದನ್ನು ಹೆಚ್ಚು ಸುಭದ್ರವಾಗಿ ಸಮ ಗಾತ್ರದ ಹಿಟ್ಟು ಶಿಲೆ, ಇಟ್ಟಿಗೆ ಮತ್ತು ಮಣ್ಣನ್ನು ಬಳಸಿ ನಿರ್ಮಿಸಲಾಗಿದೆ. ಇಲ್ಲಿನ ಎತ್ತರವಾದ ಗೋಡೆಗಳ ಮೇಲೆ ಅಲ್ಲಲ್ಲಿ ಕಿಂಡಿಗಳಿವೆ. ಇದರ ಕೊಂಬೆಯ ಭಾಗದಲ್ಲಿ ತೆನೆಗಳ ಅಲಂಕಾರವಿದೆ. ಚೌಕಕಾರವಾಗಿರುವ ಈ ವಾಡೆಯಲ್ಲಿ ನಾಲ್ಕು ಅಯಾತಾಕಾರದ ಕೊತ್ತಲಗಳಿದ್ದು, ಅವುಗಳಲ್ಲಿ ಮೂರು ಸಂಪೂರ್ಣವಾಗಿ ಈಗ ಭಗ್ನವಾಗಿವೆ. ಇದರ ಮಹಾದ್ವಾರವು ಪೂರ್ವಕ್ಕಿದ್ದು, ಅದರ ಬಾಗಿಲು ಸುಮಾರು ೧೨ ಅಡಿ ಎತ್ತರವಿದೆ. ಪ್ರಸಕ್ತ ಈ ಬಾಗಿಲನ್ನು ಪಟ್ಟಣದ ಮುಖ್ಯ ರಸ್ತೆಯನ್ನಾಗಿ ಮಾರ್ಪಾಡು ಮಾಡಿಕೊಂಡಿದ್ದಾರೆ. ಕೋಟೆಯ ಒಳಭಾಗದಲ್ಲಿ ಅನೇಕ ದೇವಾಲಯಗಳು ನಿರ್ಮಿಸಿದ್ದು, ಅವುಗಳಲ್ಲಿ ಅಲ್ಲಮ ಪ್ರಭುಸ್ವಾಮಿಯ ಹಾಗೂ ನೇಮಿನಾಥ ಜೈನ ಬಸದಿ ಪ್ರಮುಖವಾದವುಗಳಾಗಿವೆ. ಅಲ್ಲದೇ ಈ ಗ್ರಾಮದ ಉತ್ತರದಂಚಿಗೆ ಸುಡಗಾಡ ಲಕ್ಷ್ಮೀ, ರೇಣುಕಾ, ಹನುಮಂತ ದೇವಸ್ಥಾನಗಳಿವೆ. ಈ ಗ್ರಾಮದಲ್ಲಿ ಒಟ್ಟು ೪೨ ಗುಡಿಗಳು, ೨೨ ಮಸೀದಿಗಳಿವೆ. ದರ್ಗಾ ಊರಿನ ಆಗ್ನೇಯಕ್ಕಿದ್ದು ಇಲ್ಲಿ ಅನೇಕ ಶಾಸನಗಳು ಸಹ ದೊರಕಿವೆ.

ತೇರದಾಳ ಸಮೀಪದ ಹಳಿಂಗಳಿ, ಭದ್ರಗಿರಿ, ಅಸ್ಕಿ ಮೊದಲಾದೆಡೆ ರಕ್ಷಣಾತ್ಮಕ ಸ್ಮಾರಕವಶೇಷಗಳು ಇದ್ದು, ಅವುಗಳನ್ನು ವ್ಯವಸ್ಥಿತವಾಗಿ ಗುರುತಿಸಿ ಅಧ್ಯಯನ ಮಾಡುವ ಅವಶ್ಯಕತೆ ಇದೆ.

**೮.೪. ಸ್ಮಾರಕ ಶಿಲ್ಪಗಳು**

ಇತರೆ ಸ್ಮಾರಕ ಅವಶೇಷಗಳಂತೆ ಇಲ್ಲಿನ ಸ್ಮಾರಕ ಶಿಲ್ಪಗಳು ಸಹ ಮಾನವ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಆಕರಗಳಾಗಿದ್ದು, ಆ ಮೂಲಕ ಇಲ್ಲಿನ ಚಾರಿತ್ರಿಕ ಪರಂಪರೆಯನ್ನು ಅರಿಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ತೇರದಾಳ ಪರಿಸರದಲ್ಲಿ ಕಂಡುಬರುವ ವೀರಗಲ್ಲು, ಸತಿಗಲ್ಲು ಮೊದಲಾದ ಸ್ಮಾರಕ ಶಿಲ್ಪಗಳು ಈ ಪರಿಸರದ ಮಾನವ ಸಂಸ್ಕೃತಿ ಮತ್ತು ಪರಂಪರೆಯನ್ನು ಅರಿಯಲು ಸಹಾಯಕವಾಗಿವೆ. ತೇರದಾಳದ ಕೆಲವು ಭಾಗಗಳಲ್ಲಿ ಸತ್ತವರ ನೆಟ್ಟ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳ ದೊರೆಯುತ್ತವೆ. ಇವುಗಳಲ್ಲಿ ಚಿತ್ರಿತವಾಗಿರುವ ಶಿಲ್ಪಗಳಿಂದ ಈ ಭಾಗದ ಅಂದಿನ ಸಾಮಾಜಿಕ ಸ್ಥಿತಿಗತಿಯನ್ನು ಚಿತ್ರಿಸಬಹುದು. ರಾಜರಿಂದ, ಸಾಮಂತರಿಂದ, ಸಾಮಾನ್ಯರಿಂದ ನಿರ್ಮಿಸಿಲ್ಪಟ್ಟ ಈ ಸ್ಮಾರಕ ಶಿಲೆಗಳು ಕಲಾ ಇತಿಹಾಸ ರಚಿಸಲು ಸಹಕಾರಿ ಆಗಿವೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಸ್ಮಾರಕ ಶಿಲ್ಪ ಮತ್ತು ಇತರೆ ಪ್ರಾಚ್ಯಾವಶೇಷಗಳನ್ನು ಈ ಮುಂದಿನಂತೆ ಪ್ರಾಸಂಗಿಕವಾಗಿ ವಿಶ್ಲೇಷಿಸಲಾಗಿದೆ.

ಮೂರ್ತಿಶಿಲ್ಪ ನಿರ್ಧಿಷ್ಟವಾಗಿದ್ದು ಅದಕ್ಕೆ ಶ್ಲೋಕ ಮತ್ತು ಕಥಾ ಹಿನ್ನೆಲೆ ಇರುತ್ತದೆ. ಅದರಂತೆ ಶಿಲ್ಪಿ ಶಿಲ್ಪವನ್ನು ಕೆತ್ತುತ್ತಾನೆ. ಆದರೆ ಶಾಸನ ಆಥವಾ ವೀರಗಲ್ಲುಗಳ ಸೃಷ್ಠಿಗೆ ಇಂತಹ ಧ್ಯಾನ ಶ್ಲೋಕವಾಗಲಿ ಪಾರಂಪರಿಕ ಕಥಾ ಹಿನ್ನೆಲೆಯಾಗಲೀ ಇರುವುದಿಲ್ಲ. ವೀರನ ಸಾಮಯಿಕ ಸಾಹಸವನ್ನು ಮಾತ್ರ ಶಿಲ್ಪಿ ಕೆತ್ತಿರುತ್ತಾನೆ. ಶಿಲ್ಪಯು ಹಲವಾರು ಕಟ್ಟುಪಾಡಗಳಿಂದ ಬಿಡುಗಡೆ ಹೊಂದಿರುವುದರಿಂದ ಶಾಸನ ಶಿಲ್ಪಗಳಲ್ಲಿ ಎದ್ದು ಕಾಣುವಂತಹ ಹಾಗೂ ಅಪರೂಪವಾದ ಸ್ಮಾರಕ ಶಿಲ್ಪಗಳು ಮೂಡಿಬರಲು ಕಾರಣವಾಯಿತು.

ಯುದ್ದದಲ್ಲಿ ಗೆದ್ದವರ ನೆನಪಿಗೆ ಶತ್ರುಗಳು ಹಸುಗಳನ್ನು ಇಲ್ಲವೇ ಸ್ತ್ರೀಯರನ್ನು ಕದ್ದೊಯ್ಯುತ್ತಿರುವಾಗ ಹೋರಾಡಿ ಮಡಿದವರ ನೆನಪಿಗೆ ಇಲ್ಲವೇ ಸ್ವಾಮಿನಿಷ್ಠೆ ತೋರಿಸಲು ತನ್ನ ಒಡೆಯ ಅಥವಾ ರಾಜ ಮಡಿದಾಗ ಆತ್ಮ ತ್ಯಾಗ ಮಾಡಿಕೊಂಡ ಸೇವಕರ ನೆನಪಿಗೆ ಮತ್ತು ಆತ್ಮತ್ಯಾಗ ಗೊಂಡವನಿಗೆ ಪ್ರೇರಕ ಇಲ್ಲವೇ ಸಹಾನುಭೂತಿಯ ದೃಷ್ಠಿಯಿಂದ, ಸಾಮೂಹಿಕವಾಗಿ ಪ್ರಾಣ ತ್ಯಾಗ ಮಾಡಿಕೊಂಡ ಬಂಧು ಬಳಗದವರ ನೆನಪಿಗೆ ಅಥವಾ ಕಳ್ಳಕಾಕಾರರು ಗ್ರಾಮವೊಂದರ ಮೇಲೆ ಆಕ್ರಮಣ ಮಾಡಿದಾಗ ಅಲ್ಲಿನ ನಾಯಕರು ತಮ್ಮ ಶೌರ್ಯ ಪರಾಕ್ರಮ ತೋರಿಸಿ ಮರಣ ಹೊಂದಿದವರ ನೆನಪಿಗೆ ಹಾಗೂ ಹೋರಾಡುತ್ತಿರುವಾಗ ಮರಣ ಹೊಂದಿದ ನಾಯಿಯಂತಹ ಪ್ರಾಣಿಗಳ ನೆನಪಿಗೆ ಸ್ಮಾರಕ ಶಿಲೆಗಳನ್ನು ನೆಡಲಾಗುತ್ತದೆ.

**ವೀರಗಲ್ಲುಗಳು**

ಸತ್ತವರ ನೆನಪಿಗಾಗಿ ಈ ಕಲ್ಲುಗಳನ್ನು ನೆಟ್ಟಿರುತ್ತಾರೆ. ಸಾಮಾನ್ಯವಾಗಿ ಬಿಳಿ ಅಥವಾ ಕಪ್ಪು ಶಿಲೆಯ ಆಯತಾಕಾರದ ಒಂದೇ ಕಲ್ಲಿನಲ್ಲಿ ಐದು ಅಥವಾ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ಮೊದಲ ಹಂತದಲ್ಲಿ ಸಾಮಾನ್ಯವಾಗಿ ಯುದ್ದದ ದೃಶ್ಯ ಎರಡನೇ ವೀರನನ್ನು ಪಲ್ಲಕ್ಕಿಯಲ್ಲಿ ಕರೆದೊಯ್ಯುತ್ತಿರುವ ದೃಶ್ಯವಿದ್ದು, ಮೂರನೆ ಹಂತದಲ್ಲಿ ವೀರನು ಸ್ವರ್ಗದಲ್ಲಿ ಅಪ್ಸರೆಯರ ಮಧ್ಯೆ ಪೀಠದ ಮೇಲೆ ಕುಳಿತಿರುತ್ತಾನೆ. ತೇರದಾಳ, ಜಗದಾಳ, ಹಳಿಂಗಳಿ, ಹಾರೂಗೇರಿ, ರಬಕವಿ, ಬನಹಟ್ಟಿ, ಅಸ್ಕಿ, ಜಗದಾಳ, ಮೊದಲಾದೆಡೆ ಈ ಪ್ರಕಾರದ

ವೀರಗಲ್ಲುಗಳು ಕಾಣಬರುತ್ತವೆ. ಈ ಭಾಗದ ವೀರಗಲ್ಲುಗಳನ್ನು ಮೂರು ವಿಭಾಗಗಳನ್ನಾಗಿ ಅಧ್ಯಯನ ಮಾಡಬಹುದು.

೧.ಕುದುರೆಯನೇರಿದ ಒಬ್ಬ ಪುರುಷ ಯುದ್ದಕ್ಕೆ ಹೊರಟಂತಿರುವುದರ ಚಿತ್ರಣ

೨.ಪುರುಷರು ಯುದ್ಧದಲ್ಲಿ ಹೋರಾಡುತ್ತಿರುವುದು ಚಿತ್ರಣ

೩.ಪ್ರಾಣಿಗಳೊಡನೆ ವೀರರು ಹೋರಾಟ ನಡೆಸುತ್ತಿರುವುದು[೪೧].

ಅಸ್ಕಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸಮೀಪದ ಜಮೀನಿನಲ್ಲಿ ರಂಗನಾಥ ಸ್ವಾಮಿ ವಿಗ್ರಹದ ಬಳಿ ಮಾಸ್ತಿ ಮತ್ತು ವೀರಗಲ್ಲುಗಳಿವೆ. ಮಧ್ಯದಲ್ಲಿ ಒಂದು ವೀರಗಲ್ಲಿದೆ. ಅದರಲ್ಲಿ ಕುದುರೆಯನ್ನೇರಿದ ವೀರನೊಬ್ಬ ತನ್ನ ಬಲಗೈಯಲ್ಲಿ ಖಡ್ಗ ಹಿಡಿದು, ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದು ಯುದ್ಧಕ್ಕೆ ಹೊರಟ ರೀತಿಯಲ್ಲಿ ಕಂಡು ಬರುತ್ತದೆ. ಈತನ ಕೊರಳಲ್ಲಿ ವಿವಿಧ ಬಗೆಯ ಮಣಿಸರಗಳಿವೆ. ಕುದುರೆಯ ಹಿಂಭಾಗ ಮತ್ತು ಮುಂಭಾಗದಲ್ಲಿ ಛತ್ರಿ ಹಿಡಿದ ಸೇವಕರಿದ್ದಾರೆ. ಇದು ವಿಜಯನಗರ ಕಾಲಕ್ಕೆ ಸೇರಿದ ವೀರಗಲ್ಲು ಎಂದು ಶೈಲಿಯ ಆಧಾರದ ಮೇಲೆ ಹೇಳಬಹುದಾಗಿದೆ.

ಜಗದಾಳ, ಹಳಿಂಗಳಿ, ಅಸ್ಕಿಯಲ್ಲಿನ ವೀರಗಲ್ಲಿನ (ಕಲ್ಲೇಶ್ವರ ದೇವಾಲಯದ ಮುಂಭಾಗ) ಮೊದಲ ಹಂತದಲ್ಲಿ ವೀರನೊಬ್ಬ ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದು, ಬಲಗೈಯಿಂದ ಭುಜದ ಹಿಂದಿರುವ ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವಂತಿದೆ. ಕೈಗಳಲ್ಲಿ ಕಡಗ ಧರಿಸಿದ್ದು, ಜಟೆಯನ್ನು ಕಟ್ಟಿದ್ದಾನೆ. ತನ್ನ ಕಾಲ ಕೆಳಗೆ ಮರಣ ಹೊಂದಿದ ಯೋಧನನ್ನು ಕಾಲಿನಿಂದ ತುಳಿಯುತ್ತಲೇ ಹೋರಾಡುತ್ತಿದ್ದಾನೆ. ಆತನ ಎದುರಿನ ಮರಣಶಯ್ಯಲ್ಲಿರುವ ಇಬ್ಬರು ಯೋಧರು ಅದರ ಮೇಲಿನ ಹಂತದಲ್ಲಿ ಖಡ್ಗ, ಗುರಾಣಿ ಹಿಡಿದು ಹೋರಾಡುತ್ತಿರುವ ಯೋಧರ ಗುಂಪಿದೆ. ನಂತರ ಪುಷ್ಪಕ ವಿಮಾನದಲ್ಲಿ ಅಪ್ಸರೆಯರು ಆತನನ್ನು ಕೈಲಾಸಕ್ಕೆ ಒಯ್ಯುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನನ್ನು ಕೈಲಾಸದಲ್ಲಿ ಲಿಂಗದ ಬಳಿ ಕುಳ್ಳಿರಿಸಿ ಅಪ್ಸರೆಯರು ಚಾಮರ ಬೀಸುತ್ತಿದ್ದಾರೆ.

ಹನಗಂಡಿಯ ಜಿನಬಸದಿಯ ಬಳಿಯ ವೀರಗಲ್ಲಿನ ಕೆಳಭಾಗದಲ್ಲಿ ವೀರನೊಬ್ಬ ಜಟಾಮುಕುಟಧಾರಿಯಾಗಿದ್ದು, ಕೈಯಲ್ಲಿ ಕಡಗ, ಕೇಯೂರ ಧರಿಸಿದ್ದು ಎಡಗೈಯಲ್ಲಿನ ಗುರಾಣಿ, ಖಡ್ಗ ಹಿಡಿದು ಶತ್ರುಗಳೊಡನೆ ಹೋರಾಡುತ್ತಿದ್ದಾನೆ. ಅಲೀಢ ಭಂಗಿಯಲ್ಲಿರುವ ಈ ಮೂರ್ತಿ ನಡುವಿಗೆ ನಡುಬಂಧ, ಕಠಾರಿ ಧರಿಸಿದೆ. ಕಾಲಿನಲ್ಲಿ ಕಡಗವಿದ್ದು, ಇತರರರೊಡನೆ ಹೋರಾಡುತ್ತಿದ್ದಾನೆ. ಆತನ ಕಾಲ ಕೆಳಗೆ ಇಬ್ಬರು ಮರಣ ಹೊಂದಿದ್ದು, ಅವರನ್ನು ತುಳಿಯುತ್ತಲೇ ಹೋರಾಡುತ್ತಿದ್ದಾನೆ. ಎರಡನೆ ಹಂತದಲ್ಲಿ ಪುಷ್ಪಕ ವಿಮಾನದಲ್ಲಿ ಈ ವೀರನನ್ನು ಕುಳ್ಳಿರಿಸಿಕೊಂಡ ನಾಲ್ಕು ಜನ ಅಪ್ಸರೆಯರು ಕೈಲಾಸಕ್ಕೆ ಕರೆದೊಯ್ಯುತ್ತಿದ್ದಾರೆ. ಇಲ್ಲಿನ ಇಬ್ಬರು ಅಪ್ಸರೆಯರು ಚಾಮರವನ್ನು ಹಿಡಿದಿದ್ದಾರೆ. ಮೂರನೇ ಹಂತದಲ್ಲಿ ವೀರನು ಕೈಲಾಸದಲ್ಲಿ ಅಂಜಲಿ ಬದ್ಧವಾಗಿ ಪದ್ಮಾಸನದಲ್ಲಿ ಕಿವಿಯಲ್ಲಿ ಕುಂಡಲ, ಯಜ್ಞೋಪವೀತಗಳನ್ನು ಧರಿಸಿದ್ದಾನೆ. ಲಿಂಗದ ಮುಂದೆ ನಂದಿ ಇದ್ದು, ಅದರ ರೀತಿಯಲ್ಲಿ ಅಲಂಕರಿಸಿರುವಂತೆ ಕೆತ್ತಲಾಗಿರುವುದು ವಿಶೇಷ. ಇದೇ ಲಕ್ಷಣಗಳನ್ನೊಳಗೊಂಡ ವೀರಗಲ್ಲುಗಳು ಈ ಪರಿಸರದ ಮೇಲೆ ಹೇಳಿದ ಊರುಗಳಲ್ಲಿ ಕಂಡುಬರುತ್ತವೆ.

**ಮಾಸ್ತಿ ಕಲ್ಲು**

ಪತಿಯು ವೀರ ಮರಣ ಹೊಂದಿದ ಸಮಯದಲ್ಲಿ ಉರಿಯುತ್ತಿರುವ ಬೆಂಕಿಯಲ್ಲಿ ಹಾರಿ ಸತಿ ಪ್ರಾಣ ಕಳೆದು ಕೊಳ್ಳುವುದಕ್ಕೆ ಸತಿ ಸಹಗಮನ ಪದ್ಧತಿ ಎನ್ನತ್ತಾರೆ[೪೨]. ಈ ರೀತಿ ಸತಿ

ಹೋದವರ ನೆನಪಿಗಾಗಿ ನೆಟ್ಟ ಹಲವು ಮಹಾಸತಿ ಕಲ್ಲುಗಳು ತೇರದಾಳದ ಕೆಲವು ಭಾಗಗಳಲ್ಲಿ ಕಂಡುಬರುತ್ತವೆ. ಇವುಗಳನ್ನು ಕೆಲವು ಕಡೆ ಮಾಸ್ತಮ್ಮನೆಂದು ಜನರು ಪೂಜಿಸುತ್ತಾರೆ. ಈ ಶಿಲ್ಪಗಳು ಸಾಮಾನ್ಯವಾಗಿ ಬಲಗೈಯನ್ನು ಮೇಲಕ್ಕೆತ್ತಿರುವಂತೆ ಕಂಬದಿಂದ ಹೊರಬಂದಿರುವಂತೆ ಚಿತ್ರಿಸಿರುತ್ತಾರೆ. ಇಲ್ಲವೆ ಕೆಲವು ಬಾರಿ ಕೈಯಲ್ಲಿ ಕನ್ನಡಿ ಅಥವಾ ನಿಂಬೆಹಣ್ಣು, ಪಾತ್ರೆ ಅಥವಾ ಕಳಶವನ್ನು ಹಿಡಿದಿರುವಂತೆ ಶಿಲ್ಪಿ ಕೆತ್ತಿರುತ್ತಾನೆ. ಈ ರೀತಿಯ ಸ್ಮಾರಕ ಸತಿ ಶಿಲ್ಪಗಳಲ್ಲಿ ಹಳಂಗಳಿ, ಹನಗಂಡಿಗಳಲ್ಲಿ ದೊರೆತ ಸತಿಕಲ್ಲುಗಳು ಮುಖ್ಯವಾಗಿರುವುದರಿಂದ ಅವುಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

**ಹನಗಂಡಿ ಮಹಾಸತಿಗಲ್ಲು**

ಹನಂಗಡಿಯ ಹನುಮಂತ ದೇವಸ್ಥಾನ ಹೊರ ಗೋಡೆಗೆ ಮಹಾಸತಿಗಲ್ಲನ್ನು ನಿಲ್ಲಿಸಲಾಗಿದೆ. ಇದು ಕಪ್ಪು ಶಿಲೆಯಿಂದ ಕೂಡಿದೆ. ಸತಿ ಸಹಗಮನ ಅನುಸರಿಸಿದ್ದಕ್ಕಾಗಿ ಈ ಸತಿಕಲ್ಲನ್ನು ನಿರ್ಮಿಸಿದ್ದಾರೆ. ಇದರ ಕಾಲ ೧೧–೧೨ ನೇ ಶತಮಾನಕ್ಕೆ ಸರಿ ಹೊಂದುತ್ತದೆ. ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ನಿಂತಿರುವ ಈ ಶಿಲ್ಪ ಅಲಂಕೃತ ಸೀರೆ ಧರಿಸಿದೆ. ಕಿವಿಯಲ್ಲಿ ಕುಂಡಲಗಳು, ಅಲಂಕೃತವಾಗಿ ಹೆಣೆದ ಕೇಶರಾಶಿಯ ಆಕೆಯ ಭುಜದ ಮೇಲಿದೆ. ತಲೆಯಲ್ಲಿ ಅರಳಿದ ಪುಷ್ಪ (ಪ್ರಾಯಶಃ ತಾವರೆ) ಧರಿಸಿದ್ದಾಳೆ. ಬಲಗಾಲಿನ ಬಳಿ ಈಕೆಯ ಸೇವಿಕೆಯೊಬ್ಬಳು ಅಂಜಲಿ ಮುದ್ರೆಯಲ್ಲಿ ನಿಂತಿದ್ದಾಳೆ. ತನ್ನ ಒಡತಿಯ ಜೊತೆಯಲ್ಲಿ ಈಕೆಯ ಸಹ ಪ್ರಾಣಾರ್ಪಣೆ ಮಾಡಿಕೊಂಡಿರಬೇಕೆನಿಸುತ್ತದೆ. ಈ ಶಿಲ್ಪದ ಎಡಬದಿಯಲ್ಲಿ ಇದೇ ಲಕ್ಷಣವನ್ನೊಳಗೊಂಡ ಮತ್ತೊಂದು ಮಹಾಸತಿಯ ಮೂರ್ತಿ ಶಿಲ್ಪವಿದೆ. ಇದರಲ್ಲಿ ಸತಿ ಹೋದ ಸ್ತ್ರೀಯನ್ನು ಇಬ್ಬರು ಅಪ್ಸರೆಯರು ತಮ್ಮ ಹೆಗಲ ಮೇಲೆ ಕೈಗಳನ್ನು ಹಾಕಿಸಿಕೊಂಡು ಕರೆದೊಯ್ಯುವಂತಿದೆ. ಬಲ ಅಪ್ಸರೆಯು ತನ್ನ ಬಲಗೈನ್ನು ಮೇಲಕ್ಕೆತ್ತಿದ್ದಾಳೆ. ಎಡ ಅಪ್ಸರೆ ತನ್ನ ಎಡಗೈಯನ್ನು ಇಳಿಬಿಟ್ಟಿದ್ದಾಳೆ. ಎರಡನೆ ಹಂತದಲ್ಲಿ ಅಪ್ಸರೆಯರು ಪುಷ್ಪಕ ವಿಮಾನದಲ್ಲಿ ಆ ಸ್ತ್ರೀಯನ್ನು ಕುಳ್ಳರಿಸಿಕೊಂಡು ಹೋಗುವ ಚಿತ್ರಣವಿದೆ. ಮೇಲಿನ ಹಂತದಲ್ಲಿ ಪದ್ಮಾಸನದಲ್ಲಿ ಅಂಜಲಿ ಹಸ್ತಳಾಗಿ ಆಕೆ ಕುಳಿತು ಕೊಂಡಿದ್ದಾಳೆ. ಅಲ್ಲಿ ಶಿವಲಿಂಗ, ನಂದಿ, ಸೂರ್ಯ–ಚಂದ್ರರಿದ್ದಾರೆ. ಸತಿ ಹೋದ ಸ್ತ್ರೀ ತನ್ನ ಕೇಶರಾಶಿಯನ್ನು ತುರುಬಿನ ರೀತಿಯಲ್ಲಿ ಕಟ್ಟಿದ್ದು, ಕಿವಿಗಳಲ್ಲಿ ಓಲೆ ಹಾಗು ಕೊರಳದಲ್ಲಿ ಅನೇಕ ಬಗೆಯ ಸರಗಳಿವೆ. ಸೀರೆಯನ್ನು ಕಚ್ಚೆಯ ರೀತಿಯಲ್ಲಿ ಧರಿಸಿರುವುದು ಹಾಗು ಕೊರಳಲ್ಲಿ ಅನೇಕ ಬಗೆಯ ಸರಗಳಿವೆ. ಸೀರೆಯನ್ನು ಕಚ್ಚೆಯ ರೀತಿಯಲ್ಲಿ ಧರಿಸಿರುವುದು ಹಾಗೂ ಕಾಲಿನಲ್ಲಿ ಕಾಲ್ಗಡಗಳಿರುವುದನ್ನು ನೋಡಬಹುದು.

ಈ ಸ್ಮಾರಕ ಶಿಲ್ಪಗಳ ಸೂಕ್ಷ್ಮ ಅಧ್ಯಯನದಿಂದ ತೇರದಾಳ ಪರಿಸರದಲ್ಲಿ ಅಂದು ಬಳಕೆಯಲ್ಲಿದ್ದ ಆಯುಧಗಳಾದ ಬಿಲ್ಲು, ಬಾಣ, ಈಟಿ (ಭರ್ಜಿ), ಉದ್ದನೆಯ ಗುರಾಣಿ, ಖಡ್ಗಗಳನ್ನು ಯುದ್ಧದ ಸಮಯದಲ್ಲಿ ಬಳಸುತ್ತಿದ್ದರೆಂದು ಹಾಗೂ ಈ ಆಯುಧೋಪಕರಣಗಳನ್ನು ತಯಾರಿಸುತ್ತಿದ್ದರೆಂದು ತಿಳಿದುಬರುತ್ತದೆ. ಇದಲ್ಲದೆ ಅಂದಿನ ಸೈನಿಕ ಸಂಘಟನೆಯ ರೀತಿ ನೀತಿಗಳನ್ನು ಅರಿಯಬಹುದಾಗಿದೆ. ಇಲ್ಲಿನ ಶಿಲ್ಪಗಳು ಒಂದೇ ರೀತಿಯಾಗಿಲ್ಲದ ಕಾರಣ ಪ್ರಾದೇಶಿಕ ಶಿಲ್ಪ ವೈವಿಧ್ಯತೆಯನ್ನು ಇಲ್ಲಿ ಕಾಣಬಹುದು. ಇವುಗಳು ಸ್ಥಳೀಯ ಮೂರ್ತಿ ಶಿಲ್ಪಗಳ ಮೇಲೆ ಬೀರಿದ ಪ್ರಭಾವವನ್ನು ಇಲ್ಲಿನ ದೇವಾಲಯದ ವಿಭಿನ್ನ ಭಾಗಗಳಲ್ಲಿ ಕೆತ್ತಿದ ಶಿಲ್ಪಗಳಿಂದ ಗುರುತಿಸಬಹುದಾಗಿದೆ.

ಕಾಲದಿಂದ ಕಾಲಕ್ಕೆ ಮೂರ್ತಿ ಶಿಲ್ಪದಲ್ಲಾದ ಬೆಳವಣಿಗೆಯ ಹಂತಗಳನ್ನು ಈ ಸ್ಮಾರಕ ಶಿಲ್ಪಗಳಿಂದ ಗುರುತಿಸುವುದಷ್ಟೇ ಅಲ್ಲದೆ ಆಗಿನ ಕಾಲದ ಜನರ ಉಡುಪು (ಈಗಲೂ), ಹಾಕಿಕೊಳ್ಳುತ್ತಿದ್ದ ಆಭರಣಗಳು ಇತ್ಯಾದಿಗಳನ್ನು ಗುರುತಿಸಬಹುದು. ಇದರ ಜೊತೆಯಲ್ಲಿ ಅಂದು ಪ್ರಧಾನವಾಗಿ ಆಚರಿಸಲ್ಪಡುತ್ತಿದ್ದ ದೇವಾನು ದೇವತೆಗಳನ್ನು ಇಲ್ಲಿ ಕೆತ್ತಲ್ಪಟ್ಟಿರುವ ಶಿಲ್ಪಗಳಿಂದ ಅರಿಯಬಹುದು.

6 Chapter

**ಕೊನೆ ಟಿಪ್ಪಣಿಗಳು**

೧. ತಿಪ್ಪೇರುದ್ರಸ್ವಾಮಿ., ೨೦೦೦, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು .ಸಂ. ೨೭೮
೨. ಅದೇ.,
೩. ದೇವರಕೊಂಡಾ ರೆಡ್ಡಿ., ೧೯೯೭, ತಲಕಾಡಿನ ಗಂಗರ ದೇವಾಲಯಗಳು, ಪು.ಸಂ.೭೬
೪. ರಾಮಚಂದ್ರರಾವ್ ಎಸ್.ಕೆ., ೧೮೯೬, ವಾಸ್ತು, ಪು.ಸಂ.೩೪
೫. ತಿಪ್ಪೇಸ್ವಾಮಿ ಎಚ್., ೨೦೧೪, ದಾವಣಗೆರೆ ದೇವಾಲಯಗಳು, ಪು.ಸ.೧೮೬
೬. ಅದೇ
೭. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.ಸಂ.೩೪-೩೭
೮. ಅದೇ.,
೯. ಅದೇ.,
೧೦. ಕುಂಬಾರ ರಮೇಶ., ೨೦೧೨, ತೇರದಾಳ ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಪು. ಸ. ೧೫೧-೧೭೦
೧೧. ಅಣ್ಣಿಗೇರಿ ಎ.ಎಂ., ೧೯೮೦, ಬಿಜಾಪೂರ ಶಿಲ್ಪಕಲಾ ವೈಭವ, ಪು. ಸ. ೮೭ ಮತ್ತು ಕೊಪ್ಪಾ ಎಸ್. ಕೆ., ೧೯೯೦, ತರ್ದವಾಡಿ ನಾಡು,
೧೨. ತಿಪ್ಪೇಸ್ವಾಮಿ ಎಚ್., ೨೦೧೪, ಪೂರ್ವೋಕ್ತ., ಪು. ಸಂ. ೧೮೬
೧೩. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ., ಪು. ಸಂ. ೩೭-೩೯
೧೪. ಅದೇ.,
೧೫. ಅದೇ.,
೧೬. ತಿಪ್ಪೇರುದ್ರಸ್ವಾಮಿ., ೨೦೦೦, ಪೂರ್ವೋಕ್ತ., ಪು. ಸಂ. ೨೯೮
೧೭. ಅದೇ., ಪು. ಸಂ.೨೯೮-೩೨೦
೧೮. ಅರ್ಪಣ ಕೂ.ಸ., ೧೯೯೮, ದೇವಾಲಯ ವಾಸ್ತು, ಪು. ಸಂ. ೨೮
೧೯. ಅದೇ.,
೨೦. ಕುಂಬಾರ ರಮೇಶ., ಪೂರ್ವೋಕ್ತ, ಪು. ಸಂ. ೧೬೮-೧೮೦
೨೧. ಅದೇ.,
೨೨. ಮಟೋಳಿ ಎಸ್.ಬಿ., ೨೦೦೧, ದಕ್ಷಿಣ ಸಂಸ್ಥಾನಗಳ ಇತಿಹಾಸ ದರ್ಶನ. ಪು. ಸಂ. ೧೫
೨೩. ಅದೇ
೨೪. ಮಟೋಳಿ ಎಸ್.ಬಿ., ೧೯೯೯, ಜಮಖಂಡಿ ದರ್ಶನ., ಪು. ಸಂ.೧೯
೨೫. ಬುದ್ಧಯಸ್ವಾಮಿ ಪುರಾಣಿಕ., (ಸಂ), ಶ್ರೀ ಮದನಾದಿ ಶ್ರೀ ಅಲ್ಲಮಪ್ರಭು, ಪು. ಸಂ. ೩೬
೨೬. ಅದೇ.,
೨೭. ಕುಂಬಾರ ರಮೇಶ., ಪೂರ್ವೋಕ್ತ., ಪು. ಸಂ. ೧೬೮-೧೮೦
೨೮. ಅದೇ.,
೨೯. ಪದ್ಮನಾಭ ಪುರೋಹಿತ್ (೬೫) ತೇರದಾಳ ಇವರು ನೀಡಿದ ಮಾಹಿತಿ

೩೦. ರಾಮಚಂದ್ರರಾವ್ ಎಸ್.ಕೆ., ೧೯೯೭, ಮೂರ್ತಿಶಾಸ್ತ್ರದ ನೆಲೆ ಒನ್ನೆಲೆ, ಪು. ಸಂ. ೩೭-೩೯

೩೧. ಅದೇ.,

೩೨. ರಾಜರಾಂಹೆಗಡೆ, ೧೯೯೭, ಹೊಸತು, ಪು. ಸಂ. ೧೩-೧೫

೩೩. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ., ಪು. ಸ. ೩೭

೩೪. ಅದೇ.,

೩೫. ಅದೇ.,

೩೬. ಅದೇ.,

೩೭. ಅದೇ.,

೩೮. ರಾಜರಾಂಹೆಗಡೆ., ಪೂರ್ವೋಕ್ತ., ಪು. ಸಂ. ೧೩-೧೫

೩೯. ಅದೇ.,

೪೦. ಚಿದಾನಂದ ಮೂರ್ತಿ, ೨೦೦೦, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ಸಂ. ೧೨೬

೪೧. ಶೇಷಶಾಸ್ತ್ರಿ, ೨೦೦೦, ಕರ್ನಾಟಕದ ವೀರಗಲ್ಲುಗಳು, ಪು. ಸಂ. ೮೯

೪೨. ಅದೇ.,

# ಅಧ್ಯಾಯ-೭

# ತೇರದಾಳ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟ

**ಅಧ್ಯಾಯ-೭: ತೇರದಾಳ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟ**

೭.೧. ಸ್ವಾತಂತ್ರ್ಯ ಹೋರಾಟದ ಮಹತ್ವ

೭.೨. ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು

೭.೩ ಸ್ವಾತಂತ್ರ್ಯೋತ್ತರ ರಾಜಕೀಯ ಸ್ಥಿತಿಗತಿಗಳು

**ಅಧ್ಯಾಯ-೭ ತೇರದಾಳ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟ**

ಆಂಗ್ಲರ ದಬ್ಬಾಳಿಕೆ ಶೋಷಣೆಯ ಪ್ರಭುತ್ವದ ವಿರುದ್ಧ ಭಾರತದಾದ್ಯಂತ ಉಗ್ರ ಪ್ರತಿಭಟನೆ ವ್ಯಕ್ತವಾಯಿತು. ಅನೇಕರು ಬ್ರಿಟಿಷರ ಲಾಠಿ-ಬಂದೂಕುಗಳಿಗೆ ಹೆದರದೆ ಎದೆಯೊಡ್ಡಿ ನಿಂತು ಸ್ವಾತಂತ್ರ್ಯದ ಕಹಳೆಯನ್ನು ಊದಿದರು. ದರ್ಪಿಷ್ಟ ಪ್ರಭುಗಳ ವಿರುದ್ಧ ಸಿಡಿಲಿನಂತೆ ಘರ್ಜಿಸುತ್ತಲೆ ರಾಷ್ಟ್ರಕ್ಕಾಗಿ ತಮ್ಮ ಪ್ರಾಣವನ್ನೇ ಬಲಿಕೊಟ್ಟ ಅನೇಕ ಸ್ವಾತಂತ್ರ್ಯ ಹೋರಾಟಗಾರರು ನಮಗೆ ವೀರ ಯೋಧರಂತೆ ಕಂಡು ಬರುತ್ತಾರೆ. ಫರಂಗಿಯರ ಆಡಳಿತವನ್ನು ಕೊನೆಗಾಣಿಸಬೇಕೆಂಬ ಹಂಬಲದಿಂದ ಹೋರಾಡಿದ ಅನೇಕ ಸ್ವಾತಂತ್ರ್ಯ ಹೋರಾಟಗಾರರು ತೇರದಾಳ ಭಾಗದಲ್ಲಿದ್ದು, ಅವರು ದೇಶದ ಸ್ವಾತಂತ್ರ್ಯಕ್ಕಾಗಿ ಮಡಿದ ಅಸಂಖ್ಯಾತ ಹೋರಾಟಗಳು ಚರಿತ್ರೆಯಲ್ಲಿ ವ್ಯವಸ್ಥಿತವಾಗಿ ದಾಖಲಾಗಿಲ್ಲ. ಈ ಹಿನ್ನೆಲೆಯಲ್ಲಿ ಆ ಕುರಿತ ಅಧ್ಯಯನ ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ತೇರದಾಳ ಭಾಗದ ಹೋರಾಟವನ್ನು ಈ ಮುಂದಿನಂತೆ ದಾಖಲಿಸಲಾಗಿದೆ.

ಆಂಗ್ಲರ ವಿರುದ್ಧ ಪ್ರಾರಂಭವಾದ ೧೮೫೭ರ (ಬಂಡಾಯ) ಸ್ವಾತಂತ್ರ್ಯ ಸಂಗ್ರಾಮವು ಮೇಲ್ನೋಟಕ್ಕೆ ದಮನಗೊಂಡಂತೆ ಗೋಚರಿಸಿದರೂ ಅದು ಆಂತರಿಕವಾಗಿ ಭಾರತೀಯರಲ್ಲಿ ಬ್ರಿಟಿಷ ವಿರೋಧಿ ಭಾವನೆಗಳು ಮತ್ತಷ್ಟು ಉಲ್ಬಣಗೊಳಿಸಿತು. ಅದು ಇತರೆಡೆಯಂತೆ ಜಮಖಂಡಿ ಮತ್ತು ಅದರ ಸುತ್ತಲಿನ ತೇರದಾಳ ಭಾಗದ ಜನರಲ್ಲಿದ್ದ ಸ್ವಾತಂತ್ರ್ಯದ ಕಿಚ್ಚನ್ನು ಮತ್ತಷ್ಟು ಅಧಿಕಗೊಳಿಸಿತು. ಮುಂಬೈ, ಪುಣೆ, ಕಲಕತ್ತಾ, ನಗರಗಳಲ್ಲಿ ಕ್ರಾಂತಿಕಾರಕ ಸಂಘಟನೆಗಳು, ರಾಷ್ಟ್ರೀಯ ಚಟುವಟಿಕೆಗಳು ಗುಪ್ತ ರೀತಿಯಿಂದ ನಡದೆ ಇದ್ದವು. ಬ್ರಿಟಿಷರು ಆಡಳಿತದ ಅನುಕೂಲತೆಗಾಗಿ ಕಲ್ಪಿಸಿದ ಶಿಕ್ಷಣ ಪದ್ಧತಿ, ರೂಪಿಸಿದ ಸಾರಿಗೆ ಸಂಪರ್ಕಗಳ ವ್ಯವಸ್ಥೆ ಒಂದೇ ಬಗೆಯ ಆಡಳಿತದ ವಿಧಾನ ಒಂದೇ ಬಗೆಯ ಕಾಯ್ದೆ ಕಾನೂನುಗಳ ವ್ಯವಸ್ಥೆಯು ಅಪ್ರತ್ಯಕ್ಷವಾಗಿ ಭಾರತೀಯರಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಸ್ವಾತಂತ್ರ್ಯದ ದಾಹವನ್ನು ಹೆಚ್ಚಿಸುವಲ್ಲಿ ನೆರವಾದವು. ಅದರಲ್ಲಿ ಆಂಗ್ಲ ಶಿಕ್ಷಣವನ್ನು ಪಡೆದುಕೊಂಡು ತರುಣ ಭಾರತೀಯರು ಜನಸಾಮಾನ್ಯರಿಗೆ ಪ್ರಾಚೀನ ಭಾರತದ ಸಂಸ್ಕೃತಿಯ ವೈಭವವನ್ನು ತಿಳಿಸಿಕೊಟ್ಟರಲ್ಲದೆ ಸನಾತನ ಹಿಂದು ಧರ್ಮದಲ್ಲಿದ್ದ ಅನಿಷ್ಠ ಪದ್ಧತಿಗಳನ್ನು ಹೋಗಲಾಡಿಸಿ ಪ್ರಗತಿಪರವಾದ ಸಮಾಜವನ್ನು ಕಟ್ಟಲು ಕಂಕಣಬದ್ಧರಾದರು. ಇದೇ ಸಮಯದಲ್ಲಿ ಆರ್ಯ ಸಮಾಜ, ಬ್ರಹ್ಮ ಸಮಾಜ, ಪ್ರಾರ್ಥನಾ ಸಮಾಜ, ಥಿಯಾಸೋಫಿಕಲ್ ಸೊಸಾಯಿಟಿ, ರಾಮಕೃಷ್ಣ ಮಿಶನ್ ಮೊದಲಾದ ಸಾಮಾಜಿಕ ಸಂಘಟನೆಗಳು ದೇಶದಲ್ಲೆಡೆ ಸ್ಥಾಪಿಸಿಲ್ಪಟ್ಟಂತೆ ಅದರ ಶಾಖೆಗಳು ಈ ಭಾಗದಲ್ಲಿಯೂ ಅಧಿಕ ಸಂಖ್ಯೆಯಲ್ಲಿ ಆರಂಭವಾದವು. ಅವು ಜನರಲ್ಲಿ ಸುಪ್ತವಾಗಿದ್ದ ಮನಸ್ಸನ್ನು ಜಾಗೃತಿಗೊಳಿಸಿದವು.

ಕ್ರಿ.ಶ.೧೮೨೮ ರಲ್ಲಿ ರಾಜಾರಾಮ ಮೋಹನರಾಯ ಬ್ರಹ್ಮ ಸಮಾಜವನ್ನು ಸ್ಥಾಪಿಸಿದರೆ, ಕ್ರಿ.ಶ.೧೮೭೯ ರಲ್ಲಿ ಹಿಂದೂ ಸಮಾಜದ ಸುಧಾರಣೆಯ ಹರಿಕಾರರಾದ ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆಯವರು ಹಿಂದು ಸಮಾಜವು ಸುಧಾರಣೆಯಾಗದ ಹೊರತು ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆಯು ಮೂಡಿಬರಲಾರದೆಂದು ಘೋಷಿಸಿ ಪುಣೆಯಲ್ಲಿ "ಸಾರ್ವಜನಿಕ ಸಭೆಯ"ನ್ನು ಸ್ಥಾಪಿಸಿದರು. ಅದರಂತೆ ಇನ್ನೋರ್ವ ನ್ಯಾಯವಾದಿಗಳಾದ ಗಣೇಶ ವಾಸುದೇವ ಜೋಶಿ ಖಾದಿಧಾರಿಗಳಾಗಿದ್ದು ಸ್ವದೇಶಿ ವಸ್ತುಗಳ ಬಳಕೆಯ ಪ್ರಚಾರದಲ್ಲಿ ತೊಡಗಿದ್ದರು. ಸಾರ್ವಜನಿಕವಾಗಿ ಕಾಕಾ ಎಂದೇ ಪ್ರಸಿದ್ಧರಾದ ಇವರು "ಸಾರ್ವಜನಿಕ ಸಭಾ"ದ ಕಾರ್ಯದರ್ಶಿಗಳಾಗಿದ್ದರು. ಇವರ ಶಿಷ್ಯರಾದ ವಾಸುದೇವ ಬಲವಂತ

ಫಡಕೆಯವರು ಕ್ರಿ.ಶ.೧೮೭೭ರ ಕ್ಷಾಮದ ಭೀಕರತೆಯಿಂದ ನೊಂದು ಹತಾಶರಾಗಿದ್ದ ಜನತೆಯ ಅಸಹಾಯಕತೆಯ ಕುರಿತು ಬ್ರಿಟಿಷರ ವಿರುದ್ಧ ಕ್ರೋಧಿತರಾದರು. ಇವರು ಬ್ರಿಟಿಷರ ವಿರುದ್ಧ ಕ್ರಾಂತಿಕಾರಕ ಚಟುವಟಿಕೆಗಳನ್ನು ಪ್ರಾರಂಭಿಸಿದ್ದರಿಂದ ಆಂಗ್ಲರು ಇವರನ್ನು ಬಂಧಿಸಿ ಅಜೀವ ಕಾರಾಗೃಹದ ಶಿಕ್ಷೆಯನ್ನು ವಿಧಿಸಿ "ಎಡನ್" ಜೈಲಿನಲ್ಲಿರಿಸಿದಾಗ ಅಲ್ಲಿಯೇ ಮರಣ ಹೊಂದಿದರು. ಮುಂಬೈಯಲ್ಲಿ ಸ್ಥಾಪಿಸಿದ "ಪ್ರಾರ್ಥನಾ ಸಮಾಜ" ಮತ್ತು "ಸಾರ್ವಜನಿಕ ಸಭಾ", ಪುಣೆಯಲ್ಲಿ ಸ್ಥಾಪಿಸಿದ ಡೆಕ್ಕನ್ ಶಿಕ್ಷಣ ಸಂಸ್ಥೆ, ಧಾರವಾಡದಲ್ಲಿ ಸ್ಥಾಪಿಸಿದ ವಿದ್ಯಾವರ್ಧಕ ಸಂಘ, ಬೆಳಗಾವಿಯ ಕೆ.ಎಲ್.ಇ. ಸಂಸ್ಥೆ ಮೊದಲಾದ ಸಂಸ್ಥೆಗಳು ಜಮಖಂಡಿ ಮತ್ತು ಅದರ ಸುತ್ತಲಿನ ತೇರದಾಳ ಭಾಗದ ಜನರಿಗೆ ಶಿಕ್ಷಣವನ್ನು ಒದಗಿಸುವ ಮಹತ್ ಕಾರ್ಯವನ್ನು ಎಸಗಿದವು ಈ ಎಲ್ಲಾ ಪ್ರೇರಪಣೆಯಿಂದಾಗಿ ತೇರದಾಳ ಮತ್ತು ಅದರ ಸುತ್ತಮುತ್ತಲಿನ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಅಣಿಯಾದರು[೧].

ದೇಶವನ್ನು ಆಂಗ್ಲರ ಕಪಿಮುಷ್ಠಿಯಿಂದ ಬಿಡಿಸಬೇಕೆಂಬ ಸದಾಶಯದಿಂದ ಕ್ರಿ.ಶ. ೧೮೮೫ ರಲ್ಲಿ ಸರ್.ಎ.ಓ. ಹ್ಯೂಮರ ಸಲಹೆಯಂತೆ ಮುಂಬೈಯಲ್ಲಿ ರಾಷ್ಟ್ರೀಯ ಕಾಂಗ್ರೇಸ್ ಸಂಸ್ಥೆಯು ಸ್ಥಾಪಿಸಲ್ಪಟ್ಟಿತು. ಇದರ ಪ್ರಥಮ ಅಧಿವೇಶನಕ್ಕೆ ಉತ್ತರ ಕರ್ನಾಟಕದಿಂದ ಮತ್ತು ತೇರದಾಳ ಪ್ರದೇಶದಿಂದ ಕೆಲವು ಪ್ರತಿನಿಧಿಗಳು ಹೋಗಿದ್ದರು. ಕ್ರಿ.ಶ.೧೮೯೫ ರಲ್ಲಿ ಎ.ಓ.ಹ್ಯೂಮರು ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಸಂಚರಿಸಿ ಕಾಂಗ್ರೇಸ್ ಸಂಸ್ಥೆಯ ಧ್ಯೇಯ-ಧೋರಣೆಗಳನ್ನು ಜನರಲ್ಲಿ ಪ್ರಚಾರ ಮಾಡಿದರು. ಇದರಿಂದ ಈ ಭಾಗದ ಸಾರ್ವಜನಿಕರಲ್ಲಿ ರಾಷ್ಟ್ರೀಯ ಜಾಗೃತಿಯುಂಟಾಯಿತು. ಇದೇ ಸಮಯದಲ್ಲಿ ರಾಷ್ಟ್ರೀಯ ಆಂದೋಲನದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆ, ಗೋಪಾಲ ಕೃಷ್ಣ ಗೋಖಲೆ, ಸುರೇದ್ರನಾಥ ಬ್ಯಾನರ್ಜಿ, ಫಿರೋಜ ಶಹಾ ಮೆಹತಾ, ಲೋಕಮಾನ್ಯ ತಿಲಕ, ಬಿಪಿನ್ ಚಂದ್ರಪಾಲ, ಲಾಲಾ ಲಜಪತರಾಯ್, ಅರವಿಂದ ಘೋಷ ಮೊದಲಾದ ನಾಯಕರು ಜನತೆಯಲ್ಲಿನ ರಾಷ್ಟ್ರಪ್ರೇಮವನ್ನು ಮತ್ತಷ್ಟು ಜಾಗೃತಗೊಳಿಸಿದರು. ಕ್ರಿ.ಶ.೧೮೮೧ ರಲ್ಲಿ ತಿಲಕರು ಹೊರಡಿಸಿದ ಕೇಸರಿ ಮತ್ತು ಮರಾಠಾ ಪತ್ರಿಕೆಗಳು ಮಹಾರಾಷ್ಟ್ರ ಹಾಗೂ ಮುಂಬೈ ಕರ್ನಾಟಕದ ಪ್ರಾಂತದ ಈ ಭಾಗದಲ್ಲಿಯೂ ಜನಪ್ರಿಯ ಪತ್ರಿಕೆಗಳಾಗಿ ಜನರಲ್ಲಿ ಅತೀವ ಜಾಗೃತಿಯನ್ನುಂಟುಮಾಡಿದವು. ಇದರ ಪರಿಣಾಮವಾಗಿ ಅಸಂಖ್ಯಾತರು ದೇಶ ಸೇವೆಗಾಗಿ ಮುಂದಾದರು. ಈ ಹಿನ್ನೆಲೆಯಲ್ಲಿ ತೇರದಾಳ ಪರಿಸರದಲ್ಲಿ ನಡೆದ ಪ್ರಮುಖ ಹೋರಾಟಗಳು ಮತ್ತು ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೭.೧. ಸ್ವಾತಂತ್ರ್ಯ ಹೋರಾಟದ ಮಹತ್ವ**

ಕ್ರಿ.ಶ.೧೮೯೩ ರಲ್ಲಿ ಬೆಳಗಾವಿಯಲ್ಲಿಯ ಮುಂಬೈ ಕರ್ನಾಟಕ ಪ್ರಾಂತೀಯ ರಾಜಕೀಯ ಸಮ್ಮೇಳನವು ಸೇರಿತ್ತು. ಇದರಲ್ಲಿ ತೇರದಾಳ ಮತ್ತು ಜಮಖಂಡಿಯ ಕಾರ್ಯಕರ್ತರು ಭಾಗವಹಿಸಿದ್ದರು. ಕ್ರಿ.ಶ. ೧೯೦೩ರಲ್ಲಿ ಇದರ ಎರಡನೇ ಅಧಿವೇಶನವು ಧಾರವಾಡದಲ್ಲಿ ಸೇರಿತ್ತು. ಇದರ ಅಧ್ಯಕ್ಷತೆಯನ್ನು ಫಿರೋಜಶಹಾ ಮೆಹತಾ ಅವರು ವಹಿಸಿದ್ದರು. ಇದರಲ್ಲಿ ಬಹುಸಂಖ್ಯಾತ ಕನ್ನಡಿಗರು ಭಾಗವಹಿಸಿದ್ದರು. ಇಲ್ಲಿಂದಲೇ ಮುಂದೆ ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮವು ಪ್ರಾರಂಭವಾಯಿತು. ಇದರ ಪ್ರಭಾವವು ಉತ್ತರ ಕರ್ನಾಟಕದ ಜಮಖಂಡಿ ಮತ್ತು

ವಿಜಾಪುರ, ಬೆಳಗಾವಿ, ಧಾರವಾಡದ ಭಾಗಗಳು, ಮುಂಬೈ ಪ್ರಾಂತದ, ಬೆಳಗಾವಿಯ ಗಂಗಾಧರರಾವ್ ದೇಶಪಾಂಡೆ, ವಿಜಾಪುರದ ಕೌಜಲಗಿ ಶ್ರೀನಿವಾಸರಾವ್, ಜಯರಾವ್ ದೇಶಪಾಂಡೆ, ಆಲೂರ ವೆಂಕಟರಾಯರು ಇದೇ ವೇಳೆಗೆ ಪುಣೆಗೆ ವ್ಯಾಸಂಗಕ್ಕಾಗಿ ಬಂದು ಅಲ್ಲಿಯ "ಶಿವಾಜಿ ಕ್ಲಬ್", "ವಿದ್ಯಾವರ್ಧಿನಿ ಸಭೆ" ಮುಂತಾದ ಸಂಘಟನೆಗಳು ಕೈಕೊಂಡ ರಾಜಕೀಯ ಚಟುವಟಿಕೆಗಳ ಪ್ರಭಾವಕ್ಕೊಳಗಾಗಿ ರಾಷ್ಟ್ರೀಯ ಆಂದೋಲನದಲ್ಲಿ ತೊಡಗಿದರು. ಕ್ರಿ.ಶ.೧೯೦೫-೦೬ ರಲ್ಲಿ ತಿಲಕರು ಉತ್ತರ ಕರ್ನಾಟಕದಲ್ಲಿ ಸಂಚರಿಸಿ ತಮ್ಮ ವಿದ್ವತ್ಪೂರ್ಣವಾದ ಭಾಷಣ ಮಾಡಿ ಜನರಲ್ಲಿ ಬ್ರಿಟೀಷ ವಿರೋಧಿ ಭಾವನೆಯು ಬೆಳೆಯುವಂತೆ ಮಾಡಿದರು[೨]. ಕೇಸರಿ ಮತ್ತು ಮರಾಠಾ ಪತ್ರಿಕೆಗಳನ್ನು ಕನ್ನಡದಲ್ಲಿ ಅನುವಾದ ಮಾಡಿದ ಪ್ರತಿಗಳನ್ನು ಹಂಚಿದರು. ಇದರ ಪ್ರಭಾವವು ಜಮಖಂಡಿ ಮತ್ತು ತೇರದಾಳ ಭಾಗದ ಜನರ ಮೇಲಾಗಿ ಆಂಗ್ಲ ವಿರೋಧಿ ಚಟುವಟಿಕೆಗಳು ಅಧಿಕವಾಗಿ ಪ್ರಾರಂಭವಾದವು ಅವುಗಳಲ್ಲಿ ಪ್ರಮುಖವಾದವುಗಳು ಇಂತಿವೆ.

**ಬಂಗಾಲ ವಿಭಜನೆಯ ವಿರೋಧಿ ಚಳುವಳಿ (೧೯೦೫)**

ಕ್ರಿ.ಶ. ೧೯೦೫ ರಲ್ಲಿ ಲಾರ್ಡ್ ಕರ್ಜನ್‌ನನ್ನು ವಿಶಾಲವಾದ ಬಂಗಾಲ ಪ್ರಾಂತವನ್ನು ಜಾತಿಯ ಆಧಾರದ ಮೇಲೆ ವಿಭಾಗಿಸಿ ಹಿಂದೂ ಮುಸ್ಲಿಂರಲ್ಲಿದ್ದ ಸೌಹಾರ್ದತೆಯನ್ನು ಕದಡಿಸಿದನು. ಇದರಿಂದ ರೊಚ್ಚಿಗೆದ್ದ ಜನತೆ "ಬಂಗಾಲ ವಿಭಜನೆಯ" ವಿರುದ್ಧ ಉಗ್ರ ಚಳುವಳಿಯನ್ನು ಪ್ರಾರಂಭಿಸಿದರು. (ವಂಗ-ಭಂಗ ಚಳುವಳಿ) ಈ ಚಳುವಳಿಯು ಇಡೀ ದೇಶದಾದ್ಯಂತ ಹರಡಿ ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವುದು, ಮಾರಕವಾದ ಅಸ್ತ್ರಗಳನ್ನು ಸಂಗ್ರಹಿಸುವುದು, ಹಿಂಸಾತ್ಮಕವಾದ ಕಾರ್ಯದಲ್ಲಿ ತೊಡಗುವುದು ಇವೇ ಮೊದಲಾದ ಕ್ರಾಂತಿಕಾರಕ ಚಟುವಟಿಕೆಗಳು ಬಂಗಾಲ ಪ್ರಾಂತದಲ್ಲಿ ಅಷ್ಟೇ ಏಕೆ ಇಡೀ ದೇಶದ ವಿವಿಧ ಪ್ರಾಂತಗಳಲ್ಲಿ ಮತ್ತು ದೇಶಿ ಸಂಸ್ಥಾನಗಳಲ್ಲಿಯೂ ಸಹ ಪ್ರಾರಂಭವಾದವು. ಆಗ ತೇರದಾಳ ಸಮೀಪದ ಜಮಖಂಡಿ ಸಂಸ್ಥಾನದಲ್ಲಿ ದಾಮೋದರ, ಶಂಕರರಾವ್ ಉರ್ಫ್ ಕಾಕಾ ಕಾರಖಾನೀಸ, ಅನಂತರರಾವ್ ಜೋಶಿ, ಬಾಬುರಾವ್ ಮಹೀಸಕರ, ಬಂಡೋಪಂತ ವಾಟವೆ, ವಿಠ್ಠಲರಾವ್ ಕೊಲ್ಹಾಟಕರ ಮೊದಲಾದವರು ಪಿ.ಬಿ. ಹೈಸ್ಕೂಲಿನ ವಿದ್ಯಾರ್ಥಿಗಳಾಗಿದ್ದು, ಬಂಗಾಲ ವಿಭಜನೆಯ ವಿರುದ್ಧ ಜಮಖಂಡಿಯಲ್ಲಿ ಉಗ್ರ ಚಳುವಳಿಯನ್ನು ಪ್ರಾರಂಭಿಸಿದರು. ವಿದ್ಯಾರ್ಥಿಗಳ ಗುಂಪು ನಗರದ ಮುಖ್ಯ ಬೀದಿಗಳಲ್ಲಿ ಪ್ರಭಾತ ಫೇರಿಯಲ್ಲಿ ತಿರುಗಿ ಜನರಿಂದ "ಮುಷ್ಟಿ ಫಂಡ"ನ್ನು ಕೂಡಿಸಿ ಬಂದ ಹಣವನ್ನು ವಂಗ-ಭಂಗ ಚಳವಳಿಯಲ್ಲಿ ನೊಂದವರಿಗೆ ಪರಿಹಾರವೆಂದು ಕಳುಹಿಸಿಕೊಡಲಾಯಿತ್ತು[೩]. ಕರ್ನಾಟಕದ ಪ್ರಮುಖ ಸ್ಥಳಗಳಾದ ಹುಬ್ಬಳ್ಳಿ, ಧಾರವಾಡ, ಬೆಳಗಾಂವ, ಕಿತ್ತೂರ, ಬಾಗಲಕೋಟೆ, ಜಮಖಂಡಿ, ಗದಗ, ಅಳ್ನಾವರ ಮೊದಲಾದ ಕಡೆಗಳಲ್ಲಿ ಬಂಗಾಲ ವಿಭಜನೆಯ ವಿರುದ್ಧ ಜನತೆಯ ಪ್ರತಿಭಟನೆಗಳಾದವು. ಕ್ರಿ.ಶ. ೧೯೦೭ ರಲ್ಲಿ ಬೆಳಗಾವಿಯಲ್ಲಿ ಸರಾಯಿ ಅಂಗಡಿಯ ಮುಂದೆ ಪಿಕೆಟಿಂಗ್ ಮಾಡಿದ್ದಕ್ಕಾಗಿ ಯಾಳಗಿ, ಡಾ.ಜೋಶಿ ಮತ್ತಿತ್ತರ ೧೩ ಜನರನ್ನು ಬಂಧಿಸಲಾಯಿತು.

ದೇಶದಲ್ಲಿ ಸ್ವದೇಶಿ ಚಟುವಟಿಕೆಯು ಪ್ರಾರಂಭವಾದ ಸಮಯದಲ್ಲಿ ಜಮಖಂಡಿಯಲ್ಲಿ ನಡೆದ ಒಂದು ಘಟನೆಯು ವಿದ್ಯಾರ್ಥಿಗಳ ದೇಶಾಭಿಮಾನವನ್ನು ಎತ್ತಿ ತೋರಿಸುತ್ತದೆ. ಅದೇನೆಂದರೆ (ಪಟವರ್ಧನ) ಸಂಸ್ಥಾನಿಕರ ಕುಟುಂಬದ ಸದಸ್ಯನೊಬ್ಬ ಕೃಷ್ಣಾ ನದಿಗೆ ಸ್ನಾನಕ್ಕಾಗಿ ಹೋದ ಸಮಯದಲ್ಲಿ ತನ್ನ ಕೈಯಲ್ಲಿದ್ದ ರತ್ನದ ಉಂಗುರವನ್ನು

ಕಳೆದುಕೊಂಡನಂತೆ. ಆಗ ರಾಜಾಸಾಹೇಬರು ಆ ಉಂಗುರವನ್ನು ಹುಡುಕಿ ಕೊಟ್ಟವರಿಗೆ ಯೋಗ್ಯವಾದ ಬಹುಮಾನವನ್ನು ಕೊಡುವುದಾಗಿ ಘೋಷಿಸಿದರಂತೆ. ಆಗ ಒಬ್ಬ ಯುವಕನು ನದಿಯಲ್ಲಿ ಮುಳುಗಿ ಆ ಬೆಲೆಯುಳ್ಳ ಉಂಗುರವನ್ನು ಹುಡುಕಿ ಕೊಟ್ಟನಂತೆ ಅದರಿಂದ ಸಂತೋಷಭರಿತರಾದ ರಾಜರು ಅವನಿಗೆ ಯೋಗ್ಯವಾದ ಬಹುಮಾನವನ್ನು ಕೊಟ್ಟು ಗೌರವಿಸಿದರಲ್ಲದೆ ಅವನ ಪ್ರಾಮಾಣಿಕತನವನ್ನು ಮೆಚ್ಚಿಕೊಂಡರು. ಆ ತರುಣನು ರಾಜರು ಕೊಟ್ಟ ಬಹುಮಾನದ ಹಣವನ್ನು ಬಂಗಾಲ ಚಳುವಳಿಯಲ್ಲಿ ನೊಂದವರಿಗೆ "ಪರಿಹಾರ ಧನ"ವೆಂದು ಕಳಿಸಿ ತನ್ನ ದೇಶಾಭಿಮಾನವನ್ನು ಪ್ರದರ್ಶಿಸಿದ್ದುಂಟು. ಅದರಂತೆ ತೇರದಾಳದ ಸುತ್ತಲಿನ ಅನೇಕ ಜನ ವಿದ್ಯಾರ್ಥಿಗಳು ತಮ್ಮ ಶಾಲೆಗಳನ್ನು ತೊರೆದು ರಾಷ್ಟ್ರೀಯ ಹೋರಾಟದಲ್ಲಿ (ಚಳುವಳಿಯಲ್ಲಿ) ತೊಡಗಿ ತಮ್ಮ ದೇಶಾಭಿಮಾನವನ್ನು ಪ್ರಕಟಿಸಿದ್ದನ್ನು ಇಂದು ಸ್ಮರಿಸಬಹುದು.

**ಸ್ವದೇಶಿ ಆಂಧೋಲನ-೧೯೦೬**

ಕ್ರಿ.ಶ. ೧೯೦೬ ರಲ್ಲಿ ಕಾಂಗ್ರೇಸ್ ಸ್ವದೇಶಿ ಆಂದೋಲನವನ್ನು ಪ್ರಾರಂಭಿಸಿತು. ಕ್ರಿ.ಶ. ೧೯೦೬ ರಲ್ಲಿ ಕಲಕತ್ತಾದಲ್ಲಿ ಸಮಾವೇಶಗೊಂಡ ಕಾಂಗ್ರೇಸ್ ಅಧಿವೇಶನದಲ್ಲಿ ಕಾಂಗ್ರೇಸ್ ಸ್ವರಾಜ್ಯ, ಸ್ವದೇಶಿ ವಸ್ತುಗಳ ಬಳಕೆ, ವಿದೇಶಿ ವಸ್ತುಗಳ ಬಹಿಷ್ಕಾರ ಹಾಗೂ ರಾಷ್ಟ್ರೀಯ ಶಿಕ್ಷಣವನ್ನೊಳಗೊಂಡ ನಾಲ್ಕು ಪ್ರಮುಖ ಸೂತ್ರಗಳನ್ನು ಸರ್ವಾನುಮತದಿಂದ ಅಂಗೀಕರಿಸಿತು. ಅದರಂತೆ ತಿಲಕರ "ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು, ನಾನು ಅದನ್ನು ಪಡೆದೆ ತಿರುತ್ತೇನೆ." ಎಂಬುದು ಅಂದಿನ ಉದ್ಘೋಷವಾಯಿತು. ವಿದೇಶಿ ಮೂಲದ ಸಕ್ಕರೆ, ಚಹಾ, ಸೀಮೆಯ ಎಣ್ಣೆ, ಗಾಜಿನ ಬಳೆಗಳಂತಹ ವಿದೇಶಿ ವಸ್ತುಗಳು ಬಹಿಷ್ಕಾರಗೊಂಡವು. ಜನರು ವಿದೇಶಿ ವಸ್ತುಗಳನ್ನು ಬಳಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದರು. ಖಾದಿ ವಸ್ತುಗಳಿಗೆ ಹೆಚ್ಚಿನ ಬೇಡಿಕೆಯುಂಟಾಯಿತು. ಸ್ವದೇಶಿ ಅಂಗಡಿಗಳು (ಬಾಗಲಕೋಟೆಯಲ್ಲಿ) ಪ್ರಾರಂಭವಾದವು. ದೇಶಿ ಶಿಕ್ಷಣ ನೀಡುವ ರಾಷ್ಟ್ರೀಯ ಶಾಲೆಗಳು ಪ್ರಾರಂಭವಾದವು ಇದೇ ಪ್ರಸಂಗದಲ್ಲಿ ಸ್ವದೇಶಿ ಹಾಗೂ ಸ್ವರಾಜ್ಯದ ಬಗೆಗೆ ವಿಜಾಪುರ ಹಾಗೂ ಜಮಖಂಡಿ ಜನರಲ್ಲಿ ಜನಜಾಗೃತಿಯುಂಟಾಗಿ ಜಮಖಂಡಿಯ ಅನೇಕ ತರುಣರು ಪುಣೆಯ ಎಸ್. ಪಿ. ಕಾಲೇಜಿನಲ್ಲಿ ಮತ್ತು ಬಾಂಬೆ ಎಲ್‌ಫಿನ್‌ಷ್ಟನ್ ಕಾಲೇಜಿನಲ್ಲಿ ಉಚ್ಚ ಶಿಕ್ಷಣ ಪಡೆದುಕೊಂಡು ಬಂದು ಜಮಖಂಡಿ ಭಾಗದಲ್ಲಿ ಸ್ವದೇಶಿ ಚಟುವಟಿಕೆಯನ್ನು ಪ್ರಾರಂಭಿಸಿದರು. ಆಗ ವಿದ್ಯಾರ್ಥಿಗಳಾಗಿದ್ದ ಮುಧೋಳದ ಕೌಜಲಗಿ ಹಣಮಂತರಾಯರು ಹಾಗೂ ಜಮಖಂಡಿಯ ಕಾಕಾ ಕಾರಖಾನೀಸರು ಯುವ ತಂಡವನ್ನು ಕಟ್ಟಿಕೊಂಡು ಸ್ವದೇಶಿ ಚಳುವಳಿಗೆ ಪೂರಕವಾಗಿ ಪ್ರಭಾತ ಫೇರಿ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು. ವಿದೇಶಿ ವಸ್ತುಗಳ ಬಹಿಷ್ಕಾರಕ್ಕೆ ಕರೆ ನೀಡಿ ಮರ್ಮಭೇದಕ ಮರಾಠ ಪದ್ಯಗಳನ್ನು ರಚಿಸಿ ಹಾಡಲು ಕೌಜಲಗಿ ಹಣಮಂತರಾಯರು ಗೆಳೆಯರ ಬಳಗವನ್ನು ಮುಧೋಳದಲ್ಲಿ ಪ್ರಾರಂಭಿಸಿದರು. ಇವರಿಂದ ಪ್ರಭಾವಿತರಾದ ಕಾಕಾ ಕಾರಖಾನೀಸ್ ಹಾಗೂ ಕಾಳೋಪಂತ ಕುಲಕರ್ಣಿಯವರು ಜಮಖಂಡಿಯಲ್ಲಿಯೂ ಸ್ವದೇಶಿ ಚಳುವಳಿಗೆ ಮುಂದಾದರು. ಕ್ರಿ.ಶ. ೧೯೦೬ ರಲ್ಲಿ ದೀಪಾವಳಿಯ ನರಕ ಚತುರ್ಥಿಯ ದಿನ ಮುಂಜಾನೆ ಮುಧೋಳ ಹಾಗೂ ಜಮಖಂಡಿ ಶಹರಗಳ ನಾಗರಿಕರ ಮನೆಯ ಬಾಗಿಲ ಮೇಲೆ ಜಾನ್‌ಸನ್ ಸಕ್ಕರೆಯನ್ನು ಸೇವಿಸಬಾರದೆಂದು, ಮಹಿಳೆಯರು ಸ್ವದೇಶಿ ಬಳೆಗಳನ್ನೇ ಧರಿಸಬೇಕೆಂದೂ ಒತ್ತಾಯಿಸುವ ಪ್ರಕಟನಾ ಪತ್ರಗಳನ್ನು ಅಂಟಿಸಲಾಯಿತು. ಅವುಗಳನ್ನು ರಚಿಸುವಲ್ಲಿ ಬಳಸಿದ್ದ ಕಠೋರ ಪದಗಳನ್ನು ನೋಡಿ ಹೆಂಗಸರು ನಾಚಿದರೆ ಗಂಡಸರು ತಲೆ

ತಗ್ಗಿಸಿದರು. ಆರಂಭದಲ್ಲಿ ಇವು ಮುಧೋಳ, ಜಮಖಂಡಿಯಲ್ಲಿ ಪ್ರಾರಂಭವಾದರೆ ನಂತರ ಕಲ್ಲೊಳ್ಳಿ ವೆಂಕಟೇಶ್ವರ ಜಾತ್ರೆ ಹಾಗೂ ಬನಹಟ್ಟಿಯ ಜಾತ್ರೆಗಳಿಗೂ ಹಬ್ಬಿದವು. ಈ ಚಟುವಟಿಕೆಗಳು ಕ್ರಮೇಣ ಸ್ವದೇಶಿ ವಸ್ತುಗಳ ಕಡೆಗೆ ಆಕರ್ಷಿಸಲಾರಂಭಿಸಿದವು[೪].

**ಪ್ರಜಾಪರಿಷತ್ತು ಮತ್ತು ಸ್ವಾತಂತ್ರ್ಯ ಹೋರಾಟ**

ಕ್ರಿ.ಶ.೧೯೨೦ ರಲ್ಲಿ ಮಹಾತ್ಮಾ ಗಾಂಧೀಜಿಯವರು ರಾಷ್ಟ್ರೀಯ ಕಾಂಗ್ರೆಸ್ಸಿನ ಮುಖಂಡತ್ವವನ್ನು ವಹಿಸಿ ದೇಶದ ಸ್ವಾತಂತ್ರಕ್ಕಾಗಿ ಆಂಗ್ಲರ ವಿರುದ್ಧ ಹೋರಾಟಕ್ಕಿಳಿದರು. ಇವರ ಹೋರಾಟವು ಅಹಿಂಸಾತ್ಮಕವಾಗಿತ್ತು. ಗಾಂಧೀಜಿಯವರ ಕರೆಗೆ ಓಗೊಟ್ಟು ಸಮಗ್ರ ಭಾರತದ ಜನತೆ ಹೋರಾಟದಲ್ಲಿ ಪಾಲ್ಗೊಂಡಿದ್ದು ಒಂದು ವಿಶೇಷ. ಅಂದು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ಭಾರತವನ್ನು (ಪ್ರಾದೇಶಿಕ) ರಾಜಕೀಯವಾಗಿ ಅಂದು ಎರಡು ಭಾಗಗಳಲ್ಲಿ ವಿಭಾಗಿಸಲಾಗಿತ್ತು. ಪ್ರತ್ಯಕ್ಷವಾಗಿ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ಪ್ರದೇಶ ಮತ್ತು ದೇಶಿ ಸಂಸ್ಥಾನಿಕರ ಆಳ್ವಿಕೆಗೆ ಒಳಪಟ್ಟ ಪ್ರದೇಶ, ಜಮಖಂಡಿಯು ದೇಶಿ ಸಂಸ್ಥಾನಿಕರ ಆಳ್ವಿಕೆಗೆ ಒಳಪಟ್ಟ ರಾಜ್ಯವಾಗಿತ್ತು. ಕ್ರಿ.ಶ. ೧೯೨೦-೧೯೪೭ರವರೆಗೆ ಜಮಖಂಡಿ ಸಂಸ್ಥಾನವು ಸ್ವತಂತ್ರವಾಗಿರದೆ ಕೊಲ್ಲಾಪುರದ ರಾಜಕೀಯ ಏಜೆಂಟಿನ ಅಧಿಕಾರಕ್ಕೆ ಒಳಪಟ್ಟಿತ್ತು.

ದೇಶದ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರೀಯ ಕಾಂಗ್ರೆಸ್ ಎಡಬಿಡದೆ ಹೋರಾಟವನ್ನು ನಡೆಸಿದರೆ ಅದರ ಸಹೋದರ ಸಂಸ್ಥೆಯಾದ "ಪ್ರಜಾಪರಿಷತ್ತು" ದೇಶಿ ಸಂಸ್ಥಾನಗಳಲ್ಲಿ ಅದರಲ್ಲಿ ವಿಶೇಷವಾಗಿ ದಕ್ಷಿಣ ಮರಾಠಾ ರಾಜ್ಯಗಳಲ್ಲಿ ಪ್ರಜೆಗಳ ಹಕ್ಕು-ಬಾಧ್ಯತೆಗಳಿಗಾಗಿ ಮತ್ತು ದೇಶವನ್ನು ಸ್ವತಂತ್ರಕ್ಕಾಗಿ ಅದು ತನ್ನ ಹೋರಾಟವನ್ನು ಪ್ರಾರಂಭಿಸಿತ್ತು. ಅಂದು ಭಾರತದಲ್ಲಿದ್ದ ಸುಮಾರು ೫೬೨ ದೇಶಿ ಸಂಸ್ಥಾನಗಳಲ್ಲಿ ೧೮ ಸಂಸ್ಥಾನಗಳು ದಕ್ಷಿಣ ಮರಾಠಾ ರಾಜ್ಯದಲ್ಲಿದ್ದವು. ಅವುಗಳೆಂದರೆ ಕೊಲ್ಲಾಪುರ, ಅಕ್ಕಲಕೋಟ, ಔಂಧ, ಬೋರ, ಜಮಖಂಡಿ, ಜಂಜಿರಾ, ಜತ್ತ, ಕುರಂದವಾಡ (ಚಿಕ್ಕ), ಕುರಂದವಾಡ (ಹಿರಿಯ), ಮಿರಜ, ಮಿರಜ ಮಹಾಲ, ಮುಧೋಳ, ಪಲ್ಟನ್, ರಾಮದುರ್ಗ, ಸಾಂಗಲಿ, ಸಾವಂತವಾಡಿ ಮತ್ತು ವಾಡಿ (ಜಹಗೀರ) ಈ ಸಂಸ್ಥಾನಗಳಲ್ಲಿ ೧೦.೧೦೨ ಚ. ಮೈಲು ಭೂಪ್ರದೇಶವನ್ನೊಳಗೊಂಡಿದ್ದು ಅವುಗಳ ಜನಸಂಖ್ಯೆಯು ೨೭,೮೫,೪೨೮ ಇದ್ದು, ವಾರ್ಷಿಕ ಆದಾಯವು ೧,೬೦,೫೧, ೦೬೮ ರೂ. ಗಳಷ್ಟಿತ್ತು.

ಈ ಎಲ್ಲ ದಕ್ಷಿಣ ಮರಾಠಾ ರಾಜ್ಯಗಳ ಜನತೆಯ ಆಶೋತ್ತರಗಳನ್ನು ಈಡೇರಿಸುವುದಕ್ಕಾಗಿ ಕಾಂಗ್ರೆಸ್ಸಿನ ಮುಖಂಡರಾದ ಎನ್.ಸಿ. ಕೇಳಕರ ಮತ್ತು ವಾಮನ್‌ರಾವ್ ಪಟವರ್ಧನ ಮೊದಲಾದವರ ಪ್ರಯತ್ನದಿಂದ "ದಕ್ಷಿಣ ಸಂಸ್ಥಾನಗಳ ಹಿತ ರಕ್ಷಣೆ ಸಭೆ"ಯು ಸ್ಥಾಪಿಸಲ್ಪಟ್ಟಿತು[೫]. ಈ ಸಭೆಯು ಪಾಸು ಮಾಡಿದ ಕೆಲವು ಮಹತ್ವದ ಠರಾವುಗಳು ಇಂತಿವೆ.

೧. ದೇಶಿ ಸಂಸ್ಥಾನಿಕರು ರಾಜ್ಯದಲ್ಲಿ ಯಾವುದೇ ಕಾಯ್ದೆ ಕಾನೂನುಗಳನ್ನು ಪಾಸು ಮಾಡಬೇಕಾದರೆ ಪ್ರಜಾಪ್ರತಿನಿಧಿಯ ಸಭೆಯ ಅನುಮತಿಯನ್ನು ಪಡೆದುಕೊಳ್ಳಬೇಕು.
೨. ರಾಜ್ಯದ ವಾರ್ಷಿಕ ಆಯ-ವ್ಯಯ ವರದಿಯನ್ನು ಪ್ರಜಾಪರಿಷತ್ತಿನ ಒಪ್ಪಿಗೆಯ ಮೇರೆಗೆ ಸಿದ್ಧಪಡಿಸಬೇಕು.
೩. ಪ್ರಜೆಗಳ ಸ್ವಾತಂತ್ರ್ಯ ರಕ್ಷಣೆಗಾಗಿ ಕಾನೂನುಗಳನ್ನು ಪಾಸು ಮಾಡಬೇಕು.

ಶ್ರೀ.ಎನ್.ಸಿ.ಕೇಳಕರ ಮತ್ತು ವಾಮನ್‌ರಾವ್ ಪಟವರ್ಧನ ಇವರನ್ನು ಪ್ರಜಾಪ್ರತಿನಿಧಿ ಸಭೆ ಕಾರ್ಯದರ್ಶಿಗಳೆಂದು ನೇಮಿಸಲಾಗಿತ್ತು. ಕ್ರಿ.ಶ.೧೯೨೧ ರಿಂದ ೧೯೩೮ ರ ಅವಧಿಯಲ್ಲಿ

ಸುಮಾರು ೧೨ "ಪ್ರಜಾಪ್ರತಿನಿಧಿಗಳ ಸಭೆಗಳು" ಏರ್ಪಟ್ಟಿದ್ದವು. ಅದರಲ್ಲಿ ೭ ಸಭೆಗಳು ಪುಣೆಯಲ್ಲಿ, ಮುಂಬೈಯಲ್ಲಿ ಒಂದು, ಬೆಳಗಾಂವಿಯಲ್ಲಿ ಒಂದು, ಸಾಂಗಲಿ (ಕೂಪವಾಡ)ಯಲ್ಲಿ ಒಂದು, (ಜಮಖಂಡಿಯ ಸಮೀಪ) ಕುಡಚಿಯಲ್ಲಿ ಒಂದು, ಹೀಗೆ (೧೧) ಹನ್ನೊಂದು ಸಭೆಗಳು ಬ್ರಿಟಿಷ ಆಡಳಿತದ ಪ್ರದೇಶಗಳಲ್ಲಿ ನಡೆದಿದ್ದವು. ಕಾರಣ ದೇಶಿ ಸಂಸ್ಥಾನಿಕರು ಇಂತಹ ಘಟನೆಗಳನ್ನು ವಿರೋಧಿಸುತ್ತಿದ್ದರು. ಆದರೆ ೧೨ನೇ ಸಭೆಯು ಕ್ರಿ.ಶ. ೧೯೩೮ರಲ್ಲಿ ಸಾಂಗಲಿಯಲ್ಲಿ ಸರ್ದಾರ್ ವಲ್ಲಭಾಯಿ ಪಟೇಲರ ಅಧ್ಯಕ್ಷತೆಯಲ್ಲಿ ಏರ್ಪಟ್ಟಿತ್ತು. ದೇಶಿ ಸಂಸ್ಥಾನದಲ್ಲಿ ಏರ್ಪಟ್ಟ ಪ್ರಥಮ ಸಭೆಯು ಇದಾಗಿತ್ತು. ಬ್ರಿಟೀಷ ಪ್ರದೇಶಗಳಲ್ಲಿ ಏರ್ಪಟ್ಟ ಹನ್ನೊಂದು ಸಭೆಗಳ ಅಧ್ಯಕ್ಷತೆಯನ್ನು ಕ್ರಮವಾಗಿ ಎಸ್.ಬಿ.ಬಾಪಟ, ವ್ಹಿ.ಆರ್.ಗುಪ್ತಾ, ಜಿ.ಬಿ.ಸಾನೆ, ಬರೋಡಾ, ಎಮ್.ಆರ್.ಜಯಕರ, ಬಿ.ಸಿ.ಕಾಮತ್, ಪ್ರೊ.ಅಭ್ಯಂಕರ (ಎರಡು ಸಲ), ಭಾವುರಾವ್ ಗೋಖಲೆ, ಎಸ್.ಜಿ. ವಝೆ, ಎ.ಬಿ.ಲಠ್ಠೆ, ವ್ಹಿ.ಆರ್.ನರಿಮನ್ ಮತ್ತು ವಲ್ಲಭಾಯಿ ಪಟೇಲರು ವಹಿಸಿದ್ದರು.

ಪ್ರಜಾಪ್ರತಿನಿಧಿ ಸಭೆಯು ಸ್ಥಾಪನೆಯಾದ ಮೊದಲಿನ ನಾಲ್ಕು ವರ್ಷಗಳಲ್ಲಿ ಅಷ್ಟೊಂದು ಪ್ರಗತಿಯಾದದ್ದು ಕಂಡು ಬರುವುದಿಲ್ಲ. ಆದರೆ ಮುಂದೆ ಬಳವಂತರಾವ್ ಮೆಹತಾ, ಮಣಿಲಾಲ ಕೊಠಾರಿ ಮತ್ತು ಜಿ.ಆರ್. ಅಭ್ಯಂಕರ ಮೊದಲಾದವರು ಹೆಚ್ಚಿನ ಆಸಕ್ತಿ ವಹಿಸಿ ಅಖಿಲ ಭಾರತ ಸಂಸ್ಥಾನಗಳ ಪ್ರಜಾಪ್ರತಿನಿಧಿಗಳ ಸಭೆಯನ್ನು ಮುಂಬೈಯಲ್ಲಿ ಡಿಸೆಂಬರ ೧೭ ಮತ್ತು ೧೮ ನೇ ೧೯೨೭ ರಲ್ಲಿ ಕರೆದರು. ಈ ಸಭೆಯು ಕೈಕೊಂಡು ಒಮ್ಮತದ ಅಭಿಪ್ರಾಯವೆಂದರೆ ದೇಶದ ಎಲ್ಲ ಸಂಸ್ಥಾನಿಕರು ತಮ್ಮ ರಾಜ್ಯದ ಆಡಳಿತದಲ್ಲಿ ಪ್ರಜಾಪ್ರತಿನಿಧಿಗಳು ಸಕ್ರೀಯವಾಗಿ ಭಾಗವಹಿಸುವಂತಾಗಬೇಕು ಮತ್ತು ಪ್ರಜೆಗಳ ಹಿತವನ್ನು ಲಕ್ಷಿಸಿ ಅರಸರು ಸುಧಾರಣೆಗಳನ್ನು ಕೈಕೊಳ್ಳಬೇಕು.

ಅಖಿಲ ಭಾರತ ಪ್ರಜಾಪರಿಷತ್ತಿನ ದ್ವಿತೀಯ ಸಮ್ಮೇಳನವನ್ನು ಮೇ ತಿಂಗಳ ೨೫ ಮತ್ತು ೨೬, ೧೯೨೯ ರಲ್ಲಿ ಮತ್ತು ಸಿ.ವಾಯ್. ಚಿಂತಾಮಣಿರಾವ್ ಅವರ ಅಧ್ಯಕ್ಷತೆಯಲ್ಲಿ ಜುಲೈ ೧೮ ಮತ್ತು ೧೯, ೧೯೩೬ ರಲ್ಲಿ ಎನ್.ಸಿ. ನೇಲಕರ ಅಧ್ಯಕ್ಷತೆಯಲ್ಲಿ, ಐದನೆಯ ಸಭೆಯನ್ನು ಕ್ರಿ.ಶ. ೧೯೩೬ ರ ಜುಲೈ ೧೮ ಮತ್ತು ೧೯ ರಲ್ಲಿ ಪಟ್ಟಾಭಿ ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಕರೆಯಲಾಗಿತ್ತು. ಈ ಎಲ್ಲ ಸಭೆಗಳ ಪ್ರಮುಖ ಉದ್ದೇಶವೇನೆಂದರೆ ದೇಶದ ಎಲ್ಲಾ ಸಂಸ್ಥಾನಗಳಲ್ಲಿ "ಪ್ರಜೆಗಳ ಪ್ರತಿನಿಧಿಗಳ ಸಭೆ"ಯನ್ನು ಸ್ಥಾಪಿಸಬೇಕೆಂಬ ಬೇಡಿಕೆಯ ಬಲವಾಗಿತ್ತು.

ಗಾಂಧೀಜಿಯವರು ದಿನಾಂಕ೧೫-೯-೧೯೪೦ ರಲ್ಲಿ ತಮ್ಮ 'ಹರಿಜನ ಪತ್ರಿಕೆ'ಯಲ್ಲಿ ಪ್ರಕಟಿಸಿ ಜನತೆಗೆ ಅರಸರಿಂದ ರಾಜಕೀಯ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳಲು ನಿಧಾನವಾಗಿ ಹೋರಾಟವನ್ನು ಮಾಡಬೇಕೆಂದು ಕರೆಕೊಟ್ಟರು. ಆದರೆ ಕ್ರಿ.ಶ.೧೯೪೨ ರಲ್ಲಿ "ಚಲೇಜಾವ್ ಚಳುವಳಿ"ಯನ್ನು ಘೋಷಿಸಿದ ನಂತರ ತಮ್ಮ ನಿಲುವನ್ನು ಬದಲಿಸಿ ಆಳರಸರ ವಿರುದ್ಧ ಸತ್ಯಾಗ್ರಹವನ್ನು ಮಾಡಿ ತಮ್ಮ ಹಕ್ಕನ್ನು ಪಡೆದುಕೊಳ್ಳಬೇಕೆಂದು ಕರೆಕೊಟ್ಟರು. ಕ್ರಿ.ಶ೧೯೩೮ ರಲ್ಲಿ ಸಾಂಗಲಿಯಲ್ಲಿ ಸರ್ದಾರ್ ವಲ್ಲಭಾಯಿ ಪಟೇಲರ ಅಧ್ಯಕ್ಷತೆಯಲ್ಲಿ ಜರುಗಿದ ಪ್ರಜಾಪ್ರತಿನಿಧಿ ಸಭೆಯಲ್ಲಿ ಪಾಸು ಮಾಡಿದ ಠರಾವಿನ ಪ್ರಕಾರ ಆಡಳಿತದ ಅನುಕೂಲಕ್ಕಾಗಿ ಚಿಕ್ಕ ಸಂಸ್ಥಾನಗಳನ್ನು ಒಂದು ಗೂಡಿಸಿ ಒಂದು ಕೂಟವನ್ನಾದರೂ ರಚಿಸಬೇಕೆಂದು ನಿರ್ಣಯಿಸಲಾಯಿತು. ಈ ಸಭೆಯು ಪಾಸು ಮಾಡಿದ ಠರಾವಿನ ಪ್ರಕಾರ ಕ್ರಿ.ಶ.೧೩-೧೨-೧೯೪೨ ರಲ್ಲಿ ಜನ ಸಾಮಾನ್ಯರ ಹಾಗೂ ಕೂಲಿಕಾರರ ಸಮಿತಿಯನ್ನು ರಚಿಸಲಾಯಿತು.

ಮುಂದೆ ಈ ಸಮಿತಿಯು "ಸಾಬಡೆ ಸಮಿತಿ"ಯಾಗಿ ರೂಪಗೊಂಡಿತು. ಈ ಸಮಿತಿಯು ಸಂಸ್ಥಾನಿಕರು ತಮ್ಮ ರಾಜ್ಯದಲ್ಲಿ ಹೊಣೆಗಾರಿಕೆಯ ಸರಕಾರವನ್ನು ಸ್ಥಾಪಿಸಬೇಕೆಂದು ಸೂಚಿಸಿತು[೬]. ಅದೇ ಪ್ರಕಾರ ಈ ಸಮಿತಿಯು ಭಾರತದಲ್ಲಿ ಒಕ್ಕೂಟ ಸರಕಾರವನ್ನು ಸ್ಥಾಪಿಸುವ ಯೋಜನೆಯನ್ನು ತಯಾರಿಸಿ ಪ್ರತಿ ಸಂಸ್ಥಾನಿಕರಿಂದ ಒಪ್ಪಿಗೆಯನ್ನು ಪಡೆಯಲು ಕಳಿಸಲಾಯಿತು. ಮುಂದೆ ಜಮಖಂಡಿಯಲ್ಲಿ ಸೇರಿದ ಸಭೆಯಲ್ಲಿ "ಸಾಬಡೆ ಸಮಿತಿ"ಯು ಮಾಡಿದ ಶಿಫಾರಸ್ಸುಗಳನ್ನು ಕಾರ್ಯರೂಪದಲ್ಲಿ ತರಲು ನಿರ್ಣಯಿಸಲಾಯಿತು. (ಸಾಬಡೆಯವರು ಜಮಖಂಡಿಯವರು) ಆದರೆ ಕ್ರಿ.ಶ.೩೧-೫-೧೯೪೨ ರಲ್ಲಿ ಸಾಂಗಲಿಯಲ್ಲಿ ಜರುಗಿದ ಶಾಸನ ಸಭೆಯಲ್ಲಿ ಸಾಂಗಲಿ ಸಂಸ್ಥಾನಿಕರು ಸಾಬಡೆ ಸಮಿತಿಯ ಸೂಚನೆಗಳನ್ನು ವಿರೋಧಿಸಿದರು. ಆದರೂ ಸಾಬಡೆ ಸಮಿತಿಯ ನಿಯಮಗಳನ್ನು ಕೊನೆಗೆ ಜನತಾ ನ್ಯಾಯಾಲಯದ ಒಪ್ಪಿಗೆಯೊಂದಿಗೆ ಅನುಸರಿಸಲಾಯಿತು. ಅಲ್ಲದೆ ಕೊಲ್ಲಾಪುರದಲ್ಲಿ ಹೈಕೋರ್ಟ್ ಇದ್ದು, ಕೊಲ್ಲಾಪುರ ಸಂಸ್ಥಾನದ ಆಡಳಿತಗಾರನಾದ ಮಿಸ್ಟರ ಪೇರಿ ಎಂಬುವನು ಜನತಾ ನ್ಯಾಯಾಲಯದ ನಿರ್ಣಯದಂತೆ ದಕ್ಷಿಣದ ರಾಜ್ಯಗಳಲ್ಲಿ ಕೊಲ್ಲಾಪುರ ರಾಜ್ಯವನ್ನೊಳಗೊಂಡು ಒಂದೇ ಒಂದು ಹೈಕೋರ್ಟ್ ಇರಬೇಕೆಂದು ಒಪ್ಪಿಕೊಂಡರು. ಆದರೆ ಕೆಲವು ಸಂಸ್ಥಾನಿಕರು ಎರಡು ಹೈಕೋರ್ಟ್‌ಗಳಿರಬೇಕೆಂದು ಬೇಡಿಕೆಯನ್ನಿಟ್ಟದ್ದರಿಂದ ಕೊನೆಗೆ ಎರಡು ಹೈಕೋರ್ಟ್‌ಗಳನ್ನು ಸ್ಥಾಪಿಸಲಾಯಿತು.

ಕೊಲ್ಲಾಪುರ ಸಂಸ್ಥಾನಕ್ಕೆ ಸೇರಿದ ರಾಜ್ಯಗಳೆಂದರೆ ಕೊಲ್ಲಾಪೂರ, ಜತ್ತ, ಪಲ್ಟನ್, ಔಧ, ಮಿರಜ, ಮುಧೋಳ, ಸಾವಂತವಾಡಿ, ಜಂಜಿರಾ ಮತ್ತು ಕುರಂದವಾಡ (ಚಿಕ್ಕ) ಅದರಂತೆ ಸಾಂಗಲಿ, ಮಿರಜ ಮಹಲ, ಜಮಖಂಡಿ, ರಾಮದುರ್ಗ, ಅಕ್ಕಲಕೋಟೆ, ಸವಣೂರು, ಕುರಂದವಾಡ (ಹಿರಿಯ) ಮತ್ತು ಭೋರ ಇವು ದ್ವಿತೀಯ ಪಂಗಡಕ್ಕೆ ಸೇರಿದವುಗಳಾಗಿದ್ದವು. ಹೀಗೆ ಆಂಗ್ಲರು ತಮ್ಮ ಭೇದ ನೀತಿಯನ್ನು ಮುಂದುವರೆಸಿ ತಮ್ಮ ಸ್ವಾರ್ಥ ಸಾಧನೆಗಾಗಿ ದೇಶಿ ಸಂಸ್ಥಾನಿಕರು ಒಂದು ಗೂಡಿ ಹೋರಾಡದಂತೆ ಮಾಡಿ ಅವರನ್ನು ಪ್ರತ್ಯೇಕಗೊಳಿಸಿದರು.

ಕ್ರಿ.ಶ.೧೯೪೩-೪೫ರ ಅವಧಿಯಲ್ಲಿ "ಪ್ರಜಾಪ್ರತಿನಿಧಿ ಸಭೆ"ಯ ಕಾರ್ಯಕಲಾಪಗಳಿಂದ ಪ್ರಭಾವಿತವಾದ ಅನೇಕ ದೇಶಿ ಸಂಸ್ಥಾನಿಕರು ತಮ್ಮ ಆಡಳಿತದಲ್ಲಿ ಅನೇಕ ಜನಹಿತ ಸುಧಾರಣೆಗಳನ್ನು ಕೈಕೊಂಡರು. ಆದರೆ ಕೆಲವು ಸಂಸ್ಥಾನಿಕರು "ಸಾಬಡೆ ಸಮಿತಿ"ಯ ಅಂಶಗಳನ್ನು ಒಪ್ಪಿಕೊಳ್ಳಲಿಲ್ಲ. ಕೊಲ್ಲಾಪೂರ ಪಂಗಡದ ಹೈಕೊರ್ಟು ೧-೩-೧೯೪೬ರಲ್ಲಿ ತನ್ನ ಕಾರ್ಯವನ್ನು ಪ್ರಾರಂಭಿಸಿತು. ಆದರೆ ಸಾಂಗಲಿ ಪಂಗಡದ ಹೈಕೋರ್ಟ್ ಮಾತ್ರ ಕಾರ್ಯರೂಪಕ್ಕೆ ಬರಲಿಲ್ಲ.

ಕ್ರಿ.ಶ.೧೯೪೬ ರಲ್ಲಿ ದೇಶವು ಸ್ವಾತಂತ್ರ್ಯ ಸಾಧನೆಗಾಗಿ ನಿರಂತರ ಹೋರಾಟಕ್ಕಿಳಿದಾಗ ದೇಶಿ ಸಂಸ್ಥಾನಿಕರು ತಾವೆಲ್ಲರೂ ಒಂದುಗೂಡುವುದು ಅವಶ್ಯವೆಂಬುದನ್ನು ಅರಿತುಕೊಂಡರು. ಮಿರಜ, ಮುಧೋಳ, ಜತ್ತ, ಅಕ್ಕಲಕೋಟೆ, ಜಮಖಂಡಿ, ಕುರಂದವಾಡ, ಜಂಜಿರಾ ಮೊದಲಾದ ಸಂಸ್ಥಾನಗಳಲ್ಲಿ ಜರುಗಿದ ಪ್ರಜಾಪ್ರತಿನಿಧಿ ಸಭೆಗಳು ಪ್ರತಿಯೊಂದು ಸಂಸ್ಥಾನದಲ್ಲಿ ಹೊಣೆಗಾರಿಕೆಯ ಸರಕಾರವನ್ನು ಸ್ಥಾಪಿಸಬೇಕೆಂದು ಒಮ್ಮತದ ಠರಾವನ್ನು ಪಾಸು ಮಾಡಿದವು[೭]. ರಾಜ್ಯದಲ್ಲಿ ಒಕ್ಕೂಟ ಸರಕಾರವನ್ನು ಸ್ಥಾಪಿಸಬೇಕು ಎಂಬ ಪ್ರಶ್ನೆ ಉದ್ಭವಿಸಿದಾಗ ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರು ವಿಚಾರ-ವಿನಿಮಯ ಮಾಡಿ ಕೊನೆಗೆ ರಾಜ್ಯದಲ್ಲಿ ಜವಾಬ್ದಾರಿಯುತವಾದ ಸರಕಾರವನ್ನು ಸ್ಥಾಪಿಸಿ ಪ್ರಜೆಗಳ ಅನುಮತಿಯನ್ನು ಪಡೆದುಕೊಂಡು ನಿರ್ಣಯಕ್ಕೆ ಬರಬೇಕೆಂದು ನಿರ್ಧರಿಸಲಾಯಿತು.

**ಜಮಖಂಡಿ ಸಂಸ್ಥಾನ ಮತ್ತು ಸ್ವಾತಂತ್ರ್ಯ ಹೋರಾಟ**

ದೇಶದೆಲ್ಲಡೆ ಹುಟ್ಟಿಕೊಂಡ ಸ್ವಾತಂತ್ರ್ಯದ ಜಾಗೃತಿ ಜ್ಯೋತಿಯು ತೇರದಾಳ ಸಮೀಪದ ಜಮಖಂಡಿ ಸಂಸ್ಥಾನದಲ್ಲಿಯೂ ಮೊಳಗಿತು. ಸ್ವಾತಂತ್ರ್ಯ ಹೋರಾಟದ ಭಾಗವಾಗಿ ಅಲ್ಲಿನ ಜನರಲ್ಲಿ ಉಂಟಾದ ಜಾಗೃತಿಯ ಪರಿಣಾಮವಾಗಿ ಅಲ್ಲಿನ ಜನರು ತಮ್ಮ ಸುಧಾರಣೆಗಾಗಿ ಹಲವು ಬೇಡಿಕೆಗಳನ್ನು ಅಲ್ಲಿನ ಸಂಸ್ಥಾನದ ಮುಂದೆ ಇಟ್ಟರು. ಈ ಬೇಡಿಕೆಯನ್ನು ಅವರು ಈಡೇರಿಸುವ ಉದ್ದೇಶದಿಂದ ಸಂಸ್ಥಾನದಲ್ಲಿ ಹೊಸ ಬಗೆಯ ಸಾಮಾಜಿಕ ಹಾಗೂ ರಾಜಕೀಯ ಸುಧಾರಣೆಗಳನ್ನು ಜಾರಿಗೊಳಿಸಿದರು. ಕ್ರಿ.ಶ. ೧೮೫೭ ರಲ್ಲಿ ಸಂಭವಿಸಿದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವು ಕೊನೆಗೊಂಡ ನಂತರ ಭಾರತದಲ್ಲಿದ್ದ ಇಂಗ್ಲೀಷ ಈಸ್ಟ್-ಇಂಡಿಯಾ ಕಂಪನಿಯ ಆಳ್ವಿಕೆಯು ಕೊನೆಗೊಂಡು ಸಮಗ್ರ ದೇಶದ ಆಡಳಿತಾಧಿಕಾರವು ಬ್ರಿಟಿಷ ಸಾರ್ವಭೌಮರ ಕೈಸೇರಿತು. ಇದರಿಂದ ದೇಶದ ಸಾಮಾಜಿಕ ಹಾಗೂ ರಾಜಕೀಯ ರಂಗದಲ್ಲಿ ವಿಶೇಷ ಬದಲಾವಣೆಗಳಾದವು. ಪ್ರತ್ಯಕ್ಷ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ಪ್ರದೇಶದ ಜನರಲ್ಲಿ ಸಾಮಾಜಿಕ ಹಾಗೂ ರಾಜಕೀಯ ಬೆಳವಣಿಗೆಗಳಾದವು. ಅವರು ಇಂಗ್ಲೀಷ ಶಿಕ್ಷಣವನ್ನು ಪಡೆದುಕೊಂಡಿದ್ದರಿಂದ ಅವರಲ್ಲಿ ನಾಗರಿಕತೆಯ ಪ್ರಜ್ಞೆಯು ಮೂಡಿಬಂದು ತಮ್ಮ ಹಕ್ಕು ಬಾಧ್ಯತೆಗಳನ್ನು ಸರಕಾರದಿಂದ ಪಡೆದುಕೊಳ್ಳಬೇಕೆಂದು ಭಾವನೆಯು ಉದ್ಭವಿಸಿತು. ಆದರೆ ಸಂಸ್ಥಾನಿಕರ ಆಳ್ವಿಕೆಗೆ ಒಳಪಟ್ಟ ಪ್ರದೇಶದ ಜನರಲ್ಲಿ ನವ ಜಾಗೃತಿಯು ಮೂಡಿ ಬಂದಿರಲಿಲ್ಲ. ಕಾರಣ ಅವರು ಹಳೆಯ ಸಂಪ್ರದಾಯಕ್ಕೆ ಅಂಟಿಕೊಂಡ ಅನುವಂಶಿಕವಾಗಿ ಬಂದ ಅರಸರಿಂದ ಆಳಲ್ಪಡುತ್ತಿದ್ದರಿಂದ ಪ್ರಗತಿಪರವಾದ ಸುಧಾರಣೆಗಳಿಂದ ಹಾಗೂ ಶೈಕ್ಷಣಿಕ ಸೌಲಭ್ಯಗಳಿಂದ ವಂಚಿತರಾಗಿದ್ದರು. ಆದರೆ ಕ್ರಮೇಣ ಈ ಜನತೆ ಬ್ರಿಟೀಷ ಸಂಪರ್ಕದಿಂದ ಅನೇಕ ಪ್ರಗತಿಪರವಾದ ವಿಷಯಗಳನ್ನು ಕಲಿತುಕೊಂಡು ತಾವು ತಮ್ಮ ಅರಸರಿಂದ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳಲು ಯತ್ನಿಸಿದರು. ಹೀಗೆ ಜಮಖಂಡಿ ಸಂಸ್ಥಾನದಲ್ಲಿ ಸಂಭವಿಸಿದ ಸಾಮಾಜಿಕ ಹಾಗೂ ರಾಜಕೀಯ ಹೋರಾಟವನ್ನು ಮೂರು ಹಂತಗಳಲ್ಲಿ ವಿಂಗಡಿಸಬಹುದು.

**೧. ಕ್ರಿ.ಶ. ೧೯೧೭ ರ ಪೂರ್ವದಲ್ಲಾದ ಹೋರಾಟ.**

**೨. ಕ್ರಿ.ಶ. ೧೯೧೭ ರಿಂದ ೧೯೨೭ ರ ವರೆಗೆ ನಡೆದ ಘಟನೆಗಳು.**

**೩. ಕ್ರಿ.ಶ. ೧೯೨೭ ರಿಂದ ೧೯೪೭ ರ ವರೆಗೆ.**

ಸಂಸ್ಥಾನಿಕರ ಆಳ್ವಿಕೆಗೆ ಒಳಪಟ್ಟ ಪ್ರದೇಶದ ಜನರು ಸಾಮಾಜಿಕ ಹಾಗೂ ರಾಜಕೀಯವಾಗಿ ಬ್ರಿಟಿಷರ ಆಡಳಿತಕ್ಕೊಳಪಟ್ಟ ಜನರಿಗಿಂತ ಹಿಂದುಳಿದವರಾಗಿದ್ದರು. ಆದರೆ ಜಮಖಂಡಿ ಸಂಸ್ಥಾನಕ್ಕೊಳಪಟ್ಟ ಪ್ರದೇಶವು ಮಾತ್ರ ಅದಕ್ಕೆ ಒಂದು ಅಪವಾದವಾಗಿತ್ತೆಂದು ಹೇಳಬಹುದು. ಜಮಖಂಡಿ ಸಂಸ್ಥಾನಿಕರು ತಮ್ಮ ಆಳ್ವಿಕೆಯಲ್ಲಿ ಪ್ರಜೆಗಳಿಗೆ ಉಚಿತವಾದ ಶಿಕ್ಷಣವನ್ನು ಕೊಡುವುದಕ್ಕಾಗಿ ಅನೇಕ ಶಾಲೆ, ಕಾಲೇಜುಗಳನ್ನು ಸ್ಥಾಪಿಸಿದ್ದರು. ಕ್ರಿ.ಶ. ೧೮೮೮ ರಲ್ಲಿ ಜಮಖಂಡಿಯಲ್ಲಿದ್ದ ಆಂಗ್ಲೋ-ವ್ಹರ್ನಾಕ್ಯುಲರ್ ಶಾಲೆಯನ್ನು ಹೈಸ್ಕೂಲನ್ನಾಗಿ ಪರಿವರ್ತಿಸಿ ವಿದ್ಯಾರ್ಥಿಗಳಿಗೆ ಮಾಧ್ಯಮಿಕ ಶಿಕ್ಷಣವನ್ನು ಪಡೆದುಕೊಳ್ಳಲು ಸೌಲಭ್ಯಗಳನ್ನು ಮಾಡಿಕೊಡಲಾಯಿತು. ಬನಹಟ್ಟಿ, ಕುಂದಗೋಳ ಇಲ್ಲಿ ಮ್ಯಾಟ್ರಿಕ್ಯೂಲೇಶನ್ ಪರೀಕ್ಷೆಯನ್ನು ಮುಗಿಸಿದ ಅನೇಕ ವಿದ್ಯಾರ್ಥಿಗಳು ಉಚ್ಚ ಶಿಕ್ಷಣವನ್ನು ಪಡೆದುಕೊಳ್ಳಲು ಪುಣೆಗೆ ಹೋಗುತ್ತಿದ್ದರು. ಅದರಂತೆ ಜಮಖಂಡಿಯ ವಿನಾಯಕ ಲಿಂಗೋಪಂತ ಪರಾಂಜಪೆ, ಸದಾಶಿವ ಬಳವಂತ ಕಾಳೆ, ರಂಗನಾಥ ಗೋವಿಂದ ಕುಲಕರ್ಣಿ, ಭೀಕಾಶ ಗಣೇಶ ಫಡಕೆ ಇವರೇ ಮೊದಲಾದ ವಿದ್ಯಾರ್ಥಿಗಳು ಪುಣೆಯ ನ್ಯೂ ಇಂಗ್ಲೀಷ ಸ್ಕೂಲಿನಲ್ಲಿ ಕಲಿಯುತ್ತಿದ್ದರು[೮].

ಆ ಶಾಲೆಯ ಆಡಳಿತ ಮಂಡಳಿಯಲ್ಲಿ ಮಹಾನ್ ದೇಶಭಕ್ತರು, ವಿದ್ವನ್ಮಣಿಗಳು ಆದ ಲೋಕಮಾನ್ಯ ತಿಲಕರು, ಅಗರಕರ, ವಾಮನ್‌ರಾವ್ ಅಪ್ಟೆ, ನರಸಿಂಗ ಚಿಂತಾಮಣಿ ಕೇಳಕರ, ನಾಮಜೋಶಿ ಮೊದಲಾದವರಿದ್ದರು. ಅವರ ಸ್ಫೂರ್ತಿದಾಯಕವಾದ ಭಾಷಣವನ್ನು ಕೇಳಿದ ಜಮಖಂಡಿ ಮತ್ತು ಅದರ ಸುತ್ತಲಿನ ತೇರದಾಳ ಭಾಗದ ಅನೇಕ ವಿದ್ಯಾರ್ಥಿಗಳಲ್ಲಿ ದೇಶಪ್ರೇಮವು ಮೂಡಿ ಬಂದಿತ್ತಲ್ಲದೆ ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯು ಜಾಗೃತವಾಯಿತು. ಇಲ್ಲಿಯ (ಜಮಖಂಡಿಯ) ಅನೇಕ ವಿದ್ಯಾರ್ಥಿಗಳು ತಿಲಕರ "ಮರಾಠಾ ಮತ್ತು ಕೇಸರಿ" ಪತ್ರಿಕೆಗಳನ್ನು ಓದಿ ಸ್ಫೂರ್ತಿಯನ್ನು ಪಡೆದವರಾಗಿದ್ದರು. ಹೀಗೆ ಇಂಗ್ಲೀಷ ಶಿಕ್ಷಣವನ್ನು ಪಡೆದುಕೊಂಡು ಬಂದ ಜಮಖಂಡಿಯ ಅನೇಕ ತರುಣರು ಜನ ಸಾಮಾನ್ಯರಲ್ಲಿ ಸಾಮಾಜಿಕ ರಾಜಕೀಯ ಹಾಗೂ ಶೈಕ್ಷಣಿಕ ಜಾಗೃತಿಯನ್ನು ಮೂಡಿಸಲು ಯತ್ನಿಸಿದ ಮಹಾನ್ ವ್ಯಕ್ತಿಗಳೆಂದರೆ ಯಶವಂತ ಗಣೇಶ ವಾಟವೆ ಮತ್ತು ಸದಾಶಿವ ಧೊಂಡೋಪಂತ ಪೆಂಟಸೆಯವರು. ಇವರೀರ್ವರೂ ಕಾನೂನು ಪದವಿಧರರಾಗಿ ಜಮಖಂಡಿಯ ನ್ಯಾಯಾಲಯದಲ್ಲಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು.

ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆಯವರ ಶಿಷ್ಯರಾದ ಶ್ರೀ ತಮ್ಮಣ್ಣಪ್ಪ ಚಿಕ್ಕೋಡಿಯವರು ಅನೇಕ ಸಾಮಾಜಿಕ ಸುಧಾರಣೆಗಳನ್ನು ಕೈಕೊಂಡರು. ಅಲ್ಲದೆ ಮಕ್ಕಳಿಗೆ ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಕೊಡಬೇಕು ಮತ್ತು ಕನ್ನಡವು ಆಡಳಿತದ ಭಾಷೆಯಾಗಬೇಕೆಂದು ಪ್ರತಿಪಾದಿಸಿದರು. ಮರಾಠಿ ಭಾಷೆಯ ಪ್ರಾಬಲ್ಯವಿದ್ದ ಕಾಲದಲ್ಲಿ ಕನ್ನಡ ಭಾಷಾಭಿವೃದ್ಧಿಗಾಗಿ ಶ್ರಮಿಸಿದ ಮಹಾನ್ ವ್ಯಕ್ತಿ ಇವರು. ಈ ಎಲ್ಲ ಸಮಾಜ ಕಾರ್ಯಕರ್ತರು ಒಂದುಗೂಡಿ "ವಿದ್ಯಾಭಿರುಚಿವರ್ಧಕ ಮಂಡಳ", "ವಚನ ವಾಟಿಕಾ" ಮತ್ತು "ವಾಘಧೈರ್ಯ ಉತ್ಪಾದಿನಿ" ಇದೇ ಮೊದಲಾದ ಸಾಮಾಜಿಕ ಸಂಸ್ಥೆಗಳನ್ನು ಸ್ಥಾಪಿಸಿದರು. ಈ ಸಂಸ್ಥೆಗಳು ಅನೇಕ ಸಾಮಾಜಿಕ ಹಾಗೂ ರಾಜಕೀಯ ಸಮಸ್ಯೆಗಳ ಮೇಲೆ ವಿದ್ವತ್‌ಪೂರ್ಣವಾದ ಭಾಷಣವನ್ನು ಏರ್ಪಡಿಸಿ ಜನರನ್ನು ಜಾಗೃತಿಗೊಳಿಸಿದವು. ಜನುಭಾಯಿ ಕರಂದಿಕರ, ಮುಧೋಳದ ದತ್ತೋಪಂತ ಮಿರಜಕರ, ಬನಹಟ್ಟಿಯ ತಮ್ಮಣ್ಣಪ್ಪಾ ಚಿಕ್ಕೋಡಿ, ಶ್ರೀಶಂಕರರಾವ್ ಜೋಶಿ, ವಿಠಲ ರಾಮಜಿ ಸಿಂಧೆ, ವಾಮನ್‌ರಾವ್ ಪಟವರ್ಧನ, ಅಪ್ಪಾಸಾಹೇಬ ವಾಟವೆ, ಸದಾಶಿವ ಪೆಂಟಸೆ ಮೊದಲಾದವರ ಭಾಷಣಗಳಿಂದ ಪ್ರಭಾವಿತರಾದ ತೇರದಾಳ ಮತ್ತು ಜಮಖಂಡಿಯ ಜನರಲ್ಲಿ ಸಾಮಾಜಿಕ ಹಾಗೂ ರಾಜಕೀಯ ಜಾಗೃತಿಯುಂಟಾಯಿತು[೬].

**ಜಮಖಂಡಿಯಲ್ಲಿ ಲೋಕಸಭೆ ರಚನೆ– ೧೯೧೭**

ಕ್ರಿ.ಶ.೧೯೧೭ ರಲ್ಲಿ ಸರ್ ಕ್ಯಾಪ್ಟನ್ ಪರಶುರಾಮ್ ಭಾವು ಸಾಹೇಬರ ಕಾಲದಲ್ಲಿ ರಾಜ್ಯದ ಪ್ರಜೆಗಳ ಬೇಕು-ಬೇಡಗಳನ್ನು ರಾಜರ ಗಮನಕ್ಕೆ ತಂದು ಅವುಗಳನ್ನು ಈಡೇರಿಸಲು ಕೆಲವು ಪ್ರಮುಖ ಪ್ರಜೆಗಳ ಸಭೆಯನ್ನು ರಚಿಸಲಾಯಿತು. ಇದಕ್ಕೆ ಲೋಕಸಭೆಯೆಂದು ಹೆಸರು. ಈ ಸಭೆಯ ಉತ್ಸಾಹಿ ಸದಸ್ಯರೆಂದರೆ ಡಾ.ದಾಮೋದರ ಹುಲ್ಯಾಳಕರ, ಭಾಸ್ಕರರಾವ್ ಮಹಾಬಳ, ಶ್ರೀನಿವಾಸ ಆನಿಖಂಡಿ, ಯಶವಂತರಾವ್ ವಾಟವೆ, ಲಕ್ಷ್ಮಣರಾವ್ ಪರಾಂಜಪೆ, ರಾಚಪ್ಪ ಅಂಬಲಿ, ವಿಠ್ಠಲರಾವ್ ಘಾಟಗೆ, ಸದಾಶಿವ ಪೇಂಟಸೆ, ಮಾಧರಾವ್ ದೇಶಪಾಂಡೆ ಮೊದಲಾದವರು. ಇವರು ಕ್ರಿ.ಶ. ೧೯೨೭ ರವರೆಗೆ ಅತ್ಯಂತ ನಿಷ್ಠೆಯಿಂದ ಜನ ಸೇವೆಯನ್ನು ಮಾಡಿದರು. ಅರಸ ಹಾಗೂ ಪ್ರಜೆಗಳ ನಡುವೆ ಸುಮಧುರವಾದ ಬಾಂಧವ್ಯವನ್ನು ನಿರ್ಮಿಸುವುದೇ ಈ ಲೋಕಸಭೆಯ ಪ್ರಮುಖ ಉದ್ದೇಶವಾಗಿತ್ತು. ಈ ಸಭೆಯು ಪ್ರಜೆಗಳ ಬೇಡಿಕೆಗಳನ್ನು ರಾಜರ ಗಮನಕ್ಕೆ ತಂದು ಈಡೇರಿಸಲು ಯತ್ನಿಸುತ್ತಿತ್ತು. ಹೀಗೆ ಜಮಖಂಡಿಯ

ಲೋಕಸಭೆಯು ಪ್ರಜೆಗಳ ಹಿತರಕ್ಷಣೆಗಾಗಿ ಅನೇಕ ಮಹತ್ವದ ಕಾರ್ಯಗಳನ್ನೆಸಗಿ ಉಳಿದ ನೆರೆಯ ಸಂಸ್ಥಾನಗಳಿಗೆ ಒಂದು ಮಾದರಿಯಾಗಿತ್ತು. ಮುಂದೆ ಕ್ರಿ.ಶ.೧೯೨೭ ರಲ್ಲಿ ಈ ಲೋಕಸಭೆಯು ಪ್ರಜಾಪರಿಷತ್ತಿನಲ್ಲಿ ವಿಲೀನವಾಯಿತು.

**ಜಮಖಂಡಿ ಸಂಸ್ಥಾನದಲ್ಲಿ ಪ್ರಜಾಪರಿಷತ್ತು ಸ್ಥಾಪನೆ**

ಕ್ರಿ.ಶ.೧೯೨೭ ರ ಜೂನ್ ತಿಂಗಳಲ್ಲಿ ಲೋಕಸಭೆಯ ಬದಲಾಗಿ "ಜಮಖಂಡಿ ಸಂಸ್ಥಾನದ ಪ್ರಜಾಪರಿಷತ್ತು" ಸ್ಥಾಪನೆಯಾಯಿತು. ಇದೇ ಸಮಯದಲ್ಲಿ "ದಕ್ಷಿಣದ ಮರಾಠ ರಾಜ್ಯಗಳು" ಸಹ ಪ್ರಜಾಪರಿಷತ್ತನ್ನು ಸ್ಥಾಪಿಸುವ ಹವಣಿಕೆಯಲ್ಲಿಯೇ ಇದ್ದವು. ರಾಜಕೀಯ ಸಮಸ್ಯೆಗಳನ್ನು ನಿವಾರಿಸಿಕೊಳ್ಳುವುದು, ರಾಜ್ಯದಲ್ಲಿ ಹೊಣೆಗಾರಿಕೆಯ ಸರಕಾರವನ್ನು ಸ್ಥಾಪಿಸುವುದು, ಲೋಕಲ್ ಬೋರ್ಡುಗಳನ್ನು ಸ್ಥಾಪಿಸುವುದು. ಇವೇ ಮೊದಲಾದವುಗಳು ಪ್ರಜಾಪರಿಷತ್ತಿನ ಪ್ರಮುಖ ಬೇಡಿಕೆಗಳಾಗಿದ್ದವು. ಈ ಪರಿಷತ್ತು ಬೇರೆ ಬೇರೆ ಪ್ರದೇಶಗಳಿಂದ ರಾಜಕೀಯ ಮುಖಂಡರನ್ನು ಆಮಂತ್ರಿಸಿಕೊಂಡು ಅವರ ಅಧ್ಯಕ್ಷತೆಯಲ್ಲಿ ಸಭೆಯನ್ನು ಸೇರಿಸಿ, ಪ್ರಜೆಗಳ ಸಮಸ್ಯೆಯ ಬಗೆಗೆ ಚರ್ಚಿಸಿ, ಅವುಗಳ ನಿವಾರಣೆಗಾಗಿ ರಾಜಾಸಾಹೇಬರನ್ನು ಒತ್ತಾಯಿಸುವ ಠರಾವುಗಳನ್ನು ಪಾಸು ಮಾಡುತ್ತಿತ್ತು. ಈ ಪರಿಷತ್ತಿನ ಅಧ್ಯಕ್ಷತೆಯನ್ನು ವಹಿಸಿದ ಹೆಸರಾಂತ ರಾಜಕೀಯ ಧುರಿಣರೆಂದರೆ ತಾತ್ಯಾಸಾಹೇಬ ಕೇಳಕರ, ಶ್ರೀನಿವಾಸ ಕೌಜಲಗಿ, ನಾರಾಯಣರಾವ್ ಜೋಶಿ, ಅಂದಾನೆಪ್ಪಾ ದೊಡ್ಡಮೇಟಿ, ಟಿ.ಸಿದ್ಧಲಿಂಗಯ್ಯ, ಎಚ್.ಸಿ. ದಾಸಪ್ಪ ಬಿ.ಜಿ.ಖೇರ ಇವೇ ಮೊದಲಾದವರು. ಮೊದ ಮೊದಲು ಈ ಪರಿಷತ್ತಿನಲ್ಲಿ ಕೇವಲ ೨೦-೨೨ ಜನ ಸದಸ್ಯರಿದ್ದರು. ಮುಂದೆ ಕೇವಲ ಎರಡು ವರ್ಷಗಳಲ್ಲಿ ಸದಸ್ಯರ ಸಂಖ್ಯೆ ೨೦೦ ಕ್ಕೂ ಹೆಚ್ಚಾಯಿತು.

**ಪ್ರಜಾಪರಿಷತ್ತಿನ ಪ್ರಮುಖ ಬೇಡಿಕೆಗಳು**

೧. ಜಮಖಂಡಿಯ ರಾಜಾಸಾಹೇಬರ(ಸಂಸ್ಥಾನಿಕರ) ಮಾರ್ಗದರ್ಶನದಲ್ಲಿ, ರಾಜ್ಯದಲ್ಲಿ ಜವಾಬ್ದಾರಿಯುತವಾದ (ಹೊಣೆಗಾರಿಕೆಯ) ಸರಕಾರವನ್ನು ರಚಿಸುವುದು.

೨. ಬಹುಸಂಖ್ಯಾತ ಜನರಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳಿಂದ ಸರಕಾರಕ್ಕೆ ಸಂವಿಧಾನವನ್ನು ರೂಪಿಸುವುದು.

೩. ಜವಾಬ್ದಾರಿಯುತವಾದ ಸರಕಾರವು ಈ ಸಂವಿಧಾನಬದ್ಧವಾಗಿ ಕಾರ್ಯನಿರ್ವಹಿಸಬೇಕು.

೪. ಸಾಗುವಳಿ ಭೂಮಿಯ ಒಡೆತನವು ಊಳುವವನದೇ ಆಗಿರಬೇಕು. ಭೂಮಿಯನ್ನು ಊಳುವವನೇ ಅದರ ಒಡೆಯನಾಗಬೇಕೆಂಬ ಠರಾವನ್ನು ಸರಕಾರವು ಪಾಸು ಮಾಡಬೇಕು.

೫. ರಾಜ್ಯದಲ್ಲಿ ರೈತರ ಹಿತವನ್ನು ಕಾಪಾಡಲು ಟೆನನ್ಸಿ ಕಾಯ್ದೆಯನ್ನು ಜಾರಿಗೊಳಿಸಿ ಪ್ರತ್ಯಕ್ಷ ಭೂಮಿಯನ್ನು ಸಾಗುವಳಿ ಮಾಡುವವನೇ ಅದರ ಒಡೆಯನಾಗಬೇಕು.

೬. ರಾಜ್ಯದಲ್ಲಿ ಗೋಹತ್ಯೆಯನ್ನು ನಿಷೇಧಿಸಬೇಕು.

**ಪ್ರಥಮ ಪ್ರಜಾಪರಿಷತ್ತಿನ ಸಭೆ-೧೯೨೭**

ಕ್ರಿ.ಶ.೧೯೨೭ ರಲ್ಲಿ ಪ್ರಥಮ ಪ್ರಜಾಪರಿಷತ್ತಿನ ಸಭೆಯು ಜಮಖಂಡಿಯಲ್ಲಿ ಸೇರಲ್ಪಟ್ಟಿತ್ತು. ಅದರ ಅಧ್ಯಕ್ಷತೆಯನ್ನು ಪುಣೆಯ ಶ್ರೀ ಎನ್.ಸಿ. ಕೇಳಕರರವರು ವಹಿಸಿದ್ದರು.

ಶ್ರೀನಿವಾಸ ಆನಿಖಂಡಿ, ತಮ್ಮಣ್ಣಪ್ಪಾ ಚಿಕ್ಕೋಡಿ (ಬನಹಟ್ಟಿ), ವಾಮನ್‌ರಾವ್ ಅಪ್ಪೆ, ಡಾ.ದಾಮೋದರ ಹುಲ್ಯಾಳಕರ ಮತ್ತು ಕೃಷ್ಣಾಜಿ ಪಂತ ರಾನಡೆ ಇವರು ಸ್ವಾಗತ ಸಮಿತಿಯ ಸದಸ್ಯರಾಗಿದ್ದರು. ಇದು ವಿವಿಧೋದ್ದೇಶಗಳನ್ನು ಹೊಂದಿದ ಮಹತ್ವಪೂರ್ಣವಾದ ಸಭೆಯಾಗಿತ್ತು. ಸಾಂಗಲಿ, ಮಿರಜ, ಪುಣೆ ಮೊದಲಾದ ಸ್ಥಳಗಳಿಂದ ಜನರು ಆಗಮಿಸಿದ್ದರು. ಅಧ್ಯಕ್ಷರು ಮರಾಠಿಯಲ್ಲಿ ಮಾತನಾಡುತ್ತ "ರಾಜ್ಯದ ವೈಭವವು ಕೃಷಿಕರ ಹಾಗೂ ಕೂಲಿಕಾರರ ಹಿತಾಭ್ಯುದಯದ ಮೇಲೆ ಅವಲಂಬಿಸಿದೆ, ಆದ್ದರಿಂದ ಅವರ ಹಿತ ರಕ್ಷಣೆಗಾಗಿ ಹೋರಾಡುವುದೇ ಈ ಸಭೆಯ ಪ್ರಮುಖ ಉದ್ದೇಶವಾಗಿದೆ. ಅದಕ್ಕಾಗಿ ಅಳರಸರು ತಮ್ಮ ಪ್ರಜೆಗಳ ಹಿತರಕ್ಷಣೆಯನ್ನು ಮಾಡಬೇಕು" ಎಂದು ಒತ್ತಿ ಹೇಳಿದರು. ಸಭೆಯ ಸದಸ್ಯರೆಲ್ಲರೂ ಒಮ್ಮತದಿಂದ ಕೆಳಗಿನ ಠರಾವುಗಳನ್ನು ಪಾಸು ಮಾಡಿದರು.

೧. ಜಮಖಂಡಿ ಸಂಸ್ಥಾನದಲ್ಲಿ ಎಲ್ಲರಿಗೂ ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಕೊಡಬೇಕು ಅದಕ್ಕಾಗಿ ಗ್ರಾಮಾಂತರ ಪ್ರದೇಶದಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕು.
೨. ಜಮಖಂಡಿ ರಾಜ್ಯದಲ್ಲಿ ಜವಾಬ್ದಾರಿಯುತವಾದ ಸರಕಾರವನ್ನು ಸ್ಥಾಪಿಸಬೇಕು.
೩. ಸಂಸ್ಥಾನದ ಆಡಳಿತದ ಭಾಷೆ ಕನ್ನಡವಾಗಬೇಕು. ಇವೇ ಮೊದಲಾದವುಗಳು.

**ಇನ್ನುಳಿದ ಪ್ರಜಾಪರಿಷತ್ತಿನ ಸಭೆಗಳು**

೧. ಎರಡನೇಯ ಪ್ರಜಾಪರಿಷತ್ತಿನ ಸಭೆಯು ೧೩ ಮತ್ತು ೧೪ ಫೆಬ್ರುವರಿ ೧೯೨೯ ರಲ್ಲಿ ಬನಹಟ್ಟಿಯಲ್ಲಿ ನಡೆಯಿತು. ಅದರ ಅಧ್ಯಕ್ಷತೆಯನ್ನು ಸೆಂಟ್ರಲ್ ಅಸೆಂಬ್ಲಿಯ ಸದಸ್ಯರಾದ ಶ್ರೀ ಪಂಡಿತಪ್ಪಾ ಚಿಕ್ಕೋಡಿಯವರು ವಹಿಸಿದ್ದರು.
೨. ಮೂರನೇಯ ಪ್ರಜಾಪರಿಷತ್ತಿನ ಸಭೆಯು ಫೆಬ್ರುವರಿ ೮. ೧೯೩೧ರಲ್ಲಿ ಹುನ್ನೂರ ಗ್ರಾಮದಲ್ಲಿ ನಡೆಯಿತು. ಅದರ ಅಧ್ಯಕ್ಷತೆಯನ್ನು ಶ್ರೀನಿವಾಸರಾವ್ ಕೌಜಲಗಿರುವರು ವಹಿಸಿದ್ದರು.
೩. ನಾಲ್ಕನೇಯ ಸಭೆಯು ೨೮, ೨೯, ಜನೆವರಿ ೧೯೩೩ ರಲ್ಲಿ ಕುಂದಗೋಳದಲ್ಲಿ ನೆರವೇರಿದ್ದು, ಅದರ ಅಧ್ಯಕ್ಷತೆಯನ್ನು ವಿಶ್ವನಾಥ ಜೋಗೂರ ಎಂಬುವರು ವಹಿಸಿದ್ದರು.
೪. ಐದನೇಯ ಪ್ರಜಾಪರಿಷತ್ತಿನ ಸಭೆಯು ಜಮಖಂಡಿ ತಾಲೂಕಿನ ಸಾವಳಗಿ ಗ್ರಾಮದಲ್ಲಿ ೨೧, ೨೨ ಮಾರ್ಚ್ ೧೯೩೫ ರಲ್ಲಿ ನಡೆಯಿತು. ಅದರ ಅಧ್ಯಕ್ಷತೆಯನ್ನು ನಾರಾಯಣರಾವ್ ಜೋಶಿ ಎಂಬ ನ್ಯಾಯವಾದಿಗಳು ವಹಿಸಿದ್ದರು.

ಈ ಎಲ್ಲ ಸಭೆಗಳ ಉದ್ದೇಶವು ಜಮಖಂಡಿ ಸಂಸ್ಥಾನದಲ್ಲಿ ಜನತಾ ಸರಕಾರವನ್ನು ಸ್ಥಾಪಿಸುವುದೇ ಆಗಿತ್ತು. ಜಮಖಂಡಿಯ ಸಂಸ್ಥಾನಿಕರಾದ ಶಂಕರರಾವ್ ಅಪ್ಪಾಸಾಹೇಬರು ತಮ್ಮ ರಾಜ್ಯದಲ್ಲಿ ಕೆಲವು ಸುಧಾರಣೆಗಳನ್ನು ಪ್ರಕಟಿಸಿದರು. ಕ್ರಿ.ಶ.೧೯೩೧ ತಮ್ಮ ಸಿಂಹಾಸನಾರೋಹಣದ ಐದನೇ ವಾರ್ಷಿಕೋತ್ಸವದ ಸಂದರ್ಭದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ(ದರ್ಬಾರದಲ್ಲಿ) ಕ್ರಮೇಣ ತಮ್ಮ ರಾಜ್ಯದಲ್ಲಿ ಜವಾಬ್ದಾರಿಯುತವಾದ ಸರಕಾರವನ್ನು ಸ್ಥಾಪಿಸುವುದಾಗಿ ಪ್ರಕಟಿಸಿದರು. ಜಮಖಂಡಿ ಸಂಸ್ಥಾನದ ೧೯೩೨ ರ ಕಾನೂನು ಪ್ರಕಾರ ರಾಜ್ಯದಲ್ಲಿ ಶಾಸನ ಸಭೆಯನ್ನು ಸ್ಥಾಪಿಸಲು ದಿಟ್ಟ ನಿಲುವನ್ನು ಕೈಕೊಂಡರು. ಶಾಸನ ಸಭೆಯಲ್ಲಿ ೩೦ ಜನ ಸದಸ್ಯರಿದ್ದು, ಅದರಲ್ಲಿ ೧೬ ಜನ ಸದಸ್ಯರು

ಚುನಾಯಿತರಾದರು. ಉಳಿದ ೧೪ ಜನ ಸದಸ್ಯರು ರಾಜರಿಂದ ನಾಮಕರಣ ಹೊಂದಿದವರಾಗಿರಬೇಕೆಂದು ನಿರ್ಣಯಿಸಲಾಯಿತು. ಇದು ಜಮಖಂಡಿಯ ಪ್ರಜಾಪರಿಷತ್ತಿನ ಮಹತ್ ಸಾಧನವೇ ಸರಿ. ಈ ಪ್ರಜಾಪರಿಷತ್ತು ಒಂದು ರಾಜಕೀಯ ಸಂಸ್ಥೆಯಾಗಿದ್ದು, ಇದರ ಮುಖಾಂತರ ಜಮಖಂಡಿಯಲ್ಲಿ ಸ್ವಾತಂತ್ರ್ಯ ಚಳುವಳಿಯು ಪ್ರಾರಂಭವಾಯಿತು.

**ಆರನೇ ಪ್ರಜಾಪರಿಷತ್ತಿನ ಸಭೆ, ೧೯೩೮**

ಈ ಸಭೆಯನ್ನು ೩೦,೩೧ ಮೇ ೧೯೩೮ ರಲ್ಲಿ ಕುಂದಗೋಳ ತಾಲೂಕು ಸಂಸಿಯಲ್ಲಿ ಕರೆಯಲಾಗಿತ್ತು. ಇದರ ಅಧ್ಯಕ್ಷತೆಯನ್ನು ದೊಡ್ಡಮೇಟಿ ಅಂದಾನೆಪ್ಪನವರು ವಹಿಸಿದ್ದರು. ಶ್ರೀ ಎನ್.ಬಿ. ಕಬ್ಬೂರವರು ಉದ್ಘಾಟಕರಾಗಿದ್ದರು. ಜಮಖಂಡಿ ಸಂಸ್ಥಾನದಲ್ಲಿಯೇ ಇದೊಂದು ಚಾರಿತ್ರಿಕ ಸಭೆಯಾಗಿದ್ದು, ಇದಕ್ಕೆ ಸುಮಾರು ೮೦೦ ಜನ ಆಗಮಿಸಿದ್ದರು. ಅಲ್ಲದೆ ಆ ಭಾಗದ ಅನೇಕ ಜನ ಮುಖಂಡರು ಭಾಗವಹಿಸಿದ್ದರು. ಭೂಕಂದಾಯವನ್ನು ಅರ್ಧದಷ್ಟು ಕಡಿಮೆ ಮಾಡಬೇಕು. ಕನ್ನಡವು ರಾಜ್ಯ ಭಾಷೆಯಾಗಬೇಕು ಮತ್ತು ಚುನಾಯಿತ ಸದಸ್ಯರು ಸಂವಿಧಾನ ಬದ್ಧವಾದ ಹೊಣೆಗಾರಿಕೆಯ ಸರಕಾರವನ್ನು ಸ್ಥಾಪಿಸಬೇಕೆಂದು ಸಭೆಯು ನಿರ್ಣಯಿಸಿತು. ಇದೇ ಪ್ರಕಾರ ಸಭೆಯು ೪೫ ಕ್ಕಿಂತಲೂ ಹೆಚ್ಚು ಠರಾವುಗಳನ್ನು ಒಮ್ಮತದಿಂದ ಪಾಸು ಮಾಡಿತು.

ಈ ಸಭೆಯು ಕೈಕೊಂಡ ನಿರ್ಣಯಗಳಿಗೆ ಸ್ಪಂದಿಸಿದ ಜಮಖಂಡಿ ಸಂಸ್ಥಾನಿಕರಾದ ಶಂಕರರಾವ್ ಅಪ್ಪಾಸಾಹೇಬರು ಕ್ರಿ.ಶ.೧೯೩೮ ರ ಜೂನ್ ೧೮, ೧೯ ರಂದು ಪ್ರಜಾಪ್ರತಿನಿಧಿಯ ಸಭೆಯ ಮುಖಂಡರ ಸಭೆಯನ್ನು ಕರೆದರು. ಸಭೆಯಲ್ಲಿ ನಡೆದ ಚರ್ಚೆಯ ನಂತರ ರಾಜಾಸಾಹೇಬರು ಪ್ರಜೆಗಳ ಬೇಡಿಕೆಯಂತೆ ಸಂಸ್ಥಾನದ ಸಂವಿಧಾನವನ್ನು ರೂಪಿಸಲು ಒಂದು ಸಮಿತಿಯನ್ನು ನಿಯಮಿಸಿ ದಿನಾಂಕ ೨೬-೬-೧೯೩೮ ರಲ್ಲಿ ಒಂದು ಪ್ರಕಟಣೆಯನ್ನು ಹೊರಡಿಸಿದರು. ಕ್ರಿ.ಶ. ೧೯೪೭ ರ ವರೆಗೆ ನಡೆದ ಪ್ರಜಾಪ್ರತಿನಿಧಿಯ ಸಭೆಗಳು ಕೆಳಗಿನಂತಿವೆ.

| ವರ್ಷ | ಸ್ಥಳ | ಅಧ್ಯಕ್ಷರು |
|---|---|---|
| ೩/೪ ಜೂನ್೧೯೩೮ | ಜಮಖಂಡಿ | ದೊಡ್ಡಮೇಟಿ ಅಂದಾನೆಪ್ಪ |
| ೧೯೩೯ | ಕುಂಚನೂರ | ಶ್ರೀ ನೇಸವಿ |
| ೧೯೪೦ | ತುಂಗಳ | ಟಿ.ಸಿದ್ಧಲಿಂಗಯ್ಯಾ |
| ೧೯೪೧ | -- | -- |
| ೧೯೪೨ | ಕುಂದಗೋಳ | ಎಚ್.ಸಿ. ದಾಸಪ್ಪಾ |
| ೧೯೪೩ | (ಮೈಸೂರಿನ ಶ್ರೇಷ್ಠ ಮುಖಂಡರು) | |
| ೧೯೪೪ | ಜಮಖಂಡಿ | ಬಾಳಾಸಾಹೇಬ ಖೇರ |
| ೧೯೪೫ | ಬನಹಟ್ಟಿ | ಅಂದಾನೇಪ್ಪಾ ದೊಡ್ಡಮೇಟಿ |
| ೧೯೪೬ | ಸಾವಳಗಿ | ಕುಂದುಗೋಳ |
| ೧೯೪೭ ರ ಚಳುವಳಿ (ಚಲೇಜಾವ್ ಚಲುವಳಿ) | | |

ಭಾರತದ ರಾಜಕೀಯ ವಿದ್ಯಮಾನವನ್ನು ಪರಿಶೀಲಿಸಲು ಕ್ರಿಪ್ಸ್ ಸಮಿತಿಯು ಭಾರತಕ್ಕೆ ಭೇಟಿ ನೀಡಿತ್ತಾದರೂ ಆದರಿಂದ ಭಾರತೀಯರಿಗೆ ಏನೂ ಉಪಯೋಗವಾಗಲಿಲ್ಲ. ಮಹಾತ್ಮಾ ಗಾಂಧೀಜಿಯವರು ೧೯೪೨ ಏಪ್ರಿಲ್ ೨೬ ರ "ಹರಿಜನ ಪತ್ರಿಕೆ" ಸ್ವಾತಂತ್ರ್ಯಕ್ಕೊಸ್ಕರ ಬ್ರಿಟಿಷರ ವಿರುದ್ಧ ಅಹಿಂಸಾತ್ಮಕ ಬಂಡಾಯದ ಮಾರ್ಗವನ್ನು ಅನುಸರಿಸುವುದೇ ಮುಂದಿನ ಗುರಿಯೆಂದು ಹೇಳಿ, "ಬ್ರಿಟಿಷರೇ ಭಾರತದಿಂದ ತೊಲಗಿರಿ" ಎಂದು ಘೋಷಣೆಯನ್ನು ಮಾಡಿದರು. ಆಗಸ್ಟ್ ೭, ೮ ರಂದು ಮುಂಬೈಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದಲ್ಲಿ ಚಲೇಜಾವ್ ಚಳುವಳಿಯ ಠರಾವು ಸರ್ವಾನುಮತದಿಂದ ಅನುಮೋದಿಸಲ್ಪಟ್ಟಿತು. ಆಗಸ್ಟ್ ೮ ರಂದು ಗಾಂಧೀಜಿ ಭಾಷಣ ಮಾಡುತ್ತ ಈ ಚಳುವಳಿಯನ್ನು "ಮಾಡು ಇಲ್ಲವೆ ಮಡಿ" ಎನ್ನುವಂತೆ ಸ್ವೀಕರಿಸಿ ಪ್ರತಿಯೊಬ್ಬರೂ ಸ್ವತಂತ್ರ ನಾಗರಿಕರಂತೆ ವರ್ತಿಸಿ, ಸಂಪೂರ್ಣ ಸ್ವರಾಜ್ಯಕ್ಕಾಗಿ ಅಹಿಂಸಾತ್ಮಕ ಮಾರ್ಗ ಅನುಸರಿಸಿ ತಮ್ಮ ತಮ್ಮ ಬಂಡಾಯವನ್ನು ಪ್ರಾರಂಭಿಸಬೇಕೆಂದು ಜನತೆಗೆ ಕರೆಕೊಟ್ಟರು. ಅಂದು ರಾತ್ರೋ ರಾತ್ರಿ ಗಾಂಧೀಜಿ, ನೆಹರು, ಪಟೇಲ, ಅಝಾದ ಮುಂತಾದ ರಾಷ್ಟ್ರನಾಯಕರನ್ನು ಮುಂಜಾಗ್ರತ ಕ್ರಮವಾಗಿ ಆಂಗ್ಲ ಸರಕಾರವು ಬಂಧಿಸಿತು. ಅದರಂತೆ ಕರ್ನಾಟಕದ ವಿಜಾಪುರ ಜಿಲ್ಲೆಯವರಾದ ಚನ್ನಬಸಪ್ಪಾ ಅಂಬಲಿ (ಅರ್ಜುಣಗಿ), ವಾಮನ್‌ರಾವ್ ದೇಸಾಯಿ (ಬಿದರಿ)ಯವರು ಬಂಧನಕ್ಕೊಳಗಾಗದೆ ಭೂಗತರಾದರು. ಚಲೇಜಾವ್ ಚಲುವಳಿಯ ಪ್ರಭಾವವು ಬ್ರಿಟಿಷರ ಸೈನ್ಯದಲ್ಲಿದ್ದ ಭಾರತೀಯ ಸೈನಿಕರ ಮೇಲೂ ಆಯಿತು. ಅದರಂತೆ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಹುನ್ನೂರ ಗ್ರಾಮದ ಪರಶುರಾಮ ಹಣಮಂತ ಜಾಧವ, ಗಾಂಧೀಜಿ, ಸುಭಾಸಚಂದ್ರ ಭೋಸರ ಭಾಷಣಗಳಿಂದ ಸ್ಫೂರ್ತಿ ಪಡೆದು ಬ್ರಿಟಿಷ ಸೇವೆಯನ್ನು ತ್ಯಜಿಸಿ ಅಜಾದ ಸೈನ್ಯಕ್ಕೆ ೨೦-೨-೧೯೪೨ ರಲ್ಲಿ ಸೇರಿ ಜರ್ಮನ್ ಫ್ರಂಟನಲ್ಲಿದ್ದುಕೊಂಡು ೧೯೪೨ ರ ಚಳುವಳಿಯಲ್ಲಿ ಧುಮುಕಿದನು.

ಉತ್ತರ ಕರ್ನಾಟಕದಲ್ಲಿ ನಡೆದ ಭೂಗತ ಚಳುವಳಿಯು ವ್ಯವಸ್ಥಿತವಾಗಿ ಜರುಗಿತು. ಬೀಳಗಿ ತಾಲೂಕಿನ ಗಲಗಲಿ, ಮುಂಡಗನೂರ, ಮುಧೋಳ ತಾಲೂಕಿನ (ಹಲಗಲಿ) ಮುಧೋಳ, ಜಮಖಂಡಿ ತಾಲೂಕಿನ ಕುಂಚನೂರ, ಬನಹಟ್ಟಿ, ಸಾವಳಗಿ, ತುಂಗಳ, ಬಿದರಿ, ಜಮಖಂಡಿ ಮುಂತಾದ ಊರುಗಳಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಭೂಗತ ಚಳುವಳಿ ಕೈಕೊಂಡು ಸಾರ್ವಜನಿಕ ಆಸ್ತಿಗೆ ಹಾನಿಯನ್ನುಂಟು ಮಾಡುವುದರ ಮೂಲಕ ಸರಕಾರವನ್ನು ತಲ್ಲಣಗೊಳಿಸಿದರು. ತಾರು ಕಡಿಯುವುದು, ಪೋಸ್ಟ್ ಆಫೀಸಿಗೆ ಲಗ್ಗೆ ಹಾಕುವುದು, ರೈಲ್ವೆ ಹಳಿ ಕೀಳುವುದು ಮೊದಲಾದ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದರು. ಅದೇ ಪ್ರಕಾರ ಜಮಖಂಡಿ ತಾಲೂಕಿನ ಸಾವಳಗಿ-ಜಂಬಗಿ ನಡುವಿನ ತಾರು ಕಡಿಯುವುದರಲ್ಲಿ, ಬನಹಟ್ಟಿಯ ಪ್ರೌಢಶಾಲಾ ಉಪಾಧ್ಯಾಯ ಕಲಕಂಬ ಮಾಸ್ತರ ಹಾಗೂ ಅವರ ಹಿಂಬಾಲಕರು ಪ್ರಮುಖ ಪಾತ್ರವಹಿಸಿದ್ದರು. ಕಲಕಂಬ ಮಾಸ್ತರರ ನಾಯಕತ್ವದಲ್ಲಿ ಸರಸ್ವತಿಯ ಪೂಜೆಯ ಸಂದರ್ಭದಲ್ಲಿ ಸರಸ್ವತಿಗೆ ಬದಲು ಮಹಾತ್ಮಾ ಗಾಂಧೀಜಿಯವರ ಭಾವಚಿತ್ರವನ್ನು ಬನಹಟ್ಟಿಯಲ್ಲಿ ಮೆರವಣಿಗೆ ಮಾಡಲಾಯಿತು.

ಇದೇ ಸಮಯದಲ್ಲಿ ಜಮಖಂಡಿ ಸಂಸ್ಥಾನದ ಅನೇಕ ಸ್ವಾತಂತ್ರ್ಯ ಹೋರಾಟಗಾರರು ಗಾಂಧೀಜಿಯವರ ಕರೆಗೆ ಓಗೊಟ್ಟು ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸಿದ್ದರು. ವಾಮನ್‌ರಾವ್ ಬಿದರಿಯವರು ಜಮಖಂಡಿಯಲ್ಲಿ ಭೂಗತರಾಗಿದ್ದು ಆಂಗ್ಲರ ವಿರುದ್ಧ ಹೋರಾಡಲು ಜಮಖಂಡಿ ಭಾಗದ ಜನರನ್ನು ಹುರಿದುಂಬಿಸಿದರು. ಅವರ ಜೊತೆಗೂಡಿ ಚಳವಳಿಯಲ್ಲಿ ಭಾಗವಹಿಸಿದವರೆಂದರೆ ಮಹಾದೇವ ಮಠದ, ಶಂಕರ ಗ್ರಾಮೋಪಾಧ್ಯಾಯ, ಅನಂತರಾವ್ ಸಾಬಡೆ, ಡಾ.ಹುಲ್ಯಾಳಕರ, ವಾಮನ್‌ರಾವ್ ಜಿ. ಸೌದಿಕರ, ವಿಠ್ಠಲ ರಾಮಚಂದ್ರ

ಕುಲಕರ್ಣಿ, ಗೋವಿಂದ ಹಣಮಂತ ಕುಲಕರ್ಣಿ ಮೊದಲಾದವರು ಅದರಂತೆ ಬನಹಟ್ಟಿಯ ಕಲಕಂಬ ಮಾಸ್ತರ, ಚನ್ನಪ್ಪಾ ದಬಾಡಿ, ತುಕಾರಾಮ ಕೋಪರ್ಡೆ, ಭಾಸ್ಕರ ಕೋಪರ್ಡೆ, ಪರಯ್ಯಾ ಬಾಂಗಿ, ಸಾವಳಗಿಯ ರಾಯಪ್ಪಾ ಬೆಳಗಲಿ, ಭೂಪಾಲ ನಾಂದ್ರೇಕರ ಮೊದಲಾದ ಹೋರಾಟಗಾರರಿಗೆ ಸ.ಸ.ಮಾಧವಾನಂದರು, ಮುರಗೋಡರು ಮುಖಂಡರಾಗಿದ್ದರು. ಜಮಖಂಡಿಯಲ್ಲಿ ವಾಟವೆ, ಎಸ್.ಪಿ. ಉಪಾಧ್ಯ, ವಿಷ್ಣುಪಂತ ದೇಶಪಾಂಡೆ, ಅಡಿವೆಯ್ಯಾ ಮುಧೋಳ, ಶ್ರೀಶೈಲಪ್ಪಾ ಅಥಣಿ, ಈಶ್ವರಪ್ಪಾ ಗತ್ತರಕಿ, ದಾಮು ಅಣ್ಣಾ ಹುಲ್ಯಾಳಕರ, ವಸಂತ ಪೋಂಕ್ಷೆ ಶಾಮರಾವ್ ಪಟವರ್ಧನ (ಯಾದವಾಡಕರ), ಬಳವಂತರಾವ್ ಹೊನವಾಡ, ರಾಮಭಾವು ಟೆಂಬುರಜಿ, ಗುಂಡು ಭರವೆ, ಕೃಷ್ಣಪ್ಪಾ ಹೊಸೂರು, ಪಾಂಡಪ್ಪಾ ಗಿರಡ್ಡಿ (ತುಂಗಳ), ಬಸವಂತರಾಯ್ ದೇಸಾಯಿ (ಕುಂಚನೂರ) ಮತ್ತು ರಾಮಬಹಾದ್ದೂರ್ ಕುಲಕರ್ಣಿ (ಹಿರೇಪಡಸಲಗಿ) ಇವೇ ಮೊದಲಾದ ಹೋರಾಟಗಾರರು ದೊಡ್ಡಮೇಟಿ ಅಂದಾನೆಪ್ಪನವರ ಸಹವರ್ತಿಗಳಾಗಿದ್ದು ಇವರೆಲ್ಲರಿಗೂ ಪಿ.ಎಮ್. ಬಾಂಗಿ ವಕೀಲರು ಸಹಾಯಕರಾಗಿದ್ದರು.

ಜಮಖಂಡಿಯಲ್ಲಿ ಪ್ರಭಾತಾಯಿ ಅಪ್ಪೆ, ಲಕ್ಷ್ಮೀಬಾಯಿ ವಾಲುತಾಯಿ ಮಹೀಸ್ಕರ, ಕಾಸೀಬಾಯಿ ಸಾಳುಂಕೆ, ಪದ್ಮಾವತಿ ವಾಮನ್‌ರಾವ್ (ಬಿದರಿ) ದೇಸಾಯಿ ಮೊದಲಾದ ಮಹಿಳೆಯರೂ ಸಹ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ಆಗ ಈ ಭಾಗದಲ್ಲಿ ಮಹಾದೇವಪ್ಪಾ ಮುರಗೋಡ ಇವರ ಗುಂಪು ಉಗ್ರಹೋರಾಟದಲ್ಲಿ ತೊಡಗಿದ್ದು, ಬನಹಟ್ಟಿಯ ಚಾವಡಿಗೆ ದೇಸಿಬಾಂಬ ಹಾಕಿ ಸ್ಫೋಟಿಸಿತು. ಸಾವಳಗಿ ಠಾಣೆಯಲ್ಲಿ ಬಂದೂಕುಗಳನ್ನು ವಶಪಡಿಸಿಕೊಂಡಿದ್ದು, ಶೇಡಬಾಳ ರೈಲ್ವೆ ನಿಲ್ದಾಣವನ್ನು ಸುಡುವ ಹಂಚಿಕೆಯೂ ಇವರಿಗಿತ್ತೆಂದು ತಿಳಿದು ಬರುತ್ತದೆ. ಆ ಗುಂಪಿನಲ್ಲಿ ಬನಹಟ್ಟಿಯ ಪರಯ್ಯಾ, ಮಲಕಯ್ಯಾ ಬಂಗಿ ಕೂಡಿದ್ದು, ಕಡೆಗೆ ಮುಧೋಳದಲ್ಲಿ ಬಂಧಿತರಾದರು. ಮುಧೋಳ-ಬಾಗಲಕೋಟೆ, ಮುಧೋಳ-ಜಮಖಂಡಿ, ಜಮಖಂಡಿ-ಕುಂಚನೂರ ಗ್ರಾಮಗಳ ನಡುವೆ ತಾರು-ತಂತಿಯನ್ನು ಕಡಿದು ಚಿಮ್ಮಡ ಹಾಗೂ ಮೆಟಗುಡ್ಡದ ಶಾಲಾ ಕಟ್ಟಡವನ್ನು ಸುಡಲಾಯಿತೆಂದು. ವೆಂಕಟೇಶ ಕೃಷ್ಣಾಜಿ ಕಾಸನೀಸ್ ದಾಖಲಿಸಿದ್ದಾರೆ. ಆಲಗೂರಿನವರಾದ ಎಸ್.ಪಿ. ಉಪಾಧ್ಯ, ಸಾವಳಗಿಯ ಸುರೇಂದ್ರ ನಾಂದ್ರೇಕರ, ಭೂಪಾಲ ನಾಂದ್ರೇಕರ, ರಾಯಪ್ಪಾ ಬೆಳಗಲಿ ಮೊದಲಾದವರಿದ್ದರು. ತುಂಗಳದ ಕೃಷ್ಣಪ್ಪಾ ಹೊಸೂರ, ಪಾಂಡಪ್ಪಾ ಗಿರಡ್ಡಿ ಮೊದಲಾದವರು ಕ್ರಿ.ಶ.೧೯೪೧ ರಲ್ಲಿ ತುಂಗಳ ಗ್ರಾಮದಲ್ಲಿ ನೆರೆದ ಪ್ರಜಾಪರಿಷತ್ತಿನ ಸಭೆಯಲ್ಲಿ ಭಾಗವಹಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ಟಿ.ಸಿದ್ಧಲಿಂಗಯ್ಯನವರು ವಹಿಸಿದ್ದರು.

ಅದರಂತೆ ಗಲಗಲಿಯ ಅಂಚೆ ಚೀಲಗಳನ್ನು ಲೂಟಿ ಮಾಡುವಲ್ಲಿ ರಂಗನಾಥ ಹಬ್ಬು, ಲಕ್ಷ್ಮಣ ನಾವಿ, ಬಾಬು ಕೃಷ್ಣಾಜಿ ಶಹಾಪೂರ, ಮಹಾದೇವ ಗುರುಪಾದಪ್ಪಾ ಕತ್ತಿ, ಹಣಮಂತ ಗಣೇಶ ಜೋಶಿ ಮೊದಲಾದವರು ಭಾಗವಹಿಸಿದ್ದರು. ಈ ಭೂಗತ ಚಳುವಳಿಗಾರರಿಗೆ ಅಗತ್ಯ ಹಣವನ್ನು ಕೇಂದ್ರ ಸಮಿತಿಯು ವಾಮನ್‌ರಾವ್ ಬಿದರಿಯವರ ಮೂಲಕ ತಲುಪಿಸುವ ವ್ಯವಸ್ಥೆ ಇದ್ದು, ಪ್ರತಿ ತಂಡಕ್ಕೆ ತಿಂಗಳಿಗೆ ೮, ೧೦ ರೂ.ಗಳನ್ನು ಒದಗಿಸಲಾಗುತ್ತಿತ್ತು. ಈ ಚಳುವಳಿಗಾರರ ಕೋಪಕ್ಕೆ ಅನೇಕ ರೇಲ್ವೆ ನಿಲ್ದಾಣಗಳು, ಪೋಸ್ಟ್ ಆಫೀಸುಗಳು, ಸರಕಾರಿ ಖಜಾನೆಗಳು ತುತ್ತಾದವು. ಅಕ್ಟೋಬರ ಎರಡರಂದು ಬಾಗಲಕೋಟೆ ತಾಲೂಕು ಕಚೇರಿಗೆ ಜಿ.ಆರ್.ದೇಸಾಯಿಯವರು ಬೆಂಕಿ ಹಚ್ಚಿ ರಿಕಾರ್ಡ್ ರೂಮನ್ನು ಸುಟ್ಟರು. ಅಂದೇ ವಿಜಾಪುರ ಪೋಲೀಸ್ ಸ್ಟೇಶನ್ನಿಗೆ ಬಾಂಬ ಹಾಕಲಾಯಿತು. ಅಕ್ಟೋಬರ್ ಮೂರರಂದು ಸಾವಳಗಿಯ

೧೩ ಜನರ ತಂಡಕ್ಕೆ ಹಿಡಕಲ್ಲಿನ ಇಮಾಮಸಾಬ ಮುಲ್ಲಾ ನಾಯಕರಾಗಿದ್ದು, ಅಥಣಿ ಟ್ರೆಜರಿ ಲೂಟ ಮಾಡಲು ಹೊರಟದ್ದು, ಕೊಕನೂರಿನ ವ್ಯಕ್ತಿಯೊಬ್ಬ ನೀಡಿದ ಸುಳುಪಿನಿಂದ ಇವರನ್ನು ಅಥಣಿ ಬಸ್ ನಿಲ್ದಾಣದಲ್ಲಿ ಬಂಧಿಸಲಾಯಿತು.

ಈ ಘಟನೆಗಳಿಂದ ಮನನೊಂದ ಫೇಬ್ರವರಿ ೨೨ರಂದು ಜಮಖಂಡಿಯಲ್ಲಿ ಹರತಾಳ ಮತ್ತು ಪ್ರಾರ್ಥನಾ ಸಭೆಗಳು ನಡೆದು ಗಾಂಧೀಜಿಯವರ ಬಿಡುಗಡೆಗೆ ಒತ್ತಾಯಿಸಿ ತಂತಿಯನ್ನು ಕಳಿಸಲಾಯಿತು. ಈ ನಡುವೆ ದೇಶದ ಸ್ವಾತಂತ್ರ್ಯಕ್ಕಾಗಿ ಅಹೋರಾತ್ರಿ ದುಡಿಯುತ್ತಿದ್ದ ಕೌಜಲಗಿ ಹಣಮಂತರಾಯರು ೧೯೪೩ ರ ಮೇ ತಿಂಗಳ ೩೧ರಂದು ಮರಣ ಹೊಂದಿದರು. ಜೂನ್ ೧೯೪೩ ರಲ್ಲಿ ಭೂಗತರಾಗಿದ್ದ ಅಣ್ಣು ಗುರೂಜಿ ಬಂಧನಕ್ಕೊಳಗಾದರು. ೧೯೪೩ ಅಗಸ್ಟ ೯ರಂದು ಗಾಂಧೀಜಿಯವರು ಜೇಲಿನಿಂದ ಬಿಡುಗಡೆ ಹೊಂದಿದರು. ಜುಲೈ ೨೮ರಂದು ಭೂಗತ ಕಾರ್ಯಕರ್ತರರಿಗೆ ಹೊರಬಂದು ಬಂಧನಕ್ಕೊಳಗಾಗಬೇಕೆಂದು ಕರೆ ನೀಡಿದರು. ಅದರಂತೆ ವಾಮನ್‌ರಾವ್ ಬಿದರಿ ಮತ್ತು ಚನ್ನಬಸಪ್ಪಾ ಅಂಬಲಿಯವರು ಬಂಧಿಸಲ್ಪಟ್ಟರು. ಮುಂದೆ ೧೯೪೪ ಅಗಸ್ಟ ೯ರಂದು ಆರ್.ಆರ್.ದಿವಾಕರರು ಹುಬ್ಬಳ್ಳಿಯಲ್ಲಿ ಬಂಧನಕ್ಕೊಳಗಾಗುವದರೊಂದಿಗೆ ಕರ್ನಾಟಕದಲ್ಲಿ ಚಲೇಜಾವ್ ಚಳುವಳಿ ಅಂತ್ಯಗೊಂಡಿತು. ಆದರೂ ಈ ಭಾಗದಲ್ಲಿ ಡಿಸೆಂಬರ ೧೯೪೪ರವರೆಗೆ ಅಲ್ಲಲ್ಲಿ ಚಿಕ್ಕಪುಟ್ಟ ಚಳುವಳಿಗಳೂ ನಡೆದವು[೧೦].

ಅದರಂತೆ ಜಿಲ್ಲೆಯ ಸಂಸ್ಥಾನದ ಪ್ರದೇಶಗಳಾದ ಜಮಖಂಡಿ, ಮುಧೋಳ, ಔಂಧ ಹಾಗೂ ಜತ್ತ ಸಂಸ್ಥಾನಗಳಲ್ಲೂ ಕೌಜಲಗಿ ಶ್ರೀನಿವಾಸರಾವ್, ಕೌಜಲಗಿ ಹಣಮಂತರಾಯರಂತಹ ನಾಯಕರಿಂದಾಗಿ ಹಾಗೂ ಕಾಂಗ್ರೆಸ್ ಪ್ರೇರಣೆಯಿಂದಾಗಿ ಚಳುವಳಿಗಳು ದೊಡ್ಡ ಪ್ರಮಾಣದಲ್ಲಿ ನಡೆದವು. ಗಾಂಧೀಜಿಯವರ ಅನುಯಾಯಿಗಳಾದ ದಕ್ಷಿಣ ಮರಾಠಾ ರಾಜ್ಯಗಳಲ್ಲಿ ಮತ್ತು ಜಮಖಂಡಿ ಸಂಸ್ಥಾನದ ವಿವಿಧ ಭಾಗಗಳಲ್ಲಿ ಬ್ರಿಟೀಷರ ವಿರುದ್ಧ ಚಳುವಳಿಯನ್ನು ಪ್ರಾರಂಭಿಸಿದರು.

**ಜಮಖಂಡಿಯ ಪ್ರಜಾಪ್ರತಿನಿಧಿಯ ಸಭೆ (೧೯೪೫)**

ಸ್ವಾತಂತ್ರ ಚಳುವಳಿಯು ಇಡೀ ದೇಶದಾದ್ಯಂತ ಪ್ರಾರಂಭವಾಗಿ ಬ್ರಿಟಿಷ ಸಾಮ್ರಾಜ್ಯದ ಬುನಾದಿಯನ್ನು ಅಲ್ಲಾಡಿಸುವಂತಾಯಿತು. ಭಾರತೀಯರ ವಿರೋಧವನ್ನು ಹತ್ತಿಕ್ಕುವುದು ಆಂಗ್ಲ ಸರಕಾರಕ್ಕೆ ಅಸಾಧ್ಯವಾಯಿತು. ಇದೇ ಪ್ರಸಂಗದಲ್ಲಿ ಜಮಖಂಡಿಯಲ್ಲಿ ೧೯೪೫ ರಲ್ಲಿ ಪ್ರಜಾಪರಿಷತ್ತಿನ ಸಭೆಯು ಮಹಾರಾಷ್ಟ್ರದ ಮುಖಂಡನಾದ ಬಾಳಾಸಾಹೇಬ ಖೇರರ ಅಧ್ಯಕ್ಷತೆಯಲ್ಲಿ ಏರ್ಪಟ್ಟಿತ್ತು. ಇದು ಐತಿಹಾಸಿಕ ಮಹತ್ವವನ್ನು ಪಡೆದಿದ್ದು, ನೆರೆಯ ರಾಜ್ಯಗಳಿಂದ ಅನೇಕ ಜನ ಸ್ವಾತಂತ್ರ್ಯ ಹೋರಾಟಗಾರರ ಆಗಮಿಸಿದ್ದರು. ಅವರಿಂದ ಜಮಖಂಡಿ ನಗರದ ಮುಖ್ಯ ಬೀದಿಗಳಲ್ಲಿ ಭವ್ಯವಾದ ಮೆರವಣಿಗೆ ನಡೆದು ಅದರಲ್ಲಿ ಸೇವಾದಳದ ಸಾವಿರಾರು ಸೇವಕರು ಮತ್ತು ಸೇವಕಿಯರು ಭಾಗವಹಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಬಾಳಾಸಾಹೇಬ ಖೇರರು ಸಭೆಯನ್ನುದ್ದೇಶಿಸಿ ಸ್ಫೂರ್ತಿದಾಯಕ ಭಾಷಣವನ್ನು ಮಾಡುತ್ತಾ ರಾಜಾಸಾಹೇಬರು ಪ್ರಜೆಗಳ ಅನುಕೂಲಕ್ಕಾಗಿ ನಗರ ಪಾಲಿಕೆಯನ್ನು ಸ್ಥಾಪಿಸಿದರಲ್ಲದೆ, ಅವರಿಗೆ ಸ್ಥಾನಿಕ ಸ್ವರಾಜ್ಯದ ಆಡಳಿತದ ಹಕ್ಕನ್ನು ಒದಗಿಸಿಕೊಟ್ಟ ಬಗೆಗೆ ಒತ್ತಿ ಹೇಳಿದರು. ಜಮಖಂಡಿಯ ನೆರೆಯ ಭಾಗದ ಅನೇಕ ಕಾಂಗ್ರೆಸ್ ಕಾರ್ಯಕರ್ತರು ಅತಿ ಉತ್ಸಾಹದಿಂದ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಈ ಸಭೆಯಲ್ಲಿ ದಾಮು ಅಣ್ಣ

ಹುಲ್ಯಾಳಕರ, ಎ.ಪ್ಪಿ, ಸಾಬಡೆ, ಅಂದಾನೆಪ್ಪ ದೊಡ್ಡಮೇಟಿ, ವಾಮನ್‌ರಾವ್ ಬಿದರಿ, ಮಹಾದೇವ ಮಠದ, ಶಂಕರ ಗ್ರಾಮೋಪಾಧ್ಯಾಯ, ಪಿ.ಎಮ್.ಬಾಂಗಿ, ತಮ್ಮಣ್ಣಪ್ಪಾ ಚಿಕ್ಕೋಡಿ, ಶ್ರೀಶೈಲಪ್ಪಾ ಅಥಣಿ, ಶ್ರೀ ಅಂಬಲಿ, ಶ್ರೀ ಅಡಿವೆಯ್ಯಾ ಮುಧೋಳ ಮೊದಲಾದ ಪ್ರಮುಖ ಮುಖಂಡರು ಭಾಗವಹಿಸಿದ್ದರು.

ಹೀಗೆ ದೇಶಿ ಸಂಸ್ಥಾನಗಳಲ್ಲಿಯೂ ಸಹ ಸ್ವಾತಂತ್ರ್ಯ ಚಳುವಳಿಯ ತೀವ್ರ ಸ್ವರೂಪವನ್ನು ತಾಳಿತು. ರಾಷ್ಟ್ರವ್ಯಾಪಿ ಹರಡಿದ ಜನಾಂದೋಲನವನ್ನು ಹತ್ತಿಕ್ಕಬೇಕು ಇಲ್ಲವಾದರೆ ದೇಶದಿಂದ ತೊಲಗಬೇಕು. ಆಂಗ್ಲ ಸರಕಾರಕ್ಕೆ ಇದನ್ನು ಬಿಟ್ಟು ಬೇರೆ ಉಪಾಯವೇ ಇಲ್ಲದಂತಾಗಿತ್ತು. ಅದರಂತೆ ದೇಶಿ ಸಂಸ್ಥಾನಿಕರಿಗೂ ಇದೇ ಸ್ಥಿತಿಯುಂಟಾಗಿ ತಮ್ಮ ರಾಜ್ಯದಲ್ಲಿ ಸಂಭವಿಸಿದ ಸ್ವಾತಂತ್ರ್ಯ ಹೋರಾಟವನ್ನು (ಜನರ ಹೋರಾಟವನ್ನು) ಹತ್ತಿಕ್ಕಬೇಕು. ಇಲ್ಲವಾದರೆ ರಾಜ್ಯದಲ್ಲಿ ಸಂವಿಧಾನಾತ್ಮಕ ಸುಧಾರಣೆಗಳನ್ನು ಕೈಕೊಳ್ಳಬೇಕು ಎಂಬ ವಿಚಾರವುಂಟಾದಾಗ ಬಹು ಸಂಖ್ಯಾತ ಸಂಸ್ಥಾನಿಕರು ಸಂವಿಧಾನಾತ್ಮಕ ಸುಧಾರಣೆಗಳನ್ನು ಕೈಕೊಳ್ಳುವ ಅಭಿಪ್ರಾಯಕ್ಕೆ ಬಂದರು. ಆಗ ಜಮಖಂಡಿಯ ಸಂಸ್ಥಾನಿಕರಾದ ಶಂಕರರಾವ್ ಅಪ್ಪಾಸಾಹೇಬರು ಜಮಖಂಡಿ ಸರಕಾರದ ೧೯೪೭ರ ಕಾಯ್ದೆಯನ್ನು ಪಾಸು ಮಾಡಿ ರಾಜ್ಯದಲ್ಲಿ ಜವಾಬ್ದಾರಿಯುತವಾದ ಸರಕಾರವನ್ನು ಸ್ಥಾಪಿಸಿ ತಾವು ಆಡಳಿತದ ಮುಖ್ಯ ಸಲಹೆಗಾರರಾದರು.

**ಜಮಖಂಡಿ ಸರಕಾರದ ೧೯೪೭ ರ ಕಾಯ್ದೆಯ ಮುಖ್ಯಾಂಶಗಳು**

ಈ ಕಾಯ್ದೆಯ ಪ್ರಕಾರ ಜಮಖಂಡಿ ಸಂಸ್ಥಾನದ ಆಡಳಿತವನ್ನು ಶಾಸಾಕಾಂಗ, ಕಾರ್ಯಾಂಗ, ನ್ಯಾಯಾಂಗ ಎನ್ನುವ ಮೂರು ಅಂಗಗಳ ಮುಖಾಂತರ ನಡೆಸುವಂತಾಯಿತು

೧. ಶಾಸಕಾಂಗ: ಇದು ರಾಜಾಸಾಹೇಬ, ಚುನಾಯಿತ ಸದಸ್ಯರು, ಹಾಗೂ ನಾಮಕರಣ ಹೊಂದಿದ ಸದಸ್ಯರನ್ನೊಳಗೊಂಡ ಸಭೆಯಾಗಿತ್ತು. ಸಮಾಜದ ವಿವಿಧ ವರ್ಗಗಳ ಪ್ರತಿನಿಧಿಗಳಿರುತ್ತಿದ್ದರು. ಮುಖ್ಯವಾಗಿ ಇನಾಮದಾರರು, ಸರ್ದಾರರು, ವಾಣಿಜ್ಯ ಮತ್ತು ಉದ್ದಿಮೆದಾರರು, ಸ್ಥಾನಿಕ ಸಂಸ್ಥೆ, ಶಿಕ್ಷಣ ಮತ್ತು ನಗರಪಾಲಿಕೆ ಸದಸ್ಯರು ಈ ಸಭೆಯ ಸದಸ್ಯರಾಗಿರುತ್ತಿದ್ದರು. ಈ ಸಭೆಯ ಅಧಿಕಾರ ಅವಧಿಯು ಮೂರು ವರ್ಷಗಳಾಗಿತ್ತು. ಇದನ್ನು ರದ್ದುಗೊಳಿಸುವ ಹಾಗೂ ಇದರ ಅಧಿಕಾರವನ್ನು ಹೆಚ್ಚಿಸುವ ಅಧಿಕಾರವು ರಾಜನಿಗಿತ್ತು.

೨. ಕಾರ್ಯಾಂಗ: ಕಾರ್ಯಾಂಗವು ಆಡಳಿತದ ಪ್ರಮುಖ ಅಂಗವಾಗಿದ್ದು, ಶಾಸನ ಸಭೆಯ ನಿಯಮಾವಳಿಗಳನ್ನು ನಿರ್ಣಯಗಳನ್ನು ಕಾರ್ಯರೂಪದಲ್ಲಿ ತರುವುದು ಈ ಸಭೆಯ ಮುಖ್ಯ ಕರ್ತವ್ಯವಾಗಿತ್ತು. ಅರಸನೇ ಕಾರ್ಯಾಂಗದ ಮುಖ್ಯಾಧಿಕಾರಿಯಾಗಿದ್ದನು. ಕಾರ್ಯಾಂಗದ ಆಡಳಿತದ ವಿಷಯವನ್ನು ಕಾಯ್ದಿಟ್ಟ ವಿಷಯಗಳು ಮತ್ತು ವರ್ಗಾಯಿಸಲ್ಪಟ್ಟ ವಿಷಯಗಳೆಂಬ ಎರಡು ಭಾಗಗಳಲ್ಲಿ ವಿಂಗಡಿಸಲಾಗಿತ್ತು. ಕಾಯ್ದಿಟ್ಟ ವಿಷಯಗಳನ್ನು ಮೇಲ್ವಿಚಾರಣೆಯನ್ನು ಅರಸನೇ ಮಾಡುತ್ತಿದ್ದನು. ಕಾರ್ಯಾಂಗದ ಮುಖ್ಯಸ್ಥನಾದ ಅರಸನೇ ಸಮಗ್ರ ಅಸೆಂಬ್ಲಿಯ ಆಡಳಿತವನ್ನು ತನ್ನ ಪರವಾಗಿ ನೋಡಿಕೊಳ್ಳಲು "ದಿವಾಣ"ನೆಂಬ ಅಧಿಕಾರಿಯನ್ನು ನೇಮಿಸಿಕೊಳ್ಳುತ್ತಿದ್ದನು. ಅದರಂತೆ ವರ್ಗಾಯಿತ ವಿಷಯಗಳನ್ನು ಮಂತ್ರಿ ಪರಿಷತ್ತು ನೋಡಿಕೊಳ್ಳುತ್ತಿತ್ತು. ಮಂತ್ರಿಮಂಡಳದವರು ಅಸೆಂಬ್ಲಿಯ ಶಾಸನ ಸಭೆಯ

ಸದಸ್ಯರಾಗಿರುತ್ತಿದ್ದರು. ಅವರಲ್ಲಿ ಮೂವರನ್ನು ಸಂಸ್ಥಾನಿಕರು ನಾಮಕರಣ ಮಾಡುತ್ತಿದ್ದರು. ಹೀಗಾಗಿ ಮಂತ್ರಿ ಪರಿಷತ್ತು ಚಿಕ್ಕದಾಗಿದ್ದು ವರ್ಗಾಯಿತ ವಿಷಯಗಳನ್ನು ನೋಡಿಕೊಳ್ಳುತ್ತಿದ್ದರು.

೩. ನ್ಯಾಯಾಂಗ: ಸಂಸ್ಥಾನಿಕರ ಕಾಲದಲ್ಲಿ ನ್ಯಾಯಾಂಗವು ಅಸೆಂಬ್ಲಿ ಮತ್ತು ಮಂತ್ರಿ ಪರಿಷತ್ತಿನಿಂದ ಸಂಪೂರ್ಣ ಸ್ವತಂತ್ರವಾಗಿತ್ತು. ಆದರೆ ಆಳರಸನ ಅಧಿಕಾರಿಕ್ಕೊಳಪಟ್ಟಿತ್ತು. ನ್ಯಾಯಾಧೀಶರನ್ನು ನೇಮಿಸಿಕೊಳ್ಳುವ, ವರ್ಗಾಯಿಸುವ ಹಾಗೂ ಪ್ರಸಂಗಾನುಸಾರ ಅವನನ್ನು ಅಧಿಕಾರದಿಂದ ಕಿತ್ತುಹಾಕುವುದು ಅರಸನ ಕೈಯಲ್ಲಿತ್ತು.

ಕ್ರಿ.ಶ.೧೯೪೭ರಲ್ಲಿ ಸಂಸ್ಥಾನದಲ್ಲಿ ಹೊಣೆಗಾರಿಕೆಯ ಸರಕಾರವನ್ನು ಸ್ಥಾಪಿಸಿದಾಗ ಶ್ರೀಮಾನ್ ಬಿ.ಡಿ.ಜತ್ತಿಯವರು ಮಂತ್ರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಶ್ರೀಮಂತ ಶಂಕರರಾವ್ ಅಪ್ಪಾಸಾಹೇಬರು ಕ್ರಿ.ಶ. ೧೯೪೭ ರ ಮಧ್ಯದಲ್ಲಿ ಅನಾರೋಗ್ಯದಿಂದ ಬಳಲುತ್ತಿದ್ದು, ಆರೋಗ್ಯ ತಪಾಸಣೆಗಾಗಿ ಇವರನ್ನು ಮುಂಬೈ ಆಸ್ಪತ್ರೆಗೆ ಕರೆದೊಯ್ಯಲಾಯಿತು. ಆಗ ಜಮಖಂಡಿಯಲ್ಲಿ ಪ್ರಜಾಪರಿಷತ್ತು ಬ್ರಿಟಿಷರಿಂದ ದೇಶವನ್ನು ಮತ್ತು ಪಟವರ್ಧನರಿಂದ ಜಮಖಂಡಿ ಸಂಸ್ಥಾನವನ್ನು ಸಂಪೂರ್ಣ ಸ್ವಾತಂತ್ರ್ಯಗೊಳಿಸುವುದಕ್ಕಾಗಿ ಎಡೆಬಿಡದೆ ಹೋರಾಟವನ್ನು ನಡೆಸಿತ್ತು. ಇದೇ ಸಮಯದಲ್ಲಿ ಭಾರತೀಯರ ನಿರಂತರ ಹೋರಾಟದ ಫಲವಾಗಿ ದೇಶವು ಅಗಸ್ಟ್ ೧೫, ೧೯೪೭ರಂದು ಸ್ವತಂತ್ರವಾದದ್ದು ಶಂಕರರಾವ್ ಅಪ್ಪಾಸಾಹೇಬರಿಗೆ ಎಲ್ಲಿಲ್ಲದ ಸಂತೋಷವನ್ನುಂಟು ಮಾಡಿತು. ಆಗ ಅವರು ಜಮಖಂಡಿಯ ಜನತೆಗೆ ಸಂಪೂರ್ಣ ಸ್ವಾಯತ್ತತೆಯನ್ನು ಕೊಡುವ ವಿಚಾರವುಳ್ಳವರಾಗಿದ್ದರು. ಆದರೆ ದುರ್ದೈವದಿಂದ ಇವರು ದೇಶವು ಸ್ವತಂತ್ರವಾದ ಕೆಲವೇ ದಿವಸಗಳಲ್ಲಿ ಅಂದರೆ ಅಗಸ್ಟ್ ೨೨, ೧೯೪೭ ರಂದು ಮರಣ ಹೊಂದಿದರು. ಇವರ ಮರಣದ ನಂತರ ಇವರ ಮಗನಾದ ೩ನೇ ಪರಶುರಾಮ ಪು.ಪಟವರ್ಧನರು ಅಧಿಕಾರಕ್ಕೆ ಬಂದರು. ನಂತರ ಜನರ ಒತ್ತಾಯದಂತೆ ಭಾರತೀಯ ಒಕ್ಕೂಟದಲ್ಲಿ ಸಂಸ್ಥಾನವನ್ನು ವಿಲೀನಗೊಳಿಸುವುದರೊಂದಿಗೆ ಈ ಭಾಗವು ವಿದೇಶಿಯರ ಹಿಡಿತದಿಂದ ಮುಕ್ತವಾಗಿ ಸ್ವಾತಂತ್ರ್ಯಪಡೆಯಿತು.

**೭.೨. ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು**

ತೇರದಾಳ ಮತ್ತು ಅದರ ಸುತ್ತಲಿನ ಜಮಖಂಡಿ ಮೊದಲಾದಡೆ ಆಂಗ್ಲ ಪ್ರಭುತ್ವದ ವಿರುದ್ಧ ಹೋರಾಡಿದ ಹಲವು ಹೋರಾಟಗಾರರು ಇದ್ದಾರೆ. ಅವರಲ್ಲಿ ಮಹಾಲಿಂಗಪ್ಪ ಕಲಕಂಬ, ಮಲ್ಲಪ್ಪ ಕುಂಬಾರ, ಶ್ರೀ ಚನ್ನಪ್ಪ ದಬಾಡಿ, ಶ್ರೀ ತುಕಾರಾಮ ಕೋಪರ್ಡೆ, ಶ್ರೀ ಭಾಸ್ಕರ ಜೀವಾಜಿ ಕೋಪರ್ಡೆ, ಸಿದ್ದಪ್ಪ ಹರವಿ, ಈರಪ್ಪ ಅಸ್ಕಿ. ಮೊದಲಾದವರು ಪ್ರಮುಖರಾಗಿದ್ದಾರೆ[೧೧]. ಅವರಲ್ಲಿ ಪ್ರಾಣದ ಹಂಗು ತೊರೆದು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕೆಲ ಮುಖ್ಯ ಹೋರಾಟಗಾರರನ್ನು ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

**೧. ಶ್ರೀಮಹಾಲಿಂಗಪ್ಪ ಗಿರಮಲ್ಲಪ್ಪ ಕಲಕಂಬ**

ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹಾನ್ ರಾಷ್ಟ್ರೀಯ ಹೋರಾಟಗಾರರ ಜೀವನ ಚರಿತ್ರೆಗಳನ್ನು ಓದಿ ಅವರು ದೇಶಕ್ಕಾಗಿ ಮಾಡಿದ ತ್ಯಾಗ-ಬಲಿದಾನಗಳಿಂದ ಪ್ರೇರಿತರಾಗಿ, ಇವರು ದೇಶದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಲು ಕಂಕಣಬದ್ಧರಾದ ಮಹಾನ್ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಮಹಾಲಿಂಗಪ್ಪಾ ಕಲಕಂಬ ಇವರು ಜಮಖಂಡಿ ತಾಲೂಕಿನ ಬನಹಟ್ಟಿ ನಗರದಲ್ಲಿ ಕ್ರಿ.ಶ. ೧೯೦೪ರಲ್ಲಿ ಜನಿಸಿದರು. ಇವರು ಬನಹಟ್ಟಿಯಲ್ಲಿಯೇ ಪ್ರಾಥಮಿಕ ಕನ್ನಡ ನಾಲ್ಕನೇ ತರಗತಿಯವರೆಗೆ ಕಲಿತು, ಮುಂದೆ ಇಂಗ್ಲೀಷ್ ಶಿಕ್ಷಣಕ್ಕಾಗಿ

ರಬಕವಿಗೆ ಹೋದರು. ನಂತರ ಮೆಟ್ರಿಕ್ ತರಗತಿವರೆಗೆ ಮುಧೋಳದಲ್ಲಿ ಕಲಿತರು. ಇವರು ಮೆಟ್ರಿಕ್ ಪರೀಕ್ಷೆ ಪಾಸಾದ ಮೇಲೆ ಗುಳೇದಗುಡ್ಡದಲ್ಲಿ ಶಿಕ್ಷಕರಾಗಿ ಸೇವೆ ಪ್ರಾರಂಭಿಸಿದರು. ಇವರು ಕನ್ನಡ, ಮರಾಠಿ, ಹಿಂದಿ, ಇಂಗ್ಲೀಷ ಭಾಷೆಗಳನ್ನು ಬಲ್ಲವರಾಗಿದ್ದರು. ಇವರು ಶಿಕ್ಷಕ ವೃತ್ತಿಯಲ್ಲಿ ತೊಡಗಿದಾಗ ಶಾಲೆಯ ಆಡಳಿತಾಧಿಕಾರಿಗಳ ಅನ್ಯಾಯಕ್ಕೆ ಬೇಸತ್ತು. ಈ ವೃತ್ತಿಯಲ್ಲಿ ಮುಂದುವರೆಯುವುದು ಉಚಿತವಲ್ಲವೆಂದು ಬಗೆದು ರಾಜೀನಾಮೆ ಕೊಟ್ಟು ಮರಳಿ ತಮ್ಮೂರಿಗೆ ಬಂದರು. ಇವರು ಶಾಲಾ ಶಿಕ್ಷಕರಾಗಿದ್ದರಿಂದ ಜನರು ಇವರನ್ನು ಕಲಕಂಬ ಮಾಸ್ತರರೆಂದೇ ಕರೆಯುತ್ತಿದ್ದರು. ನೇಕಾರಿಕೆಯು ಇವರ ಮನೆತನದ ಉದ್ಯೋಗವಾಗಿತ್ತು. ಆದರೆ ಅನೇಕ ಜನಪಾಲಕರ ವಿನಂತಿಯ ಮೇರೆಗೆ ಮಕ್ಕಳಿಗೆ ವಿದ್ಯಾದಾನ ಮಾಡಲು ಒಂದು ಖಾಸಗಿ ಗುರುಕುಲವನ್ನು ಪ್ರಾರಂಭಿಸಿದರು[೧೨].

ಕ್ರಿ.ಶ.೧೯೨೪ ರಲ್ಲಿ ಬೆಳಗಾವಿಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನಕ್ಕೆ ಆಗಮಿಸಿದ ಮಹಾತ್ಮಾ ಗಾಂಧೀಜಿ, ಪಂಡಿತ ನೆಹರು, ಡಾ.ಬಾಬು ರಾಜೇಂದ್ರ ಪ್ರಸಾದರು ಭಾರತದ ಸ್ವಾತಂತ್ರ್ಯದ ಕುರಿತು ಮಾಡಿದ ಭಾಷಣದಿಂದ ಪ್ರೇರಿಪಿತರಾಗಿ ಕಲಕಂಬ ಮಾಸ್ತರರು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಗಾಂಧೀಜಿಯವರ ಆದೇಶದಂತೆ ಪಾನ ಪ್ರತಿಬಂಧ ಮಾಡುವುದಕ್ಕಾಗಿ ಸಿಂಧಿ ಗಿಡಗಳನ್ನು ಕಡಿಯುವ ಚಳುವಳಿಯನ್ನು ಪ್ರಾರಂಭಿಸಿ ನೆರೆಯ ಹಳ್ಳಿಯಾದ ಹೊಸೂರು ಗ್ರಾಮದ ಹಳ್ಳದಲ್ಲಿ ಬೆಳೆದು ನಿಂತಿದ್ದ ಸಿಂಧಿ ಮರಗಳನ್ನು ಕಡಿದು ಹಾಕಿದ್ದರಿಂದ ಸರಕಾರವು ಇವರೊಂದಿಗೆ ೭ ಜನರನ್ನು ಬಂಧಿಸಿ ಕಾರಾಗೃಹದಲ್ಲಿ ಹಾಕಿತು. ಎರಡನೇ ಸಲ ೧೪ ಜನರನ್ನು ಬಂಧಿಸಿ, ಅವರಲ್ಲಿ ೧೧ ಜನರು ತಪ್ಪಿಸಿಕೊಂಡು ಬಿಡುಗಡೆಯಾದರು[೧೩]. ಆದರೆ ಕಲಕಂಬ ಮಾಸ್ತರರು, ಶಿವಯೋಗೆಪ್ಪಾ ವಡವಡಗಿ, ಪುಸಾರಾಮ ಡಾಗಾ ಇವರು ತಾವು ಮಾಡಿದ್ದು ತಪ್ಪೆಂದು ಒಪ್ಪಿಕೊಳ್ಳದೆ ದಿನಾಂಕ ೨೫-೧೦-೧೯೩೦ ರಂದು ೬ ತಿಂಗಳು ಶಿಕ್ಷೆಗೊಳಗಾದರು.

ಒಂದು ಸಭೆಯಲ್ಲಿ ಜಮಖಂಡಿ ಸಂಸ್ಥಾನಿಕರನ್ನು ಖಂಡಿಸಿ ಮಾತನಾಡಿದ್ದರಿಂದ ಕಲಬಂಕ ಮಾಸ್ತರರಿಗೆ ದಿನಾಂಕ ೨೬-೬-೧೯೩೯ ರಂದು ಇಂಡಿಯನ್ ಸಿವಿಲ್ ಕೋಡ ಕಲಂ ೧೨೪(೬) ಪ್ರಕಾರ ಒಂದು ವರುಷ ೧೦ ತಿಂಗಳ ಶ್ರಮ ಶಿಕ್ಷೆ ಮತ್ತು ೨೦೦೦.೦೦ ರೂ ದಂಡ ವಿಧಿಸಲಾಯಿತು. ದಂಡ ಕೊಡದ ಪಕ್ಷದಲ್ಲಿ ಮತ್ತೆ ೮ ತಿಂಗಳ ಶಿಕ್ಷೆ ಅನುಭವಿಸಬೇಕು. ಹೀಗೆ ಕಲಕಂಬ ಮಾಸ್ತರರು ದಿನಾಂಕ ೨೬-೬-೧೯೩೯ ರಿಂದ ೨೦-೬-೧೯೪೧ರವರೆಗೆ ಶಿಕ್ಷೆ ಅನುಭವಿಸಬೇಕಾಯಿತು. ಕ್ರಿ.ಶ.೧೯೪೨ರ ಅಗಸ್ಟ ೮ರಂದು ಮುಂಬೈ ಗೋವಾಲಿಯಾ ಮೈದಾನದಲ್ಲಿ ಎ.ಐ.ಸಿ.ಸಿ. ಸಭೆಯಲ್ಲಿ ಚಲೆಜಾವ್ ಚಳುವಳಿಯ ಗೊತ್ತುವಳಿ ಪಾಸಾಯಿತು. ಕೂಡಲೇ ಮಹಾತ್ಮಾ ಗಾಂಧೀಜಿ, ನೆಹರು, ಸರ್ದಾರ್ ಪಟೇಲ, ಅಜಾದ ಮುಂತಾದವರ ಬಂಧನವಾಯಿತು. ಈ ಸುದ್ದಿ ಮುಟ್ಟಿದಾಕ್ಷಣವೇ ಕಲಕಂಬ ಮಾಸ್ತರರು ತಮ್ಮ ಅನೇಕ ಯೋಧರೊಂದಿಗೆ ಸೇರಿ ೧೯೪೨ ಅಗಸ್ಟ ೧೫ ರಂದು ಸ್ವಾತಂತ್ರ್ಯ ಯೋಧರಾದ ಅನಂತರಾವ್ ಸಾಬಡೆ (ವಕೀಲರು), ಶ್ರೀ ಟಿ.ಆರ್.ನೇಶ್ವಿ, ವಾಮನರಾವ್ ಬಿದರಿ, ಮುನವಳ್ಳಿ ವಕೀಲರ ಸಮ್ಮುಖದಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧರೆಂದು ಪ್ರತಿಜ್ಞೆ ಮಾಡಿದರು[೧೪]. ನಂತರ ಸಾವಳಗಿ, ಕಾಜಿಬೀಳಗಿ, ಕುಂಚನೂರ, ಮುಧೋಳ, ಮಹಾಲಿಂಗಪೂರ ಮೊದಲಾದ ಊರುಗಳಿಗೆ ಹೋಗಿ, ಜನರಲ್ಲಿ ಸ್ವಾತಂತ್ರ್ಯಾಭಿಮಾನವನ್ನು ಹುಟ್ಟಿಸಿ, ಆಂಗ್ಲರ ವಿರುದ್ಧ ಹೋರಾಡುವಂತೆ ಮಾಡಿದರು. ಇದೇ ಸಮಯದಲ್ಲಿ ನಿಂಗಪ್ಪಾ ಅಂಟಿನ, ಚನ್ನಪ್ಪಾ ದಬಾಡಿ, ನಾಮದೇವ ಕೋಪರ್ಡೆ ಮೊದಲಾದ ಯೋಧರು

ಕೂಡಿಕೊಂಡು ಸಿದ್ಧಾಪುರದಿಂದ ಶಿರೋಳದ ವರೆಗಿದ್ದ ತಾರ-ತಂತಿಯನ್ನು ಹರಿದು ಬಾವಿಯಲ್ಲಿ ಎಸೆದರು. ಈ ಎಲ್ಲ ವಿಧ್ವಂಸಕ ಕೃತ್ಯಗಳಿಗೆಲ್ಲ ಕಲಕಂಬ ಮಾಸ್ತರರೇ ಕಾರಣವೆಂದು ಬಗೆದು ಸರಕಾರವು ಇವರಿಗೆ ಸಿಕ್ಕಲ್ಲಿ ಗುಂಡು ಹಾಕುವ ಆಜ್ಞೆಯನ್ನು ಹೊರಡಿಸಿತು. ಇವರು ಭೂಗತರಾಗಿ ವೇಷ ಬದಲಿಸಿಕೊಂಡು ತಿರುಗುತ್ತಿದ್ದರಿಂದ ಇವರನ್ನು ಹಿಡಿದುಕೊಟ್ಟವರಿಗೆ ೫,೦೦೦-೦೦ ರೂ. ಬಹುಮಾನವನ್ನು ಪ್ರಕಟಿಸಿತು.

ಕಲಕಂಬ ಮಾಸ್ತರರು ಸರಕಾರದ ಯಾವ ಬಂಧನಕ್ಕೂ ಹೆದರದೆ ತಮ್ಮ ತರುಣ ಕ್ರಾಂತಿಕಾರಿ ಸ್ನೇಹಿತರ ಸೈನ್ಯವನ್ನೆ ರಚಿಸಿಕೊಂಡಿದ್ದರು. ಬಂದೂಕು, ಪಿಸ್ತೂಲ್ ಮೊದಲಾದ ಮಾರಕ ಅಸ್ತ್ರಗಳನ್ನು ಕಲೆಹಾಕಿದ್ದರು. ಅಲ್ಲದೆ ಕುಂಚನೂರಿನ ನಾಗಪ್ಪಾ ಪತ್ತಾರ ಇವರು ತಯಾರಿಸಿದ ದೇಶಿ ಪಿಸ್ತೂಲುಗಳು ಇವರಲ್ಲಿದ್ದವು. ಮುಂದೆ ಇವರ ತಂಡವು ಸಾವಳಗಿಯ ರಾಯಪ್ಪನ ಗುಂಪಿನೊಂದಿಗೆ ಸೇರಿ ಅನೇಕ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿ, ಸರಕಾರಕ್ಕೆ ತಲೆನೋವಾಗಿದ್ದರು. ಇವರನ್ನು ಸೆರೆಹಿಡಿಯಲು ಪೊಲೀಸರ ತಂಡ ಸದಾ ಶೋಧನೆಯಲ್ಲಿ ತೊಡಗಿತ್ತು. ಕೊನೆಗೊಂದು ದಿನ ಇವರನ್ನು ಬಂಧಿಸಿ ಕಾರಾಗೃಹದಲ್ಲಿಡಲಾಯಿತು. ಮುಂದೆ ೧೯೪೭ರಲ್ಲಿ ಬಿಡುಗಡೆಯಾದರು.

೧೯೪೭ ಅಗಸ್ಟ ೧೫ರಂದು ದೇಶವು ಸ್ವಾತಂತ್ರ್ಯವಾಯಿತು. ನಂತರ ಜಮಖಂಡಿಯ ಸಂಸ್ಥಾನವು ದಿನಾಂಕ ೮-೩-೧೯೪೮ರಲ್ಲಿ ಅಖಿಲ ಭಾರತದ ಒಕ್ಕೂಟದಲ್ಲಿ ವಿಲೀನವಾಯಿತು. ನಂತರ ಕಲಕಂಬ ಮಾಸ್ತರರು ಕರ್ನಾಟಕ ಏಕೀಕರಣದ ಮಹಾಸಮಿತಿಯ ಸದಸ್ಯರಾಗಿ ಶ್ರೀ ಅಂದಾನೆಪ್ಪಾ ದೊಡ್ಡಮೇಟಿ, ಶ್ರೀ ಎಸ್.ನಿಜಲಿಂಗಪ್ಪ, ಟಿ.ಆರ್.ನೇಶ್ವಿ, ಶಾಂತಿನಾಥ ಇಂಗಳೆ, ಅದರಗುಂಟಿ ಶಂಕರಗೌಡರು, ತಲ್ಲೂರ ರಾಯನಗೌಡ್ರು, ಬಸರಿಗಿಡದ ವೀರಪ್ಪನವರು, ಶ್ರೀಮತಿ ಪದ್ಮಾದೇವಿ ಅಂಗಡಿ, ಬಳವಂತರಾವ ದಾತಾರ, ಗಂಗಾಧರರಾವ್ ದೇಶಪಾಂಡೆ ಮೊದಲಾದ ಮುಖಂಡರೊಂದಿಗೆ ಕೂಡಿ ಕರ್ನಾಟಕದ ಏಕೀಕರಣಕ್ಕಾಗಿ ದುಡಿದರು. ಹೀಗೆ ಇವರು ದೇಶದ ಸ್ವಾತಂತ್ರ್ಯಕ್ಕಾಗಿ ಮತ್ತು ನಾಡಿನ ಏಕೀಕರಣಕ್ಕಾಗಿ ಜೀವನ ಪರ್ಯಂತ ದುಡಿದು ದಿನಾಂಕ ೨೦-೩-೧೯೫೯ ರಂದು ವಿಧಿವಶರಾದರು.

**೨. ಮಲ್ಲಪ್ಪ ಕುಂಬಾರ**

ಇವರು ಕ್ರಿ.ಶ. ೧೯೦೧ ರಲ್ಲಿ ಜಮಖಂಡಿ ತಾಲೂಕಿನ ತೇರದಾಳ ನಗರದಲ್ಲಿ ಜನಿಸಿದರು. ಇವರು ತಮ್ಮ ಗ್ರಾಮದಲ್ಲಿಯೇ ಖಾಸಗಿ ಶಿಕ್ಷಕರಿಂದ ರಾತ್ರಿ ವೇಳೆ ಅಕ್ಷರಾಭ್ಯಾಸ ಮಾಡಿ ಆನಂತರ ಅಂದರೆ ತಮ್ಮ ೯ನೇ ವಯಸ್ಸಿಗೆ ತಮ್ಮ ಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದರು. ನಂತರ ಉದರ ಪೋಷಣೆಗಾಗಿ ತಮ್ಮ ಮನೆತನದ ಕಾಯಕವಾದ ಕುಂಬಾರಿಕೆಯ ಉದ್ಯೋಗದಲ್ಲಿ ತೊಡಗಿದರು. ಇವರು ಆಂಗ್ಲರ ಆಳ್ವಿಕೆಯಿಂದ ದೇಶವನ್ನು ಮುಕ್ತಗೊಳಿಸಬೇಕೆಂಬ ಹಂಬಲವುಳ್ಳವರಾಗಿದ್ದರು. ಅದಕ್ಕಾಗಿ ಬನಹಟ್ಟಿಯ ಅಂದಿನ ಸ್ವಾತಂತ್ರ್ಯ ಹೋರಾಟಗಾರರ ಮುಖಂಡರಾದ ಕಲಕಂಬ ಮಾಸ್ತರ ಮತ್ತು ಗಾಂಧೀಜಿಯವರ ಹೋರಾಟಗಳಿಂದ ಪ್ರೇರೇಪಿತರಾಗಿ ಕ್ರಾಂತಿಕಾರಿ ಗುಂಪಿನಲ್ಲಿ ಸೇರಿ ಚಳುವಳಿಯನ್ನು ಪ್ರಾರಂಭಿಸಿದರು. ಇವರು ೧೯೪೨ರಲ್ಲಿ ಭಾರತ ಬಿಟ್ಟುತೊಲಗಿ ಚಳುವಳಿಯ ಭಾಗವಾಗಿ ನಡೆದ ಟೆಲಿಪೋನ್ ತಂತಿಗಳನ್ನು ಕತ್ತರಿಸುವ, ಅಂಚೆ ಕಚೇರಿ ಮತ್ತು ರೈಲು ನಿಲ್ದಾಣಗಳಿಗೆ ಬೆಂಕಿ ಇಡುವ ಕಾರ್ಯದಲ್ಲಿ ತೊಡಗಿದ್ದರಿಂದ ಸರಕಾರವು ಇವರನ್ನು ಬಂಧಿಸಿ ಅಥಣಿ ಕಾರಾಗೃಹದಲ್ಲಿರಿಸಿತು[೧೫]. ನಂತರ ಕಠಿಣ ಶಿಕ್ಷೆಯನ್ನು ವಿಧಿಸಿತು. ಸದಾ ಖಾಕಿಧಾರಿಗಳಾದ ಇವರು ಚರಕದಿಂದ ನೂಲುವುದು ಮತ್ತು ಅಸ್ಪೃಶ್ಯತೆ ನಿವಾರಣೆಗಾಗಿ ಜನರಲ್ಲಿ ಜಾಗೃತಿ

ಮೂಡಿಸುವ ಸಲುವಾಗಿ ತೇರದಾಳ, ಬನಹಟ್ಟಿ, ರಬಕವಿ ಮೊದಲದೆಡೆ ಸಭೆ ನಡೆಸಿದರು. ಅಲ್ಲದೇ ಜಾತಿ ಸಮಾನತೆ ತರುವ ಈ ಗೀತೆಯನ್ನು ಹಾಡುವುದರ ಮೂಲಕ ಜನರಲ್ಲಿ ಜಾಗೃತಿ ಮೂಡಿಸಿದರು.

**ಪಿತರವನೆಂದು ಸುರುಲೀ... ನರ ಜನ್ಮವನು ಉಳಿದು**
**ಚಾತುರ್ವರ್ಣಗಳಲ್ಲಿ ಜಾತಿ ಬೇಧಗಳಿಲ್ಲಾ ॥ಪ॥**
**ಬ್ರಾಹ್ಮಣ ಎನಲು ನಾ ಬ್ರಹ್ಮ ಜ್ಞಾನಿಯು ಅಲ್ಲಾ**
**ಕ್ಷತ್ರೀಯನೆನಲು ನಾ ದೀನ ರಕ್ಷಕನಲ್ಲಾ ॥ಪ॥**
**ಶಾಂತಿ ಸದ್ಗುಣವಿಲ್ಲಾ ವೈಶ್ಯನು ನಾನಲ್ಲ**
**ಭಕ್ತಿ ಭಾವನೆ ಇಲ್ಲಾ ಶೂದ್ರನು ಮೊದಲಲ್ಲಾ ॥ಪ॥**
**ಚಾತುರ್ವರ್ಣಮಯಂ ಸೃಷ್ಟಿ**
**ಗುಣಕರ್ಮ ವಿಭಾಗಶಃ ॥ಚಾ॥**

ಅಂದಿನ ಸರ್ಕಾರ ಸಭೆ ಸಮಾರಂಭಗಳನ್ನು ನಿರ್ಬಂಧಿಸಿದ ಸಂದರ್ಭದಲ್ಲಿ ಜನರ ಮನಸ್ಸನ್ನು ಪರಿವರ್ತಿಸಲು ನಾಟಕ, ಹರಿಕಥೆಯಂತ ವೇದಿಕೆಗಳಲ್ಲಿ ಇದೇ ರೀತಿಯ ಅನೇಕ ಹಾಡುಗಳನ್ನು ಬಳಸಿಕೊಂಡು ಜನರನ್ನು ಬ್ರಿಟಿಷರ ವಿರುದ್ಧ ಸಂಘಟಿಸಲು ಇವರು ಶ್ರಮಿಸಿದರು. ಒಮ್ಮೆ ತೇರದಾಳಕ್ಕೆ ಆಗಮಿಸಿದ ಬ್ರಿಟಿಷ್ ಅಧಿಕಾರಿಯಾದ ಕರ್ನಲ್ ಮುಂದೆ ವಂದೆ ಮಾತರಂ ಘೋಷಣೆಯನ್ನು ಕೂಗಿದ ಕಾರಣಕ್ಕೆ ಇವರನ್ನು ಬಂಧಿಸಿ ೧೯೪೭ರವರಗೆ ಸೆರಮನೆಯಲ್ಲಿಡಲಾಯಿತು[೧೬].

**೬. ಶ್ರೀ ಚನ್ನಪ್ಪ ಕಾಡಪ್ಪ ದಬಾಡಿ**

ಇವರು ಕ್ರಿ.ಶ. ೧೯೦೧ ರಲ್ಲಿ ಜಮಖಂಡಿ ತಾಲೂಕಿನ ಬನಹಟ್ಟಿ ನಗರದಲ್ಲಿ ಜನಿಸಿದರು. ಇವರು ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ತಮ್ಮ ಮನೆತನದ ಕಾಯಕವಾದ ನೇಯ್ಗೆಯ ಉದ್ಯೋಗದಲ್ಲಿ ತೊಡಗಿದರು. ಇವರು ವ್ಯಾಪಾರಿ ವೃತ್ತಿಯಲ್ಲಿದ್ದರೂ ಆಂಗ್ಲರ ಆಳ್ವಿಕೆಯಿಂದ ದೇಶವನ್ನು ಮುಕ್ತಗೊಳಿಸಬೇಕೆಂಬ ಹಂಬಲವುಳ್ಳವರಾಗಿದ್ದರು. ಅದಕ್ಕಾಗಿ ಬನಹಟ್ಟಿಯ ಅಂದಿನ ಸ್ವಾತಂತ್ರ್ಯ ಹೋರಾಟಗಾರರ ಮುಖಂಡರಾದ ಕಲಕಂಬ ಮಾಸ್ತರರ ಗುಂಪಿನಲ್ಲಿ ಸೇರಿ ಚಳುವಳಿಯನ್ನು ಪ್ರಾರಂಭಿಸಿದರು. ಇವರು ದಿನಾಂಕ ೨೦-೫-೧೯೪೧ರಲ್ಲಿ ಅಥಣಿ ತಾಲೂಕಿನ ಮಹಿಷವಾಡಿಯಲ್ಲಿ ವೈಯಕ್ತಿಕ ಸತ್ಯಾಗ್ರಹದಲ್ಲಿ ತೊಡಗಿದ್ದರಿಂದ ಸರಕಾರವು ಇವರನ್ನು ಬಂಧಿಸಿ ಅಥಣಿ ಕಾರಾಗೃಹದಲ್ಲಿರಿಸಿತ್ತು. ನಂತರ ಬೆಳಗಾವಿಯ ಹಿಂಡಲಗಾ ಜೈಲಿಗೆ ರವಾನಿಸಿ ಆರು ತಿಂಗಳ ಕಠಿಣ ಶಿಕ್ಷೆ ಮತ್ತು ಎರಡು ನೂರು ರೂಪಾಯಿ ದಂಡ ಪಾವತಿಸದಿದ್ದರೆ ಮತ್ತೆ ಎರಡು ತಿಂಗಳ ಶಿಕ್ಷೆ ಹೀಗೆ ಒಟ್ಟು ಎಂಟು ತಿಂಗಳ ಶಿಕ್ಷೆಯನ್ನು ಅನುಭವಿಸಿದರು.

ಇವರು ಜಮಖಂಡಿ ಸಂಸ್ಥಾನಿಕರಾದ ಪಟವರ್ಧನ ಮಹಾರಾಜರ ಆಡಳಿತವನ್ನು ಕಟುವಾಗಿ ಟೀಕಿಸುತ್ತಾ ಅವರನ್ನು ಹೀನಾಯವಾಗಿ ಹೀಯಾಳಿಸಿ ಭಾಷಣ ಮಾಡಿದ್ದರಿಂದ ಇವರನ್ನು ಬಂಧಿಸಿ ಜಮಖಂಡಿಯ ಜೈಲಿನಲ್ಲಿ ಬಂಧಿಸಿಡಲಾಯಿತು. ಮುಂದೆ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಇವರಿಗೆ ೬ ತಿಂಗಳ ಕಠಿಣ ಶಿಕ್ಷೆಯಾಯಿತು. ಆಗ ಜಮಖಂಡಿ ಜೈಲು ತುಂಬಿದ್ದರಿಂದ ನಾಲ್ಕು ದಿವಸ ಸಂಸ್ಥಾನಿಕರ ಉಗ್ರಾಣದಲ್ಲಿರಿಸಿ ನಂತರ ಇವರನ್ನು ಮುಂಬೈ ಸೆಂಟ್ರಲ್ ಜೈಲಿಗೆ ಸ್ಥಳಾಂತರಿಸಲಾಯಿತು. ಆಗ ಆ ಜೈಲಿನಲ್ಲಿ ರಾಜಕೀಯ ಕೈದಿಗಳಾದ ಶ್ರೀ ಅಣ್ಣೂ ಗುರೂಜಿ, ವಸಂತ ದಾದಾ ಪಾಟೀಲ, ಅಪ್ಪಣ್ಣಗೌಡರು ಪಾಟೀಲ

ಸಂಕೇಶ್ವರ, (ಇಂದಿನ ಸಂಕೇಶ್ವರ ಸಕ್ಕರೆ ಕಾರ್ಖಾನೆಯ ಸಂಸ್ಥಾಪಕರು) ಇನ್ನೂ ಅನೇಕ ಗಣ್ಯ ಯೋಧರು ಇದ್ದಿದ್ದರಿಂದ ಇವರಿಗೆ ಮತ್ತಿಷ್ಟು ಸ್ಫೂರ್ತಿ ಬಂದಿತು. ಇವರು ಶಿಕ್ಷೆ ಅನುಭವಿಸಿದ ಬಂದ ನಂತರ ತಮ್ಮ ಹೋರಾಟವನ್ನು ಮುಂದುವರೆಸಿದರು[೧೭].

ಚನ್ನಪ್ಪಾ ದಬಾಡಿಯವರು ಜಮಖಂಡಿ ಸಂಸ್ಥಾನದ ಪ್ರಜಾಪರಿಷತ್ತಿನ ಬನಹಟ್ಟಿಯಿಂದ ಚುನಾಯಿತ ಸದಸ್ಯರಾಗಿ ಅನೇಕ ಜನಹಿತ ಕಾರ್ಯಗಳನ್ನು ಮಾಡಿದರು. ಜಮಖಂಡಿ ಸಂಸ್ಥಾನವು ವಿಲಿನವಾದ ನಂತರ ಹರಿದು ಹೋದ ಕನ್ನಡ ನಾಡನ್ನು ಒಂದು ಗೂಡಿಸಲು ಕರ್ನಾಟಕ ಏಕೀಕರಣದ ಚಳುವಳಿಯಲ್ಲಿ ಭಾಗವಹಿಸಿ ಯಶಸ್ವಿಯಾದರು. ಹೀಗೆ ಇವರು ದೇಶದ ಸ್ವಾತಂತ್ರ್ಯಕ್ಕಾಗಿ ಹಾಗೂ ನಾಡಿನ ಏಕೀಕರಣಕ್ಕಾಗಿ ಅವಿರತ ಹೋರಾಡಿ ನೆಮ್ಮದಿಯಿಂದ ತಮ್ಮ ೭೮ನೇ ವಯಸ್ಸಿನಲ್ಲಿ ಅಸುನೀಗಿದರು.

**೪. ಶ್ರೀ ತುಕಾರಾಮ ಕೋಪರ್ಡೆ**

ಇವರು ಬನಹಟ್ಟಿಯಲ್ಲಿ ಕ್ರಿ.ಶ.೧೯೦೭ ಮೇ ತಿಂಗಳ ೧೫ ರಂದು ಜನಿಸಿದರು. ಇವರ ಜನ್ಮದಾತರು ಪಾಂಡುರಂಗನ ಭಕ್ತರಾಗಿದ್ದರಿಂದ ಇವರದು ಸಂತ ಸಾಂಪ್ರದಾಯದ ಸಂಸ್ಕೃತಿಯಲ್ಲಿ ಬೆಳೆದ ಮನೆತನವಾಗಿತ್ತು. ಬಾಲ್ಯದಲ್ಲಿ ಇವರಿಗೆ ನಗರದ ಕ್ರಾಂತಿವೀರ ಕಲಕಂಬ ಮಾಸ್ತರರ ಸಂಪರ್ಕವು ಬೆಳೆದು ಬಂದಿದ್ದರಿಂದ ಸಹಜವಾಗಿ ದೇಶಾಭಿಮಾನವು ಮೂಡಿ ಬಂದಿತ್ತು. ಕ್ರಿ.ಶ. ೧೯೨೪ ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೇಸ ಅಧಿವೇಶನಕ್ಕೆ ಬನಹಟ್ಟಿಯಿಂದ ಬಹುಜನ ದೇಶಭಕ್ತರು ಹೋಗಿದ್ದರು. ಅಲ್ಲಿ ಗಾಂಧೀಜಿ, ನೆಹರು, ಸರ್ದಾರ ಪಟೇಲ, ಡಾ.ಬಾಬು ರಾಜೇಂದ್ರ ಪ್ರಸಾದರ ಭಾಷಣ ಕೇಳಿ ಸ್ಫೂರ್ತಿ ಪಡೆದು ದೇಶದ ಸ್ವಾತಂತ್ರ್ಯಕ್ಕಾಗಿ ಪಣತೊಟ್ಟರು. ಆಗ ಕೋಪರ್ಡೆಯವರು ಬಾಲಕನಾಗಿದ್ದರೂ ದೇಶಾಭಿಮಾನವು ತುಂಬಿ ತುಳುಕುತ್ತಿತ್ತು. ಖಾದಿ ಬಟ್ಟೆಗಳನ್ನೇ ಧರಿಸುತ್ತಿದ್ದರು. ಅದು ಕ್ರಾಂತಿಯ ಕಾಲವಾಗಿದ್ದರಿಂದ ದಿನ ನಿತ್ಯ ಮುಂಜಾನೆ ೩ ಘಂಟೆಗೆ ನಗರದಲ್ಲಿ ದೇಶಭಕ್ತಿಗೀತೆಗಳನ್ನು ಹಾಡುತ್ತ ಪ್ರಭಾತಪೇರಿ ಹೋರಡಿಸುತ್ತಿದ್ದರು[೧೮]. ಅದರಲ್ಲಿ ಈ ಯುವಕ ಅತ್ಯಂತ ಉತ್ಸಾಹದಿಂದ ಭಾಗವಹಿಸುತ್ತಿದ್ದನು. ಬೀದಿಯುದ್ದಕ್ಕೂ ಗಾಂಧೀಜಿ ಕೀ ಜೈ, ಪಂಡಿತ ಜವಾಹರಲಾಲ ನೆಹರುಜಿ ಕೀ ಜೈ, ಒಂದೇ ಮಾತರಂ ಎಂಬ ಘೋಷಣೆಗಳು ಎಲ್ಲಿಲ್ಲದ ಸ್ಫೂರ್ತಿಯನ್ನುಂಟು ಮಾಡುತ್ತಿದ್ದವು.

ಕಲಕಂಬ ಮಾಸ್ತರರು, ಜಮಖಂಡಿ ಸಂಸ್ಥಾನಿಕರ ಮೇಲೆ ನೇರ ವಾಗ್ದಾಳಿ ಮಾಡಿದಾಗ, ಇವರು ಅವರ ಜೋತೆ ಖೈದಿಗಳಾಗಿದ್ದರು. ನಂತರ ೧೯೪೧ರಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿ ಜೈಲು ಶಿಕ್ಷೆ ಅನುಭವಿಸಿದರು. ಆಗ ಇವರು ಚಿಕ್ಕ ವಯಸ್ಸಿನವರಾಗಿದ್ದರಿಂದ ಇವರಿಗೆ ಯಾವ ಶಿಕ್ಷೆಯಾಗದೆ ಬಿಡುಗಡೆಯಾದರು. ಮುಂದೆ ಇವರು ೧೯೪೨ ಚಲೇಜಾವ್ ಚಳುವಳಿಯಲ್ಲಿ ಬ್ರಿಟಿಷರ ವಿರೋಧಿ ಕೃತ್ಯದಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡರು. ಸ್ವಾತಂತ್ರ್ಯ ಹೋರಾಟವು ಅತ್ಯಂತ ಬಿರುಸಿನಿಂದ ನಡೆದ ಪ್ರಸಂಗದಲ್ಲಿ ಇವರು ತಮ್ಮ ಸಹಚರರೊಂದಿಗೆ ಧನವಂತರಿಂದ ಹಣ ಸಂಗ್ರಹಿಸಿ ಭೂಗತ ಚಳುವಳಿಗಾರರಿಗೆ ಹಂಚುವುದು ಮದ್ದು-ಗುಂಡಗಳನ್ನು ಸರಬರಾಜು ಮಾಡುವುದು. ಕುಂಚನೂರ ನಾಗಪ್ಪ ಪತ್ತಾರ ತಯಾರಿಸಿದ ದೇಶಿ ಪಿಸ್ತೂಲುಗಳನ್ನು ತರುವುದು ಮತ್ತು ಬ್ರಿಟೀಷ ಯುನಿಯನ್ ಜಾಕ್ ಇಳಿಸಿ ರಾಷ್ಟ್ರೀಯ ತ್ರಿವರ್ಣ ಧ್ವಜ ಹಾರಿಸುವದು. ಇವೇ ಮೊದಲಾದ ಕೃತ್ಯಗಳಲ್ಲಿ ತೊಡಗಿದ್ದರಿಂದ ಸರಕಾರವು ಭಾರತ ಸರಕಾರದ ಸಂರಕ್ಷಣಾ ಕಾಯ್ದೆ ಅನ್ವಯ ಇವರನ್ನು

ಬಂಧಿಸಿ ಕಾರಾಗೃಹದಲ್ಲಿರಿಸಿತ್ತು. ಹೀಗೆ ಇವರು ದೇಶದ ಸ್ವಾತಂತ್ರ್ಯಕ್ಕಾಗಿ ಜೀವನ ಪರ್ಯಂತ ಹೋರಾಡಿದರು.

**೫. ಶ್ರೀ ಭಾಸ್ಕರ ಜೀವಾಜಿ ಕೋಪರ್ಡೆ**

ಇವರು ಕ್ರಿ.ಶ.೧೯೧೦ರ ಜನೇವರಿಯಲ್ಲಿ ಬನಹಟ್ಟಿ ನಗರದಲ್ಲಿ ಜನ್ಮ ತಾಳಿದರು. ಇವರ ಮನೆತನವು ಇಂಚಗೇರಿ ಪಂಥದ ಆಧ್ಯಾತ್ಮಿಕ ಪರಂಪರೆಯಲ್ಲಿ ಬೆಳೆದುಬಂದಿತ್ತು. ಇವರು ಅಂದಿನ ಪ್ರಾಥಮಿಕ ಮಟ್ಟದ ವರೆಗೆ ಶಿಕ್ಷಣವನ್ನು ಪಡೆದುಕೊಂಡವರಾಗಿದ್ದರು. ಇವರು ತಮ್ಮ ೧೬ನೇ ವಯಸ್ಸಿನಲ್ಲಿಯೇ ಸ. ಸ. ಗಿರಮಲ್ಲೇಶ್ವರರ ಅನುಗ್ರಹಕ್ಕೆ ಪಾತ್ರರಾಗಿ ಅಧ್ಯಾತ್ಮಿಕ ಸಾಧನೆಯನ್ನು ಮಾಡುತ್ತಿದ್ದರು.

ಅಂದಿನ ಕಾಲವು ಆಂಗ್ಲರ ಆಳಿಕೆಯನ್ನು ಕೊನೆಗೊಳಿಸಲು ಕೈಕೊಂಡ ಮಹಾ ಕ್ರಾಂತೀಯ ಕಾಲವಾಗಿತ್ತು. ದೇಶದಾದ್ಯಂತ ಬ್ರಿಟಿಷರ ವಿರುದ್ಧ ಉಗ್ರ ಹೋರಾಟಗಳು ನಡೆದಿದ್ದವು. ಇಂತಹ ಪ್ರಸಂಗದಲ್ಲಿ ಸ.ಸ.ಗಿರಮಲ್ಲೇಶ್ವರರ ಸರ್ವ ತಪಃಶಕ್ತಿಯನ್ನು ಪಡೆದ ಶ್ರೀಸ.ಸ.ಮಾಧವಾನಂದರ ಆದೇಶದಂತೆ ಗಾಂಧೀಜಿಯವರ ಆಜ್ಞೆ ಪಡೆದು ವಿಜಾಪುರ ಜಿಲ್ಲೆಯ ಹೊನವಾಡ ಗ್ರಾಮದಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿ ೪ ತಿಂಗಳು ವಿಜಾಪುರ ಜೈಲಿನಲ್ಲಿ ಶಿಕ್ಷೆ ಅನುಭವಿಸಿದರು. ಸ್ವಾತಂತ್ರ್ಯ ಚಳುವಳಿಗೆ ನಾಂದಿ ಹಾಡಿದರು. ಕಾರಾಗೃಹದಲ್ಲಿ ಅನುಭವಿಸಬಾರದ ಕಷ್ಟ-ನಷ್ಟಗಳನ್ನು ಅನುಭವಿಸಿ ಬಂದು ಮತ್ತೆ ರಾಷ್ಟ್ರೀಯ ಚಳುವಳಿಯಲ್ಲಿ ತೊಡಗಿ ಅಥಣಿ ತಾಲೂಕಿನ ಮಹೀಷವಾಡಿ ಗ್ರಾಮದಲ್ಲಿ ಮತ್ತೆ ವೈಯಕ್ತಿಕ ಸತ್ಯಾಗ್ರಹ ಮಾಡಿ ಬಂಧನಕ್ಕೊಳಗಾಗಿ ೯ ತಿಂಗಳ ಶಿಕ್ಷೆಯನ್ನು ಅನುಭವಿಸಿದರು.

ಕ್ರಿ.ಶ.೧೯೪೨ರಲ್ಲಿ ಮುಂಬೈ ಗೋವಾಲಿಯಾ ಮೈದಾನದಲ್ಲಿ ಸೇರಿದ ಅಖಿಲ ಭಾರತ ಕಾಂಗ್ರೇಸ್ ಅಧಿವೇಶನದಲ್ಲಿ ಚಲೇಜಾವ್ ಚಳುವಳಿ ಠರಾವು ಪಾಸಾಯಿತು. ಮುಂಜಾಗ್ರತ ಕ್ರಮವಾಗಿ ಸರಕಾರವು ಗಾಂಧೀಜಿ, ನೆಹರು, ಪಟೇಲ, ರಾಜೇಂದ್ರ ಪ್ರಸಾದರನ್ನು ಬಂಧಿಸಿದಾಗ ಲಕ್ಷಾಂತರ ದೇಶಭಕ್ತರು ಭೂಗತರಾದರು. ಆಗ ಬನಹಟ್ಟಿಯ ಬಂಟರಲ್ಲಿ ಒಬ್ಬರಾದ ಭಾಸ್ಕರರು ಕಲಕಂಬ ಮಾಸ್ತರರ ಗರಡಿಯಲ್ಲಿಯೇ ಪಳಗಿದವರಾಗಿದ್ದು, ಗಾಂಧೀಜಿಯವರ "ಮಾಡು ಇಲ್ಲವೆ ಮಡಿ" ಎಂಬ ಕರೆಗೆ ಓಗೊಟ್ಟು ಆಂಗ್ಲ ಸರಾಕರದ ವಿರುದ್ಧ ಉಗ್ರ ಹೋರಾಟಕ್ಕಿಳಿದರು. ೪೫ ಮೈಲು ತಾರ-ಕಂಬಗಳನ್ನು ಕಡಿದು ಹಾಕಿ ಸರಕಾರದ ಕಣ್ಣು ತಪ್ಪಿಸಿ (ಭೂಗತರಾಗಿ) ವಿಜಾಪುರ, ಬೆಳಗಾಂವ, ಧಾರವಾಡ ಮತ್ತು ಕೆಲವೊಮ್ಮೆ ಮಹಾರಾಷ್ಟ್ರದ ಜಿಲ್ಲೆಗಳಲ್ಲಿ ಸಂಚರಿಸುತ್ತಾ ಅತ್ಯಂತ ಕಷ್ಟದ ದಿನಗಳನ್ನು ಕಳೆದರು. ಭೂಗತರಾದ ಇವರು ಜಂಗಮ, ಬುಡಬುಡಿಕಿ, ಸಂಖದಯ್ಯ, ಜೋಗಪ್ಪ ಮುಂತಾದ ವೇಷಗಳನ್ನು ಧರಿಸಿ ಸರಕಾರದ ಕಣ್ಣು ತಪ್ಪಿಸಿ ಪಾರಾಗುತ್ತಿದ್ದರು. ಭಾಸ್ಕರರ ಜೊತೆಗೆ ಬೆಳಗಾಂವ ಜಿಲ್ಲೆಯ ನಾಯಕಪ್ಪ ಮಾಸ್ತರರು, ಮಲ್ಲಪ್ಪ ಮಹಾರಾಜರು, ಬಸಪ್ಪಾ ಮುನ್ನೊಳ್ಳಿ, ಬಸಲಿಂಗಪ್ಪಾ ತಲ್ಲೂರ, ನಿಂಗಪ್ಪಾ ಜೋಡಟ್ಟಿ ಹಾಗೂ ಧಾರವಾಡ ಜಿಲ್ಲೆಯ ಪಕೀರಯ್ಯಾ ಹಿರೇಮಠ, ಮಲ್ಲೇಶಿ ಪತ್ತಾರ, ಅದರಂತೆ ಜಮಖಂಡಿ ತಾಲೂಕಿನ (ಸಾವಳಗಿಯವರಾದ) ರಾಯಪ್ಪ ಬೆಳಗಲಿ, (ಸುರೇಂದ್ರ ನಾಂದ್ರೇಕರ ಭೂಪಾಲ ನಾಂದ್ರೇಕರ) ಶ್ರೀಮಂತ ನಾಂದ್ರೇಕರ, ರಾಯಣ್ಣ ಕುಂಚನೂರ, ನಾಗಪ್ಪ ಪತ್ತಾರ, ಮುರಾರಿ ಹಿಪ್ಪರಗಿ, ಮಾಯಪ್ಪಾ ನಾವಲಗಿ, ಬಸಪ್ಪಾ ಚಿಗರಿ, ಲಕ್ಷ್ಮಣ ರಡರಟ್ಟಿ ಇನ್ನೂ ಹಲವಾರು ವೀರರು ಜೀವದ ಹಂಗು ತೊರೆದು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಇವರೆಲ್ಲರಿಗೂ ಸ.ಸ. ಮಾಧವಾನಂದರ ಆಶೀರ್ವಾದದೊಂದಿಗೆ ಆದೇಶವಿರುತ್ತಿತ್ತು[೧೯].

ಸಾವಿರಾರು ಜನ ದೇಶಭಕ್ತರ ಅವಿರತ ಹೋರಾಟದ ಫಲವಾಗಿ ಕ್ರಿ.ಶ. ೧೯೪೭ರ ಆಗಸ್ಟ ೧೫ ರಂದು ಭಾರತವು ಬ್ರಿಟಿಷರ ದಾಸ್ಯ ಸಂಕೋಲೆಯನ್ನು ಹರಿದು ಸ್ವಾತಂತ್ರ್ಯವಾಯಿತು. ಮುಂದೆ ಗಾಂಧೀಜಿಯವರ ಆದೇಶದಂತೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಂಧಿತರಾದ ಎಲ್ಲ ಹೋರಾಟಗಾರರನ್ನು ಬಿಡುಗಡೆ ಮಾಡಲಾಯಿತು. ಆ ಶುಭದಿನದಂದು ಭಾಸ್ಕರರು ಕಾರ್ಮೋಡದಿಂದ ಹೊರಬಂದ ನೇಸರನಂತೆ ಪ್ರಕಟವಾಗಿ ಎಲ್ಲರಿಗೂ (ಭೂಗತರಾಗಿದ್ದವರು ಹೊರಬಂದು) ಸಂತೋಷವನ್ನುಂಟು ಮಾಡಿದರು. ಭಾಸ್ಕರರು ದೇಶ ಸ್ವಾತಂತ್ರ್ಯವಾದ ನಂತರ ಇವರು ಹೈದ್ರಾಬಾದ್ ಕ್ರಾಂತಿಯಲ್ಲಿ ಧುಮುಕಿ ರಜಾಕಾರರ ಹಾವಳಿಯನ್ನು ಅಡಗಿಸಿ, ಶಾಂತತೆಯನ್ನು ನೆಲೆಗೊಳಿಸುವಲ್ಲಿ ಸಕ್ರೀಯವಾಗಿ ಪಾತ್ರವಹಿಸಿದರು. ಅಲ್ಲದೆ ಇವರು ಶ್ರೀ ಸ. ಸ. ಮಾಧವಾನಂದರನ್ನು ಭಾರತ ಸಂರಕ್ಷಣೆಯ ಕಾನೂನಿಗೆ ಅನುಗುಣವಾಗಿ ಮುಂಬೈ ಸೆಂಟ್ರಲ್ ಜೈಲಿನಲ್ಲಿಟ್ಟಾಗ ಶ್ರೀ ತುಕಾರಾಮ ಕೊಪರ್ಡೆ, ಶ್ರೀ ದೊಡ್ಡಮೇಟಿ ಅಂದಾನೆಪ್ಪನವರನ್ನು ಸರ್ದಾರ ವೀರನಗೌಡ ಪಾಟೀಲರನ್ನು ಕರೆದುಕೊಂಡು ಅಂದಿನ ಮುಂಬೈ ರಾಜ್ಯದ ಮಂತ್ರಿಗಳಾಗಿದ್ದ ಶ್ರೀ ಮುರಾರ್ಜಿಭಾಯಿ ದೇಸಾಯಿಯರನ್ನು ಕಂಡು ದೇಶಭಕ್ತ ಮಾಧವಾನಂದರನ್ನು ಬಿಡುಗಡೆ ಮಾಡಲು ಪ್ರಯತ್ನಿಸಿ ಸಫಲರಾದರು. ಹೀಗೆ ಶ್ರೀ ಭಾಸ್ಕರ ಕೋಪರ್ಡೆಯವರು ದೇಶದ ಸ್ವಾತಂತ್ರ್ಯಕ್ಕಾಗಿ ಬಹುಮುಖವಾದ ಸೇವೆಯನ್ನು ಸಲ್ಲಿಸಿ ಇಂದು ೯೮ ವರುಷದ ವಯೋವೃದ್ಧರಾಗಿ ನೆಮ್ಮದಿಯ ಜೀವನವನ್ನು ಸಾಗಿಸುತ್ತಿರುವದು ಒಂದು ಸಂತೋಷದ ಸಂಗತಿಯೇ ಸರಿ.

ಸ್ವಾತಂತ್ರ್ಯ ಸಂಗ್ರಾಮದ-ಬನಹಟ್ಟಿಯ ಬಂಟರೆಂದೇ ಖ್ಯಾತಿವೆತ್ತ ಶ್ರೀ ತುಕಾರಾಮ ಕೋಪರ್ಡೆ, ಭಾಸ್ಕರ ಕೋಪರ್ಡೆ, ಚನ್ನಪ್ಪಾ ದಬಾಡಿ, ನಿಂಗಪ್ಪಾ ಅಂಟೀನ, ಶ್ರೀ ಪರಶುರಾಮ ಡಾಗಾ, ಪರಯ್ಯಾ ಬಂಗಿ, ಲಕ್ಷ್ಮಣ ಮೋಪಗಾರ, ಗಂಗಪ್ಪಾ ದಬಾಡಿ, ನಾಮದೇವ ಕೋಪರ್ಡೆ, ಕಲ್ಯಾಣಪ್ಪಾ ತುಂಗಳ, ಬಸವಣ್ಣೆಪ್ಪಾ ಮಟ್ಟಿಕಲ್ಲಿ ಸಿದ್ದಪ್ಪಾ ಹಾಶೀಲಕರ, ಶಿವಯೋಗೆಪ್ಪಾ ಒಡ್ಡೋಡಗಿ, ಮಲ್ಲಪ್ಪಾ ಬುಟ್ಟಣ್ಣವರ ಇನ್ನು ನೂರಾರು ಸ್ವಾತಂತ್ರ್ಯ ವೀರರು ಕ್ರಾಂತಿಯ ಕಿಡಿಗಳಾಗಿ ಜೀವದ ಹಂಗು ತೊರೆದು ಹೋರಾಡಿದ್ದು ಸ್ಮರಣೀಯ[೨೦]. ಇವರೆಲ್ಲರ ಕಾರ್ಯಚಟುವಟಿಕೆಗಳಿಗೆ ಶ್ರೀ ಸ. ಸ. ಮಾಧವಾನಂದರು ಮತ್ತು ಕಲಕಂಬ ಮಾಸ್ತರರು ಸದಾ ಸ್ಫೂರ್ತಿಯ ಸೆಲೆಯಾಗಿದ್ದರು. ಇವರಲ್ಲಿ ಬಹುಸಂಖ್ಯಾತ ಹೋರಾಟಗಾರರು ಇಂದು ಕಣ್ಮರೆಯಾಗಿದ್ದಾರೆ. ಆದರೆ ಅವರು ಮಾಡಿದ ದೇಶ ಸೇವೆಯಿಂದ ಅವರ ಹೆಸರುಗಳು ಇಂದಿಗೂ ಸಹ ತೇರದಾಳ ಮತ್ತು ಜಮಖಂಡಿ ತಾಲೂಕಿನ ಸ್ವಾತಂತ್ರ್ಯ ಹೋರಾಟಗಾರರ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿವೆ.

**೭.೩. ಸ್ವಾತಂತ್ರ್ಯೋತ್ತರ ರಾಜಕೀಯ ಸ್ಥಿತಿಗತಿಗಳು**

ಪ್ರಾಚೀನ ಮತ್ತು ಮಧ್ಯಯುಗೀನ ಕಾಲದಲ್ಲಿ ತೇರದಾಳ ಪ್ರದೇಶವು ವಿವಿಧ ಅರಸು ಮನೆತನಗಳ ಆಳ್ವಿಕೆಗೊಳಪಟ್ಟಿತ್ತು. ಅಲ್ಲದೇ ಇದು ಕೂಹುಂಡಿನಾಡು ೩೦೦೦ ದಲ್ಲಿದ್ದು, ಅಂದು ೧೨ರ ಕಂಪಣದ ರಾಜಧಾನಿಯಾಗಿತ್ತು. ತೇರದಾಳ ಅಂದು ಪ್ರಮುಖ ಪಟ್ಟಣ ಮತ್ತು ವ್ಯಾಪಾರ ಕೇಂದ್ರವಾಗಿತ್ತು. ಕ್ರಿ.ಶ. ೧೯೪೭ರ ಆಗಸ್ಟ ೧೫ರಂದು, ದೇಶವು ಸ್ವಾತಂತ್ರ್ಯವಾದ ನಂತರ, ಕ್ರಿ.ಶ.೧೯೪೮ ಮಾರ್ಚ್ ತಿಂಗಳ ೮ನೇ ತಾರೀಖಿನಂದು ಜಮಖಂಡಿ ಸಂಸ್ಥಾನ ಮತ್ತು ತೇರದಾಳ ಹಾಗೂ ಹನಗಂಡಿ ದೇಸಗತಿಗಳು ಕ್ರಮೇಣ ಅಖಿಲ ಭಾರತದ ಒಕ್ಕೂಟದಲ್ಲಿ ವಿಲೀನವಾಗಿ ಮುಂಬೈ ಪ್ರಾಂತದಲ್ಲಿ ಸೇರಿಕೊಂಡವು. ಆಗ ಜಮಖಂಡಿಯು ಒಂದು

ತಾಲೂಕಾಗಿ ರಚನೆಯಾದಾಗ ತೇರದಾಳವು ಅದರ ಹೋಬಳಿ ಕೇಂದ್ರವೆಂದು ಘೋಷಿಸಲ್ಪಟ್ಟಿತು. ಆಗ ಇದು ಬಿಜಾಪುರ ಜಿಲ್ಲೆಯಲ್ಲಿ ಸೇರಿತು. ಕರ್ನಾಟಕ ಸರ್ಕಾರ ೧೯೯೭ರಲ್ಲಿ ರಾಜ್ಯದ ಜಿಲ್ಲೆಗಳನ್ನು ಪುನರ್ ವಿಂಗಡಿಸಿ ಹೊಸ ಜಿಲ್ಲೆಗಳನ್ನು ರಚಿಸಿದಾಗ ಪ್ರಸಕ್ತ ಬಾಗಲಕೋಟೆ ಜಿಲ್ಲೆ ರಚನೆಯಾಯಿತು. ಆಗ ತೇರದಾಳ ಪಟ್ಟಣವು ಈ ಜಿಲ್ಲೆಯ ಒಂದು ಪುರಸಭೆಯ ಕೇಂದ್ರ ಮತ್ತು ಹೋಬಳಿ ಕೇಂದ್ರವಾಗಿ ಸೇರ್ಪಡೆಯಾಯಿತು. ಪ್ರಸಕ್ತ ತೇರದಾಳವು ಪುರಸಭೆ, ನಾಡ ಕಚೇರಿ ಮತ್ತು ಹೋಬಳಿ ಕೇಂದ್ರಗಳನ್ನೊಂದಿದ್ದು, ಇದರೊಂದಿಗೆ ತನ್ನ ವ್ಯಾಪ್ತಿಯಲ್ಲಿ ೧೧ ಗ್ರಾಮ ಪಂಚಾಯಿತಿಗಳನ್ನೊಂದಿದೆ. ಅಲ್ಲದೆ ಇದು ರಾಜಕೀಯವಾಗಿ ಪ್ರಸಕ್ತ ವಿಧಾನಸಭಾ ಮತಕ್ಷೇತ್ರದ ಕೇಂದ್ರವಾಗಿರುವುದರೊಂದಿಗೆ ಬಾಗಲಕೋಟೆ ಲೋಕಸಭೆ ಕ್ಷೇತ್ರದ ವ್ಯಾಪ್ತಿಗೊಳಪಟ್ಟಿದೆ[೨೧]. ರಾಜ್ಯದ ರಾಜಕೀಯ ಇತಿಹಾಸದಲ್ಲಿ ತನ್ನದೇ ಆದ ವಿಶೇಷ ಸ್ಥಾನಮಾನಗಳನ್ನು ಹೊಂದಿರುವ ತೇರದಾಳದ ರಾಜಕೀಯ ವ್ಯವಸ್ಥೆ ಕುರಿತ ಸಂಕ್ಷಿಪ್ತ ವಿವರ ಈ ಮುಂದಿನಂತಿದೆ.

**ಲೋಕ ಸಭೆ**

ಬಾಗಲಕೋಟೆ ಹೊಸ ಜಿಲ್ಲೆಯಾಗಿ ರಚನೆಯಾದ ತರುವಾಯ ಕರ್ನಾಟಕದಲ್ಲಿ ವಿಧಾನಸಭೆ ಮತ್ತು ಲೋಕಸಭೆಯ ಮತದಾರ ಕ್ಷೇತ್ರಗಳನ್ನು ೧೯೯೭ ರಲ್ಲಿ ಪುನರ್ ವಿಗಂಡಿಸಿದಾಗ ಈ ಮೊದಲು ಬಿಜಾಪುರ ಲೋಕಸಭೆಯ ವ್ಯಾಪ್ತಿಯಲ್ಲಿದ್ದ ತೇರದಾಳ ಮತ್ತು ಅದರ ಸುತ್ತಲಿನ ೨೭ ಹಳ್ಳಿಗಳು ಬಾಗಲಕೋಟೆ ಲೋಕಸಭಾ ವ್ಯಾಪ್ತಿಗೆ ಸೇರ್ಪಡೆ ಮಾಡಲಾಯಿತು. ಆ ಪ್ರಕಾರ ಈ ಭಾಗದ ಎಲ್ಲಾ ಮತದಾರರು ಬಾಗಲಕೋಟೆ ಲೋಕಸಭೆಗಾಗಿ ತನ್ನ ಪ್ರತಿನಿಧಿಗಳನ್ನು ಕಳುಹಿಸಿಕೊಟ್ಟಿದ್ದಾರೆ. ಪ್ರಸಕ್ತ ಶ್ರೀ ಗದ್ದಿಗೌಡರ ಪರವತಗೌಡ ಚಂದನಗೌಡ ಲೋಕಸಭಾ ಸದಸ್ಯರಾಗಿ ಉತ್ತಮ ಅಭಿವೃದ್ಧಿ ಯೋಜನೆಗಳ ಅನುಷ್ಠಾನದಲ್ಲಿ ತೋಡಿಗಿದ್ದಾರೆ. ಇಲ್ಲಿಯವರೆಗಿನ ಚುನಾಯಿತರಾದ ಲೋಕ ಸಭಾ ಸದಸ್ಯರ ವಿವರ ಈ ಮುಂದಿದೆ[೨೨].

| ಕ್ರಸಂ | ಆಯ್ಕೆಯಾದ ಸದಸ್ಯರ ಹೆಸರು ಪಕ್ಷ | ಪಕ್ಷ | ಲೋಕಸಭಾಸದಸ್ಯರಾಗಿ ಆಯ್ಕೆಯಾದ ವರ್ಷ |
|---|---|---|---|
| ೧) | ಶ್ರೀ ಬದರಿ ರಾಮಪ್ಪ ಬಾಳಪ್ಪ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೫೧ ಬಾಂಬೆ ರಾಜ್ಯ ಬಿಜಾಪೂರ |
| ೨) | ಶ್ರೀ ಬದರಿ ರಾಮಪ್ಪ ಬಾಳಪ್ಪ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೫೭ ಮೈಸೂರ ರಾಜ್ಯ ಬಿಜಾಪೂರ |
| ೩) | ಶ್ರೀ ಸಂಗಣ್ಣಗೌಡ ಬಸವನಗೌಡ ಪಾಟೀಲ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೬೨ ಮೈಸೂರ ರಾಜ್ಯ ಬಿಜಾಪೂರ |
| ೪) | ಶ್ರೀ ಸಂಗಣ್ಣಗೌಡ ಬಸವನಗೌಡ ಪಾಟೀಲ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೬೭ ಮೈಸೂರ ರಾಜ್ಯ ಬಿಜಾಪೂರ |
| ೫) | ಶ್ರೀ ಸಂಗಣ್ಣಗೌಡ ಬಸವನಗೌಡ ಪಾಟೀಲ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೭೧ ಮೈಸೂರ ರಾಜ್ಯ ಬಿಜಾಪೂರ |
| ೬) | ಶ್ರೀ ಸಂಗಣ್ಣಗೌಡ ಬಸವನಗೌಡ ಪಾಟೀಲ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೭೭ ಮೈಸೂರ ರಾಜ್ಯ ಬಿಜಾಪೂರ |
| ೭) | ಶ್ರೀ ವಿರೇಂದ್ರ ಪಾಟೀಲ | (ಭಾರತೀಯ ಕಾಂಗ್ರೇಸ್ ಪಕ್ಷ) | ೧೯೮೦ ಬಿಜಾಪೂರ ಮತಕ್ಷೇತ್ರ |

| ೮) | ಶ್ರೀ ಹನುಮಂತಗೌಡ ಭೀಮನಗೌಡ ಪಾಟೀಲ | (ಭಾರತೀಯ ಕಾಂಗ್ರೆಸ್ ಪಕ್ಷ) | ೧೯೮೪ ಬಿಜಾಪೂರ ಮತಕ್ಷೇತ್ರ |
|---|---|---|---|
| ೯) | ಶ್ರೀ ಸುಭಾಷ ತಮ್ಮಣ್ಣಪ್ಪಾ ಪಾಟೀಲ | (ಭಾರತೀಯ ಕಾಂಗ್ರೆಸ್ ಪಕ್ಷ) | ೧೯೮೯ ಬಾಗಲಕೋಟ ಮತಕ್ಷೇತ |
| ೧೦) | ಶ್ರೀ ಸಿದ್ದಪ್ಪಾ ಭೀಮಪ್ಪಾ ನ್ಯಾಮಗೌಡರ | (ಭಾರತೀಯ ಕಾಂಗ್ರೆಸ್ ಪಕ್ಷ) | ೧೯೯೧ ಬಾಗಲಕೋಟ ಮತಕ್ಷೇತ |
| ೧೧) | ಶ್ರೀ ಹುಲ್ಲಪ್ಪಾ ಯಮನಪ್ಪಾ ಮೇಟಿ | (ಜನತಾ ದಳ) | ೧೯೯೬ ಬಾಗಲಕೋಟ ಮತಕ್ಷೇತ |
| ೧೨) | ಶ್ರೀ ಅಜೇಯಕುಮಾರ ಸಂಬಸದಾಶಿವ ಸರನಾಯಿಕ | (ಜನತಾ ದಳ) | ೧೯೯೮ ಬಾಗಲಕೋಟ ಮತಕ್ಷೇತ |
| ೧೩) | ಶ್ರೀ ಆರ್.ಎಸ್. ಪಾಟೀಲ | (ಭಾರತೀಯ ಕಾಂಗ್ರೆಸ್ ಪಕ್ಷ) | ೧೯೯೯ ಬಾಗಲಕೋಟ ಮತಕ್ಷೇತ |
| ೧೪) | ಶ್ರೀ ಪರವತಗೌಡ ಚಂದನಗೌಡ ಗದ್ದಿಗೌಡರ | (ಭಾರತೀಯ ಜನತಾ ಪಕ್ಷ) | ೨೦೦೪ ಬಾಗಲಕೋಟ ಮತಕ್ಷೇತ |
| ೧೫) | ಶ್ರೀ ಪರವತಗೌಡ ಚಂದನಗೌಡ ಗದ್ದಿಗೌಡರ | (ಭಾರತೀಯ ಜನತಾ ಪಕ್ಷ) | ೨೦೦೯ ಬಾಗಲಕೋಟ ಮತಕ್ಷೇತ |
| ೧೬) | ಶ್ರೀ ಪರವತಗೌಡ ಚಂದನಗೌಡ ಗದ್ದಿಗೌಡರ | (ಭಾರತೀಯ ಜನತಾ ಪಕ್ಷ) | ೨೦೧೪ ಬಾಗಲಕೋಟ ಮತಕ್ಷೇತ |

**ವಿಧಾನ ಸಭೆ**

ಬಾಗಲಕೋಟೆ ಹೊಸ ಜಿಲ್ಲೆಯಾಗಿ ರಚನೆಯಾದ ತರುವಾಯ ಕರ್ನಾಟಕದಲ್ಲಿ ವಿಧಾನಸಭೆ ಮತ್ತು ಲೋಕಸಭೆಯ ಮತದಾರ ಕ್ಷೇತ್ರಗಳನ್ನು ೨೦೦೭ರಲ್ಲಿ ಪುನರ್‌ವಿಂಗಡಿಸಿದಾಗ ತೇರದಾಳ ಮತ್ತು ಅದರ ಸುತ್ತಲಿನ ೨೭ ಹಳ್ಳಿಗಳನ್ನು ಸೇರಿಸಿ ತೇರದಾಳ ವಿಧಾನಸಭಾ ಮತದಾರ ಕ್ಷೇತ್ರವನ್ನು ರಚಿಸಲಾಯಿತು. ಅದಕ್ಕೂ ಮೊದಲು ಈ ಭಾಗ ಜಮಖಂಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಗೊಳಪಟ್ಟಿತ್ತು. ಪ್ರಸಕ್ತ ಶ್ರೀ.ಸಿದ್ದು ಸವದಿಯವರು ವಿಧಾನಸಭಾ ಸದಸ್ಯರಾಗಿದ್ದು, ಉತ್ತಮ ಅಭಿವೃದ್ದಿ ಯೋಜನೆಗಳ ಅನುಷ್ಠಾನ ಕಾರ್ಯದಲ್ಲಿ ತೊಡಗಿದ್ದಾರೆ. ಇದಕ್ಕೂ ಮೊದಲು ಶ್ರೀಮತಿ ಉಮಾಶ್ರೀಯವರು ಈ ಕ್ಷೇತ್ರವನ್ನು ಒಂದು ಬಾರಿ ಪ್ರತಿನಿಧಿಸಿ ಜನರಿಂದ ಆಯ್ಕೆಯಾಗಿ ಉತ್ತಮ ಪ್ರಜಾ ಸೇವೆ ಗೈದಿದ್ದಾರೆ[೨೩]. ಅದೇ ರೀತಿ ಸ್ಥಳೀಯ ರಾಜಕೀಯ ಸ್ಥಿತಿಗತಿಗಳನ್ನು ಈ ಮುಂದೆ ಅವಲೋಕಿಸಲಾಗಿದೆ.

**ಬಾಗಲಕೋಟ ಜಿಲ್ಲಾ ಪಂಚಾಯಿತಿ ಸದಸ್ಯರ ವಿವರ**

ರಾಜ್ಯದಲ್ಲಿ ಅಧಿಕಾರ ವಿಕೇಂದ್ರೀಕರಣದ ಪರಿಕಲ್ಪನೆ ಮತ್ತು ಅದೇ ತತ್ವದಡಿಯಲ್ಲಿ ಕರ್ನಾಟಕ ರಾಜ್ಯ ಪಂಚಾಯಿತಿ ರಾಜ್ಯ ಅಧಿನಿಯಮ-೧೯೯೩ ರೂಪಗೊಂಡಿದೆ. ಆ ಪ್ರಕಾರ ರಾಜ್ಯದಲ್ಲಿ ಗ್ರಾಮಪಂಚಾಯಿತಿ, ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಎನ್ನುವ ಮೂರು ಹಂತದ ಆಡಳಿತ ವ್ಯವಸ್ಥೆ ರಾಜ್ಯದಲ್ಲಿ ರೂಪಗೊಂಡಿದೆ. ಇದೇ ಅಧಿನಿಯಮಕ್ಕನುಗುಣವಾಗಿಯೇ ಬೇರೆಡೆಯಂತೆ ಇಲ್ಲಿಯೂ ಹಿಂದಿನ ಜಿಲ್ಲಾ ಪರಿಷತ್ತನ್ನು ರದ್ದುಗೊಳಿಸಿ ಅದರ ಸ್ಥಾನದಲ್ಲಿ ಬಾಗಲಕೋಟೆ ಜಿಲ್ಲಾ ಪಂಚಾಯಿತಿಯನ್ನು ರಚಿಸಲಾಗಿದೆ. ಅಂದಿನಿಂದ ಇಂದಿನವರೆಗೆ ರಾಜ್ಯ ಮತ್ತು ಕೇಂದ್ರ ಸರ್ಕಾರದ ಆದೇಶ ಮತ್ತು ನಿರ್ದೇಶನದಂತೆ ಜಿಲ್ಲಾ ಪಂಚಾಯ್ತಿಯ

ವ್ಯಾಪ್ತಿಗೊಳಪಟ್ಟ ಜಿಲ್ಲೆಯ ಎಲ್ಲಾ ಹಳ್ಳಿಗಳಲ್ಲಿ ಆಡಳಿತ, ಶಿಕ್ಷಣ, ಸಾರ್ವಜನಿಕ ಆರೋಗ್ಯ, ಮಹಿಳೆ ಮತ್ತು ಮಕ್ಕಳ ಕಲ್ಯಾಣ, ಅರಣ್ಯ, ಉದ್ಯೋಗ ಸೃಷ್ಟಿ, ಉದ್ದಿಮೆಗಳ ಮೇಲ್ವಿಚಾರಣೆ, ಸಾರ್ವಜನಿಕ ಸೇವೆ ಮೊದಲಾದ ಕೆಲಸ ಕಾರ್ಯಗಳನ್ನು ಜಮಖಂಡಿ ತಾಲೂಕು ಪಂಚಾಯಿತಿ ವತಿಯಿಂದ ವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಬರಲಾಗುತ್ತಿದೆ. ಇಲ್ಲಿನ ಸುಗಮ ಆಡಳಿತ ನಿರ್ವಹಣೆಗಾಗಿ ಪ್ರಜೆಗಳಿಂದ ಚುನಾಯಿತರಾಗಿ ಆಯ್ಕೆಯಾದ ಒಟ್ಟು ೩೬ ಜನ ಜಿಲ್ಲಾ ಪಂಚಾಯಿತಿ ಚುನಾಯಿತ ಸದಸ್ಯರಿದ್ದು, ಅವರು ೨೦೧೬ರ ಸಾಲಿನಲ್ಲಿ ಚುನಾಯಿತರಾಗಿದ್ದರೆ. ಅವರನ್ನು ಪ್ರಸಕ್ತ ಬಾಗಲಕೋಟ ಜಿಲ್ಲಾ ಪಂಚಾಯಿತಿಯ ಕಾರ್ಯಕಾರಿ ಸಮಿತಿ ಸದಸ್ಯರನ್ನಾಗಿ ನೇಮಿಸಿಕೊಳ್ಳಲಾಗಿದೆ. ತೇರದಾಳ ಪರಿಸರದಿಂದ ಪ್ರಸಕ್ತ ಜಿಲ್ಲಾ ಪಂಚಾಯಿತಿಗೆ ಒಟ್ಟು ೪ ಜನ ಸದಸ್ಯರು ಆಯ್ಕೆಯಾಗಿದ್ದಾರೆ[೨೪]. ಈ ೪ ಜನ ಪ್ರತಿನಿಧಿಗಳು ಸೇರಿದಂತೆ ಇತರೆ ಸದಸ್ಯರು ಜಿಲ್ಲಾ ಪಂಚಾಯಿತಿಗೆ ಆಯ್ಕೆಯಾದ ಚುನಾವಣಾ ಕ್ಷೇತ್ರ ಮತ್ತು ಅವರು ನಿರ್ವಹಿಸುತ್ತಿರುವ ಹುದ್ದೆಗಳ ವಿವರ ಈ ಮುಂದಿನಂತಿದೆ.

| ಕ್ರ.ಸಂ | ಹೆಸರು | ಲಿಂಗ | ಜಾತಿ | ಹುದ್ದೆ | ಆಯ್ಕೆಯ ದಿನಾಂಕ | ಮೊಬೈಲ್ ಸಂ. |
|---|---|---|---|---|---|---|
| ೧. | ಶ್ರೀಮತಿ. ವೀಣಾ ವಿಜಯಾನಂದ ಕಾಶಪ್ಪನವರ | ಮಹಿಳೆ | | ಅಧ್ಯಕ್ಷರು | ೦೬/೦೫/೨೦೧೬ | ೯೭೪೨೪೧೨೭೨೭ |
| ೨. | ಶ್ರೀ. ಮುತ್ತಪ್ಪ ಹನಮಪ್ಪ ಕೊಮಾರ | ಪುರುಷ | | ಉಪಾಧ್ಯಕ್ಷರು | ೦೬/೦೫/೨೦೧೬ | ೯೯೬೪೪೩೬೧೩೧ |
| ೩. | ಶ್ರೀ. ಬಸವರಾಜ ಭೀಮರಾಯಪ್ಪ ಹೊಸಮನಿ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೪೮೩೫೯೭೦೦೩ |
| ೪. | ಶ್ರೀ. ಬಸವರಾಜ ಬಸವಲಿಂಗಪ್ಪ ಖೋತ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೭೪೩೯೮೦೦೦೬ |
| ೫. | ಶ್ರೀ ಕಸ್ತೂರಿ ಹಣಮಂತ ಲಿಂಗಣ್ಣವರ | ಮಹಿಳೆ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೫೯೧೬೪೭೮೧೮ |
| ೬. | ಶ್ರೀ.ವೀರೇಶ ಸಿದ್ದಣ್ಣ ಉಂಡೋಡಿ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೯೮೦೦೦೬೯೧೯ |
| ೭. | ಶ್ರೀ. ಆಸೆಂಗೆಪ್ಪ .ಚೆನ್ನಪ್ಪ . ನಕ್ಕರಗುಂದಿ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೪೪೯೬೪೪೯೫೩ |
| ೮. | ಶ್ರೀಮತಿ. ಕವಿತಾ . ಲಕ್ಷ್ಮಣ . ದಡ್ಡಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೪೪೮೩೯೨೧೪೨ |
| ೯. | ಶ್ರೀ. ರಂಗಪ್ಪ. ಹೋಬಪ್ಪ . ಗೌಡರ | ಪುರುಷ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೪೪೮೨೨೯೧೯೧ |
| ೧೦. | ಶ್ರೀಮತಿ.ಗಂಗೂಬಾಯಿ ಉರ್ಫ ಬಾಯಕ್ಕ ರಾಮಪ್ಪ ಮೇಟಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೪೪೮೧೩೬೬೭೨ |
| ೧೧. | ಶ್ರೀ. ಬಸಪ್ಪ. ಸಿದಗೊಂಡ. ಬಿರಾದಾರ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೯೦೧೩೭೭೮೭೦ |

| | | | | | | |
|---|---|---|---|---|---|---|
| ೧೨. | ಶ್ರೀ. ಪುಂಡಲಿಕ. ರಾಮಪ್ಪ. ಪಾಲಂಬಾವಿ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೫೩೮೮೦೩೮೧೫ |
| ೧೩. | ಶ್ರೀ.ಶಿವಾನಂದ. ಆರ್. ಪಾಟೀಲ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೪೪೮೪೮೯೯೦೧ |
| ೧೪. | ಶ್ರೀಮತಿ. ಭಾಗ್ಯಶ್ರೀ. ಎಮ್. ಜಂಬಗಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೭೪೧೧೦೧೮೫೫೨ |
| ೧೫. | ಶ್ರೀ. ಹೂವಪ್ಪ.ಎಸ್.ರಾಠೋಡ | ಪುರುಷ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೪೪೮೪೪೦೩೦೦ |
| ೧೬ | ಶ್ರೀಮತಿ ಶಶಿಕಲಾ. ಆರ್. ಯಡಹಳ್ಳಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೫೩೯೮೪೬೬೯೦ |
| ೧೭. | ಶ್ರೀಮತಿ. ಸಾಂಯವ್ವ .ಆರ್. ದಳವಾಯಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೭೪೦೨೦೩೯೦೮ |
| ೧೮. | ಶ್ರೀಮತಿ. ಲಲಿತಾ. ಆರ್. ನಂದೆಪ್ಪನವರ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೮೯೫೧೧೦೮೫೫೭ |
| ೧೯. | ಶ್ರೀ. ಭೀಮನಗೌಡ. ಗೌಡಪ್ಪಗೌಡ. ಪಾಟೀಲ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೪೪೮೧೧೯೯೯೯ |
| ೨೦. | ಶ್ರೀಮತಿ. ರೇಣುಕಾ. ಎಮ್. ಮಲಘಾಣ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೬೩೨೬೦೬೪೯೬ |
| ೨೧. | ಶ್ರೀ. ಶರಣಬಸಪ್ಪ. ಹನಮಪ್ಪ. ಹಂಚಿನಮನಿ | ಪುರುಷ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೪೮೦೨೨೫೩೪೬ |
| ೨೨. | ಶ್ರೀಮತಿ ಸರಸ್ವತಿ .ಪ್ರಕಾಶ. ಮೇಟಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೪೪೮೯೨೧೮೪೨ |
| ೨೩. | ಶ್ರೀಮತಿ. ಸುಜಾತಾ. ಎಮ್. ಸಿಂಗಾಡಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೭೩೧೫೩೬೪೨೯ |
| ೨೪. | ಶ್ರೀಮತಿ. ಕವಿತಾ .ಬಾಲಪ್ಪ. ತಿಮ್ಮಾಪೂರ | ಮಹಿಳೆ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೭೭೬೦೮೩೯೯೭ |
| ೨೫. | ಶ್ರೀಮತಿ. ಶೋಭಾ. ವೆಂಕಣ್ಣ. ಬಿರಾದಾರ | ಮಹಿಳೆ | ಸಾಮಾನ್ಯ | ಸದಸ್ಯರು | ೦೬/೦೫/೨೦೧೬ | ೯೮೮೦೫೮೨೬೯ |
| ೨೬. | ಶ್ರೀ.ಹಣಮಂತ. ದುಂಡಪ್ಪ. ಕಾಖಂಡಕಿ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೪೪೯೧೪೧೬೩೩ |
| ೨೭. | ಶ್ರೀಮತಿ. ಜಯಶ್ರೀ. ಎಸ್. ಶರ್ಮಾ | ಮಹಿಳೆ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೯೮೦೭೯೦೭೮೩ |
| ೨೮. | ಶ್ರೀ. ಮಹಾಂತೇಶ. ಬ. ಉದಪುಡಿ | ಪುರುಷ | | ಸದಸ್ಯರು | ೦೬/೦೫/೨೦೧೬ | ೮೧೫೦೦೧೨೩೪೫ |

| | | | | | | |
|---|---|---|---|---|---|---|
| ೨೯. | ಶ್ರೀಮತಿ. ರತ್ನವ್ವ. ರಾಮಪ್ಪ. ತಳೇವಾಡ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೯೭೪೩೯೦೯೯೯೯ |
| ೩೦. | ಶ್ರೀ. ಶಶಿಕಾಂತ. ಹನಮಂತಗೌಡ. ಪಾಟೀಲ | ಪುರುಷ | | ಸದಸ್ಯರು | ೦೬/೦೫/೨೦೧೬ | ೯೪೪೮೩೩೫೬೧೧ |
| ೩೧. | ಶ್ರೀಮತಿ. ಹನಮವ್ವ. ವಿ. ಕರಿಹೊಳಿ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೮೯೭೧೦೫೭೬೮೭ |
| ೩೨. | ಶ್ರೀಮತಿ. ಚಂದ್ರವ್ವ. ಸಂಗಪ್ಪ. ಓಲೇಕಾರ | ಮಹಿಳೆ | | ಸದಸ್ಯರು | ೦೬/೦೫/೨೦೧೬ | ೮೯೭೧೨೦೫೪೨೯ |
| ೩೩. | ಶ್ರೀಮತಿ. ಕಸ್ತೂರಿಬಾಯಿ. ಮುತ್ತುರಾಜ. ಜಾಧವ | ಮಹಿಳೆ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೯೪೫೧೨೦೨೫೩ |
| ೩೪. | ಶ್ರೀ. ಪರಶುರಾಮ. ಬಾಳಪ್ಪ. ಬಸವ್ವಗೋಳ | ಪುರುಷ | ಪ.ಜಾ. | ಸದಸ್ಯರು | ೦೬/೦೫/೨೦೧೬ | ೯೯೦೧೪೮೮೪೩೦೧ |
| ೩೫. | ಶ್ರೀಮತಿ. ಇಂದ್ರವ್ವ .ಪ. ನಾಯ್ಕರ | ಮಹಿಳೆ | ಪ.ಪಂ | ಸದಸ್ಯರು | ೦೬/೦೫/೨೦೧೬ | ೯೪೮೪೭೮೫೩೧೬ |
| ೩೬. | ಶ್ರೀ. ವೆಂಕನಗೌಡ. ತಿಮ್ಮನಗೌಡ. ಪಾಟೀಲ | ಪುರುಷ | ಪ.ಪಂ | ಸದಸ್ಯರು | ೦೬/೦೫/೨೦೧೬ | ೯೮೪೫೮೨೫೧೧೦ |

**ಜಮಖಂಡಿ ತಾಲ್ಲೂಕ ಪಂಚಾಯಿತಿ ಸದಸ್ಯರ ವಿವರ**

ಸರ್ಕಾರ ಹಿಂದಿನ ತಾಲೂಕು ಬೋರ್ಡ್‌ಗಳ ರದ್ದು ಮಾಡಿ ಆನಂತರ ವರ್ಷದಲ್ಲಿ ಜಮಖಂಡಿ ತಾಲೂಕು ಪಂಚಾಯಿತಿಯನ್ನು ರಚಿಸಲಾಯಿತು. ಅಂದಿನಿಂದ ಇಂದಿನವರೆಗೆ ಈ ತಾಲೂಕು ಪಂಚಾಯಿತಿಯ ವ್ಯಾಪ್ತಿಗೊಳಪಟ್ಟ ಹಳ್ಳಿಗಳಲ್ಲಿ ಆಡಳಿತ, ಶಿಕ್ಷಣ, ಸಾರ್ವಜನಿಕ ಆರೋಗ್ಯ, ಮಹಿಳೆ ಮತ್ತು ಮಕ್ಕಳ ಕಲ್ಯಾಣ, ಸರ್ವಾಜನಿಕ ಸೇವೆ ಮೊದಲಾದ ಕೆಲಸ ಕಾರ್ಯಗಳನ್ನು ಜಮಖಂಡಿ ತಾಲೂಕು ಪಂಚಾಯಿತಿ ವತಿಯಿಂದ ವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಬರಲಾಗುತ್ತಿದೆ. ಇಲ್ಲಿನ ಸುಗಮ ಆಡಳಿತ ನಿರ್ವಹಣೆಗಾಗಿ ಪ್ರಜೆಗಳಿಂದ ಚುನಾಯಿತರಾಗಿ ಅಯ್ಕೆಯಾದ ಒಟ್ಟು ೨೯ ಜನ ಸದಸ್ಯರಿದ್ದು, ಅವರು ೨೦೧೪ರ ಸಾಲಿನಲ್ಲಿ ಚುನಾಯಿತರಾಗಿದ್ದರೆ. ಅವರನ್ನು ಪ್ರಸಕ್ತ ತಾಲೂಕು ಪಂಚಾಯಿತಿ ಕಾರ್ಯಕಾರಿ ಸಮಿತಿ ಸದಸ್ಯರನ್ನಾಗಿ ನೇಮಿಸಿಕೊಳ್ಳಲಾಗಿದೆ. ತೇರದಾಳ ಪರಿಸರದಿಂದ ಪ್ರಸಕ್ತ ಪಂಚಾಯಿತಿಗೆ ಒಟ್ಟು ೪ ಜನ ಸದಸ್ಯರು ಆಯ್ಕೆಯಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ವಿವಿಧ ಚುನಾವಣಾ ಕ್ಷೇತ್ರಗಳಿಂದ ತಾಲೂಕು ಪಂಚಾಯಿತಿಗೆ ಆಯ್ಕೆಯಾದ ಚುನಾವಣಾ ಕ್ಷೇತ್ರ ಮತ್ತು ಅವರು ನಿರ್ವಹಿಸುತ್ತಿರುವ ಹುದ್ದೆಗಳ ವಿವರ ಈ ಮುಂದಿನಂತಿದೆ[೨೫].

| ಕ್ರಂ | ಹೆಸರು | ಹುದ್ದೆ | ಕ್ಷೇತ್ರ |
|---|---|---|---|
| ೧ | ಶ್ರೀಮತಿ ಮುಗಳಖೋಡ ಸುನಂದಾ ಕರೆಪ್ಪ ಸಾ॥ಹನಗಂಡಿ | ಅಧ್ಯಕ್ಷರು | ಹನಗಂಡಿ-೬ |
| ೨ | ಶ್ರೀಮತಿ ಬೆಳಗಲಿ ಸುಂದ್ರವ್ವ ಭೀಮಪ್ಪ ಸಾ॥ಶಿರಗುಪ್ಪಿ | ಉಪಾಧ್ಯಕ್ಷರು | ಮುತ್ತೂರ-೨೩ |
| ೩ | ಶ್ರೀ ಚಂದಪ್ಪ ಬಾಳಪ್ಪ ನರಸಗೊಂಡ ಸಾ॥ ಆಲಗೂರ | ಸದಸ್ಯರು | ಆಲಗೂರ-೧ |
| ೪ | ಶ್ರೀಮತಿ ಭಾರತಿ ಪರಸರಾಮ ಸಣ್ಣಕ್ಕಿ ಸಾ॥ಆಸಂಗಿ | ಸದಸ್ಯರು | ಆಸಂಗಿ-೨ |
| ೫ | ಶ್ರೀ ಆಲಬಾಳ ಮಂಜುನಾಥ ಶಂಕ್ರಪ್ಪ ಸಾ॥ಜನವಾಡ | ಸದಸ್ಯರು | ಬಿದರಿ-೩ |
| ೬ | ಶ್ರೀಮತಿ ಸುವರ್ಣಾ ಸಂತಪ್ಪ ಶಿಡ್ಲವ್ವಗೋಳ | ಸದಸ್ಯರು | ಚಿಮ್ಮಡ-೫ |
| ೭ | ಶ್ರೀಮತಿ ಸವಿತಾ ಶಿವಾನಂದ ಕಲ್ಯಾಣೀ ಸಾ॥ ಚಿಕ್ಕಪಡಸಲಗಿ | ಸದಸ್ಯರು | ಚಿಕ್ಕಪಡಸಲಗಿ-೫ |
| ೮ | ಶ್ರೀ ಮಂಟೂರ ಶಿವಾನಂದ ಪರಪ್ಪ ಸಾ॥ಸಸಾಲಟ್ಟಿ | ಸದಸ್ಯರು | ಸಸಾಲಟ್ಟಿ-೭ |
| ೯ | ಶ್ರೀ ಶಿವನಿಂಗ ಮಲ್ಲಪ ಚಪ್ಪರ ಸಾ॥ಗೋಠೆ | ಸದಸ್ಯರು | ಗೋಠೆ-೮ |
| ೧೦ | ಶ್ರೀಮತಿ ಚಿನ್ನವ್ವ ಚನ್ನಬಸಪ್ಪ ಹೊಸಮನಿ ಸಾ॥ಹಿಪ್ಪರಗಿ | ಸದಸ್ಯರು | ಹಿಪ್ಪರಗಿ-೯ |
| ೧೧ | ಶ್ರೀ ಗುಗ್ಗರಿ ಧರೆಪ್ಪ ರಾಮಪ್ಪ ಸಾ॥ಅಡಿಹುಡಿ | ಸದಸ್ಯರು | ಹಿರೇಪಡಸಲಗಿ |
| ೧೨ | ಶ್ರೀಮತಿ ನೀಲವ್ವ ಮನ್ನಪ್ಪ ತೆಳಗಡೆ ಸಾ॥ಹಳಿಂಗಳಿ | ಸದಸ್ಯರು | ಹಳಿಂಗಳಿ-೧೧ |
| ೧೩ | ಶ್ರೀ ಗೋವಿಂದ ರಾಣಪ್ಪ ಗಸ್ತಿ ಸಾ॥ಹುಲ್ಯಾಳ | ಸದಸ್ಯರು | ಹುಲ್ಯಾಳ-೧೨ |
| ೧೪ | ಶ್ರೀಮತಿ ನಿಂಬೆವ್ವ ಮಲ್ಲಪ್ಪ ದೇಸಾರಟ್ಟಿ ಸಾ॥ಮದರಖಂಡಿ | ಸದಸ್ಯರು | ಮದರಖಂಡಿ೧೨ |
| ೧೫ | ಶ್ರೀ ಬಸಪ್ಪ ರಾಮಪ್ಪ ಕಡಪಟ್ಟಿ ಸಾ॥ಹುನ್ನೂರ | ಸದಸ್ಯರು | ಹುನ್ನೂರ-೧೪ |
| ೧೬ | ಶ್ರೀ ಗುರುಪಾದಯ್ಯ ಮಗಯ್ಯ ಮರಡಿಮಠ ಸಾ॥ನಾವಲಗಿ | ಸದಸ್ಯರು | ನಾವಲಗಿ-೧೫ |
| ೧೭ | ಶ್ರೀ ಸದಾಶಿವ ತಿಪ್ಪಣ್ಣ ಮಾಂಗ ಸಾ॥ಸನಾಳ | ಸದಸ್ಯರು | ಕಂಕನವಾಡಿ-೧೭ |
| ೧೮ | ಶ್ರೀಮತಿ ನಾಗವ್ವ ಹಣಮಂತ ಕುರಣಿ ಸಾ॥ಕಂಕನವಾಡಿ | ಸದಸ್ಯರು | ಜಂಬಗಿಬಿ.ಕೆ-೧೬ |
| ೧೯ | ಶ್ರೀಮತಿ ಜಾಧವ ವಂದನಾ ರಾಜಕುಮಾರ ಸಾ॥ಕನ್ನೋಳಿ | ಸದಸ್ಯರು | ಕನ್ನೋಳಿ-೧೮ |
| ೨೦ | ಶ್ರೀ ಚೌರಿ ಶ್ರೀಮಂತ ವಿಠ್ಠಲ ಸಾ॥ತೊದಲಬಾಗಿ | ಸದಸ್ಯರು | ತೊದಲಬಾಗಿ೧೯ |
| ೨೧ | ಶ್ರೀ ಭೀಮಪ್ಪ ಸಿದ್ದಪ್ಪ ಹಾದಿಮನಿ ಸಾ॥ಕೊಣ್ಣೂರ | ಸದಸ್ಯರು | ಕೊಣ್ಣೂರ-೨೦ |
| ೨೨ | ಶ್ರೀ ತೇಲಿ ಹಣುಮಂತ ಬಸಪ್ಪ ಸಾ॥ಕುಲಹಳ್ಳಿ | ಸದಸ್ಯರು | ಕುಲಹಳ್ಳಿ-೨೧ |
| ೨೩ | ಶ್ರೀ ರಾಜು ರಾಮಪ್ಪ ಬಾಗೇವಾಡಿ ಸಾ॥ಕುಂಚನೂರ | ಸದಸ್ಯರು | ಕುಂಚನೂರ-೨೨ |
| ೨೪ | ಶ್ರೀ ಬಸವರಾಜ ಮಾದೇವ ಮಾಳಿ ಸಾ॥ಸಾವಳಗಿ | ಸದಸ್ಯರು | ಸಾವಳಗಿ-೨೪ |
| ೨೫ | ಶ್ರೀಮತಿ ಶೋಭಾ ಗೌಡಪ್ಪ ಹೊಸುರು ಸಾ॥ತುಂಗಳ | ಸದಸ್ಯರು | ತುಂಗಳ-೨೫ |
| ೨೬ | ಶ್ರೀಮತಿ ಹೇಗಾಡಿ ಕಾಸವ್ವ ಸದಾಶಿವ ಸಾ॥ಗೋಲಬಾಂವಿ | ಸದಸ್ಯರು | ಗೋಲಬಾಂವಿ೨೬ |
| ೨೭ | ಶ್ರೀಮತಿ ಚಿನ್ನವ್ವ ಸಂಗಪ್ಪ ಹುನ್ನೂರ ಸಾ॥ಶೂರಪಾಲಿ | ಸದಸ್ಯರು | ಶೂರಪಾಲಿ-೨೭ |
| ೨೮ | ಶ್ರೀಮತಿ ಬಂಗಿ ಸುನಂದಾ ಈಶ್ವರ ಸಾ॥ಜಗದಾಳ | ಸದಸ್ಯರು | ಜಗದಾಳ-೨೮ |
| ೨೯ | ಶ್ರೀಮತಿ ಲಮಾಣಿ ದೇವಕಿ ಕೀರಪ್ಪ ಸಾ॥ಲಿಂಗನೂರ | ಸದಸ್ಯರು | ಲಿಂಗನೂರ-೨೯ |

**ತೇರದಾಳ ಪುರಸಭೆ**

ಕರ್ನಾಟಕ ರಾಜ್ಯ ಸರ್ಕಾರ ಗ್ರಾಮ ಪಂಚಾಯಿತಿ ಮತ್ತು ಹೋಬಳಿ ಕೇಂದ್ರವಾಗಿದ್ದ ತೇರದಾಳವನ್ನು ೨೦೧೭-೧೮ನೇ ಸಾಲಿನಲ್ಲಿ ಪುರಸಭೆ ಎಂದು ಘೋಷಿಸಿ ಅದಕ್ಕೆ ಬೇಕಾದ ಆಡಳಿತ ವ್ಯವಸ್ಥೆಯನ್ನು ಮಾಡಿದೆ. ಇಲ್ಲಿ ೨೩ ವಾರ್ಡ್‌ಗಳಿದ್ದು, ಪ್ರತಿ ವಾರ್ಡ್‌ಗೆ ಒಬ್ಬರಂತೆ ಒಟ್ಟು ೨೩ ಜನ ಚುನಾಯಿತ ಪ್ರತಿನಿಧಿಗಳಿದ್ದು, ಅವರು ಅಲ್ಲಿನ ಕಾರ್ಯಕಾರಿ ಸಮಿತಿ

ಸದಸ್ಯರಾಗಿದ್ದು, ಅಲ್ಲಿನ ಮುಖ್ಯಾಧಿಕಾರಿಯೊಂದಿಗೆ ಅಡಳಿತ ನೋಡಿಕೊಂಡು ಹೋಗುವ ಜವಾಬ್ದಾರಿಯನ್ನು ಹೊತ್ತಿದ್ದಾರೆ. ಇವರು ಪುರಸಭೆಯ ವ್ಯಾಪ್ತಿಗೊಳಪಟ್ಟ ಹಳ್ಳಿಗಳಲ್ಲಿ ಆಡಳಿತ, ಶಿಕ್ಷಣ, ಸಾರ್ವಜನಿಕ ಆರೋಗ್ಯ, ನೈರ್ಮಲ್ಯ, ಸ್ವಚ್ಛತೆ, ಮಹಿಳೆ ಮತ್ತು ಮಕ್ಕಳ ಕಲ್ಯಾಣ, ಸರ್ವಾಜನಿಕ ಸೇವೆ ಮೊದಲಾದ ಕೆಲಸ ಕಾರ್ಯಗಳನ್ನು ಪುರಸಭೆ ವತಿಯಿಂದ ವ್ಯವಸ್ಥಿತವಾಗಿ ನಿರ್ವಹಿಸುತ್ತಾರೆ. ಪುರಸಭೆಯ ೨೦೧೮ರವರೆಗಿನ ಪ್ರಸಕ್ತ ಕಾರ್ಯಕಾರಿ ಸಮಿತಿ ಸದಸ್ಯರ ಪಟ್ಟಿ ಈ ಮುಂದಿನಂತಿದೆ[೨೬].

**೨೦೧೮-೧೯ ನೇ ತೇರದಾಳ ಪುರಸಭೆಗೆ ಆಯ್ಕೆಯಾದ ಸದಸ್ಯರ ಯಾದಿ**

| ಕ್ರ.ಸಂ. | ಹೆಸರು | ಹುದ್ದೆ | ವಾರ್ಡ ಸಂಖ್ಯೆ | ಮೊಬೈಲ್ ಸಂಖ್ಯೆ |
|---|---|---|---|---|
| ೧ | ಶ್ರೀಮತಿ ರೂಪಾ ಶಂಕರ ಕುಂಬಾರ | ಸದಸ್ಯರು | ೧ | ೯೯೧೬೨೭೩೯೪೯ |
| ೨ | ಶ್ರೀ ರುಸ್ತಮ ಇಸ್ಮಾಯಿಲ್ ನಿಪ್ಪಾಣಿ | ಸದಸ್ಯರು | ೨ | ೯೨೪೧೬೪೧೪೯೦ |
| ೩ | ಶ್ರೀ ವಿನಾಯಕ ರಾಮಕೃಷ್ಣ ಬಂಕಾಪೂರ | ಸದಸ್ಯರು | ೩ | ೮೨೧೭೦೭೯೩೦೦ |
| ೪ | ಶ್ರೀ ಕಾಶಿನಾಥ ನಾ ರಾತೋಡ | ಸದಸ್ಯರು | ೪ | ೯೭೩೯೫೭೨೬೩೧ |
| ೫ | ಶ್ರೀ ಹಾಫೀಜ ಮೌಲಾಅಲಿ ಬುಡನವಾಬ | ಸದಸ್ಯರು | ೫ | ೯೯೪೫೫೭೩೩೯೧ |
| ೬ | ಶ್ರೀಮತಿ ನಸರೀನಬಾನು ರಾಜೇಸಾಬ ನಗಾರ್ಜಿ | ಸದಸ್ಯರು | ೬ | ೯೫೩೮೬೪೬೬೦೮ |
| ೭ | ಶ್ರೀ ಲಕ್ಷ್ಮಣ ಶಿವನಪ್ಪ ನಾಯಕ | ಸದಸ್ಯರು | ೭ | ೯೦೩೫೭೬೦೮೪೮ |
| ೮ | ಶ್ರೀಮತಿ ಶಿಲ್ಪಾ ಗೌತಮ ರೋಡಕರ | ಸದಸ್ಯರು | ೮ | ೯೦೩೫೫೬೮೩೦೪ |
| ೯ | ಶ್ರೀಮತಿ ಅಕ್ಕುತಾಯಿ ಉಜಳಂತ ಕಾಂಬಳೆ | ಸದಸ್ಯರು | ೯ | ೮೭೯೨೭೨೭೦೩೬ |
| ೧೦ | ಶ್ರೀ ಕುಮಾರ ಶ್ರೀಪತಿ ಸರಿಕರ | ಸದಸ್ಯರು | ೧೦ | ೯೬೩೨೦೮೯೨೧೩ |
| ೧೧ | ಶ್ರೀ ಆಧಿನಾಥ ಜಿನ್ನಪ್ಪ ಸಪ್ತಸಾಗರ | ಸದಸ್ಯರು | ೧೧ | ೯೪೪೯೪೪೧೫೭೧ |
| ೧೨ | ಶ್ರೀ ಸುರೇಶ ಪರಪ್ಪ ಕಬಾಡಗಿ | ಸದಸ್ಯರು | ೧೨ | ೯೮೮೬೩೮೬೧೭೦ |
| ೧೩ | ಶ್ರೀ ಶೆಟ್ಟೆಪ್ಪ ಬನಟ್ಟೆಪ್ಪ ಸುಣಗಾರ | ಸದಸ್ಯರು | ೧೩ | ೯೯೪೫೩೭೫೨೭೫ |
| ೧೪ | ಶ್ರೀಮತಿ ಕಮಲವ್ವ ಭೀ ವಡ್ಡರ | ಸದಸ್ಯರು | ೧೪ | ೯೮೮೬೬೬೫೦೬೫ |
| ೧೫ | ಶ್ರೀ ಸಚೀನ ದೊಂಡಿಬಾ ಕೋಡತೆ | ಸದಸ್ಯರು | ೧೫ | ೯೬೧೧೩೨೩೨೧೫ |
| ೧೬ | ಶ್ರೀ ಪಜಲ್ಲ ಮೋಡಿನಸಾಬ ಅತಾರಾವುತ | ಸದಸ್ಯರು | ೧೬ | ೬೩೬೧೧೫೬೫೦೦ |
| ೧೭ | ಶ್ರೀಮತಿ ಕುಶಮಾಂದಿನಿಅಲ್ಲಪ್ಪ ಬಾಬಾಗೊಂಡ | ಸದಸ್ಯರು | ೧೭ | ೯೬೧೧೭೩೮೧೪೩ |
| ೧೮ | ಶ್ರೀ ಫೈಜುಲ್ಲಾ ಅಲ್ಲಾಭಕ್ಷ ಇನಾಮದಾರ | ಸದಸ್ಯರು | ೧೮ | ೮೦೫೦೨೯೩೧೪೩ |
| ೧೯ | ಶ್ರೀ ಸಂತೋಷ ಅಲ್ಲಪ್ಪ ಜಮಖಂಡಿ | ಸದಸ್ಯರು | ೧೯ | ೯೧೧೦೪೪೪೩೭೮ |
| ೨೦ | ಶ್ರೀಮತಿ ಸಂಗೀತಾ ಕೇದಾರಿ ಪಾಟೀಲ | ಸದಸ್ಯರು | ೨೦ | ೯೮೮೬೪೬೧೫೨೩ |
| ೨೧ | ಶ್ರೀಮತಿ ಶಾಂತವ್ವ ರುದ್ರಪ್ಪ ಕಾಲತಿಪ್ಪಿ | ಸದಸ್ಯರು | ೨೧ | ೯೭೩೯೧೫೦೬೮೧ |
| ೨೨ | ಶ್ರೀಮತಿ ಅನ್ನಪೂರ್ಣ ಸ್ಧಾಶಿವ ಹೊಸಮನಿ | ಸದಸ್ಯರು | ೨೨ | ೮೧೫೦೮೭೬೩೩೫ |
| ೨೩ | ಶ್ರೀಮತಿ ಮಾದೇವಿ ರಾಮಪ್ಪ ಗಸ್ತಿ | ಸದಸ್ಯರು | ೨೩ | ೭೦೨೨೨೩೭೩೭೯ |

ಈ ಹಿಂದೆ ಕೇವಲ ಶ್ರೀಮಂತರು, ರಾಜಕೀಯ ಪ್ರಭಾವಿಗಳು, ಜಮೀನ್ದಾರರು ರಾಜಕೀಯ ವ್ಯವಸ್ಥೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಆದರೆ ಸರ್ಕಾರ ಶ್ರೀ ಸಾಮಾನ್ಯನು ರಾಜಕೀಯ ವ್ಯವಸ್ಥೆಯಲ್ಲಿ ಪಾಲ್ಗೊಳ್ಳಬೇಕೆಂಬ ಸದಾಶಯದಿಂದ ಮಹಿಳೆಯರಿಗೆ, ಹಿಂದುಳಿದ ವರ್ಗದವರಿಗೆ ಮತ್ತು ಪ.ಜಾ/ಪ.ಪಂ.ದವರಿಗೆ ವಿಶೇಷ ಮೀಸಲಾತಿ ಒದಗಿಸಿಕೊಟ್ಟಿದೆ. ಇದರ ಪರಿಣಾಮವಾಗಿ ಈ ಎಲ್ಲಾ ವರ್ಗದವರು ತಮ್ಮ ಸಹಭಾಗಿತ್ವವನ್ನು ರಾಜಕೀಯ ಕ್ಷೇತ್ರದಲ್ಲಿ ವಿಸ್ತರಿಸಿಕೊಳ್ಳಲು ಸಹಾಯಕವಾಯಿತು. ಇದರಿಂದಾಗಿ ಈ ಭಾಗದಲ್ಲಿ

ಕೆಳ ಹಂತವಾದ ಗ್ರಾಮ ಪಂಚಾಯಿತಿ ಮತ್ತು ಪುರಸಭೆಯಿಂದ ಹಿಡಿದು ಮೇಲಿನ ಹಂತವಾದ ತಾಲೂಕು, ಜಿಲ್ಲಾ ಪಂಚಾಯಿತಿ ಹಾಗೂ ವಿಧಾನಸಭೆ, ಲೋಕಸಭೆಗಳಲ್ಲಿ ಶ್ರೀಸಾಮಾನ್ಯರು ಚುನಾವಣೆಗಳಲ್ಲಿ ಸ್ಪರ್ಧಿಸಿ ಗೆಲವು ಸಾಧಿಸಲು ಹಾಗೂ ಆ ಮೂಲಕ ಸಾಮಾಜಿಕ ನ್ಯಾಯ ಪಡೆಯಲು ಸಹಾಯಕವಾಗಿದೆ. ಇದರಿಂದಾಗಿ ಶ್ರೀ ಸಾಮಾನ್ಯ ಕುಟುಂಬದಿಂದ ಬಂದ ಅವರುಗಳು ಈ ಭಾಗದಲ್ಲಿ ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಸಹಾಯಕವಾಗಿದೆ.

**ಕೊನೆ ಟಿಪ್ಪಣಿಗಳು**

೧. ಮಟೋಳಿ ಎಸ್.ಬಿ., ೧೯೮೭, ಜಮಖಂಡಿ ದರ್ಶನ. ಪು. ಸಂ. ೨೮
೨. ಅದೇ., ಪು. ಸಂ. ೧೦
೩. ಅದೇ., ಪು. ಸಂ. ೨೯
೪. ಬೆಳಗಲಿ ದು.ನಿಂ., ೨೦೦೦, ಜಮಖಂಡಿ ತಾಲೂಕಾ ದರ್ಶನ, ಪು. ಸಂ. ೧೭–೧೯
೫. ಅದೇ., ಪು. ಸಂ. ೩೫
೬. ಮಟೋಳಿ ಎಸ್.ಬಿ., ೨೦೦೧, ದಕ್ಷಿಣ ಸಂಸ್ಥಾನಗಳ ಇತಿಹಾಸ ದರ್ಶನ. ಪು. ಸಂ. ೧೫
೭. ಅದೇ., ೪೮
೮. ಬೆಳಗಲಿ ದು.ನಿಂ., ೨೦೦೦, ಜಮಖಂಡಿ ತಾಲೂಕಾ ದರ್ಶನ, ಪು. ಸಂ. ೧೭–೧೯
೯. ಮಟೋಳಿ ಎಸ್.ಬಿ., ೧೯೮೭, ಜಮಖಂಡಿ ದರ್ಶನ. ಪು. ಸಂ. ೨೮
೧೦. ಅದೇ. ೫೮
೧೧. ಮುನಿಸ್ವಾಮಿ ಆರ್., ಬಿಜಾಪುರ–ಬಾಗಲಕೋಟೆ ಜಿಲ್ಲೆಗಳ ಗೆಜೆಟೀಯರ, ಪು. ಸಂ. ೨೦೬ ೨೨೭\
೧೨. ಅದೇ. ೨೬
೧೩. ಅದೇ. ೩೨
೧೪. ಬೆಳಗಲಿ ದು.ನಿಂ., ೨೦೦೦, ಜಮಖಂಡಿ ತಾಲೂಕಾ ದರ್ಶನ, ಪು. ಸಂ. ೧೭–೧೯
೧೫. ಜಮಖಂಡಿ ತಾಲೂಕು ಕಛೇರಿಯ ದಾಖಲೆಗಳು
೧೬. ನೋಡಿ–ಬಿಜಾಪುರ ಜಿಲ್ಲಾ ಗೆಜೆಟೀಯರ ಪು. ಸಂ. ೨೦೬
೧೭. ಮಟೋಳಿ ಎಸ್.ಬಿ, ೧೯೮೭, ಜಮಖಂಡಿ ದರ್ಶನ. ಪು. ಸಂ. ೨೮
೧೮. ಅದೇ. ೮೭
೧೯. ಅಮರಪ್ಪ ಕಡೆಕೋಳ (೭೨) ಹಾರೋಗೇರಿ ಇವರು ನೀಡಿದ ಮಾಹಿತಿ
೨೦. ಮಲ್ಲಪ್ಪ ದುಂಡಪ್ಪ ಅಮರಚಿಂತ (೬೭) ಜಮಖಂಡಿ ಇವರು ನೀಡಿದ ಮಾಹಿತಿ. ಕುಂಬಾರ ರಮೇಶ, ಪೂರ್ವೋಕ್ತ, ಪು.೧೭೮.
೨೧. ಬಾಗಲಕೋಟೆ ಮತ್ತು ಬೀಜಾಪುರ ಜಿಲ್ಲಾಧಿಕಾರಿಗಳ ಕಾರ್ಯಲಯದಲ್ಲಿನ ದಾಖಲೆಗಳು
೨೨. ಅದೇ.,
೨೩. ಬಾಗಲಕೋಟೆ ಜಿಲ್ಲಾ ಪಂಚಾಯಿತಿಯ ದಾಖಲೆಗಳು
೨೪. ಜಮಖಂಡಿ ತಾಲೂಕಾ ಪಂಚಾಯಿತಿಯ ದಾಖಲೆಗಳು
೨೫. ತೇರದಾಳ ಪುರಸಭೆಯ ದಾಖಲೆಗಳು
೨೬. ಜಮಖಂಡಿ ತಾಲೂಕಾ ಪಂಚಾಯಿತಿಯ ದಾಖಲೆಗಳು

## ಅಧ್ಯಾಯ-೮ ಸಮಾರೋಪ

'ತೇರದಾಳ' ಪ್ರದೇಶವು ಚಾರಿತ್ರಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯತೆಗಳಿಗೆ ಹೆಸರುವಾಸಿಯಾಗಿದೆ. ಕರ್ನಾಟಕ ರಾಜ್ಯ ಸರ್ಕಾರ ೧೯೯೭ರಲ್ಲಿ ಜಿಲ್ಲೆಗಳನ್ನು ಪುನರ್ ವಿಂಗಡಿಸಿ ರಚಿಸಿದ ನೂತನ ಜಿಲ್ಲೆಗಳಲ್ಲಿ ಬಾಗಲಕೋಟೆ ಜಿಲ್ಲೆಯೂ ಒಂದಾಗಿದ್ದೂ, ಇದರ ವ್ಯಾಪ್ತಿಯಲ್ಲಿ ಪ್ರಸಕ್ತ ತೇರದಾಳ ಪರಿಸರವು ಸೇರ್ಪಡೆಗೊಂಡಿದೆ. ಮೊದಲು ಪಂಚಾಯಿತಿ ಕೇಂದ್ರವಾಗಿದ್ದ ಇದು ಕರ್ನಾಟಕ ಏಕೀಕರಣದ ನಂತರ ಅಂದರೆ ೧೯೭೩ರಲ್ಲಿ ಮೈಸೂರ ಮುನ್ಸಿಪಾಲ್ಟಿ ಕಾಯ್ದೆಯನ್ವಯ ಪಂಚಾಯಿತಿಯಿಂದ ಮಾರ್ಪಾಟಾಗಿ ಪುರಸಭೆಯ ಕೇಂದ್ರವಾಗಿ ಪರಿವರ್ತನೆ ಹೊಂದಿದೆ. ಅಲ್ಲದೇ ತೇರದಾಳವು ಇಂದು ರಾಜ್ಯದ ಒಂದು ವಿಧಾನಸಭಾ ಮತಕ್ಷೇತ್ರವೂ ಆಗಿದೆ.

ಈ ಪರಿಸರವು ಮಾನವ ಸಂಸ್ಕೃತಿಯ ವಿಕಾಸಕ್ಕೆ ತನ್ನದೇ ಆದ ಮಹತ್ವದ ಕೊಡುಗೆಯನ್ನು ವಿವಿಧ ಕಾಲಘಟ್ಟಗಳಲ್ಲಿ ನೀಡಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಶಿಲಾಯುಗ ಕಾಲದ ಮಾನವ ಬಾಳಿ ಬದುಕಿದ್ದಕ್ಕೆ ಇಲ್ಲಿ ಅತ್ಯಂತ ಪ್ರಾಚೀನ ಕುರುಹುಗಳು ದೊರೆಕಿವೆ. ಮಾನವ ಸಂಸ್ಕೃತಿಯ ವಿಕಸನದ ಹಾದಿಯಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟ ಅತ್ಯಂತ ಪ್ರಮುಖವಾಗಿದ್ದು, ಅದಕ್ಕೆ ಸಂಬಂಧಿಸಿದ ಹಲವು ನೆಲೆಗಳನ್ನು ಈ ಪ್ರದೇಶದಲ್ಲಿ ಗುರುತಿಸಲಾಗಿದೆ. ಅವುಗಳಲ್ಲಿ ತೇರದಾಳದ ಪಶ್ಚಿಮ ದಿಕ್ಕಿಗೆ ೫ ಕಿ. ಮೀ. ದೂರದಲ್ಲಿರುವ 'ವಿಭೂತಿ ಮಡ್ಡಿ' ಮತ್ತು ಇದೇ ಪರಿಸರದ ಉತ್ತರ ದಿಕ್ಕಿನಲ್ಲಿರುವ 'ಕಡ್ಲಿಪಡಿ', ಅಸ್ಕಿ, ಆಸಂಗಿ, ಹನಗಂಡಿ, ಹಳಿಂಗಳಿ, ಮದಲಮಟ್ಟಿ ಗಳಲ್ಲಿ ೧೦೦೦ ಕ್ಕಿಂತಲೂ ಹೆಚ್ಚು ಬೃಹತ್ ಶಿಲಾಯುಗದ ಅಪರೂಪದ ಸಮಾಧಿಗಳು ದೊರೆಕಿದ್ದು, ಅವು ಅಧ್ಯಯನದ ದೃಷ್ಟಿಯಿಂದ ವಿಶೇಷ ಮಹತ್ವ ಪಡೆದಿವೆ.

ಶಾಸನೋಕ್ತ 'ತೇರಿದಾಳ' ಪ್ರದೇಶವನ್ನು ಚಾರಿತ್ರಿಕ ಕಾಲಘಟ್ಟದಲ್ಲಿ ರಾಷ್ಟ್ರಕೂಟರು, ಬದಾಮಿ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ಸೌದತ್ತಿಯ ರಟ್ಟರು, ಶಿಲಾಹಾರರು, ದೇವಗಿರಿಯ ಯಾದವರು, ಬಿಜಾಪುರದ ಆದಿಲ್ ಶಾಹಿಗಳು, ಸಾಂಗ್ಲಿ ಸಂಸ್ಥಾನದ ಅರಸರು ಕ್ರಮವಾಗಿ ಆಳ್ವಿಕೆ ಮಾಡಿದ್ದಾರೆ. ಕೆಲ ಅರಸರು ತೇರದಾಳವನ್ನು ತಮ್ಮ ಆಡಳಿತದ ಕೇಂದ್ರ\ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಕ್ಕೆ ಹಲವು ಸಾಕ್ಷ್ಯಗಳಿವೆ. ಚಾಲುಕ್ಯರ ಪೆರ್ಮಾಡಿ ಎಂಬ ಅರಸ (೧೦೭೫-೧೧೨೬) ಗುಜರಾತ್ ಚೋಳ ದೇಶಗಳ ಅರಸರನ್ನು ಗೆದ್ದು ಬಂದ ಬಳಿಕ ತೇರದಾಳನ್ನು ಕಟ್ಟಿದನೆಂಬ ಪ್ರತೀತಿ ಇಲ್ಲಿದೆ. ಅಲ್ಲದೇ ಇದು ಚಾಲುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದ ಕಾರ್ತಿವಿರ್ಯನ ರಾಜಧಾನಿ ಆಗಿತ್ತೆಂದು ಇಲ್ಲಿನ ಶಾಸನಗಳು ಉಲ್ಲೇಖಿಸಿವೆ. ತೇರದಾಳವು ಕುಂತಳ ದೇಶದಲ್ಲಿದ್ದ ಕೂಹುಂಡಿ ದೇಶದ ಒಂದು ಸಣ್ಣ ಆಡಳಿತ ಭಾಗವಾಗಿದ್ದಾಗ ಇದನ್ನು ಗೊಂಕದೇವನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಗೊಂಕ ಜಿನಾಲಯವನ್ನು ನಿರ್ಮಿಸಿದ್ದನ್ನು ಅಲ್ಲಿನ ಒಂದು ಶಾಸನ ವಿವರಿಸುತ್ತದೆ. ಅದೇ ರೀತಿ ಸೇವುಣ ಅಥವಾ ಯಾದವ ಅರಸ ಸಿಂಘಣನ ಸೇನಾನಿಯಾಗಿದ್ದ ತೆಜುಗಿ ಮತ್ತು ಅವನ ಮಗ ಬಾಯಿದೇವರು ಕುಂತಳ ಮಹೀವಲ್ಲಭ ಕಲ್ಯಾಣದ ಚಾಲುಕ್ಯ ೪ನೇ ಸೋಮೇಶ್ವರನಿಂದ ಕೂಹುಂಡಿನಾಡನ್ನು ಪಡೆದುಕೊಂಡು ಅದನ್ನು ಆಳಿದ ಉಲ್ಲೇಖಗಳು ಇಲ್ಲಿನ ಶಾಸನಗಳಲ್ಲಿವೆ. ಅಲ್ಲದೇ ಬಿಜಾಪೂರದ ಆದಿಲಶಾಹನು ಕೃಷ್ಣೆಗೌಡನೆಂಬುವವನಿಗೆ ತೇರದಾಳದಲ್ಲಿ ದೇಸಗತಿ

ಸಂಸ್ಥಾನವನ್ನು ಮಾಡಿಕೊಟ್ಟನು. ಕೃಷ್ಣೆಗೌಡನು ಅಲ್ಲಮ ಪ್ರಭು ಸ್ವಾಮಿ ಇರುತ್ತಿದ್ದ ಸ್ಥಳದಲ್ಲಿ ಗುಡಿಯನ್ನು ಕಟ್ಟಿಸಿದ. ಅದು ಇಂದು ಅಲ್ಲಮಪ್ರಭುಗಳು ಮೂಲ ಗದ್ದುಗೆಯೆಂದು ಖ್ಯಾತವಾಗಿದ್ದು, ಭಕ್ತಿ ಮತ್ತು ಮುಕ್ತಿಯ ಕ್ಷೇತ್ರವೆಂದು ಹೆಸರು ಪಡೆದಿದೆ. ತೇರದಾಳದಲ್ಲಿ ೧೬ ನೇ ಶತಮಾನದ ತರುವಾಯ ಕೃಷ್ಣೆಗೌಡರ ಮನೆತನದವರೇ ಇಲ್ಲಿ 'ನಾಡಗೌಡರ' ಮನೆತನವಾಗಿ ಆಡಳಿತ ನಡೆಸಿತು.

ತೇರದಾಳ ಪ್ರದೇಶವು ಹಿಂದಿನ ರಾಜಪ್ರಭುತ್ವದಿಂದ ಇಂದಿನ ಪ್ರಸ್ತುತ ಪ್ರಜಾ ಪ್ರಭುತ್ವದ ವರೆಗೆ ರಾಜಕೀಯ ಕ್ಷೇತ್ರದಲ್ಲಿ ಅಮೂಲ್ಯ ಕೊಡುಗೆಗಳನ್ನು ನೀಡಿದೆ. ಅಲ್ಲದೆ ಇಲ್ಲಿನ ಚರಿತ್ರೆಯೂ ಆದ್ವಿತೀಯವಾಗಿದ್ದು, ಮಾನವ ಸಂಸ್ಕೃತಿಯ ಏಳ್ಗೆಗಾಗಿ ತನ್ನದೇ ಆದ ಮಹತ್ವದ ಕೊಡುಗೆಯನ್ನು ನೀಡಿದೆ. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸ ಹಾಗೂ ಪ್ರಾದೇಶಿಕ ಇತಿಹಾಸದ ಮತ್ತು ಸಾಬಾಲ್ಟರ್ನ್ ಅಧ್ಯಯನದ ದೃಷ್ಟಿಯಿಂದ ತೇರದಾಳವು ಅತಿ ಮಹತ್ವದ ಸ್ಥಾನ ಪಡೆದಿದೆ. ಸಬಾಲ್ಟರ್ನ್ ಅಧ್ಯಯನವು ಸ್ಥಳಿಯ ಚರಿತ್ರೆ, ಕೆಳಸ್ತರದ ಜನರ ಮತ್ತು ಸಮುದಾಯದ, ಕುಶಲಕರ್ಮಿಗಳ ಅಧ್ಯಯನಕ್ಕೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಇದುವರೆಗೆ ವ್ಯವಸ್ಥಿತವಾಗಿ ದಾಖಲಿಸಲಾಗದೇ ಇರುವ ತೇರದಾಳ ಪರಿಸರದ ಅಂದರೆ ತೇರದಾಳ ಮತ್ತು ಅದರ ವ್ಯಾಪ್ತಿಗೊಳಪಡುವ ಸುತ್ತಲಿನ ೨೩ ಗ್ರಾಮಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಇಲ್ಲಿ ವಿಶೇಷವಾಗಿ ಅಧ್ಯಯನ ಮಾಡಲಾಗಿದೆ.

ತೇರದಾಳ ಪರಿಸರದ ಸ್ಥಳಿಯ ಚರಿತ್ರೆಯನ್ನು ಅನಾವರಣಗೊಳಿಸುವುದರ ಜೊತೆಗೆ ಇಲ್ಲಿನ ಸ್ಥಳೀಯ ಜನರ ವೃತ್ತಿ, ಅವರ ಹೋರಾಟ, ಅವರ ಜನ ಜೀವನ ಕ್ರಮ ಹಾಗೂ ಕಲಾ ವೈಶಿಷ್ಟ್ಯತೆಗಳ ಮೇಲೆ ವಿಶೇಷ ಬೆಳಕನ್ನು ಚೆಲ್ಲುವ ಪ್ರಯತ್ನವನ್ನು ಮೊದಲ ಬಾರಿಗೆ ಇಲ್ಲಿ ಮಾಡಲಾಗಿದೆ. ಇಂದಿನ ಜಾಗತೀಕರಣದ ನಾಗಲೋಟಕ್ಕೆ ಇಲ್ಲಿನ ಪರಿಸರವು ಸಹ ಸಿಲುಕಿಕೊಂಡಿದೆ. ಪರಿಣಾಮವಾಗಿ ಕಣ್ಮರೆಯಾಗುವ ಅಪಾಯದ ಹಂತದಲ್ಲಿದ್ದ ಇಲ್ಲಿನ ಪರಂಪರೆ, ಸಂಸ್ಕೃತಿ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸ ಹಾಗೂ ಅದರ ಮಹತ್ವವನ್ನು ಇಲ್ಲಿ ವಿಶೇಷ ಆದ್ಯತೆ ಕೊಟ್ಟು ಮೊದಲ ಬಾರಿಗೆ ವಿಶ್ಲೇಷಿಸಿ ದಾಖಲಿಸಲಾಗಿದೆ. ಈ ಮೂಲಕ ಕಳಚಲಿರುವ ಚರಿತ್ರೆಯ ಕೊಂಡಿಗಳನ್ನು ದಾಖಲೆಗಳಲ್ಲಿ ಹಿಡಿದಿಟ್ಟ ಶ್ರೇಯಸ್ಸು ಈ ಅಧ್ಯಯನಕ್ಕೆ ಸಲ್ಲುತ್ತದೆ. ಈ ಪ್ರಸಕ್ತ ಅಧ್ಯಯನವು ತನ್ನ ಗುರಿ ಮತ್ತು ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ನೂರಕ್ಕೆ ನೂರರಷ್ಟು ಯಶಸ್ವಿಯಾಗಿದ್ದು, ಅದರ ಫಲಿತಗಳನ್ನು ಈ ಮುಂದೆ ನೀಡಲಾಗಿದೆ.

**ಅಧ್ಯಯನದ ಫಲಿತಗಳು**

ದೇಶವೊಂದರ ಇತಿಹಾಸದಲ್ಲಿ ಸಣ್ಣಪುಟ್ಟ ಪ್ರಾದೇಶಿಕ ಅರಸು ಮನೆತನಗಳು ಮತ್ತು ಶ್ರೀಸಾಮಾನ್ಯರ ಇತಿಹಾಸ, ಪರಂಪರೆ, ಕಲೆ, ಸಂಪ್ರದಾಯ, ಆಚರಣೆ, ಅವರ ಹೋರಾಟ ಮೊದಲಾದ ಅಂಶಗಳು ಸಹಾ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿವೆ. ಈ ಅಧ್ಯಯನದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಮಾನವ ಸಂಸ್ಕೃತಿ ಹೇಗೆ ತೇರದಾಳ ಪರಿಸರದಲ್ಲಿ ವಿಕಸನಗೊಂಡಿತೆಂಬುದನ್ನು ಹಾಗೂ ವಿಶೇಷವಾಗಿ ಇಲ್ಲಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವೈಶಿಷ್ಟತೆಗಳನ್ನು ಮಾತ್ರ ಇಲ್ಲಿ ಮೊದಲ ಬಾರಿಗೆ ಈ ಮುಂದಿನಂತೆ ಗುರುತಿಸಲಾಗಿದೆ.

೧. ಭೌಗೋಳಿಕ ಲಕ್ಷಣಗಳು ದೇಶವೊಂದರಲ್ಲಿ ಅತಿ ಮುಖ್ಯ ಪಾತ್ರವನ್ನು ನಿರ್ವಹಿಸುತ್ತವೆ. ಅದರಂತೆ ತೇರದಾಳ ಪರಿಸರದ ಭೌಗೋಳಿಕ ಪರಿಸರ, ಭೌಗೋಳಿಕ ವಿವರ, ಅಲ್ಲಿನ ಭೌಗೋಳಿಕ ಲಕ್ಷಣಗಳು ಮತ್ತು ಮಹತ್ವ ಹಾಗೂ ಅವುಗಳು ಇಲ್ಲಿನ ರಾಜವಂಶ ಮತ್ತು ಸ್ಮಾರಕಗಳ ಮೇಲೆ ಬೀರಿದ ಪರಿಣಾಮಗಳನ್ನು ಇಲ್ಲಿ ಗುರುತಿಸಲಾಗಿದೆ.

೨. ಮಾನವನ ಇತಿಹಾಸ ಮತ್ತು ಅವನ ವಿಕಾಸದಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟಕ್ಕೆ ತನ್ನದೇ ಆದ ವಿಶೇಷವಾದ ಮಹತ್ವದ ಸ್ಥಾನವಿದೆ. ಅದರಂತೆ ತೇರದಾಳ ಪರಿಸರದಲ್ಲಿ ಪ್ರಾಗೈತಿಹಾಸಿಕ ಕಾಲದ ಹಲವು ಕುರುಹುಗಳನ್ನು ವಿಶೇಷವಾಗಿ ಗುರುತಿಸಲಾಗಿದೆ. ಇಲ್ಲಿ ೧೦೦೦ ಕ್ಕಿಂತಲೂ ಹೆಚ್ಚಿನ ಬೃಹತ್ ಶಿಲಾಸಮಾಧಿಗಳಿದ್ದು, ಅವು ಬಹು ಅಪರೂಪವೆನಿಸಿವೆ. ಈ ಸಂಸ್ಕೃತಿಗೆ ಸಂಬಂಧಿಸಿದ ವಿವಿಧ ನೆಲೆಗಳು ಹಾಗೂ ಅವುಗಳ ಸಾಂಸ್ಕೃತಿಕ ಮಹತ್ವ ಮತ್ತು ವೈಶಿಷ್ಟ್ಯತೆಯನ್ನು ಇಲ್ಲಿ ವ್ಯವಸ್ಥಿತವಾಗಿ ಗುರುತಿಸಿ ವಿಶ್ಲೇಷಿಸಲಾಗಿದೆ.

೩. ರಾಜಕೀಯ ಇತಿಹಾಸವು ಪ್ರದೇಶವೊಂದರ ಚರಿತ್ರೆಯ ಕೈಗನ್ನಡಿಯಾಗಿದ್ದು, ಅಲ್ಲಿನ ಸಾಂಸ್ಕೃತಿಕ ಹಿರಿಮೆ ಮತ್ತು ಗರಿಮೆಗಳನ್ನು ಅರಿಯಲು ಸಹಾಯಕವಾಗಿದೆ. ಅದರಂತೆ ಇಲ್ಲಿ ಚಾರಿತ್ರಿಕ ಕಾಲಘಟ್ಟದಲ್ಲಿ ಇಲ್ಲಿ ಹಲವಾರು ರಾಜಮನೆತನಗಳು ಆಳ್ವಿಕೆ ಮಾಡಿವೆ. ಈ ಪ್ರದೇಶದ ಪ್ರಾಚೀನ ಕಾಲ ಘಟ್ಟ, ಮಧ್ಯಯುಗೀನ ಕಾಲ ಘಟ್ಟ ಮತ್ತು ಆಧುನಿಕ ಕಾಲಘಟ್ಟ ಹಾಗೂ ಸಮಕಾಲೀನ ಕಾಲಘಟ್ಟಗಳ ಚಾರಿತ್ರಿಕ ಹಿನ್ನೆಲೆ, ಆಳ್ವಿಕೆ ಮಾಡಿದ ವಿವಿಧ ಅರಸರು ಮತ್ತು ಅವರ  ರಾಜಕೀಯ ಆಡಳಿತ ವ್ಯವಸ್ಥೆ ಹಾಗೂ ಅವರು ಕೈಗೊಂಡ ಪ್ರಜಾಹಿತ ಕಾರ್ಯಗಳು, ಅಂದಿನ ಪ್ರಮುಖ ಆಡಳಿತ ವಿಭಾಗಗಳು ಹಾಗೂ ಅವು ನಿರ್ವಹಿಸಿದ ಪಾತ್ರ ಮೊದಲಾದ ಅಂಶಗಳನ್ನು ಲಭ್ಯ ಶಾಸನಗಳ ಹಿನ್ನೆಲೆಯಲ್ಲಿ ಇಲ್ಲಿ ವಿಶೇಷವಾಗಿ ದಾಖಲಿಸಲಾಗಿದೆ.

೪. ರಾಷ್ಟ್ರವೊಂದರ ಇತಿಹಾಸ ಅಲ್ಲಿ ವಾಸಿಸಿದ ಮತ್ತು ವಾಸಿಸುತ್ತಿರುವ ವಿವಿಧ ಸಮುದಾಯಗಳನ್ನು ಅವಲಂಬಿಸಿ ಮುನ್ನಡೆಯುತ್ತದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದ ಸಾಮಾಜಿಕ ಜನ ಜೀವನ, ಇಲ್ಲಿನ ಮಾನವ ಸಂಸ್ಕೃತಿಯ ಅರ್ಥ-ವೈಶಿಷ್ಟ್ಯತೆ ಮತ್ತು ಮಹತ್ವಗಳನ್ನು ಗುರುತಿಸುವುದರೊಂದಿಗೆ ಇಲ್ಲಿನ ವಿವಿಧ ಸಮುದಾಯಗಳು, ಇಲ್ಲಿನ ಶ್ರೇಣೀಕರಣ ವ್ಯವಸ್ಥೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

೫. ಪ್ರತಿ ಪ್ರದೇಶದಲ್ಲಿ ನಡೆಯುವ ಹಬ್ಬ-ಜಾತ್ರೆ-ಉತ್ಸವ ಮತ್ತು ವಿವಿಧ ಆಚರಣೆಗಳ ಸಹಾಯದಿಂದ ಆ ಪ್ರದೇಶದ ಸಾಂಸ್ಕೃತಿಕ ಇತಿಹಾಸ ಮತ್ತು ಮಾನವ ಸಂಸ್ಕೃತಿಯನ್ನು ಅರಿಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ತೇರದಾಳ ಪ್ರದೇಶದ ಹಬ್ಬ, ಉತ್ಸವ, ಜಾತ್ರೆ ಮತ್ತು ಆಚರಣೆಗಳ ಕುರಿತು ಇಲ್ಲಿ ದಾಖಲಿಸಲಾಗಿದೆ. ಅಲ್ಲದೇ ಇಲ್ಲಿನ ಕಲಾ ಪರಂಪರೆ ಮತ್ತು ಇಲ್ಲಿರುವ ವಿವಿಧ ವಿಶಿಷ್ಟ ಕಲಾವಿದರನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಇದರೊಂದಿಗೆ ಈ ಪ್ರದೇಶದ ಕ್ರೀಡಾ ಪರಂಪರೆ, ವಿವಿಧ ಕ್ರೀಡಾಪಟುಗಳು, ವಿವಿಧ ಕ್ರೀಡೆಗಳ ಮಹತ್ವವನ್ನು ದಾಖಲಿಸಿ ವಿಶ್ಲೇಷಿಸುವುದರೊಂದಿಗೆ ಇಲ್ಲಿನ ಜನರಲ್ಲಿರುವ ನಂಬಿಕೆ-ಸಂಪ್ರದಾಯಗಳು, ಒಗಟು-ಗಾದೆಗಳನ್ನು ಗುರುತಿಸಿ ಚರ್ಚಿಸಲಾಗಿದೆ.

೬. ಸಮಾಜವೊಂದರ ಉನ್ನತಿ ಮತ್ತು ಅವನತಿಗಳು ಅಲ್ಲಿನ ಆರ್ಥಿಕ ಸ್ಥಿತಿಗತಿಗಳ ಮೇಲೆ ಅವಲಂಬಿತವಾಗಿರುತ್ತವೆ. ಈ ಪ್ರದೇಶದ ಜನರ ಆರ್ಥಿಕ ಜನಜೀವನ ಹಾಗೂ ಕೃಷಿ-ನೀರಾವರಿ ವ್ಯವಸ್ಥೆ, ಪಶುಪಾಲನೆ ವ್ಯವಸ್ಥೆ, ಇಲ್ಲಿನ ಜನರ ಉಪ ವೃತ್ತಿಗಳು ಮತ್ತು ಪರಂಪರಗತವಾಗಿ ಸಮಾಜದಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಆಯಗಾರ ಪದ್ಧತಿಯನ್ನು ಹಾಗೂ ಜನರ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು ಹಾಗೂ ತೆರಿಗೆ ಮತ್ತು ಕಂದಾಯ ವ್ಯವಸ್ಥೆಯನ್ನು ವಿಶೇಷವಾಗಿ ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಮಾಡಿ ಇಲ್ಲಿ ಪ್ರಥಮ ಬಾರಿಗೆ ದಾಖಲಿಸಲಾಗಿದೆ.

೭. ಈ ಪ್ರದೇಶದ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಅಧ್ಯಯನವನ್ನು ಅವು ಬೆಳೆದು ಬಂದ ಪರಿಸರದ ಹಿನ್ನೆಲೆಯಲ್ಲಿ ವಿವೇಚಿಸುತ್ತಾ, ವಿವಿಧ ಕಾಲಘಟ್ಟಗಳಲ್ಲಿ ನಿರ್ಮಿತವಾದ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಒಂದು ಚಿತ್ರಣವನ್ನು ನೀಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮೊದಲ ಬಾರಿಗೆ ಮಾಡಲಾಗಿದೆ. ಬೇರೆ ಬೇರೆ ಕಡೆ ಚದುರಿ ಹೋಗಿರುವ ರಾಷ್ಟ್ರಕೂಟ. ಬಾದಾಮಿ ಚಾಳುಕ್ಯ, ಕಲ್ಯಾಣಿ ಚಾಲುಕ್ಯ, ಸೇವುಣ, ವಿಜಯನಗರ, ವಿಜಯನಗರೋತ್ತರ ಕಾಲಗಳಲ್ಲಿ ನಿರ್ಮಿತವಾದ ದೇವಾಲಯಗಳು ಹಾಗೂ ಬಸದಿ, ಮಸೀದಿ ಮೊದಲಾದ ಧಾರ್ಮಿಕ ಕೇಂದ್ರಗಳ ವಾಸ್ತುಶಿಲ್ಪ, ಕಲೆ ಮತ್ತು ಮೂರ್ತಿ ಶಿಲ್ಪಗಳನ್ನು ವ್ಯಾಪಕ ಕ್ಷೇತ್ರ ಕಾರ್ಯ ಕೈಗೊಂಡು ಗುರುತಿಸಲಾಗಿದೆ. ವಿಭಿನ್ನ ಧರ್ಮಗಳಿಗೆ ಸಂಬಂಧಿಸಿದ ಅನೇಕ ದೇವಾಲಯಗಳು, ಮಸೀದಿ, ಬಸದಿಗಳು ಇದೇ ಪ್ರದೇಶದ ಬೇರೆ ಬೇರೆ ಹಳ್ಳಿಗಳಲ್ಲಿ ಸ್ಥಾಪಿತವಾಗಿದ್ದು ಅವುಗಳನ್ನು ವ್ಯವಸ್ಥಿತವಾಗಿ ಗುರುತಿಸಲಾಗಿದೆ. ವಿಭಿನ್ನ ಕಾಲಾವಧಿಯಲ್ಲಿ ನಿರ್ಮಿತವಾಗಿರುವ ಇವುಗಳ ಅಧ್ಯಯನದಿಂದ ವಿವಿಧ ರಾಜ ಮನೆತನಗಳ ಸಾಮ್ರಾಜ್ಯದ ಎಲ್ಲೆಗಳನ್ನು ವಿಶ್ಲೇಷಿಸಲು ಮತ್ತು ಜನರ ಧಾರ್ಮಿಕ ಜನಜೀವನವನ್ನು ಅರಿಯಲು ಸಹಾಯಕವಾಗಿದೆ.

೮. ಲಭ್ಯ ಆಕರಗಳ ಸಹಾಯದಿಂದ ಇಲ್ಲಿನ ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಹಾಗೂ ತೇರದಾಳ ಪರಿಸರದ ಚರಿತ್ರೆಯ ಕಥನದಲ್ಲಿ ತೇರದಾಳ ಗ್ರಾಮ ನಿಷ್ಪತ್ತಿ ವ್ಯಾಖ್ಯಾನ ಅದರ ವ್ಯಾಪ್ತಿ ಅವುಗಳ ಸ್ವರೂಪವನ್ನು ಇಲ್ಲಿ ಪ್ರಾಸಂಗಿಕವಾಗಿ ಗುರುತಿಸಿ ದಾಖಲಿಸಲಾಗಿರುವುದು ಇಲ್ಲಿಯ ಮತ್ತೊಂದು ವಿಶೇಷತೆಯಾಗಿದೆ.

೯. ಇಲ್ಲಿರುವ ರಕ್ಷಣಾ ಸಂಬಂಧಿ ಮತ್ತು ಲೌಕಿಕ ಸ್ಮಾರಕಾವಶೇಷಗಳು ಹಾಗೂ ಇಲ್ಲಿನ ಸ್ಮಾರಕ ಶಿಲ್ಪಗಳ ಸಹಾಯದಿಂದ ಇಲ್ಲಿನ ಮಾನವ ಸಂಸ್ಕೃತಿಯ ವಿಶೇಷತೆಯನ್ನು ಅರಿಯುವ ವಿಶೇಷ ಪ್ರಯತ್ನ ಮಾಡಿ ಅದರಲ್ಲಿ ಈ ಅಧ್ಯಯನ ಯಶಸ್ವಿಯಾಗಿದೆ. ಅಲ್ಲದೇ ಶಾಸನಾಧಾರಗಳಿಲ್ಲದೇ ಇಲ್ಲಿರುವ ದೇವಾಲಯ, ಮಸೀದಿ ಹಾಗು ಬಸದಿಗಳನ್ನು ಅಧ್ಯಯನಕ್ಕೊಳಪಡಿಸಿ ಅವುಗಳ ಶೈಲಿಯನ್ನು ಗುರುತಿಸಿರುವುದು (ಇವು ರಾಷ್ಟ್ರಕೂಟ, ಬದಾಮಿ ಚಾಲುಕ್ಯ, ಕಲ್ಯಾಣಿ ಚಾಲುಕ್ಯ, ವಿಜಯನಗರ ಮತ್ತು ವಿಜಯನಗರೋತ್ತರ ಶೈಲಿಯಲ್ಲಿವೆ.) ಈ ಸಂಶೋಧನೆಯ ಮತ್ತೊಂದು ಫಲಿತವೆಂದರೆ ತಪ್ಪಾಗಲಿಕ್ಕಿಲ್ಲ.

೧೦. ಇಲ್ಲಿ ದೊರೆತಿರುವ ದೇವಾಲಯಗಳು, ಬಸದಿಗಳು, ಮಸೀದಿ ಹಾಗೂ ಇತರೆ ಸ್ಮಾರಕಗಳನ್ನು ಹಾಗೂ ಮೂರ್ತಿಗಳನ್ನು ಆಧಾರವಾಗಿಟ್ಟುಕೊಂಡು ಇಲ್ಲಿನ ಪ್ರಾಚೀನ ಮತ್ತು ಮಧ್ಯಯುಗೀನ ಹಾಗೂ ಪ್ರಸಕ್ತ ಕಾಲದ ಧಾರ್ಮಿಕ ಇತಿಹಾಸನ್ನು ಕೂಡಾ

ರಚಿಸಬಹುದಾಗಿದೆ. ಈ ಜಿಲ್ಲೆಯಲ್ಲಿ ಶೈವ, ವೈಷ್ಣವ ಶಾಕ್ತ, ಜಿನ (ಜೈನ) ಇತರ (ಸೂರ್ಯ, ಬ್ರಹ್ಮ, ಹರಿಹರೇಶ್ವರ) ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳು, ಬಸದಿಗಳು ಹಾಗೂ ಮೂರ್ತಿಗಳು ವಿವಿಧ ಸ್ಥಳಗಳಲ್ಲಿ ದೊರೆತಿವೆ. ಶೈವ ಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳು ಹಾಗೂ ಮೂರ್ತಿಗಳು ಇತರೆ ಧರ್ಮಗಳ ದೇವಾಲಯ, ಮೂರ್ತಿಗಳಿಗಿಂತಲೂ ಅಧಿಕ ಪ್ರಮಾಣದಲ್ಲಿ ಪ್ರಾಚೀನ ಕಾಲದಲ್ಲಿ ದೊರೆತಿವೆ. ಇದರಿಂದಾಗಿ ಆ ಕಾಲದಲ್ಲಿ ಶೈವ ಧರ್ಮದ ಆರಾಧಕರು ಇಲ್ಲಿ ಹೆಚ್ಚಾಗಿದ್ದರೆಂದು ಹೇಳಬಹುದು. ಅಲ್ಲದೇ ಮಧ್ಯಯುಗೀನ ಕಾಲದಲ್ಲಿ ಇಲ್ಲಿ ವೈಷ್ಣವ ಧರ್ಮ ಇತರೆ ಧರ್ಮಗಳಿಗಿಂತ ಪ್ರಾಬಲ್ಯದಲ್ಲಿತ್ತೆಂಬ ಅಂಶ ಇಲ್ಲಿನ ಸ್ಮಾರಕಾವಶೇಷಗಳಿಂದ ಸ್ಪಷ್ಟವಾಗುತ್ತದೆ. ಅಲ್ಲದೇ ನಂತರ ಕಾಲದಲ್ಲಿ ಜೈನ ಧರ್ಮ ಈ ಭಾಗದಲ್ಲಿ ಉಚ್ಛ್ರಾಯ ಸ್ಥಿತಿಯನ್ನು ಪಡೆಯಿತೆಂದು ಹಾಗೂ ಪ್ರಸಕ್ತ ಕಾಲದಲ್ಲಿ ಸಮ್ಮಿಶ್ರ ಧರ್ಮ ಆಸ್ತಿತ್ವದಲ್ಲಿದೆ ಎಂಬುದನ್ನು ಈ ಆಧ್ಯಯನ ಮೊದಲ ಬಾರಿಗೆ ಗುರುತಿಸಿದೆ.

೧೧. ಶಾಕ್ತ ಧರ್ಮಕ್ಕೆ ಸೇರಿದ ದೇವಾಲಯಗಳು ಈ ತಾಲೂಕಿನಲ್ಲಿ ಕಡಿಮೆ ಪ್ರಮಾಣದಲ್ಲಿ ದೊರೆತಿವೆ. ಆದರೆ ಆ ಧರ್ಮದ ಮೂರ್ತಿಗಳು ಹೆಚ್ಚು ದೊರೆತಿವೆ. ಇದರಿಂದಾಗಿ ಪ್ರಾಚೀನ ಮತ್ತು ಮಧ್ಯಯುಗೀನ ಕಾಲಗಳೆರಡರಲ್ಲೂ ಈ ಧರ್ಮ ಅಸ್ತಿತ್ವದಲ್ಲಿತ್ತೆಂದು ಹೇಳಬಹುದಾದರೂ. ಅದು ಶೈವ ಧರ್ಮದಷ್ಟು ಪ್ರಾಬಲ್ಯತೆಯನ್ನು ಪಡೆದುಕೊಂಡಿರಲಿಲ್ಲ ಎಂಬುದಂತು ಸ್ಪಷ್ಟ. ಅದರಂತೆ ಮಧ್ಯಯುಗದಿಂದ ಮುಸ್ಲಿಂ ಧರ್ಮ ತನ್ನ ಆಸ್ತಿತ್ವ ಪಡೆದುಕೊಂಡು ಅದು ಇಂದಿಗೂ ಆಸ್ತಿತ್ವದಲ್ಲಿದೆ ಎಂಬುದನ್ನು ಈ ಆಧ್ಯಯನ ಗುರುತಿಸುವಲ್ಲಿ ಯಶಸ್ವಿಯಾಗಿದೆ.

೧೨. ಈ ಪ್ರದೇಶದ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳನ್ನು ಒಂದೆಡೆ ಪ್ರಾಥಮಿಕವಾಗಿ ದಾಖಲಿಸುವಲ್ಲಿ ಈ ಪ್ರಬಂಧ ಯಶಸ್ವಿಯಾಗಿದೆ. ಇದು ಇಲ್ಲಿ ವಿವಿಧ ಕಾಲಾವಧಿಯಲ್ಲಿ ಹೊರಡಿಸಲ್ಪಟ್ಟ ಶಾಸನಗಳ ಸಂಖ್ಯೆಯನ್ನು ಗುರುತಿಸುವಲ್ಲಿ ಸಹಾಯಕವಾಗುತ್ತದೆ. ಅಲ್ಲದೇ ಈ ತಾಲೂಕಿನ ವ್ಯಾಪ್ತಿಯಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಆಳ್ವಿಕೆ ಮಾಡಿದ ರಾಜ ಮನೆತನಗಳ ಮತ್ತು ಅವರಿಂದ ಹೊರಡಿಸಲ್ಪಟ್ಟ ಶಾಸನಗಳು ಹಾಗೂ ಅವರಿಂದ ನಿರ್ಮಿತವಾದ ದೇವಾಲಯಗಳನ್ನು ಶಾಸನ ಆಧಾರಗಳಿಂದ ಈ ಅಧ್ಯಯನ ವಿಶೇಷವಾಗಿ ಗುರುತಿಸುವಲ್ಲಿ ಈ ಪ್ರಬಂಧ ಯಶಸ್ವಿಯಾಗಿದೆ.

೧೩. ದೊರೆತ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಮತ್ತು ಸಮಕಾಲೀನ ಪ್ರಸಕ್ತ ಆಚರಣೆಗಳ ಸಹಾಯದಿಂದ ಅಂದಿನ ಸಾಮಾಜಿಕ, ಧಾರ್ಮಿಕ ಹಾಗೂ ಹಬ್ಬ, ಉತ್ಸವ, ಜಾತ್ರೆ ಮತ್ತು ನಿತ್ಯದ ಕೆಲ ಪ್ರಮುಖ ಆಚರಣೆಗಳು ಮತ್ತಿತರೆ ಸಾಂಸ್ಕೃತಿಕ ವಿವರಗಳನ್ನು ಗುರುತಿಸುವಲ್ಲಿ ಈ ಸಂಶೋಧನಾ ಪ್ರಬಂಧ ಯಶಸ್ವಿಯಾಗಿದೆ.

ಒಟ್ಟಿನಲ್ಲಿ ಈ ಸಂಶೋಧನಾ ಪ್ರಬಂಧವು ತೇರದಾಳ ಪರಿಸರದ ಚರಿತ್ರೆ, ಸಂಸ್ಕೃತಿ, ದೇವಾಲಯ ಮತ್ತು ಶಾಸನಗಳ ಮೇಲೆ ಹೊಸ ಬೆಳಕನ್ನು ಚೆಲ್ಲುವಲ್ಲಿ ಯಶಸ್ವಿಯಾಗಿದೆ. ಇದುವರೆಗೆ ಹಲವಾರು ವಿದ್ವಾಂಸರು ಅಧ್ಯಯನ ನಡೆಸಿರುವ ಹಾದಿಯಲ್ಲಿಯೇ ಮುಂದುವರೆದು, ವಿವಿಧ ಕಾಲದಲ್ಲಿ ಹೊರಡಿಸಲ್ಪಟ್ಟ ಶಾಸನಗಳು/ನಿರ್ಮಿಸಲ್ಪಟ್ಟ ದೇವಾಲಯಗಳು ಮತ್ತು ಅವುಗಳ ವೈಶಿಷ್ಟ್ಯವನ್ನು ಹಾಗೂ ಸಮಕಾಲೀನ ಜನಜೀವನ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಗುರುತಿಸುವಲ್ಲಿ ಪ್ರಸ್ತುತ ಅಧ್ಯಯನ ಯಶಸ್ವಿಯಾಗಿದೆ ಎಂದು

ಹೇಳಬಹುದಾಗಿದೆ. ಹಾಗೆಯೇ ಶಾಸನಗಳ ಅನಿವಾರ್ಯ ಅಂಗಗಳಾದ ಶಾಸನ ಶಿಲ್ಪಗಳ ಕುರಿತು ಅಲ್ಲಲ್ಲಿ ಪೂರಕವಾಗಿ ಚರ್ಚಿಸಿರುವುದು ಈ ಪ್ರಬಂಧದ ವಿಶೇಷವಾಗಿದೆ.

ದೇವಾಲಯ ಹಾಗು ಶಾಸನಗಳು ದೊರೆಯುವ ಬಹುತೇಕ ಪ್ರದೇಶಗಳಲ್ಲಿ ವಿಭಿನ್ನ ರೀತಿಯ ಐತಿಹ್ಯಗಳಿವೆ. ಅನೇಕ ಸ್ಥಳೀಯರು ಇವುಗಳ ಬಳಿ ನಿಧಿ ಇದೆ, ಇವುಗಳನ್ನು ಸರ್ಪ ಕಾಯುತ್ತಿದೆ ಹಾಗೂ ಇದನ್ನು ಜಕಣಾಚಾರಿ ನಿರ್ಮಿಸಿದ್ದಾನೆಂಬ ಅನೇಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಈ ರೀತಿಯ ಐತಿಹ್ಯಗಳ ಕುರಿತು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಬೇಕಾದ ಅಗತ್ಯತೆ ಇದೆ. ಅಲ್ಲದೇ ಇಲ್ಲಿನ ಚರಿತ್ರೆ ಮತ್ತು ಸಾಂಸ್ಕೃತಿಕ ಇತಿಹಾಸ, ದೇವಾಲಯ ಮತ್ತು ಶಾಸನಗಳ ಕುರಿತು ಸುಧೀರ್ಘವಾಗಿ ಇನ್ನೂ ಹೆಚ್ಚಿನ ಮಟ್ಟದಲ್ಲಿ ಅಧ್ಯಯನ ಮಾಡಲು ಅವಕಾಶಗಳು ಇವೆ.

ಈ ಪ್ರದೇಶದ ಚರಿತ್ರೆ ಮತ್ತು ಸಾಂಸ್ಕೃತಿಯ ಕುರಿತು ಇಲ್ಲಿಯವರೆಗೆ ನಡೆದಿರುವ ಕೆಲ ವಿರಳವಾದ ಅಧ್ಯಯನಗಳ ಕುರಿತು ಈ ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಮಹತ್ವದ ಕುರಿತು ಒಂದೆಡೆ ಇಡಿಯಾಗಿ ಮಾಹಿತಿ ಲಭ್ಯವಾಗುವ ರೀತಿ ಮೊದಲ ಬಾರಿಗೆ ಈ ಪ್ರಬಂಧದಲ್ಲಿ ಮಾಡಲಾಗಿದೆ. ಆದಾಗ್ಯೂ ಇದೇ ವಿಷಯದ ಕುರಿತು ವಿವಿಧ ದೃಷ್ಟಿಕೋನಗಳಿಂದ ಮತ್ತಷ್ಟು ಅಧ್ಯಯನ ನಡೆಸುವುದಕ್ಕೆ ಹೇರಳವಾದ ಅವಕಾಶಗಳಿವೆ.

**ಪದಗಳ ಅರ್ಥ**

| | |
|---|---|
| **ಅಂಗ ಭೋಗ** | ದೇವಾಲಯಗಳ ಅಭಿಷೇಕ, ಅಲಂಕಾರ, ಪೂಜೆ, ನೈವೇದ್ಯಗಾಗಿ ಭೂಮಿಯನ್ನು ನೀಡಿದ್ದು |
| **ಅಂಗುಲ** | ಉದ್ದಳತೆಯ ಅತ್ಯಂತ ಚಿಕ್ಕ ಅಳತೆ ಇದಾಗಿದೆ. |
| **ಅದ್ವೈತ** | ಜೀವಾತ್ಮ ಮತ್ತು ಪರಮಾತ್ಮ ಒಂದೇ ಎಂಬ ಶಂಕರಾಚಾರ್ಯರು ಬೋಧಿಸಿದ ಸಿದ್ಧಾಂತ. |
| **ಅಧಿಷ್ಠಾನ** | ಕಟ್ಟಡದ ಆಧಾರವಾಗಿರುವ ತಳಹದಿಗೆ ಅಧಿಷ್ಠಾನ ಎಂಬ ಹೆಸರಿದೆ. ಉಪಾನ, ಪದ್ಮ, ಕರ್ಣಿಕಾ, ಕುಮುದ, ಕಪೋತ, ವೇದಿ ಎಂಬ ಪ್ರಮುಖವಾದ ಅಂಗಗಳು ಕಂಡುಬರುತ್ತವೆ. |
| **ಉತ್ಖನನ** | ಪ್ರಾಚೀನ ಅವಶೇಷಗಳ ಪತ್ತೆಗಾಗಿ ಕ್ರಮಬದ್ಧವಾಗಿ ಭೂಮಿಯನ್ನು ಅಗೆದು ಶೋದಿಸುವ ಕಾರ್ಯ. |
| **ಊರ್ಧ್ವಮುಖ ಕ್ರಮ** | ದೇವಾಲಯದ ಕೆಳಗಿನಿಂದ ಮೇಲಕ್ಕೆ ಅಧಿಷ್ಠಾನ–ಭಿತ್ತಿ–ಪ್ರಸ್ತರ–ಗ್ರೀವ–ಶಿಖರ–ಸೂಪ್ತಿಗಳಿಂದ ಕೂಡಿರಬೇಕು. |
| **ಆಯಗಾರರು** | ಗ್ರಾಮ ಸೇವಕರು. |
| **ಏಕಕೂಟ ದೇವಾಲಯ** | ಒಂದು ಗರ್ಭಗುಡಿ ಹೊಂದಿರುವ ದೇವಾಲಯ |
| **ಕಂದಾಯ** | ಸಿದ್ಧಾಯ; ಭೂಮಿಯ ಮೇಲಿನ ತೆರಿಗೆ |
| **ಕಂಪಣ** | ಆಡಳಿತ ವಿಭಾಗ |
| **ಕರುನಾಡು** | ಎತ್ತರವಾದ ಪ್ರದೇಶ ಎಂಬ ಆರ್ಥವಿದೆ. ಕರ್ನಾಟಕಕ್ಕೆ 'ಕರಿನಾಡು' ಎಂಬ ಹೆಸರೂ |
| **ಕರಣಂ** | ಗ್ರಾಮ ಲೆಕ್ಕಿಗ; ಶಾನುಭೋಗ |
| **ಕೊತ್ವಾಲ** | ನಗರ ಅಥವಾ ಕೋಟೆಯ ಉಸ್ತುವಾರಿ ಅಧಿಕಾರಿಗಳು |
| **ಗರ್ಭಗುಡಿ** | ದೇವರ ವಿಗ್ರಹವನ್ನಿಡುವ ದೇವಾಲಯದ ಮುಖ್ಯ ಭಾಗ. |
| **ಗಾಣದೆರೆ** | ಎಣ್ಣೆ ತೆಗೆಯುವ ಯಂತ್ರದ ಮೇಲಿನ ತೇರಿಗೆ. |
| **ಗ್ರಾಮ** | ಹಳ್ಳಿ; ಆಡಳಿತದ ಸಣ್ಣ ಘಟಕ |
| **ಗುಹಾಚಿತ್ರದಕಲೆ** | ಪ್ರಾರಂಭದ ಹಂತದಲ್ಲಿ ಮನುಷ್ಯ ಮೃಗಗಳಂತೆ ಬದುಕಿ, ತರುವಾಯ ಗುಹೆಗಳಲ್ಲಿ ವಾಸವಾಗಿದ್ದ, ತಾನು ವಾಸಿಸಿದ ಗುಹೆಗಳಲ್ಲಿ ತಾನು ಕಂಡ ಪ್ರಾಣಿ, ಪಕ್ಷಿಗಳ, ಸಸ್ಯ, ಮರಗಳ ಚಿತ್ರಗಳನ್ನು ಚಿತ್ರರೂಪದಲ್ಲಿ ಬಿಡಿಸಿದ್ದಾನೆ. |
| **ಗೌಡ/ಗಾವುಂಡ** | ಗ್ರಾಮದ ಮುಖಂಡ |
| **ಘಟಿಕಾ ಸ್ಥಾನ** | ಉನ್ನತ ಶಿಕ್ಷಣ ಕೇಂದ್ರ, ಇಲ್ಲಿ ವಿದ್ಯೆಯನ್ನು ಕಲಿತವರಿಗೆ ಘಟಿಕ ಸಾಹಸಿ ಎಂದು ಕರೆಯಲಾಗುತ್ತಿತ್ತು. |
| **ಚತುಸ್ಸಮಯಗಳು** | ಸಮಯ ಎಂದರೆ ಧರ್ಮ ಎಂಬ ಅರ್ಥವಿದೆ. ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಎಂಬ ನಾಲ್ಕು ಸಧರ್ಮಗಳನ್ನು ಇದು ತಿಳಿಸುತ್ತದೆ. |
| **ಚತುಷ್ಕೂಟ** | ದೇವಾಲಯ ನಾಲ್ಕು ಗರ್ಭಗುಡಿಗಳಿರುವ ದೇವಾಲಯ. ನಾಲ್ಕು ಗರ್ಭಗುಡಿಗಳಿಗೆ ಒಂದೇ ನವರಂಗವಿರುತ್ತದೆ. |

| | |
|---|---|
| **ಜಾಜಮನಿ** | ಭೂರಹಿತ ಕೃಷಿ ಕಾರ್ಮಿಕರು ತಾವು ಮಾಡಿದ ಕೆಲಸಕ್ಕೆ ಪ್ರತಿಫಲವಗಿ ಭೂ ಒಡೆಯರಿಂದ ಪಡೆಯುತ್ತಿದ್ದ ದವಸ ಧಾನ್ಯ ಇಲ್ಲವೆ ವಸ್ತುಗಳನ್ನು ಪಡೆಯುವುದಕ್ಕೆ ಜಾಜಮನಿ ಎಂದು ಕರೆಯುತ್ತಿದ್ದರು. |
| **ತೀರ್ಥಂಕರ** | ಜೈನಧರ್ಮದ ಪ್ರಾರಂಭ ಹಂತದಲ್ಲಿ ಕಾಣಸಿಗುವ ಮಹಾಗುರುಗಳು. |
| **ದಾಸಕೂಟ** | ವೈಷ್ಣವ ಪಂಥವನ್ನು ಪ್ರಚಾರ ಮಾಡಿದ ದಾಸರ ಸಮೂಹವನ್ನು ದಾಸಕೂಟ ಎಂದು ಕರೆಯುತ್ತಾರೆ. |
| **ದ್ರಾವಿಡ ಶೈಲಿ** | ದಕ್ಷಿಣ ಭಾರತದಲ್ಲಿ ಪ್ರಚಲಿತದಲ್ಲಿರುವ ವಾಸ್ತುಶೈಲಿ |
| **ದ್ವಾರ** | ದೇವಾಲಯ ಗರ್ಭಗೃಹ ಮತ್ತು ನವರಂಗ ದ್ವಾರಗಳಲ್ಲಿ ವಿಶೇಷ ಕೆತ್ತನೆ ಕಂಡುಬರುತ್ತದೆ. ದ್ವಾರ ಅಥವಾ ಬಾಗಿಲಿನ ಪ್ರಾಮುಖ್ಯತೆಯನ್ನು ಸಾರುವ ಅಲಂಕಾರ ಕೆತ್ತನೆ ಬಹುತೇಕ ಎಲ್ಲ ದೇವಾಲಯಗಳಲ್ಲೂ ಕಾಣುತ್ತೇವೆ. |
| **ನವರಂಗ** | ದೇವಾಲಯ ಮುಖ್ಯಭಾಗಗಳಲ್ಲಿ ಒಂದು. ಒಂಬತ್ತು ಅಂಕಣಗಳಿರುವ ಕಾರಣ ಇದಕ್ಕೆ ನವರಂಗ ಎಂದು ಸಾಮಾನ್ಯವಾಗಿ ಕರೆಯುವುದಿದೆ. ಇದು ದೇವಾಲಯದ ಮಧ್ಯಭಾಗದಲ್ಲಿರುವ ಕಾರಣ ಇದನ್ನು ನವರಂಗ ವೆಂದು ಕರೆಯುತ್ತಾರೆ. ನರ್ತನೆ, ಗಾಯನ, ಪ್ರವಚನಗಳನ್ನು ಇಲ್ಲಿ ನಡೆಸಲಾಗುತ್ತದೆ. ಇದನ್ನು ರಂಗ ಮಂಟಪ ಎಂಬ ಹೆಸರಿನಿಂದಲೂ ಕರೆಯುತ್ತಾರೆ. |
| **ನಾಗರ ಶೈಲಿ** | ಉತ್ತರಭಾರತದ ವಾಸ್ತು ಶೈಲಿ. ಈ ಶೈಲಿಯ ಶಿಖರಗಳು ಬಾಗಿದ ರೇಖೆಯ ಆಕಾರದಲ್ಲಿರುತ್ತದೆ. |
| **ಬಸದಿ** | ಜೈನ ದೇವಾಲಯ, ಇವುಗಳನ್ನು ಜಿನಾಲಯ ಎಂದು ಕರೆಯುತ್ತಾರೆ. |
| **ಬಯಲು** | ಮೈದಾನ, ಬಯಲು ಭೂಮಿ, ಕೆರೆಯ ಕೆಳಗಿರುವ ಭೂಮಿ. |
| **ಭೋಗ** | ಅನುಭೋಗಕ್ಕೆಂದು ನೀಡಿದ ಭೂಮಿ, ಹಣ ಇತ್ಯಾದಿ. |
| **ಮದರಸಾ** | ಶಿಕ್ಷಣ ಸಂಸ್ಥೆ, ಕಾಲೇಜು |
| **ಮಸೀದಿ** | ಮುಸ್ಲಿ ಪ್ರಾರ್ಥನಾ ಮಂದಿರ. |
| **ಮಾಸ್ತಿಕಲ್ಲು** | ಇದು ಮಹಾಸತಿಕಲ್ಲು ಎಂಬ ಪದದ ಸಂಕ್ಷಿಪ್ತ ರೂಪ. ಇದು ಸಹಗಮನ ಮಾಡಿದ ಗರತಿಯ ಸ್ಮಾರಕ. |
| **ಮುಖಮಂಟಪ** | ಇದು ದೇವಾಲಯದ ನಾಲ್ಕನೇ ಭಾಗ. ಗರ್ಭಗುಡಿ, ಸುಖನಾಸಿ, |
| **ನವರಂಗಗಳ** | ತರುವಾಯದ ಭಾಗ ಸಾಮಾನ್ಯವಾಗಿ ಇದು ತೆರದೇ ಇರುತ್ತದೆ. ಆದ್ದರಿಂದ ಇದನ್ನು ತೆರೆದ ಅಥವಾ ಮುಖ ಮಂಟಪ ಎನ್ನುತ್ತಾರೆ. |
| **ರಕ್ಷಿತಾಂಣ್ಯ** | ಕಾಯ್ದಿಟ್ಟ ಅರಣ್ಯ ಪ್ರದೇಶ. |
| **ವೃತ್ತಿ** | ಕಾಯಕ. |

| | |
|---|---|
| **ವೀರಗಲ್ಲು** | ದೇಶ ಗ್ರಾಮ, ಸ್ತ್ರೀ, ಗೋವುಗಳ ರಕ್ಷಣೆಗಾಗಿ ಹೋರಾಡಿ ವೀರಮರಣ ಹೊಂದಿದವರ ಸ್ಮರಣೆಗಾಗಿ ಸ್ಥಾಪಿಸಲಾದ ಶಿಲಾಫಲಕಗಳನ್ನು ವೀರಗಲ್ಲುಗಳೆನ್ನುತ್ತೇವೆ. |
| **ವೇಸರ ಶೈಲಿ** | ಇದು ಕರ್ನಾಟಕದಲ್ಲಿ ಏಳಿಗೆ ಕಂಡ ವಾಸ್ತು ಶೈಲಿ. ಬಾದಾಮಿ ಚಾಳುಕ್ಯರು ಇದನ್ನು ಪ್ರಾರಂಭಿಸಿದರು. |
| **ಸಂದಾರ** | ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥ ಇರುವ ದೇವಾಲಯಗಳನ್ನು ಸಂದಾರ ಎನ್ನುವರು. |
| **ಶಾಸನ** | ತಾಮ್ರದ ತಗುಡು ಅಥವಾ ಕಲ್ಲಿನ ಮೇಲೆ ರಾಜಾಜ್ಞೆಯನ್ನು ಕೊರೆದಿಟ್ಟ ಬರಹಗಳನ್ನು ಶಾಸನ ಎನ್ನುತ್ತೇವೆ. |
| **ಶಿಖರ** | ದೇವಾಲಯಗಳ ಗರ್ಭಗೃಹದ ಮೇಲಿನ ಕಟ್ಟಡಕ್ಕೆ ಶಿಖರ ಎಂದು ಕರೆಯಲಾಗುತ್ತದೆ. ಕೆಳಗಿನ ಅಧಿಷ್ಠಾನದಿಂದ ಮೇಲಿನ ಎಲ್ಲವನ್ನು ಶಿಖರ ಅಥವಾ ವಿಮಾನ ಎಂದೇ ಪರಿಗಣಿಸಲಾಗುತ್ತದೆ. |
| **ಷಟ್ಸ್ಥಲ** | ವೀರಶೈವ ಧರ್ಮದಲ್ಲಿ ಆತ್ಮಸಾಧನೆಗಾಗಿ ಭಕ್ತ ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಗಳೆಂಬ ಆರು ಹಂತಗಳು. |
| **ಸಂಸ್ಕಾರ** | ಹೆಣವನ್ನು ಹೂಳುವ ಅಥವಾ ದಹನ ಮಾಡುವ ಕ್ರೀಯೆ. |
| **ಸಂಸ್ಕೃತಿ** | ಬುದ್ಧಿ ವಿಕಾಸ;ಮಾನಸಿಕವಾದ ಪಕ್ವತೆ |
| **ಸಮಾಧಿ** | ಸತ್ತವರನ್ನು ಹೂತ್ತಿಟ್ಟ ಸ್ಥಳ |
| **ಸರ್ಕಾರ್** | ಸರ್ಕಾರ; ರಾಜನ ಅರಮನೆ; ಅಂತ:ಪೂರ. |
| **ಸಪ್ತಮಾತೃಕೆಯರು** | ಬ್ರಾಹ್ಮಿ, ವೈಷ್ಣವಿ, ಮಾಹೇಶ್ವರಿ, ಇಂದ್ರಾಣಿ, ವಾರಾಹಿ, ಕೌಮಾರಿ ಮತ್ತು ಚಾಮುಂಡಿ, ಸಪ್ತಮಾತೃಕ ಉಲ್ಲೇಖ ಬಾದಾಮಿ ಚಾಳುಕ್ಯರ ಕಾಲದಲ್ಲೇ ಬಂದಿದೆ. |
| **ಸಮಸ್ತ ಪ್ರಜೆ** | ಊರಿನ ಸರ್ವಜನ: ಸಮಸ್ತರು |
| **ಸಲ್ಲೇಖನ ವ್ರತ** | ಜೈನ ಧರ್ಮೀಯರಲ್ಲಿರುವ ಪ್ರಚಲಿತವಿರುವ ಧರ್ಮಸಮ್ಮತ ಇಚ್ಛಾಮರಣ |
| **ಸಾಗುವಳಿ** | ವ್ಯವಸಾಯ; ವ್ಯವಸಾಯಕ್ಕೆ ಸಿದ್ಧವಿರುವ ಭೂಮಿ. |
| **ಸಾಮಂತ** | ಅಧೀನ ದೊರೆ |
| **ಸುಖನಾಸಿ** | ನವರಂಗ ಮತ್ತು ಗರ್ಭಗುಡಿಗಳನ್ನು ಒಂದುಗೂಡಿಸುವ ದೇವಾಲಯದ ಭಾಗ. |
| **ಸೆಟ್ಟಿಗಳು** | ವ್ಯಾಪಾರ ಮಾಡುವ ವರ್ತಕರು |
| **ಸೆಡೆ** | ಒಂದು ಅಳತೆಯ ಮಾನ |
| **ಹಣ** | ಒಂದು ನಾಣ್ಯ; ಫಣಮ್/ಫನಮ್/ಬಂಗಾರ/ಬೆಳ್ಳಿಯ ನಾಣ್ಯವೊಂದರ ಹೆಸರು |

Carbon- 14 dating – ಇಂಗಾಲ–14 ಕಾಲನಿರ್ಣಯ

Burrow - ಸಮಧಿ ದಿಬ್ಬ

Clactonian - ಆದಿ ಹಳೆಶಿಲಾಯುಗದ ಮಾದರಿ ಉಪಕರಣ

Cleaver – ಸೀಳುಗತ್ತಿ/ ಕಡಿಕತ್ತಿ

Engraving – ಗೀರು ರೇಖಾಚಿತ್ರ

Excavation – ಉತ್ಖನನ

Flint – ಚಕಮಕಿ ಕಲ್ಲು

Graffiti – ಗೀರು ರೇಖಾಚಿತ್ರ

Hand axe – ಕೈಗೊಡಲಿ

Kiln – ಆವಿಗೆ

Laterite – ಜಂಬಿಟ್ಟಿಗೆ

Lower Early Palacolithic – ಆದಿ ಹಳೆಶಿಲಾಯುಗ

Medieval – ಮಧ್ಯಯುಗದ, ಮಧ್ಯಯುಗೀನ ಕಾಲದ

Megalith – ಬೃಹತ್ ಶಿಲಾ ಸಮಾದಿ

Megalithic culture – ಬೃಹತ್ ಶಿಲಾ ಸಂಸ್ಕೃತಿ

Mesolithic – ಸೂಕ್ಷ್ಮ ಶಿಲಾಯುಗ

Middle palaeolithic – ಮಧ್ಯ ಹಳೆಶಿಲಾಯುಗ

Neolithic age – ನವಶಿಲಾಯುಗ

Neolighic – Chalcolithic – ನವ ಶಿಲಾ–ತಾಮ್ರಯುಗ

Palacolighic – ಹಳೆ ಶಿಲಾಯುಗ

Passage chamber – ಬೃಹತ್ ಶಿಲಾ ಸಂಸ್ಕೃತಿಯ ಹಾದಿ ಕೋಣೆ ಗೋರಿ

Pit burial – ಶವಕುಣಿ

Pottery – ಮಣ್ಪಾತ್ರೆ

Sarcophagus – ಶವಪೆಟ್ಟಿಗೆ

Stone circle – ಕಲ್ಲುವೃತ್ತ ಸಮಾಧಿ

೧.ಮಾದರಿ ಪ್ರಶ್ನಾವಳಿ ೨. ಗ್ರಂಥಋಣ

## ಮಾದರಿ ಪ್ರಶ್ನಾವಳಿ

### ತೇರದಾಳ ಪರಿಸರದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ

### ಪ್ರ-ಪತ್ರ-೧

ಗ್ರಾಮ/ಸ್ಥಳದ ಹೆಸರು____________ಅಕ್ಷಾಂಶ___________ ರೇಖಾಂಶ______________

ತಾಲೂಕು________________________ಹೋಬಳಿ___________________________

ಗ್ರಾಮಪಂಚಾಯ್ತಿ_____________ಸ್ಮಾರಕ/ಪ್ರಾಚ್ಯಾವಶೇಷದ

ಹೆಸರು____________________ಇರುವ ಸ್ಥಳ________________________________

ಮುಖದಿಕ್ಕು__________ಟೋ.ಶೀ.ಸಂ._______ಸ್ಮಾರಕ ನಿರ್ಮಾಣದ ವರ್ಷ____________

ನಿರ್ಮಾಣಕಾರರ___________________ವಿವರ______________________ಕೆರೆ/ಬಾವಿಯ

ನದಿಪಾತ್ರ______________________ಉಪಸರಣಿ___________________________

ನೀರಿನ ಮೂಲ____________ಸ್ಮಾರಕದ ಎತ್ತರ__________ ಉದ್ದ_________________

ಅಗಲ____________ಸ್ಮಾರಕ ನಿರ್ಮಾಣಕ್ಕೆ ಬಳಕೆ ಮಾಡಿದ ಕಚ್ಚಾ ವಸ್ತುಗಳು___________

_______________________________________________________________________

_______________________________________________________________________

ಸ್ಮಾರಕದಶೈಲಿ_____________________ಸ್ಮಾರಕದಕಾಲ___________________________

ರಾಜವಂಶದ ವಿವರ _______________________________________________________

_______________________________________________________________________

ಸ್ಮಾರಕದ ಕುರಿತ ಪ್ರಕಟಿತ ವಿವರಗಳು_________________________________________

ಸ್ಮಾರಕದ/ಪ್ರಾಚ್ಯಾವಶೇಷಗಳವಿವರ ____________________________________________

## ತೇರದಾಳ ಪರಿಸರದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ

### ಪ್ರ-ಪತ್ರ-೨

ಗ್ರಾಮ/ಸ್ಥಳದ
ಹೆಸರು________________ಅಕ್ಷಾಂಶ________________

ರೇಖಾಂಶ____________ತಾಲೂಕು__________ಹೋಬಳಿ________

ಗ್ರಾಮಪಂಚಾಯ್ತಿ________________________________

ಗ್ರಾಮದ ಹೆಸರಿನ ಹಿನ್ನೆಲೆ ________________________

________________________________________

ಬೆಟ್ಟ/ಗುಡ್ಡ____________ನದಿ/ಉಪನದಿ/ಹಳ್ಳ____________

ಒಟ್ಟು ಭೂಮಿಯ ವಿವರ__________ಅರಣ್ಯಭೂಮಿ____________

ಕೃಷಿ ಭೂಮಿ________________________________

ಅರಣ್ಯದಲ್ಲಿನ ವೃಕ್ಷ/ಪ್ರಾಣಿ ಸಂಕುಲದ ವಿವರ________________

ಗ್ರಾಮದಲ್ಲಿರುವ ಮುಖ್ಯ/ಉಪ ಸಮುದಾಯಗಳು&
ಪ್ರಮಾಣ________________________________

________________________________________

________________________________________

________________________________________

ಗ್ರಾಮದಲ್ಲಿ ನಡೆಯುವ ಹಬ್ಬಗಳ ವಿವರ ಮತ್ತು ಕಾಲ____________

________________________________________

________________________________________

ಗ್ರಾಮದಲ್ಲಿ ನಡೆಯುವ ಜಾತ್ರೆಗಳ ವಿವರ ಮತ್ತು
ಕಾಲ________________________________

________________________________________

ಗ್ರಾಮದಲ್ಲಿ ನಡೆಯುವ ರಥೋತ್ಸವದ ವಿವರ ಮತ್ತು ಕಾಲ

________________________________________

________ಇಲ್ಲಿರುವ ಪ್ರಮುಖ ಕಲಾಪ್ರಕಾರಗಳು________________

ಮುಖ್ಯ ಕಲಾವಿದರ ವಿವರ ________________________

________________ಜನರ ಪ್ರಸಕ್ತ ಉದ್ಯೋಗ____________

ಉಪ ಉದ್ಯೋಗ__________ರೈತರು ಬೆಳೆಯುವ ಪ್ರಸಕ್ತ ಬೆಳೆಗಳು__________ಹಿಂದೆ ಬೆಳೆಯುತ್ತಿದ್ದ ಬೆಳೆಗಳು__________

ರೈತರ ನೀರಿನ ಮೂಲ__________

ಸ್ವಾತಂತ್ರ್ಯಹೋರಾಟಗಾರರಮಾಹಿತಿ__________

ಸ್ವಾತಂತ್ರ್ಯಹೋರಾಟ/ ಇತರೆ ಪ್ರಮುಖ ಹೋರಾಟಗಳ ವಿವರ

__________

__________

__________

__________ದೇಸಗತಿ/ದೇಸಾಯಿ ಮನೆತನಗಳ ಮಾಹಿತಿ

__________

__________

__________

ಊರಿನ ಆಯಾಗಾರರ ವಿವರ

__________

__________

__________

ಜನರ ನಂಬಿಕೆ/ ಸಂಪ್ರದಾಯದ ವಿವರ

__________

__________

ಗಾದೆ/ಒಗಟುಗಳ ವಿವರ __________

__________

__________

ಇಲ್ಲಿನ ಜಾನಪದ ಕಥೆ/ಕಾವ್ಯ

__________

__________

__________

ಕ್ರೀಡೆ/ಮನೋರಂಜನೆಯ ವಿವರಗಳು __________

ಶೈಕ್ಷಣಿಕ ವಿವರಗಳು__________

**ರಾಜಕೀಯ ವ್ಯಕ್ತಿಗಳ ವಿವರ**

ಗ್ರಾಮದ ಪ್ರಕಟಿತ ವಿವರಗಳು______________________________

ಈ ಗ್ರಾಮಕ್ಕೆ ಸಂಬಂಧಿಸಿದಂತೆ ನೀವು ಗಮನಿಸಿದ ಇತರೆ ಪ್ರಮುಖ ಅಂಶಗಳು
______________________________
______________________________
______________________________

ವಾಯಚಿತ್ರಗಳ ಸಂಖ್ಯೆ______________________________

ಸಂಬಂಧಿಸಿದ ತಳ/ ಇತರೆ ನಕ್ಷೆ

ದಿನಾಂಕ

ಕ್ಷೇತ್ರಾಧಿಕಾರಿಯ ಹೆಸರು

ಸಮಯ :

ಸಹಿ

೧. ಅಪ್ಪಣ್ಣ ಎನ್.ಹಂಜೆ.: ೨೦೧೫, ಲಕ್ಕುಂಡಿಯ ಬಸದಿಗಳು, ವಿದ್ಯಾಶ್ರೀ ಪ್ರಕಾಶನ, ಅಳಗವಾಡಿ.

೨. ಅಂಬಳಿಕೆ ಹಿರಿಯಣ್ಣ.: ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೩. ಅಂಬಳಕೆ ಹಿರಿಯಣ್ಣ(ಸಂ).: ೨೦೧೧, ಕರ್ನಾಟಕ ಗ್ರಾಮ ಚರಿತ್ರೆ ಕೋಶ, ಬಾಗಲಕೋಟ, ಸಂಪುಟ–೧, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ.

೪. ಅಶ್ವತ್ಥಪ್ಪ ಕೆ.ಎನ್.: ೨೦೧೪, ಸಮಗ್ರ ಕರ್ನಾಟಕ ಇತಿಹಾಸ, ಆರಂಭದಿಂದ–ಕ್ರಿ.ಶ.೨೦೧೧, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು.

೫. ಇರ್ಫಾನ್ ಹಬೇಬ್.: (ಮೂ.ಲೇ), ಪ್ರದೀಪ್ ಬೆಳಗಲ್ (ಅನು), ೨೦೦೮, ಪೂರ್ವೇತಿಹಾಸ, ಚಿಂತನ ಪ್ರಕಾಶನ, ಬೆಂಗಳೂರು.

೬. ಇರ್ಫಾನ್ ಹಬೇಬ್.: ವಿವೇಕಾನಂದ ಝಾ, (ಮೂ.ಲೇ) ನಂಗರಗೆರೆ ರಮೇಶ (ಅನು), ೨೦೧೧ ಮೌರ್ಯರ ಕಾಲದ ಭಾರತ, ಚಿಂತನ ಪ್ರಕಾಶನ, ಬೆಂಗಳೂರು.

೭. ಇರ್ಫಾನ್ ಹಬೇಬ್(ಮೂ.ಲೇ).: ಪ್ರದೀಪ್ ಬೆಳಗಲ್ ಮತ್ತು ಇತರರು (ಅನು), ೨೦೧೧, ಸಿಂಧೂ ನಾಗರಿಕತೆ, ಚಿಂತನ ಪುಸ್ತಕ, ಬೆಂಗಳೂರು.

೮. ಉತ್ತಮ ಕಾಂಬಳೆ.: (ಮೂ.ಲೇ), ಸಿದ್ರಾಮ ಕಾರಣಿಕ (ಅನು), ೨೦೧೩, ದೇವದಾಸಿ ಬೆತ್ತಲೆ ಸೇವೆ, ಲಡಾಯಿ ಪ್ರಕಾಶನ, ಗದಗ.

೯. ಕಲಬುರ್ಗಿ ಎಂ.ಎಂ(ಸಂ).: ೧೯೯೯, ಹರಿಹರನ ರಗಳೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಚಿತ್ರದುರ್ಗ ಜಿಲ್ಲೆ, ವಿದ್ಯಾರಣ್ಯ.

೧೦. ಕಡಪಟ್ಟಿ ಎಮ್.ಎನ್.: ೨೦೦೮, ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ, ಸರಸ್ವತೀ ಆಫ್‌ಸೆಟ್ ಮುದ್ರಣಾಲಯ, ಧಾರವಾಡ.

೧೧. ಕೋಸಾಂಬಿ ಡಿ.ಡಿ.:(ಮೂ.ಲೇ) ವೇಣುಗೋಪಾಲ ಟಿ.ಎಸ್. ಮತ್ತು ಶೈಲಜಾ (ಅನು), ೨೦೧೧, ಪ್ರಾಚೀನ ಭಾರತಿದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ, ಚಿಂತನ ಪ್ರಕಾಶನ, ಬೆಂಗಳೂರು.

೧೨. ಗಂಗಾನಾಯಕ್.: ೨೦೧೧, ಪುರಾತತ್ತ್ವಜ್ಞರು, ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ರಾಜಾ ಪ್ರಿಂಟರ್ಸ್, ಬೆಂಗಳೂರು.

೧೩. ಗವಿಮಠ ಜಿ.ಎಸ್.: ೨೦೧೧, ಬೆಳಗಾವಿ ಕನ್ನಡ–ಕನ್ನಡ, ಪ್ರಗತಿ ಪ್ರಿಂಟ್ ಕಮ್ಯೂನಿಕೇಷನ್ಸ್, ಬೆಂಗಳೂರು.

೧೪. ಗಂಗಾಧರ ದೈವಜ್ಞ: ೨೦೧೨, ಕೊರಗರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಗಾಂಧೀಜಿ ಸಿ, ಮೋಳಕರೆ.: ೨೦೧೫, ಬೀದರ ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿ, ಎಸ್.ಎಸ್. ಪ್ರಕಾಶನ, ಕಲಗುರಗಿ.

೧೬. ಗಿರಿಜಾ ಓ.: ೨೦೦೯, ಭಾರತದ ನದಿಗಳು, ನಿಹಾರಿಕ ಪ್ರಕಾಶನ, ದಾವಣಗೆರೆ.

೧೭. ಗುಡ್ಡದೇಶ್ವರಪ್ಪ ಹೆಚ್.: ೨೦೧೦, ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಅನುರಾಗ್ ಪ್ರಿಂಟರ್ಸ್, ಬೆಂಗಳೂರು.

೧೮. ಗುಡ್ಡದೇಶ್ವರಪ್ಪ ಹೆಚ್.: ೨೦೧೨, ಪ್ರಾಚೀನ ಭಾರತದ ಇತಿಹಾಸ (ಪ್ರಾರಂಭದಿಂದ ಕ್ರಿ. ಶ. ೧೨ನೇ ಶತಮಾನದವರೆಗೆ) ಅನುರಾಗ್ ಪ್ರಿಂಟರ್ಸ್, ಬೆಂಗಳೂರು.

೧೯. ಗೋಪಾಲ್ ಸಿ.ಆರ್.: ೨೦೧೮, ಸಮುದಾಯ ಸಂಘಟನೆ, ನಿರುತ ಪಬ್ಲಿಕೇಷನ್ಸ್, ಬೆಂಗಳೂರು

೨೦. ಗೋಪಾಲ್ ಸಿ.ಆರ್.: ೨೦೧೧, ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,
ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೨೧. ಚಂದ್ರಪೂಜಾರಿ ಸಂ.ಎಂ.: ಸಮುದಾಯ ಮತ್ತು ಸಹಭಾಗಿತ್ವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಚಂದ್ರಶೇಖರಪ್ಪ ಟಿ.ಜಿ.: ೨೦೦೦, ಭಾರತದ ಇತಿಹಾಸ (ಆರಂಭದಿಂದ ೧೫೨೬ರವರೆಗೆ) ಬೆಂಗಳೂರು.

೨೩. ಚಂದ್ರಶೇಖರ ಟಿ.ಆರ್.: ೨೦೧೧, ಬಿಜಾಪುರ ಜಿಲ್ಲೆ, ಅಭಿವೃದ್ಧಿ ಮತ್ತು ದುಸ್ಥಿತಿ ಒಂದು ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಚಂದ್ರ ಪೂಜಾರಿ ಎಂ.: ೨೦೧೧, ಸಮಾಜ ಸಂಶೋಧನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ಚಂದ್ರ ಪೂಜಾರಿ ಎಂ.: ೨೦೧೪, ಸಂಶೋಧನೆ ಪರಿಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಚಕ್ಕೆರೆ ಶಿವಶಂಕ್.: ೨೦೧೦, ಜಾನಪದ ಪ್ರವೇಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೭. ಚನ್ನಪ್ಪ ಕಟ್ಟಿ.: ೨೦೧೭, ಕುರುಬ ಮಹಿಳೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಚಿದಾನಂದಮೂರ್ತಿ ಎಂ.: ೧೯೯೩, ಹೊಸತು ಹೊಸತು, ಪ್ರಸಾರಾಂಗ ಕನ್ನಡ ವಿವಿ, ಚಿತ್ರದುರ್ಗ ಜಿಲ್ಲೆ.

೨೯. ಚಿದಾನಂದಮೂರ್ತಿ ಎಂ.: ೨೦೧೨, ಚಿದಾನಂದಾಯಣ, ಚಿದಾನಂದ ಸಮಗ್ರ ಸಂಪುಟ–೧೦, ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು.

೩೦. ಚಿದಾನಂದಮೂರ್ತಿ. ಎಂ.: ಸಂಶೋಧನೆ, ೨೦೧೫, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು–೪

೩೧. ಚಿನ್ನಸ್ವಾಮಿ ಸೋಸಲೆ. ಎನ್.: ನಮ್ಮ ಗ್ರಾಮ ಅಂದು ಇಂದು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಚಿನ್ನಸ್ವಾಮಿ ಸೋಸಲೆ. ಎನ್.: ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ಜವರೇಗೌಡ ದೇ.: ೨೦೧೦, ಕನ್ನಡ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೪. ಜೋಶಿ. ಸಿ.ಎಂ.: ೨೦೧೭, ಬಾಗಲಕೋಟ ಜಿಲ್ಲಾ ರಂಗಮಾಹಿತಿ, ಸೂಪರ್ ಗ್ರಾಫಿಕ್ಸ್, ಬೆಂಗಳೂರು.

೩೫. ಜೋಶಿ ಅನಂತ. ಗುರುರಾಜ.: ೨೦೧೭, ತೇರದಾಳ ಶ್ರೀ ವೇಂಕಟೇಶ್ವರ ಚರಿತೆ ಹಾಗೂ ಸಮಗ್ರ ಕ್ಷೇತ್ರ ದರ್ಶನ, ಲಾವಣ್ಯಾ ಮುಂದ್ರಣ, ಬೆಂಗಳೂರು.

೩೬. ಜೋಗನ್ ಶಂಕರ್.: ೧೯೯೩, ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ.

೩೭. ಡಂಕಿನ್ ಝಳಕಿ.: ೨೦೧೨, ಭಾರತದಲ್ಲಿ ಜಾತಿ ವ್ಯವಸ್ಥೆ ಇದೆಯೇ?, ಆನಂದಕಂದ ಗ್ರಂಥಮಾಲೆ, ಮಾಲ್ಲಾಡಿ ಹಳ್ಳಿ.

೩೮. ತಾರಿಹಳ್ಳಿ ಹನುಮಂತಪ್ಪ.: ೨೦೧೦, ಕರ್ನಾಟಕದ ಬುಡುಕಟ್ಟು ಸಮುದಾಯಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ತಾರಿಹಳ್ಳಿ ಹನುಮಂತಪ್ಪ.: ೨೦೧೭, ಕರ್ನಾಟಕದ ಉಗ್ರ ಆಚರಣೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ತಿಪ್ಪೇರುದ್ರ ಸ್ವಾಮಿ ಎಚ್.: ೨೦೧೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು ೪.

೪೧. ತಿಪ್ಪೇಸ್ವಾಮಿ ಎಚ್.: ೨೦೧೬, ಕನ್ನಡ ಶಾಸನಗಳಲ್ಲಿ ವೇಶ್ಯೆಯರು, ಗೌತಮ ಬುಕ್ ಹೌಸ್, ಕಮಲಾಪೂರ.

೪೨. ದಿವಾಕರ ಆರ್.ಆರ್.: ೧೯೭೭, ಕರ್ನಾಟಕದ ಪರಂಪರೆ, ಸಂಪುಟ–೧, ಕರ್ನಾಟಕ ಸರಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೩. ದಿವಾಕರ್ ಆರ್.ಆರ್.: ೨೦೦೬, ಕರ್ನಾಟಕದ ಪರಂಪರೆ ಸಂಪುಟ–೨, (ವಿಜಯನಗರ ಕಾಲದಿಂದ ಈಚಿನವರೆಗೆ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೪. ದೊಡ್ಡಮನಿ. ಡಿ.ಎಸ್.: ೨೦೧೨, ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ, ಅನ್ನದಾನಿ ಭೈರವ ಪ್ರಕಾಶನ, ಬೆಂಗಳೂರು.

೪೫. ನರಸಿಂಹಮೂರ್ತಿ. ಎ.ವಿ.: ೨೦೦೫, ಬ್ರೀಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ, ಭಾಗ ಎರಡು. ಬೆಂಗಳೂರು.

೪೬. ನರಸಿಂಹಮೂರ್ತಿ ಎ.ವಿ.: ೨೦೦೮, ಭಾರತೀಯ ನಾಣ್ಯ ಪರಂಪರೆ, (ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ) ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ, ಮೈಸೂರು.

೪೭. ನರಸಿಂಹಮೂರ್ತಿ ಎ.ವಿ.: ೨೦೧೦, ಕರ್ನಾಟಕದ ಸೇವುಣರ ಇತಿಹಾಸ, ಲೋಕ ಗ್ರಾಫಿಕ್ಸ, ಮೈಸೂರು

೪೮. ನರಸಿಂಹಮೂರ್ತಿ ಎ.ವಿ.: ೨೦೧೦, ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು, ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ, ಮೈಸೂರು.

೪೯. ನಾಗರಾಜರಾವ್. ಎಂ.ಎಸ್.: ೧೯೭೧, ಪ್ರೋಟೋ ಹಿಸ್ಟಾರಿಕ್ ಕಲ್ಚಿರಿಕ್ ಆಫ್ ದಿ ತುಂಗಭದ್ರಾ ವ್ಯಾಲಿ,

೫೦. ನಾಗರಾಜ್ ಡಿ.ಆರ್. ೨೦೧೪, ಅಲ್ಲಮಪ್ರಭು ಶೈವ ಪ್ರತಿಭೆ, ಸ್ವ್ಯಾನ್ ಪ್ರಿಂಟರ್ಸ್, ಹೆಗ್ಗೋಡು.

೫೧. ನಾವಲಗಿ. ಸಿ.ಕೆ.: ೨೦೧೨, ಜಾನಪದ ಚಿಂತನ, ಕನಕ ಸಾಹಿತ್ಯ ಪ್ರತಿಷ್ಠಾನ (ರಿ) ಬೆಂಗಳೂರು.

೫೨. ನಿರಂಜನ,: ೧೯೭೪, ಜ್ಞಾನ ಗಂಗೋತ್ರಿ, ಕಿರಿಯರ ವಿಶ್ವಕೋಶ ೭, ಭಾರತದ ಕಥೆ, ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ, ಬೆಂಗಳೂರು

೫೩. ಪದ್ಮಪ್ರಸಾದ್. ಎಸ್.ಪಿ.: ೨೦೧೭, ಜೈನ ವಾಸ್ತು ಮತ್ತು ಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೪. ಪಪ್ಪು, ಆರ್.ಎಸ್.: ಪ್ರಾಚೀನತಮ ಮಾನವ ಸಂಸ್ಕೃತಿಗಳು, ವಿಕಸನದ ಹಂತಗಳು, ಕರ್ನಾಟಕ ಚರಿತ್ರೆ ಸಂಪುಟ-೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ಪ್ರಕಾಶ ಗ. ಖಾಡೆ/ಶಿವಾನಂದ ಪೂಜಾರಿ/ಗುರುರಾಜ ಲೂತಿ.: ೨೦೧೧, ಬಾಗಲಕೋಟ ಜಿಲ್ಲೆಯ ಜನಪದ ಹಾಡುಗಳು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬಾಗಲಕೋಟ.

೫೬. ಪರಮೇಶ್ವರ ಹೆಗಡೆ.: ೨೦೧೨, ಮರೆಯಲಾರದ ಇತಿಹಾಸದ ಪುಟಗಳು, ಸಾಧನ ಪಬ್ಲಿಕೇಷನ್ ಬೆಂಗಳೂರು.

೫೭. ಪ್ರಶಾಂತ ರಿಪ್ಪನ್‌ಪೇಟೆ.: ೨೦೧೭, ಸೋಜಗ, ಶ್ರೀ ಶ್ರೀಶೈಲ ಮಲ್ಲಿಕಾರ್ಜುನ ಸಮಾಜೋತ್ಥಾನ ಫೌಂಡೇಶನ್, ಶ್ರೀಶೈಲ ಪೀಠ, ಆತ್ಮಕೂರ.

೫೮. ಪಾಂಡುರಂಗ ಬಾಬು.: ೨೦೧೦, ನಮ್ಮ ಆಟಗಳು ನುಡಿಕಟ್ಟು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೯. ಪೀರ್‌ಬಾಷಾ.: ೨೦೧೨, ಸಮಾಜವಾದಿ ಹೋರಾಟಗಾರನ ಸಂದರ್ಶನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೦. ಪುರುಷೋತ್ತಮ ಬಿಳಿಮಲೆ.: ೧೯೯೬, ಚಿತ್ರದುರ್ಗ ಜಿಲ್ಲೆ ಜಾನಪದ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೧. ಬಸವಲಿಂಗ ಪಟ್ಟಾಧ್ಯಕ್ಷರು.: ೧೯೯೬, ಪ್ರಭುಲಿಂಗಲೀಲಾ ಪ್ರವಚನ, ಭುವನೇಶಗವರಿ ಪ್ರಕಾಶನ, ಬಿಜಾಪುರ -೨.

೬೨. ಬಾಗಲಕೋಟ. ಡಿ.ಎ.: ೨೦೦೪, ಪ್ರಭುಲಿಂಗಲೀಲೆ-ಒಂದು ದಾರ್ಶನಿಕ ಅಧ್ಯಯನ, ಅರು ಪ್ರಕಾಶನ ಬನಹಟ್ಟಿ.

೬೩. ಬಿಪಿನ್ ಚಂದ್ರ: (ಮೂ.ಲೇ) ಗೋಪಾಲ ರಾವ್ ಎಚ್.ಎಸ್(ಅನು), ೨೦೧೪, ಆಧುನಿಕ ಭಾರತದ ಇತಿಹಾಸ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೬೪. ಬುದ್ದಯ್ಯಾಸ್ವಾಮಿ ಮ. ಪುರಾಣೀಕ.: ೧೯೪೦, ಎಳಂದೂರ ಹರೀಶ್ವರಕವಿಕೃತ ಶ್ರೀ ಪ್ರಭುದೇವರ ಪುರಾಣ, ತೋಂಟದಾರ್ಯ ಮುದ್ರಣಾಲಯ ಧಾರವಾಡ.

೬೫. ಬೋರಲಿಂಗಯ್ಯ ಹಿ.ಚಿ.: ೧೯೯೬, ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ಬೋರಲಿಂಗಯ್ಯ ಹಿ.ಚಿ.: ಹಾಗೂ ಪ್ರಭಾಕರ. ಎ.ಎಸ್.: ೨೦೦೫, ಬುಡಕಟ್ಟು ಅಧ್ಯಯನ-(೨), (೩) ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೭. ಬೋರಲಿಂಗಯ್ಯ ಹಿ.ಚಿ.: ೨೦೦೫, (ಮೂಲೇ)ವಂದನಾ ಶಿವ, ಮಾಧವ ಐತಾಳ್, (ಅನು) ೨೦೦೫ ಆಕೃತಿ ಕಂಪ್ಯೂಟರ್ ಮಂಗಳೂರು.

೬೮. ಮಂಜುನಾಥ ಸಿ.ಯು.: ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಕ್ರಿ.ಶ.೧೧೫೦-೧೩೪೦ ಚಿತ್ಕಲಾ ಪ್ರಕಾಶನ, ಕುಪ್ಪಂ.

೬೯. ಮುನಿರಾಜಪ್ಪ.: ೨೦೦೫, ಮಾಗಡಿ ಸೀಮೆ, ಸ್ಫೂರ್ತಿ ಪ್ರಕಾಶನ, ಬೆಂಗಳೂರು.

೭೦. ಮುರಿಗೆಪ್ಪ ಎ.: ೨೦೧೧, ದಕ್ಷಿಣ ಭಾರತೀಯ ಜಾನಪದ ಕೋಶ.: ಸಂಪುಟ ೧ ಮತ್ತು ೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೧. ಮೊಗಳ್ಳಿ ಗಣೇಶ್.: ೨೦೧೯, ಅವ್ಯಕ್ತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೨. ಮೋಹನ್‌ಕೃಷ್ಣ ರೈ.: ೨೦೦೪, ಕರ್ನಾಟಕ ಸಂಸ್ಕೃತಿ ಚರಿತ್ರೆ-೩, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೩. ಮೋಹನ್‌ಕೃಷ್ಣ ರೈ.: ೨೦೧೪, ಸಮಾಜ ಅಧ್ಯಯನ, ಸಮಾಜ ವಿಜ್ಞಾನ ಸಂಶೋಧನ ಪ್ರತಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೪. ರಹಮತ್ ತರೀಕೆರೆ.: ೨೦೦೦, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೩ ಧರ್ಮ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೫. ರಮೇಶ್ ಸ.ಚಿ.: ೨೦೦೫, ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೬. ರಮೇಶ್ ಹೆಚ್/ನಾಗೇಶ ಎಚ್.ಎ.: ೨೦೧೭, ಕರ್ನಾಟಕ ಸಂಶೋಧನೆಯ ಹಲವು ಮುಖಗಳು, ಅನ್ನದಾನಿ ಭೈರವ ಪ್ರಕಾಶನ, ಬೆಂಗಳೂರು.

೭೭. ರಾಬರ್ಟ್ ಸೆವಿಲ್.: (ಮೂಲ), ಸದಾನಂದ ಕನವಳ್ಳಿ (ಅನು): ೨೦೦೬, ಮರೆತುಹೊದ ಮಹಾಸಾಮ್ರಾಜ್ಯ ವಿಜಯನಗರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಚಿತ್ರದುರ್ಗ ಜಿಲ್ಲೆ.

೭೮. ರಾಮ ಮನಗೂಳಿ.: ೨೦೧೦, ಬಾಗಲಕೋಟೆ ಜಿಲ್ಲೆಯ ಪತ್ರಿಕೋದ್ಯಮ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೯. ರಾಜಶೇಖರ ಪಿ.ಕೆ.: ೨೦೧೦, ಜನಪದ ಶರಣಕಾವ್ಯಗಳು, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರ.

೮೦. ರಾಮದಾಸ ರೆಡ್ಡಿ.: ೨೦೧೨, ದಕ್ಷಿಣ ಭಾರತದ ಇತಿಹಾಸ, (ರಾಜ್ಯ ಮತ್ತು ಸಮಾಜ ೧೩೩೬-೧೮೦೦) ರೇಣುಕಾಶ್ರೀ ಪ್ರಕಾಶನ ಮೈಸೂರು.

೮೧. ರಾಗೌ.: ೨೦೧೨, ಜಾನಪದ ಪ್ರಕಾರಗಳು, ತನು ಮನು ಪ್ರಕಾಶನ ಮೈಸೂರ

೮೨. ರಾಗೌ.: ೨೦೧೩, ಸರ್ವಜ್ಞನ ಸಮಗ್ರ ತ್ರಿಪದಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೩. ಲಕ್ಕಪ್ಪಗೌಡ ಎಚ್.ಜೆ.: ೧೯೯೮, ಕರ್ನಾಟಕ ಬುಡಕಟ್ಟುಗಳು ಸಂಪುಟ–೧, ಪ್ರಕಾಶನ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೮೪. ಲಕ್ಷ್ಮೀದೇವಿ ಎಲ್.: ೨೦೧೧, ಜೈನ ವಾಙ್ಮಯ ಮತ್ತು ಕನ್ನಡ ಸಾಹಿತ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೫. ಲೋಕಪ್ಪಗೌಡ.: ೨೦೧೫, ಆಧುನಿಕ ಭಾರತ, ಹರ್ಷ ಪ್ರಿಂಟರ್ಸ್, ಮೈಸೂರು.

೮೬. ವಾಸುದೇವ ಬಡಿಗೇರ.: ೨೦೧೦, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ–೫ ಬಸವನ ಬಾಗೇವಾಡಿ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೭. ವಿಜಯ್ ಪೂಣಚ್ಚ ತಂಬಂಡ.: ೨೦೧೪, ಪಳಮೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೮. ವಿರುಪಾಕ್ಷಿ ಪೂಜಾರಹಳ್ಳಿ.: ೨೦೦೭, ಬೇಟೆ ಮತ್ತು ಬೇಡರು, ಲಕ್ಷ್ಮೀ ಮುದ್ರನಾಲಯ ಬೆಂಗಳೂರು.

೮೯. ವಿರೂಪಾಕ್ಷಿ ಪೂಜಾರಹಳ್ಳಿ.: ೨೦೧೬, ಆದಿಕದಂಬರು ಗಂಗರು ಮತ್ತು ಬಾದಾಮಿ ಚಾಲುಕ್ಯರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೦. ವೀರೇಶ ಬಡಿಗೇರ.: ೨೦೧೦, ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೧. ವಿಠ್ಠಪ್ಪ ಗೋರಂಟ್ಲಿ.: ೨೦೧೭, ಪದ್ಮಶಾಲಿ ಸಮಾಜ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೯೨. ವಿಠಲರಾವ್ ಟಿ ಗಾಯಕ್ವಾಡ್.: ೨೦೧೨, ಕನ್ನಡ–ಮರಾಠಿ ಸಾಂಸ್ಕೃತಿಕ ಬಾಂಧವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೩. ವೆಂಕಟೇಶ ಎ.: ೨೦೧೭, ಮಹಿಳಾ ಸಬಲೀಕರಣ, ಗೌತಮ ಬುಕ್ ಹೌಸ್, ಕಮಲಾಪೂರ.

೯೪. ಸಂಕಾಲಿಯಾ ಎಚ್.ಡಿ.: ೧೯೭೯, ಮೆಸೋಲಿಥಿಕ್ ಆಂಡ್ ಪ್ರೀ ಮೆಸೋಲಿಥಿಕ್ ಕಲ್ಚರ್ಸ್ ಇನ್ ಸಂಗನಕಲ್,

೯೫. ಮಟೋಳಿ ಸಂಗಮೇಶ. ಬಾ.: ೨೦೦೭, ದು. ನಿಂ. ಬೆಳಗಲಿ ಬದುಕು–ಬರಹ: ಒಂದು ಅಧ್ಯಯನ, ವಿಮೋಚನ ಪ್ರಕಾಶನ, ಆಥಣಿ.

೯೬. ಮಟೋಳಿ ಸಂಗಮೇಶ. ಬಾ.: ೨೦೧೦, ಕರ್ನಾಟಕದ ಕುಸ್ತಿ ಪೈಲ್ವಾನರು ಒಂದು ಅವಲೋಕನ, ವೀರೇಶ್ವರ ಪ್ರಕಾಶನ, ಜಮಖಂಡಿ.

೯೭. ಶಂಕರ ನಾರಾಯಣರಾವ್ ಎ.ವಿ.: ೨೦೧೨, ತಮಿಳುನಾಡು ದೇವಾಲಯಗಳ ತವರೂರು, ಸಮರ್ಥ ಪ್ರಕಾಶನ ಬೆಂಗಳೂರು. ೭೨೪೨೧೫೧೯೯೯, ೯೯೦೨೭೪೪೩೯೮.

೯೮. ಶಾಂತಾ ಮಠ.: ೨೦೧೪, ತಂತ್ರ–ಪುರಾಣ ಲೋಕದ ಮಹಾ ಮಾಂತ್ರಿಕ ಸತ್ಯಕಾಮ, ಶಂಶಾಕ ಪ್ರಕಾಶನ ಗುಲಬರ್ಗಾ.

೯೯. ಶ್ರೀಕಂಠಯ್ಯ ಕೆ.: ೧೯೮೩. ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಗೀತಾ ಬುಕ್ ಹೌಸ್, ಮೈಸೂರು.

೧೦೦. ಶ್ರೀಗುರು ಓಂ ಸಿದ್ಧಲಿಂಗೇಶ್ವರಸ್ವಾಮಿ(ಅನು), ೧೯೮೩, ಶ್ರೀ ಪಂಪಾ ಮಹಾತ್ಮೆ, ಶ್ರೀಗುರು ವೃಷಭಾಶ್ರಮ, ಹೊಳಗುಂದಿ.

೧೦೧. ಶ್ರೀನಿವಾಸ ರಿತ್ತಿ: (ಸಂ), ೨೦೦೦, ಕೊಲ್ಹಾಪುರ ಜಿಲ್ಲೆಯ ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೨. ಶಿವರುದ್ರಸ್ವಾಮಿ ಎಸ್.ಎಸ್.: ೨೦೧೦, ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪೌರಸ್ತ್ಯ ಪ್ರಕಾಶನ ತಿಪಟೂರು, ಮೈಸೂರು.

೧೦೩. ಶಿವಾನಂದ ಶೆಲ್ಲಿಕೇರಿ, ಸಂಗಮೇಶ ನೀಲಗುಂದ.: ೨೦೧೭ ಶ್ರೀ ಕೃಷ್ಣ ಪಾರಿಜಾತ ಹಿಮ್ಮೇಳ ಕಲಾವಿದರು-ಕರ್ನಾಟಕ ಜಾನಪದ ಪರಿಷತ್ತು ಜಿಲ್ಲಾ ಘಟಕ, ಬಾಗಲಕೋಟ.

೧೦೪. ಶೇಷಾದ್ರಿ ಎಂ.: ೧೯೫೬, ದಿ ಸ್ಟೋನ್ ಯೂಸಿಂಗ್ ಕಲ್ಚರ್ಸ್ ಆಫ್ ಪ್ರೀ ಹಿಸ್ಟಾರಿಕ್ ಆಂಡ್‌ಪ್ರೋಟೋ ಹಿಸ್ಟಾರಿಕ್, ಮೈಸೂರು.

೧೦೫. ಶೆಟ್ಟಿ ಎಸ್.ಡಿ.: ೨೦೧೭, ಜೈನ ಬಸದಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೬. ಶೈಲಜ ಹಿರೇಮಠ.: ೨೦೧೭, ಪಾತರದವರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೭. ಷೇಕ್ ಅಲಿ.ಬಿ. ೨೦೦೮,: ಕರ್ನಾಟಕ ಚರಿತ್ರೆ ಸಂಪುಟ ೧-೭, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೮. ಸಂಗಮೇಶ ಕಲ್ಯಾಣಿ.: ಬಾಗಲಕೋಟ ಜಿಲ್ಲೆಯ ದೇಶಗತಿಯ ಮನೆತನಗಳು ಒಂದು ಅವಲೋಕನ.

೧೦೯. ಸಂಗಮೇಶ ಕಲ್ಯಾಣಿ.: ೨೦೧೦, ಘೋರ್ಪಡೆ ಘರಾಣಾ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧೦. ಸಂಗಮೇಶ ಕಲ್ಯಾಣಿ.: ೨೦೧೫, ಸಂಶೋಧನಾ ಮಾರ್ಗ, ಜ್ಞಾನ ಭಾರತಿ ತ್ರಿವೇಣಿ ಪ್ರಕಾಶನ, ಮುಧೋಳ.

೧೧೧. ಸಂಗಮೇಶ ಕಲ್ಯಾಣಿ., ೨೦೧೭, ತೇರಿದಾಳ-೧೨, ತ್ರಿವೇಣಿ ಪ್ರಕಾಶನ ಮುಧೋಳ.

೧೧೨. ಸಂಗಮೇಶ ಕಲ್ಯಾಣಿ.: ೨೦೧೯, ಬಾದಾಮಿ ಕಪ್ಪೆ ಅರಭಟ(ಟ್ಟ) ಶಾಸನ ಮರುಓದು. ಜ್ಞಾನ ಭಾರತಿ ತ್ರಿವೇಣಿ ಪ್ರಕಾಶನ, ಮುಧೋಳ.

೧೧೩. ಸಂತೋಷ್ ದಾವಣಗೆರೆ.: ೨೦೧೫, ಬಾಗಲಕೋಟ ಜಿಲ್ಲೆ-ಮಠ ಮಾರ್ಗ ದರ್ಶನ-ಆರಾಧ್ಯ, ಮಲ್ಟಿಕಲರ್ ಆಫ ಸೆಟ್ ಪ್ರಿಂಟರ್ಸ್, ದಾವಣಗೆರೆ.

೧೧೪. ಸತ್ಯಕಾಮ.: ೨೦೧೫, ತಂತ್ರಯೋನಿ, ಮನೋಹರ ಗ್ರಂಥ ಮಾಲಾ, ಧಾರವಾಡ.

೧೧೫. ಸೀತಾರಾಮಯ್ಯ ವಿ.: ೧೯೩೮, ಪಂಪಾಯಾತ್ರೆ, ವಿಶ್ವ ಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು,

೧೧೬. ಸಿದ್ದೇಶ್ವರಿ ಎ.ಎನ್.: ೨೦೧೪, ಬಳ್ಳಾರಿ ಜಿಲ್ಲೆಯ ಜನಪದ ಆಚರಣೆಗಳು, ಪ್ರಭುದೇವರ ಜನಕಲ್ಯಾಣ ಸಂಸ್ಥೆ ಪ್ರಭುದೇವರ ಸಂಸ್ಥಾನ ಮಠ, ಸೊಂಡುರು.

೧೧೭. ಸುರೇಂದ್ರರಾವ್. ಬಿ.: (ಸಂ) ೧೯೯೭, ಕರ್ನಾಟಕ ಚರಿತ್ರೆ. ಸಂ.೭. ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೮. ಸುರೇಂದ್ರನಾಥ ಸೆನ್.: ಆರ್.ಎಲ್. (ಮೂಲ) ಅನಂತರಾಮಯ್ಯ, (ಅನು) ೨೦೧೨, ಮರಾಠರ ಆಡಳಿತ ವ್ಯವಸ್ಥೆ, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ.

೧೧೯. ಸೂರ್ಯನಾರಾಯಣರಾವ್(ಮೂಲ), ಬಾಲಸುಬ್ರಮಣ್ಯ(ಅನು), ೨೦೦೦, ಮರೆಯಲಾಗದ ಮಹಾಸಾಮ್ರಾಜ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨೦. ಸೋಮಶೇಖರ.ಎಸ್.: ೨೦೦೯, ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧ ನೀತಿ, ಸಂಚಿಕೆ ಪ್ರಕಾಶನ, ಚಿತ್ರದುರ್ಗ.

೧೨೧. ಸೋಹನ್‌ಪಾಲ್ ಸುಮನಾಕ್ಷರ್(ಮೂ,ಲೇ), ಪ್ರವೀಳಾ ಮಾಧವ್(ಅನು), ೨೦೧೦, ಆದಿಮ ಜಾತಿ ಚಮಾರ್ ಇತಿಹಾಸ ಧರ್ಮ ಮತ್ತು ಸಂಸ್ಕೃತಿ, ಐಸಿರಿ ಪ್ರಕಾಶನ, ಬೆಂಗಳೂರು.

೧೨೨. ಹರಿಲಾಲ ಪವಾರ.: ೨೦೦೨, ಜನಪದ ಸಾಹಿತ್ಯಕ್ಕೆ ವಿಜಾಪುರ ಜಿಲ್ಲೆಯ ಕೊಡುಗೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೩. ಹನುಮಂತಪ್ಪ ತಾರಿಹಳ್ಳಿ.: ೨೦೧೦, ಕರ್ನಾಟಕದ ಬುಡಕಟ್ಟು ಸಮುದಾಯಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೨೪. ಹನುಮಂತಪ್ಪ ತಾರಿಹಳ್ಳಿ.: ೨೦೧೭, ಕರ್ನಾಟಕದ ಉಗ್ರ ಆಚರಣೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೨೫. ಹಿರೇಮಠ ಎಸ್.ಎಸ್.: ೧೯೯೩, ಜಾತ್ರೆಗಳು – ಸುಮತಾ ಪ್ರಕಾಶನ ಹೊಸಪೇಟೆ.

೧೨೬. ಹಿರೇಮಠ ಬಿ.ಆರ್.: ೨೦೧೨, ಶಾಸನ ಅಧ್ಯಯನ – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೭. ಹೇಮಲತಾ ಎಸ್.: ೨೦೧೫, ಪ್ರಾಚೀನ ಭಾರತದ ಮಹರ್ಷಿಗಳು, ರಾಷ್ಟ್ರೋತ್ಥಾನ ಸಾಹಿತ್ಯ– ಬೆಂಗಳೂರು.

